ಈ ರೀತಿಯಾದ ಮಹಾಪುರಾಣಗಳನ್ನು ಕರ್ಣಾಟಕ ಭಾಷೆಯಲ್ಲಿ ಅನುವಾದ ಮಾಡಿಸಿ, ಜನಸ್ತೋಮಕ್ಕೆ ಮಹದುಪಕಾರವನ್ನು ಮಾಡುತ್ತಿರುವ ಪರಮ ದಯಾಳುಗಳೂ, ವಿದ್ವದಭಿಮಾನಿಗಳೂ, ಕರ್ಣಾಟಕ ಸಿಂಹಾಸನಾಧೀಶ್ವರರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರು ಬಂಧುಮಿತ್ರಕಳತ್ರಾದಿಗಳೊಡನೆಯೂ, ಪುತ್ರಪೌತ್ರಾದಿಗಳೊಡನೆಯೂ ಚಿರಕಾಲ ಸುಖವಾಗಿದ್ದು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುವಂತೆ ಅನುಗ್ರಹಿಸಲೆಂದು ಶ್ರೀಕೃಷ್ಣಪರಮಾತ್ಮನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುವ,

ವಿಕೃತಿ ಸಂ॥ ದ
ನಿಜಾಷಾಢ ಶುದ್ಧ ದಶಮಿ
ಸೋಮವಾರ.

ಅನುವಾದಕ,
**ಬಿ. ಎಸ್. ಕೃಷ್ಣಪ್ಪ.**



# ವಿಷಯಾನುಕ್ರಮಣಿಕೆ

— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ಪ್ರಥಮೋಽಧ್ಯಾಯಃ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥

ನಾರದ ಉವಾಚ

ಶ್ರುತಂ ಪ್ರಥಮತೋ ಬ್ರಹ್ಮನ್ ಬ್ರಹ್ಮಖಂಡಂ ಮನೋಹರಂ ।
ಬ್ರಹ್ಮಣೋ ವದನಾಂಭೋಜಾತ್ ಪರಮಾದ್ಭುತಮೇವ ಚ ॥ ೧ ॥

ತತಸ್ತದ್ವಚನಾತ್ತೂರ್ಣಂ ಸಮಾಗತ್ಯ ತವಾಂತಿಕಂ ।
ಶ್ರುತಂ ಪ್ರಕೃತಿಖಂಡಂ ಚ ಸುಧಾಖಂಡಾತ್ಪರಂ ವರಂ ॥ ೨ ॥

---

### ಒಂದನೆಯ ಅಧ್ಯಾಯವು

ನರೋತ್ತಮರಾದ ನರನಾರಾಯಣರಿಗೆ ವಂದಿಸಿ, ಸರಸ್ವತೀದೇವಿಯನ್ನೂ, ವ್ಯಾಸಮಹರ್ಷಿಯನ್ನೂ ಭಕ್ತಿಯಿಂದ ಭಜಿಸಿ, ಅನಂತರ ಪುರಾಣವನ್ನು ಪಠಿಸಬೇಕು.

೧. ನಾರದ.—ಎಲೈ ಮಹರ್ಷಿಯೇ, ಮೊದಲು, ಬ್ರಹ್ಮನ ಮುಖದಿಂದ ಅತ್ಯದ್ಭುತವೂ ಮನೋಹರವೂ ಆದ ಬ್ರಹ್ಮಖಂಡವನ್ನು ವಿಸ್ತಾರವಾಗಿ ಕೇಳಿದೆನು.

೨. ಅನಂತರ ಬ್ರಹ್ಮನ ಮಾತಿನಂತೆ ನಿನ್ನ ಸಮೀಪಕ್ಕೆ ಬಂದು ಅಮೃತದಂತೆ ಆಹ್ಲಾದಕವಾದ ಪ್ರಕೃತಿಖಂಡದ ಕಥೆಯನ್ನು ಕೇಳಿದುದಾಯಿತು.

ತತೋ ಗಣಪತೇಃ ಖಂಡಮುಖಂಡಭವಖಂಡನಂ ।
ನ ಮೇ ತೃಪ್ತಂ ಮನೋ ಲೋಲಂ ವಿಶಿಷ್ಟಂ ಶ್ರೋತುಮಿಚ್ಛತಿ ॥ ೩ ॥

ಶ್ರೀಕೃಷ್ಣಜನ್ಮಖಂಡಂ ಚ ಜನ್ಮಾದೇಃ ಖಂಡನಂ ನೃಣಾಂ ।
ಪ್ರದೀಪಂ ಸರ್ವತತ್ವಾನಾಂ ಕರ್ಮಘ್ನಂ ಹರಿಭಕ್ತಿದಂ ॥ ೪ ॥

ಸದ್ಯೋ ವೈರಾಗ್ಯಜನನಂ ಭವರೋಗನಿಕೃಂತನಂ ।
ಕಾರಣಂ ಮುಕ್ತಿಬೀಜಾನಾಂ ಭವಾಬ್ಧೇಸ್ತಾರಣಂ ಪರಂ ॥ ೫ ॥

ಕರ್ಮೋಪಭೋಗರೋಗಾಣಾಂ ಖಂಡನೇ ಚ ರಸಾಯನಂ ।
ಶ್ರೀಕೃಷ್ಣ ಚರಣಾಂಭೋಜಪ್ರಾಪ್ತಿಸೋಪಾನಕಾರಣಂ ॥ ೬ ॥

ಜೀವನಂ ವೈಷ್ಣವಾನಾಂ ಚ ಜಗತಾಂ ಪಾವನಂ ಪರಂ ।
ವದ ವಿಸ್ತಾರ್ಯ ಮಾಂ ಭಕ್ತಂ ಶಿಷ್ಯಂ ಚ ಶರಣಾಗತಂ ॥ ೭ ॥

---

೩. ಅಲ್ಲದೆ ಸಾರಭೂತವೂ ಸಂಸಾರ ನಾಶಕವೂ ಆದ ಗಣಪತಿಯ ಖಂಡವನ್ನೂ ಕೇಳಿದೆನು. ಚಂಚಲವಾದ ನನ್ನ ಮನಸ್ಸಿಗೆ ಇನ್ನೂ ತೃಪ್ತಿಯಾಗದೆ ವಿಶೇಷವಾದುದನ್ನು ಕೇಳಬಯಸುತ್ತಿದೆ.

೪. ಆದುದರಿಂದ ಮನುಜರ ಜನನಮರಣಗಳನ್ನು ನಿರ್ಮೂಲಗೊಳಿಸಿ ಕರ್ಮಪಾಶಗಳನ್ನು ಬಿಡಿಸಿ, ಸಕಲತತ್ವಗಳನ್ನೂ ಬೆಳಗಿಸಿ, ಹರಿಭಕ್ತಿಯನ್ನುಂಟು ಮಾಡುವ ಶ್ರೀ ಕೃಷ್ಣಜನ್ಮಖಂಡವನ್ನು ನನಗೆ ವಿಸ್ತರಿಸಿ ಹೇಳು.

೫. ಸಂಸಾರಸಮುದ್ರವನ್ನು ದಾಟಿಸಿ, ಮುಕ್ತಿಯನ್ನು ಸಂಪಾದಿಸಿಕೊಡುವ ಆ ಖಂಡವನ್ನು ಕೇಳಿದ ಮಾತ್ರದಿಂದಲೇ ವೈರಾಗ್ಯ ಹುಟ್ಟಿ ಭವಬಂಧನವು ದೂರವಾಗುವುದು.

೬. ಕರ್ಮಫಲಾನುಭವವೆಂಬ ರೋಗವನ್ನು ನಾಶಗೊಳಿಸಲು ರಸಾಯನದಂತಿರುವ ಆ ಖಂಡವು, ಶ್ರೀಕೃಷ್ಣನ ಪಾದಪಂಕಜಪ್ರಾಪ್ತಿಗೆ ಸೋಪಾನದಂತಿರುವುದು.

೭. ವಿಷ್ಣುಭಕ್ತರಿಗೆ ಜೀವನಪ್ರಾಯವೂ, ಜಗತ್ತಿಗೆ ಪರಮಪಾವನವೂ ಆದ ಶ್ರೀಕೃಷ್ಣ ಜನ್ಮಖಂಡವನ್ನು, ಭಕ್ತಿಯಿಂದ ಶರಣಾಗತನಾಗಿರುವ ಈ ಶಿಷ್ಯನಿಗೆ ವಿಸ್ತರಿಸಿ ಹೇಳು.

ಕೇನ ವಾ ಪ್ರಾರ್ಥಿತಃ ಕೃಷ್ಣ ಆಜಗಾಮ ಮಹೀತಲಂ ।
ಸರ್ವಾಂಶೈರೇಕ ಏವೇಶಃ ಪರಿಪೂರ್ಣತಮಸ್ಸ್ವಯಂ ॥ ೮ ॥

ಯುಗೇ ಕುತ್ರ ಕುತೋ ಹೇತೋಃ ಕುತ್ರ ವಾವಿರ್ಬಭೂವ ಹ ।
ವಸುದೇವೋಽಸ್ಯ ಜನಕಃ ಕೋ ವಾ ಕಾ ವಾ ಚ ದೇವಕೀ ॥ ೯ ॥

ವದ ಕಸ್ಯ ಕುಲೇ ಜನ್ಮ ಮಾಯಯಾ ಸುವಿಡಂಬನಂ ।
ಕಿಂ ಚಕಾರ ಸಮಾಗತ್ಯ ಕೇನ ರೂಪೇಣ ವಾ ಹರಿಃ ॥ ೧೦ ॥

ಜಗಾಮ ಗೋಕುಲಂ ಕಂಸಭಯೇನ ಸೂತಿಕಾಗೃಹಾತ್ ।
ಕಥಂ ಕಂಸಾತ್ಕೀಟತುಲ್ಯಾದ್ಭಯೇಶಸ್ಯ ಭಯಂ ಮುನೇ ॥ ೧೧ ॥

ಹರಿರ್ವಾ ಗೋಪವೇಷೇಣ ಗೋಕುಲೇ ಕಿಂ ಚಕಾರ ಹ ।
ಕುತೋ ಗೋಪಾಂಗನಾಸಾರ್ಧಂ ವಿಜಹಾರ ಜಗತ್ಪತಿಃ ॥ ೧೨ ॥

---

೮. ಸರ್ವೇಶ್ವರನೂ, ಪರಿಪೂರ್ಣಸ್ವರೂಪನೂ ಆದ ಶ್ರೀಕೃಷ್ಣನು ಯಾರ ಪ್ರಾರ್ಥನೆಯಂತೆ ತನ್ನ ಪೂರ್ಣಾಂಶದಿಂದ ಭೂಮಿಯಲ್ಲಿ ಅವತರಿಸಿದನು ?

೯ ಯಾವ ಯುಗದಲ್ಲಿ, ಯಾವ ಕಾರಣದಿಂದ ಎಲ್ಲಿ ಅವತರಿಸಿದನು ಇವನ ತಂದೆಯಾದ ವಸುದೇವನಾರು ? ಮತ್ತು ಮಾತೆಯಾದ ದೇವಕಿಯಾರು ?

೧೦ ಯಾವ ಕುಲದಲ್ಲಿ ಕೃಷ್ಣನು ಜನ್ಮವೆತ್ತಿ ಜಗತ್ತಿಗೆ ಮಾಯೆಯನ್ನು ತೋರಿದನು ಯಾವ ರೂಪದಿಂದ ಈ ಭೂಮಂಡಲದಲ್ಲಿ ಅವತರಿಸಿ ಯಾವ ಮಹತ್ಕಾರ್ಯ ಮಾಡಿದನು.

೧೧. ಕಂಸನ ಭಯದಿಂದ ಕೃಷ್ಣನು ಸೂತಿಕಾಗೃಹ (ಹೆರಿಗೆಮನೆ) ವನ್ನು ಬಿಟ್ಟು ಗೋಕುಲಕ್ಕೆ ಹೋದನೆನ್ನುವರು. ಸರ್ವೇಶ್ವರನಾದ ಕೃಷ್ಣನಿಗೆ ಕ್ರಿಮಿಸದೃಶನಾದ ಕಂಸನಿಂದ ಭಯವೆಂದರೇನು ?

೧೨. ಶ್ರೀಹರಿಯು ಗೋಕುಲದಲ್ಲಿ ಗೋಪವೇಷಧರನಾಗಿ ಮಾಡಿದುದೇನು ? ಜಗದೊಡೆಯನು ಗೋಪಾಂಗನೆಯರೊಡನೆ ವಿಹಾರಮಾಡಲು ಕಾರಣವೇನು ?

**ಕಾ ವಾ ಗೋಪಾಂಗನಾ ಕೇ ವಾ ಗೋಪಾಲಾ ಬಾಲರೂಪಿಣಃ ।**
**ಕಾ ವಾ ಯಶೋದಾ ಕೋ ನಂದಃ ಕಿಂ ವಾ ಪುಣ್ಯಂ ಚಕಾರ ಹ ॥ ೧೩ ॥**

**ಕಥಂ ರಾಧಾ ಪುಣ್ಯವತೀ ದೇವೀ ಗೋಲೋಕವಾಸಿನೀ ।**
**ವ್ರಜೇ ವಾ ವ್ರಜಕನ್ಯಾ ಸಾ ಬಭೂವ ಪ್ರೇಯಸೀ ಹರೇಃ ॥ ೧೪ ॥**

**ಕಥಂ ಗೋಪ್ಯೋ ದುರಾರಾಧ್ಯಂ ಸಂಪ್ರಾಪುರೀಶ್ವರಂ ಪರಂ ।**
**ಕಥಂ ತಾಶ್ಚ ಪರಿತ್ಯಜ್ಯ ಜಗಾಮ ಮಥುರಾಂ ಪುನಃ ॥ ೧೫ ॥**

**ಭಾರಾವತರಣಂ ಕೃತ್ವಾ ಕಿಂ ವಿಧಾಯ ಜಗಾಮ ಸಃ ।**
**ಕಥಯಸ್ವ ಮಹಾಭಾಗ ಪುಣ್ಯಶ್ರವಣಕೀರ್ತನ ॥ ೧೬ ॥**

**ಸುದುರ್ಲಭಾಂ ಹರಿಕಥಾಂ ತರಣಿಂ ಭವಸಾಗರೇ ।**
**ನಿಷೇಕಭೋಗನಿಗಡಕ್ಲೇಶಚ್ಛೇದನಕರ್ತನೀಂ ॥ ೧೭ ॥**

---

೧೩. ಗೋಪಾಂಗನೆಯರಾಗಿಯೂ, ಗೋಪಬಾಲಕರಾಗಿಯೂ ಅವತರಿಸಿದ್ದವರು ಯಾರು? ಯಶೋದೆ ಯಾರು? ನಂದನಾರು? ಅವರು ಮಾಡಿದ ಪುಣ್ಯವೇನು?

೧೪. ಗೋಲೋಕವಾಸಿನಿಯೂ, ಪುಣ್ಯವತಿಯೂ ಆದ ರಾಧಾದೇವಿಯು ಗೋಕುಲದಲ್ಲಿ ಗೊಲ್ಲನ ಮಗಳಾಗಿ ಹುಟ್ಟಿ ಶ್ರೀಹರಿಗೆ ಪ್ರಿಯಳಾದುದು ಹೇಗೆ?

೧೫ ಸುಲಭಸಾಧ್ಯನಲ್ಲದ ಸರ್ವೇಶ್ವರನನ್ನು ಗೋಪಿಯರೆಲ್ಲರೂ ಪಡೆದುದೆಂತು? ಅವರೆಲ್ಲರನ್ನೂ ಬಿಟ್ಟು ಶ್ರೀಹರಿಯು ಮಧುರೆಗೆ ಎಂತು ಹೋದನು?

೧೬. ಭೂಭಾರವನ್ನಿಳುಹಿ ಶ್ರೀಹರಿಯು ಮುಂದೇನು ಮಾಡಿದನು? ಪುಣ್ಯಕಥೆಗಳನ್ನು ಹೇಳುವುದರಲ್ಲಿ ಕೀರ್ತಿಗಳಿಸಿರುವ ಎಲೈ ಮಹಾಭಾಗ್ಯಶಾಲಿಯೇ, ಎಲ್ಲವನ್ನೂ ನನಗೆ ವಿಸ್ತರಿಸಿ ಹೇಳು.

೧೭. ಸಂಸಾರಸಾಗರವನ್ನು ದಾಟಲು 'ದೋಣಿಯಂತೆಯೂ, ಇಂದ್ರಿಯಸುಖವೆಂಬ ಬಂಧನಕ್ಲೇಶವನ್ನು ಬಿಡಿಸಲು ಸಾಧನವಾಗಿಯೂ ಇರುವ ಸರ್ವಸುಲಭವಲ್ಲದ ಶ್ರೀಹರಿಯ ಕಥೆಯನ್ನು ಹೇಳು.

ಪಾಪೇಂಧನಾನಾಂ ದಹನೇ ಜ್ವಲದಗ್ನಿಶಿಖಾಮಿವ ।
ಪುಂಸಾಂ ಶ್ರುತವತಾಂ ಕೋಟಿಜನ್ಮಕಿಲ್ಬಿಷನಾಶಿನೀಂ ॥ ೧೮ ॥

ಮುಕ್ತಿಂ ಕರ್ಣಸುಧಾರಮ್ಯಾಂ ಶೋಕಸಾಗರನಾಶಿನೀಂ ।
ಮಹ್ಯಂ ಭಕ್ತಾಯ ಶಿಷ್ಯಾಯ ಜ್ಞಾನಂ ದೇಹಿ ಕೃಪಾನಿಧೇ ॥ ೧೯ ॥

ತಪೋಜಪಮಹಾದಾನಾತ್ಪೃಥಿವ್ಯಾಂ ತೀರ್ಥದರ್ಶನಾತ್ ।
ಶ್ರುತಿಪಾಠಾದನಶನಾದ್ವ್ರತಾದ್ದೇವಾರ್ಚನಾದಪಿ ॥ ೨೦ ॥

ದೀಕ್ಷಾಯಾಃ ಸರ್ವಯಜ್ಞೇಷು ಯತ್ಫಲಂ ಲಭತೇ ನರಃ ।
ಷೋಡಶೀಂ ಜ್ಞಾನದಾನಸ್ಯ ಕಲಾಂ ನಾರ್ಹತಿ ತತ್ಫಲಂ ॥ ೨೧ ॥

ಪಿತ್ರಾಹಂ ಪ್ರೇಷಿತೋ ಜ್ಞಾನಾದಾನಾಯ ತವ ಸನ್ನಿಧಿಂ ।
ಸುಧಾಸಮುದ್ರಂ ಸಂಪ್ರಾಪ್ಯ ಕೋ ವಾನ್ಯತ್ಪಾತುಮಿಚ್ಛತಿ ॥ ೨೨ ॥

---

೧೮. ಪಾಪವೆಂಬ ಕಟ್ಟಿಗೆಗಳನ್ನು ಸುಡಲು ಪ್ರಜ್ವಲಿಸುವ ಅಗ್ನಿಗೆ ಸಮಾನವಾದ ಆ ಕಥೆಯು ಕೇಳಿದ ಜನರ ಕೋಟಿಜನ್ಮಗಳ ಪಾಪವನ್ನು ಪರಿಹರಿಸುವುದು.

೧೯. ಎಲೈ ಕರುಣಾಳುವೇ, ಕರ್ಣಾನಂದಕರವೂ, ಶೋಕಸಾಗರತಾರಕವೂ, ಮುಕ್ತಿದಾಯಕವೂ ಆದ ಆ ಕಥೆಯನ್ನು ಶಿಷ್ಯನೂ, ಭಕ್ತನೂ ಆದ ನನಗೆ ಹೇಳಿ ಜ್ಞಾನದಾತೃವಾಗು.

೨೦–೨೧. ಜಪತಪಗಳಿಂದಲೂ, ಮಹಾದಾನಗಳಿಂದಲೂ, ಪೃಥ್ವಿಯಲ್ಲಿರುವ ಪುಣ್ಯತೀರ್ಥಗಳ ಯಾತ್ರೆಯಿಂದಲೂ, ವೇದಾಧ್ಯಯನದಿಂದಲೂ, ಅನಶನವ್ರತದಿಂದಲೂ, ದೇವತಾರ್ಚನೆಗಳಿಂದಲೂ, ಯಜ್ಞದೀಕ್ಷೆಗಳಿಂದಲೂ ಮನುಜನಿಗೆ ಯಾವ ಫಲವು ಲಭಿಸುವುದೋ ಅದು ಆತ್ಮಜ್ಞಾನವನ್ನು ಬೋಧಿಸುವುದರಿಂದ ಲಭಿಸುವ ಫಲದ ಹದಿನಾರನೆಯ ಒಂದು ಭಾಗಕ್ಕೂ ಎಣೆಯಾಗುವುದಿಲ್ಲ.

೨೨ ನನ್ನ ತಂದೆಯು ನನ್ನನ್ನು ಜ್ಞಾನಾರ್ಜನೆಗಾಗಿ ನಿನ್ನ ಸಮೀಪಕ್ಕೆ ಕಳುಹಿದನು. ಅಮೃತಸಮುದ್ರಕ್ಕೆ ಬಂದ ಯಾರು ತಾನೇ ಅದನ್ನು ಬಿಟ್ಟು ಬೇರೆ ರಸವನ್ನು ಕುಡಿವಾರು ?

॥ ಶ್ರೀ ನಾರಾಯಣ ಉವಾಚ ॥

ಮಯಾ ಜ್ಞಾತೋಽಸಿ ಧನ್ಯಸ್ತ್ವಂ ಪುಣ್ಯರಾಶಿಃ ಸುಮೂರ್ತಿಮಾನ್ ।
ಕರೋಷಿ ಭ್ರಮಣಂ ಲೋಕಾನ್ಪಾವಿತುಂ ಕುಲಪಾವನ ॥ ೨೩ ॥

ಜನಾನಾಂ ಹೃದಯಂ ಸದ್ಯಃ ಸುವ್ಯಕ್ತಂ ವಚನೇನ ವೈ ।
ಶಿಷ್ಯೇ ಕಲತ್ರೇ ಕನ್ಯಾಯಾಂ ದೌಹಿತ್ರೇ ಬಾಂಧವೇಽಪಿ ಚ ॥ ೨೪ ॥

ಪುತ್ರೇ ಪೌತ್ರೇ ಚ ವಚಸಿ ಪ್ರತಾಪೇ ಯಶಸಿ ಶ್ರಿಯಾಂ ।
ವೃದ್ಧೌ ವೈರಿಣಿ ವಿದ್ಯಾಯಾಂ ಜ್ಞಾಯತೇ ಹೃದಯಂ ನೃಣಾಂ ॥ ೨೫ ॥

ಜೀವನ್ಮುಕ್ತೋಽಸಿ ಪೂತಸ್ತ್ವಂ ಶುದ್ಧಭಕ್ತೋ ಗದಾಭೃತಃ ।
ಪುನಾಸಿ ಪಾದರಜಸಾ ಸರ್ವಾಧಾರಾಂ ವಸುಂಧರಾಂ ॥ ೨೬ ॥

---

೨೩. ಶ್ರೀ ನಾರಾಯಣಮಹರ್ಷಿ :—ನಾನು ನಿನ್ನನ್ನು ಮೂರ್ತಿವೆತ್ತ ಪುಣ್ಯರಾಶಿಯೆಂದೂ, ಧನ್ಯತಮನೆಂದೂ ಚೆನ್ನಾಗಿ ಬಲ್ಲೆ. ವಂಶೋದ್ಧಾರಕನಾದ ನೀನು ಲೋಕವನ್ನು ಪಾವನಗೊಳಿಸಲು ಎಲ್ಲೆಡೆಯಲ್ಲೂ ಸಂಚರಿಸುತ್ತೀಯೆ.

೨೪. ಜನರು ತಮ್ಮ ಶಿಷ್ಯ, ಹೆಂಡತಿ, ಮಗಳು, ಮೊಮ್ಮಗ ಮತ್ತು ಬಂಧುಗಳೊಡನೆ ಮಾತನಾಡುವಾಗ ಅವರ ಮನೋಽಭಿಪ್ರಾಯವು ಹೊರಬೀಳುವುದು.

೨೫. ಪುತ್ರ ಪೌತ್ರರಿಂದಲೂ, ಮಾತಿನಿಂದಲೂ, ಪ್ರತಾಪದಿಂದಲೂ, ಕೀರ್ತಿಸಂಪತ್ತುಗಳಿಂದಲೂ, ವೃದ್ಧಿಯಿಂದಲೂ, ಶತ್ರುಮುಖದಿಂದಲೂ, ವಿದ್ಯೆಯಿಂದಲೂ, ಮನುಜರ ಮನಸ್ಸು ವ್ಯಕ್ತಗೊಳ್ಳುವುದು.

೨೬. ಗದಾಧರನಾದ ಶ್ರೀಕೃಷ್ಣನ ಪರಮ ಭಕ್ತನಾದ ನೀನು ಪವಿತ್ರನೂ ಜೀವನ್ಮುಕ್ತನೂ ಆಗಿರುವೆ. ನಿನ್ನ ಪಾದಧೂಳಿಯ ಸಂಪರ್ಕದಿಂದ ಸಕಲಕ್ಕೂ ಆಧಾರವಾದ ವಸುಂಧರೆಯನ್ನೂ ಪಾವನಗೊಳಿಸುವೆ.

ಪುನಾಸಿ ಲೋಕಾನ್ಸರ್ವಾಂಶ್ಚ ಸ್ವೀಯವಿಗ್ರಹದರ್ಶನಾತ್ ।
ಸುಮಂಗಲಾಂ ಹರಿಕಥಾಂ ತೇನ ತ್ವಂ ಶ್ರೋತುಮಿಚ್ಛಸಿ ॥ ೨೭ ॥

ಯತ್ರ ಕೃಷ್ಣಕಥಾಃ ಸಂತಿ ತತ್ರೈವ ಸರ್ವದೇವತಾಃ ।
ಋಷಯೋ ಮುನಯಶ್ಚೈವ ತೀರ್ಥಾನಿ ನಿಖಿಲಾನಿ ಚ ॥ ೨೮ ॥

ಕಥಾಃ ಶ್ರುತ್ವಾ ಕಥಾಂತೇ ತೇ ಯಾಂತಿ ಸಂತೋ ನಿರಾಪದಂ ।
ಭವಂತಿ ತಾನಿ ತೀರ್ಥಾನಿ ಯೇಷು ಕೃಷ್ಣಕಥಾಃ ಶುಭಾಃ ॥ ೨೯ ॥

ಸದ್ಯಃ ಕೃಷ್ಣಕಥಾವಕ್ತಾ ಸ್ವಸ್ಯ ಪುಂಸಾಂ ಶತಂ ಶತಂ ।
ಸಮುದ್ಧೃತ್ಯ ಶ್ರುತವತಾಂ ಪುನಾತಿ ನಿಖಿಲಂ ಕುಲಂ ॥ ೩೦ ॥

ಪ್ರಷ್ಟಾ ತು ಪ್ರಶ್ನಮಾತ್ರೇಣ ಪುನಾತಿ ಕುಲಮಾತ್ಮನಃ ।
ಶ್ರೋತಾ ಶ್ರವಣಮಾತ್ರೇಣ ಸ್ವಕುಲಂ ಸ್ವಸ್ವಬಾಂಧವಾನ್ ॥ ೩೧ ॥

---

೨೭. ನಿನ್ನ ದಿವ್ಯ ಶರೀರದ ದರ್ಶನಮಾಡಿಸಿ ಸಕಲ ಲೋಕವನ್ನೂ ಪವಿತ್ರಗೊಳಿಸುವೆ ಆದುದರಿಂದಲೇ ನೀನು ಮಂಗಳಮಯವಾದ ಶ್ರೀಹರಿಯ ಕಥೆಯನ್ನು ಕೇಳ ಬಯಸುತ್ತಿರುವೆ.

೨೮. ಎಲ್ಲಿ ಶ್ರೀಕೃಷ್ಣನ ಕಥೆಯು ಶ್ರುತವಾಗುವುದೋ ಅಲ್ಲಿ ಸಕಲದೇವತೆಗಳೂ, ಎಲ್ಲ ಮಹರ್ಷಿಗಳೂ, ನಿಖಿಲ ಪುಣ್ಯತೀರ್ಥಗಳೂ ನೆಲಸಿರುವುವು.

೨೯. ಈ ಕಥೆಯನ್ನು ಕೇಳಿದನಂತರ ಎಲ್ಲರೂ ಮುಕ್ತಿಯನ್ನು ಹೊಂದುವರು. ಶ್ರೀ ಕೃಷ್ಣನ ಕಥೆಯು ಪ್ರಚಾರವಾದ ಸ್ಥಳಗಳೆಲ್ಲ ಪುಣ್ಯತೀರ್ಥವೆನಿಸುವುದು.

೩೦. ಶ್ರೀಕೃಷ್ಣನ ಕಥೆಯನ್ನು ಹೇಳುವವನು ತನ್ನ ವಂಶದ ನೂರಾರು ಪುರುಷರನ್ನೂ, ಕೇಳಿದವರ ಸಮಸ್ತ ಕುಲವನ್ನೂ ಉದ್ಧರಿಸಿ ತಾನೂ ಪವಿತ್ರನಾಗುವನು.

೩೧ ಪ್ರಶ್ನೆಮಾಡುವವನು ಪ್ರಶ್ನಿಸಿದ ಮಾತ್ರದಿಂದಲೇ ತನ್ನ ಕುಲವನ್ನು ಪವಿತ್ರಗೊಳಿಸುವನು. ಕೇಳುವವನು ಕೇಳಿದ ಮಾತ್ರದಿಂದಲೇ, ತನ್ನ ಕುಲವನ್ನೂ ಬಂಧು ಬಾಂಧವರನ್ನೂ ಪಾವನಗೊಳಿಸುವನು.

**ಶತಜನ್ಮ ತಪಃಪೂತಃ ಜನ್ಮೇದಂ ಭಾರತೇ ಲಭೇತ್ ।**
**ಕರೋತಿ ಸಫಲಂ ಜನ್ಮ ಶ್ರುತ್ವಾ ಹರಿಕಥಾಮೃತಂ ॥ ೩೨ ॥**

**ಅರ್ಚನಂ ವಂದನಂ ಮಂತ್ರಜಪಃ ಸೇವನಮೇವ ಚ ।**
**ಸ್ಮರಣಂ ಕೀರ್ತನಂ ಶಶ್ವದ್ಗುಣಶ್ರವಣಮೀಪ್ಸಿತಂ ॥ ೩೩ ॥**

**ನಿವೇದನಂ ತಸ್ಯ ದಾಸ್ಯಂ ನವಧಾ ಭಕ್ತಿಲಕ್ಷಣಂ ।**
**ಕರೋತಿ ಜನ್ಮ ಸುಫಲಂ ಕೃತ್ವೈತಾನಿ ಚ ನಾರದ ॥ ೩೪ ॥**

**ನ ಚ ವಿಘ್ನೋ ಭವೇತ್ತಸ್ಯ ಪರಮಾಯುರ್ನ ನಶ್ಯತಿ ।**
**ನ ಯಾತಿ ತತ್ಪುರಃ ಕಾಲೋ ವೈನತೇಯಮಿವೋರಗಃ ॥ ೩೫ ॥**

---

೩೨. ನೂರು ಜನ್ಮ ತಪಸ್ಸು ಮಾಡಿ ಪೂತನಾದವನು ಈ ಭರತಖಂಡದಲ್ಲಿ ಜನ್ಮವೆತ್ತುವನು. ಅಲ್ಲಿ ಹರಿಕಥೆಯೆಂಬ ಅಮೃತವನ್ನು ಪಾನಮಾಡಿದವನು ತನ್ನ ಜನ್ಮವನ್ನು ಸಾರ್ಥಕಗೊಳಿಸುವನು.

೩೩-೩೪. ಅರ್ಚನೆ ವಂದನೆಗಳಿಂದಲೂ, ಮಂತ್ರವನ್ನು ಜಪಿಸುವುದರಿಂದಲೂ, ಸೇವೆ ಮಾಡುವುದರಿಂದಲೂ, ಸ್ಮರಣೆ ಕೀರ್ತನೆಗಳಿಂದಲೂ, ಸರ್ವದಾ ಗುಣಶ್ರವಣಮಾಡುವುದರಿಂದಲೂ, ಅಭೀಷ್ಟವಸ್ತುವನ್ನು ನಿವೇದಿಸುವುದರಿಂದಲೂ, "ನಾನು ನಿನ್ನ ದಾಸ" ನೆಂದು ತಿಳಿಯುವುದರಿಂದಲೂ ಪರಮಾತ್ಮನಲ್ಲಿ ಭಕ್ತಿಯನ್ನು ಪ್ರಕಟಿಸಬಹುದು. ಎಲೈ ನಾರದನೇ ಒಂಭತ್ತು ವಿಧವಾದ ಈ ಭಕ್ತಿಗಳನ್ನು ಪ್ರಕಟಿಸಿದವನು ಜನ್ಮವನ್ನು ಸಫಲಗೊಳಿಸುವನು.

೩೫. ಯಾವಕಾರ್ಯದಲ್ಲೂ ಅವನಿಗೆ ವಿಘ್ನವುಂಟಾಗುವುದಿಲ್ಲ. ಅವನ ಆಯುಸ್ಸು ನಶಿಸುವುದಿಲ್ಲ. ಕಾಲಪುರುಷನು ಅವನ ಮುಂದೆ ಚಲಿಸುವುದಿಲ್ಲ. ಗರುಡನನ್ನು ನೋಡಿದ ಹಾವು ದೂರ ಓಡುವಂತೆ ಓಡುವನು.

ನ ಜಹಾತಿ ಸಮೀಪಂ ಚ ಕ್ಷಣಂ ತಸ್ಯ ಹರಿಃ ಸ್ವಯಂ ।
ಉಪತಿಷ್ಠಂತಿ ತೂರ್ಣಂ ತಮಣಿಮಾದಿಕಸಿದ್ಧಯಃ ॥ ೩೬ ॥

ಸುದರ್ಶನಂ ಭ್ರಮತ್ಯೇವ ತಸ್ಯ ಪಾರ್ಶ್ವೇ ದಿವಾನಿಶಂ ।
ಕೃಷ್ಣಾಜ್ಞಯಾ ಚ ರಕ್ಷಾರ್ಥಂ ಕೋ ವಾ ಕಿಂ ಕರ್ತುಮೀಶ್ವರಃ ॥ ೩೭ ॥

ನ ಯಾಂತಿ ತತ್ಸಮೀಪಂ ಚ ಸ್ವಪ್ನೇಽಪಿ ಯಮಕಿಂಕರಾಃ ।
ಜ್ವಲದಗ್ನಿಂ ಯಥಾ ದೃಷ್ಟ್ವಾ ಶಲಭಾ ನ ವ್ರಜಂತಿ ತಂ ॥ ೩೮ ॥

ವ್ಯಾಧಯೋ ವಿಪದಃ ಶೋಕಾ ವಿಘ್ನಾಶ್ಚ ನ ಪ್ರಯಾಂತಿ ತಂ ।
ನ ಯಾಂತಿ ತತ್ಸಮೀಪಂ ಚ ಮೃತ್ಯುರ್ಮೃತ್ಯುಭಯಾನ್ಮುನೇ ॥ ೩೯ ॥

ಋಷಯೋ ಮುನಯಃ ಸಿದ್ಧಾಃ ಸಂತುಷ್ಟಾಃ ಸರ್ವದೇವತಾಃ ।
ಸ ಚ ಸರ್ವತ್ರ ನಿಶ್ಶಂಕಃ ಸುಖೀ ಕೃಷ್ಣಪ್ರಸಾದತಃ ॥ ೪೦ ॥

---

೩೬. ಶ್ರೀಹರಿಯು ಅವನನ್ನು ಎಡೆಬಿಡದೆ ಯಾವಾಗಲೂ ರಕ್ಷಿಸುತ್ತಿರುವನು. ಅಣಿಮಾದಿ ಅಷ್ಟಸಿದ್ಧಿಗಳೂ ಅವನಿಗೆ ಜಾಗ್ರತೆ ಕೈಗೂಡುವುವು.

೩೭ ಅವನ ಪಾರ್ಶ್ವದಲ್ಲಿ ಸುದರ್ಶನ ಚಕ್ರವು ಹಗಲು ರಾತ್ರಿ ರಕ್ಷಣೆ ಮಾಡುತ್ತಿರುವುದು. ಶ್ರೀಕೃಷ್ಣನ ಅಪ್ಪಣೆಯಂತೆ ಅದು ರಕ್ಷಿಸುತ್ತಿರುವಾಗ ಯಾವನು ತಾನೆ ಏನು ಮಾಡಿಯಾರು ?

೩೮. ಉರಿಯುತ್ತಿರುವ ಅಗ್ನಿಯನ್ನು ನೋಡಿ ಪತಂಗಗಳು ದೂರ ಹೋಗುವಂತೆ, ಶ್ರೀಕೃಷ್ಣಭಕ್ತನನ್ನು ನೋಡಿ ಯಮನ ದೂತರು ಸ್ವಪ್ನದಲ್ಲಿಯೂ ಸಮೀಪಿಸಲಾರದೆ ದೂರಹೋಗುವರು.

೩೯. ಎಲೈ ಮುನಿಯೇ, ವ್ಯಾಧಿವಿಪತ್ತುಗಳೂ, ಶೋಕ ವಿಘ್ನಗಳೂ ವಿಷ್ಣುಭಕ್ತನಿಗೆ ಬರುವುದಿಲ್ಲ. ಮೃತ್ಯುವೂ ಕೂಡ ಮೃತ್ಯುಭಯದಿಂದ ಅವನ ಸಮೀಪಕ್ಕೆ ಹೋಗುವುದಿಲ್ಲ.

೪೦ ಋಷಿಮುನಿಗಳೂ, ಸಿದ್ಧರೂ, ಸಕಲ ದೇವತೆಗಳೂ, ವಿಷ್ಣುಭಕ್ತನಲ್ಲಿ ಪ್ರಸನ್ನರಾಗುವರು. ಅವನು ಶ್ರೀಕೃಷ್ಣನ ಅನುಗ್ರಹದಿಂದ ಎಲ್ಲೆಡೆಯಲ್ಲೂ ನಿರ್ಭೀತನಾಗಿ ಸುಖವಾಗಿರುವನು.

ತವ ಕೃಷ್ಣ ಕಥಾಯಾಂ ಚ ರತಿರಾತ್ಯಂತಿಕೀ ಸದಾ ।
ಜನಕಸ್ಯ ಸ್ವಭಾವೋ ಹಿ ಜನ್ಯೇ ತಿಷ್ಠತಿ ನಿಶ್ಚಿತಂ ॥ ೪೧ ॥

ವಿಪ್ರೇಂದ್ರ ಕಾ ಪ್ರಶಂಸೇಯಂ ಜನ್ಮ ತೇ ಬ್ರಹ್ಮಮಾನಸೇ ।
ಯತ್ರ ಯತ್ರ ಕುಲೇ ಜನ್ಮ ತನ್ಮತಿಸ್ತಾದೃಶೀ ಭವೇತ್ ॥ ೪೨ ॥

ಪಿತಾ ವಿಧಾತಾ ಜಗತಾಂ ಕೃಷ್ಣಪಾದಾಬ್ಜಸೇವಯಾ ।
ನಿತ್ಯಂ ಕರೋತಿ ಯಃ ಶಶ್ವನ್ನವಧಾ ಭಕ್ತಿಲಕ್ಷಣಂ ॥ ೪೩ ॥

ರತಿಃ ಕೃಷ್ಣ ಕಥಾಯಾಂ ಚ ಯಸ್ಯಾಶ್ರುಪುಲಕೋದ್ಗಮಃ ।
ಮನೋ ನಿಮಗ್ನಂ ತತ್ರೈವ ಸ ಭಕ್ತಃ ಕಥಿತೋ ಬುಧೈಃ ॥ ೪೪ ॥

ಪುತ್ರದಾರಾದಿಕಂ ಸರ್ವಂ ಜಾನಾತಿ ಶ್ರೀ ಹರೇರಿತಿ ।
ಆತ್ಮನಾ ಮನಸಾ ವಾಚಾ ಸ ಭಕ್ತಃ ಕಥಿತೋ ಬುಧೈ ॥ ೪೫ ॥

---

೪೧. ನಿನಗೆ ಶ್ರೀಕೃಷ್ಣನ ಕಥೆಯನ್ನು ಕೇಳುವುದರಲ್ಲಿ ತುಂಬ ಆಸಕ್ತಿಯಿರುವುದು. ತಂದೆಯ ಸ್ವಭಾವವೇ ಮಗನಲ್ಲಿರಬೇಕಾದದುದು ನಿಶ್ಚಯವಾಗಿರುವುದು.

೪೨. ಎಲೈ ವಿಪ್ರೋತ್ತಮನೇ, ನಿನ್ನನ್ನು ಹೊಗಳುವುದೇನಿದೆ? ನೀನು ಬ್ರಹ್ಮನ ಮನಸ್ಸಿನಿಂದ ಜನಿಸಿದವನು. ಯಾರು ಯಾವ ಕುಲದಲ್ಲಿ ಜನ್ಮವೆತ್ತುವರೋ ಅದಕ್ಕನುಗುಣವಾದ ಬುದ್ಧಿಯು ಅವರಿಗುಂಟಾಗುವುದು.

೪೩ ನಿನ್ನ ತಂದೆಯು ಶ್ರೀಕೃಷ್ಣನ ಪಾದಕಮಲಗಳನ್ನು ಸೇವಿಸಿ ಜಗತ್ಸೃಷ್ಟಿಕರ್ತನಾದನು. ಅವನು ಪ್ರತಿದಿನವೂ ಒಂಭತ್ತು ವಿಧವಾದ ಭಕ್ತಿಯನ್ನೂ ಶ್ರೀಹರಿಗೆ ಅರ್ಪಿಸುವನು

೪೪. ಯಾರಿಗೆ ಶ್ರೀಕೃಷ್ಣನ ಕಥೆಯನ್ನು ಕೇಳಲು ಅತ್ಯಾಸಕ್ತಿಯುಂಟಾಗಿ, ರೋಮಾಂಚವೂ ಆನಂದಾಶ್ರುವೂ ವ್ಯಕ್ತವಾಗುವುದೋ, ಯಾರ ಮನಸ್ಸು ಶ್ರೀಕೃಷ್ಣನಲ್ಲಿಯೇ ನೆಲೆಸಿರುವುದೋ, ಅವರನ್ನು ಭಕ್ತರೆಂದು ಪಂಡಿತರು ಕರೆಯುವರು.

೪೫. ಪತ್ನೀಪುತ್ರಾದಿಗಳು ಶ್ರೀಹರಿಯ ಅನುಗ್ರಹದಿಂದ ದೊರೆಯುವರೆಂದು ಯಾರು ಮನಸಾ ವಾಚಾ ಕಾಯಾ ತಿಳಿದಿರುವರೋ, ಅವರೇ ನಿಜವಾದ ವಿಷ್ಣು ಭಕ್ತರು.

ನಿರ್ಜನೇ ತೀರ್ಥಸಂಪರ್ಕೇ ನಿಃಸಂಗಾ ಯೇ ಮುದಾನ್ವಿತಾಃ ।
ಧ್ಯಾಯಂತಿ ಚರಣಾಂಭೋಜಂ ಶ್ರೀಹರೇಸ್ತೇ ಚ ವೈಷ್ಣವಾಃ ॥ ೪೬ ॥

ದಯಾಸ್ತಿ ಸರ್ವಜೀವೇಷು ಸರ್ವಂ ಕೃಷ್ಣಮಯಂ ಜಗತ್ ।
ಯೋ ಜಾನಾತಿ ಮಹಾಜ್ಞಾನೀ ಸ ಭಕ್ತೋ ವೈಷ್ಣವೋ ಮತಃ । ೪೭ ॥

ಶಶ್ವದ್ಯೇ ನಾಮ ಗಾಯಂತಿ ಗುಣಂ ಮಂತ್ರಂ ಜಪಂತಿ ಚ ।
ಕುರ್ವಂತಿ ಶ್ರವಣಂ ಗಾಥಾ ವದಂತಿ ತೇsತಿವೈಷ್ಣವಾಃ ॥ ೪೮ ॥

ಲಬ್ಧಾನೀಷ್ಟಾನಿ ವಸ್ತೂನಿ ಪ್ರದಾತುಂ ಹರಯೇ ಮುದಾ ।
ಪೂರ್ಣಂ ಯಸ್ಯ ಮನೋ ಹೃಷ್ಟಂ ಸ ಭಕ್ತೋ ಜ್ಞಾನಿನಾಂ ವರಃ ॥ ೪೯ ॥

---

೪೬. ನಿರ್ಜನವಾದ ಪುಣ್ಯತೀರ್ಥಗಳಲ್ಲಿ ಯಾರು ಸಂಗರಹಿತರಾಗಿ ಸಂತೋಷದಿಂದ ಶ್ರೀಹರಿಯ ಪದಕಮಲಗಳನ್ನು ಧ್ಯಾನಿಸುವರೋ ಅವರೇ ವೈಷ್ಣವರೆನಿಸುವರು.

೪೭. ಜಗತ್ತೆಲ್ಲವೂ ಶ್ರೀಕೃಷ್ಣನಿಂದ ವ್ಯಾಪ್ತವಾದುದೆಂದು ತಿಳಿದು ಸಕಲ ಜೀವಿಗಳಲ್ಲೂ ಯಾರು ದಯೆಯಿಡುವರೋ ಆ ಮಹಾಜ್ಞಾನಿಗಳೇ ನಿಜವಾದ ವಿಷ್ಣು ಭಕ್ತರೆನಿಸುವರು.

೪೮. ಯಾರು ಪದೇ ಪದೇ ಶ್ರೀಕೃಷ್ಣನ ನಾಮರೂಪಗುಣಗಳನ್ನು ಹಾಡಿ ಅವನ ಮಂತ್ರವನ್ನು ಜಪಿಸುವರೋ, ಅವನ ದಿವ್ಯಕಥೆಯನ್ನು ಯಾರು ಕೇಳುವರೋ ಅವರೇ ವೈಷ್ಣವೋತ್ತಮರು.

೪೯. ಲಭಿಸಿದ ಇಷ್ಟವಸ್ತುಗಳನ್ನು ಶ್ರೀಹರಿಗೆ ಸಮರ್ಪಿಸಲು ಯಾರ ಮನ ಪೊಲಿಯುವುದೋ, ಅವನು ಜ್ಞಾನಿಗಳಲ್ಲಿ ಶ್ರೇಷ್ಠನೂ, ಉತ್ತಮ ಭಕ್ತನೂ ಎನಿಸುವನು.

ಯನ್ಮನೋ ಹರಿಪಾದಾಬ್ಜೇ ಸ್ವಪ್ನೇ ಜ್ಞಾನೇ ದಿವಾನಿಶಂ ।
ಪೂರ್ವಕರ್ಮೋಪಭೋಗಂ ಚ ಬಹಿರ್ಭುಂಕ್ತೇ ಸ ವೈಷ್ಣವಃ ॥ ೫೦ ॥

ಗುರುವಕ್ತ್ರಾದ್ವಿಷ್ಣುಮಂತ್ರೋ ಯಸ್ಯ ಕರ್ಣೇ ವಿಶತ್ಯಯಂ ।
ತಂ ವೈಷ್ಣವಂ ಮಹಾಪೂತಂ ಪ್ರವದಂತಿ ಮನೀಷಿಣಃ ॥ ೫೧ ॥
ಪೂರ್ವಾನ್ಸಪ್ತ ಪರಾನ್ಸಪ್ತ ಸಪ್ತ ಮಾತಾಮಹಾದಿಕಾನ್ ।

ಸೋದರಾನುದ್ಧರೇದ್ಭಕ್ತಃ ಸ್ವಪ್ರಸೂಂ ಚ ಪ್ರಸೂಪ್ರಸೂಂ ॥ ೫೨ ॥
ಕಲತ್ರಂ ಕನ್ಯಕಾಂ ಬಂಧುಂ ಶಿಷ್ಯಂ ದೌಹಿತ್ರಮಾತ್ಮನಃ ।
ಕಿಂಕರಾನ್ಕಿಂಕರೀಶ್ಚೈವಮುದ್ಧರೇದ್ವೈಷ್ಣವಃ ಸದಾ ॥ ೫೩ ॥

ಸದಾ ವಾಂಛಂತಿ ತೀರ್ಥಾನಿ ವೈಷ್ಣವಸ್ಪರ್ಶದರ್ಶನೇ ।
ಪಾಪಿದತ್ತಾನಿ ಪಾಪಾನಿ ತೇಷಾಂ ನಶ್ಯಂತಿ ಸಂಗತಃ ॥ ೫೪ ॥

---

೫೦. ಯಾರ ಮನಸ್ಸು ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೆಗಳಲ್ಲಿ ಸರ್ವದಾ ಶ್ರೀಕೃಷ್ಣನನ್ನು ಧ್ಯಾನಿಸುವುದೋ, ಯಾರು ಬಾಹ್ಯದಲ್ಲಿ ಜನ್ಮಾಂತರದ ಕರ್ಮ ಫಲವನ್ನು ಉಪಭೋಗಿಸುತ್ತಿರುವರೋ ಅವರೇ ವೈಷ್ಣವೋತ್ತಮರು.

೫೧. ಯಾರ ಕಿವಿಯಲ್ಲಿ ಗುರುಮುಖದಿಂದ ವಿಷ್ಣುಮಂತ್ರೋಪದೇಶವಾಗುವುದೋ, ಪರಮಪವಿತ್ರನಾದ ಅವನನ್ನೇ ವೈಷ್ಣವನೆಂದು ಬಲ್ಲವರು ಹೇಳುವರು.

೫೨. ತನ್ನ ವಂಶದ ಹಿಂದಿನ ಏಳುಜನಗಳನ್ನೂ, ಮುಂದಿನ ಏಳು ಜನಗಳನ್ನೂ, ಮಾತಾಮಹ, ಸಹೋದರ, ತಾಯಿ ಮತ್ತು ತಾಯಿಯ ತಾಯಿ ಮುಂತಾದವರನ್ನು ವಿಷ್ಣುಭಕ್ತನು ಉದ್ಧರಿಸುವನು.

೫೩. ತನ್ನ ಹೆಂಡತಿ, ಮಗಳು, ಬಂಧು, ಶಿಷ್ಯ, ಮಗಳಮಗ, ಸೇವಕ ಮತ್ತು ಸೇವಕಿಯರನ್ನು ವಿಷ್ಣುಭಕ್ತನು ಪಾಪಕೂಪದಿಂದುದ್ಧರಿಸುವನು.

೫೪. ವಿಷ್ಣುಭಕ್ತನ ಸ್ಪರ್ಶದರ್ಶನಗಳನ್ನು ಪುಣ್ಯತೀರ್ಥಗಳೂ ಬಯಸುವುವು. ಪಾಪಿಗಳ ಸಂಪರ್ಕದಿಂದುಂಟಾದ ಪಾಪವು ವಿಷ್ಣುಭಕ್ತರ ಸಂಗದಿಂದ ದೂರವಾಗುವುದು.

**ಗೋದೋಹನಕ್ಷಣಂ ಯಾವದ್ಯತ್ರ ತಿಷ್ಠಂತಿ ವೈಷ್ಣವಾಃ |**
**ತತ್ರ ಸರ್ವಾಣಿ ತೀರ್ಥಾನಿ ಸಂತಿ ತಾವನ್ಮಹೀತಲೇ** || ೫೫ ||

**ಧ್ರುವಂ ತತ್ರ ಮೃತಃ ಪಾಪೀ ಮುಕ್ತೋ ಯಾತಿ ಹರೇಃ ಪದಂ |**
**ತಥೈವ ಜ್ಞಾನಗಂಗಾಯಾಮಂತೇ ಕೃಷ್ಣಸ್ಮೃತೌ ಯಥಾ** || ೫೬ ||

**ತುಲಸೀಕಾನನೇ ಗೋಷ್ಠೇ ಶ್ರೀಕೃಷ್ಣಮಂದಿರೇ ಪರೇ |**
**ವೃಂದಾರಣ್ಯೇ ಹರಿದ್ವಾರೇ ತೀರ್ಥೇಷ್ವನ್ಯೇಷು ವಾ ಯಥಾ** || ೫೭ ||

**ಪಾಪಾನಿ ಪಾಪಿನಾಂ ಯಾಂತಿ ತೀರ್ಥಸ್ನಾನಾವಗಾಹನಾತ್ |**
**ತೇಷಾಂ ಪಾಪಾನಿ ನಶ್ಯಂತಿ ವೈಷ್ಣವಸ್ಪರ್ಶವಾಯುನಾ** || ೫೮ ||

---

೫೫. ಹಸುವಿನ ಹಾಲು ಕರೆಯುವಷ್ಟು ಕಾಲ ವಿಷ್ಣುಭಕ್ತರು ಎಲ್ಲಿ ನಿಲ್ಲುವರೋ, ಅಲ್ಲಿ ಭೂಮಂಡಲದಲ್ಲಿರುವ ಸಕಲ ಪುಣ್ಯ ತೀರ್ಥಗಳೂ ಅಷ್ಟು ಕಾಲ ನೆಲಸಿರುವುವು.

೫೬. ವಿಷ್ಣುಭಕ್ತರಿದ್ದೆಡೆಯಲ್ಲಿ ಮೃತನಾದ ಪಾಪಿಯು ಶ್ರೀಹರಿಯ ಪದದಲ್ಲಿ ಮುಕ್ತಿಹೊಂದುವನು. ಜ್ಞಾನವೆಂಬ ಗಂಗೆಯಲ್ಲಿ ಮಿಂದು ಮರಣಕಾಲದಲ್ಲಿ ಶ್ರೀಕೃಷ್ಣನನ್ನು ಸ್ಮರಿಸುವವನೂ ಮುಕ್ತನಾಗುವನು.

೫೭. ತುಳಸೀವನದಲ್ಲಿಯೂ, ಗೋವುಗಳ ಕೊಟ್ಟಿಗೆಯಲ್ಲಿಯೂ, ಶ್ರೀಕೃಷ್ಣನ ಮಂದಿರದಲ್ಲಿಯೂ, ವೃಂದಾವನ ಹರಿದ್ವಾರ ಮುಂತಾದ ಪುಣ್ಯತೀರ್ಥಗಳಲ್ಲಿಯೂ ಮೃತನಾದ ಪಾಪಿಯು ಮುಕ್ತಿ ಪಡೆಯುವನು

೫೮ ಪುಣ್ಯತೀರ್ಥಗಳಲ್ಲಿ ಇಳಿದು ಸ್ನಾನಮಾಡುವುದರಿಂದ ಪಾಪಿಗಳ ಪಾಪವು ದೂರವಾಗುವುದು. ವೈಷ್ಣವರ ಮೈಮೇಲಿನ ವಾಯುವನ್ನು ಸ್ಪರ್ಶಮಾಡಿದ ಮಾತ್ರದಿಂದಲೇ ಪಾಪಗಳು ಪರಿಹಾರವಾಗುವುವು.

ನ ಹಿ ಸ್ಥಾತುಂ ಶಕ್ನುವಂತಿ ಪಾಪಾನ್ಯೇವ ಕೃತಾನಿ ಚ ।
ಜ್ವಲದಗ್ನೌ ಯಥಾ ಕ್ಷಿಪ್ರಂ ಶುಷ್ಕಾಣಿ ಹಿ ತೃಣಾನಿ ಚ ॥ ೫೯ ॥

ಭಕ್ತಂ ವರ್ತ್ಮನಿ ಗಚ್ಛಂತಂ ಯೇ ಯೇ ಪಶ್ಯಂತಿ ಮಾನವಾಃ ।
ಸಪ್ತ ಜನ್ಮಾರ್ಜಿತಾಘಾನಿ ತೇಷಾಂ ನಶ್ಯಂತಿ ನಿಶ್ಚಿತಂ ॥ ೬೦ ॥

ಯೇ ನಿಂದಂತಿ ಹೃಷೀಕೇಶಂ ತದ್ಭಕ್ತಂ ಪುಣ್ಯರೂಪಿಣಂ ।
ಶತಜನ್ಮಾರ್ಜಿತಂ ಪುಣ್ಯಂ ತೇಷಾಂ ನಶ್ಯತಿ ನಿಶ್ಚಿತಂ ॥ ೬೧ ॥

ತೇ ಪಚ್ಯಂತೇ ಮಹಾಘೋರೇ ಕುಂಭೀಪಾಕೇ ಭಯಾನಕೇ ।
ಭಕ್ಷಿತಾಃ ಕೀಟಸಂಘೇನ ಯಾವಚ್ಚಂದ್ರದಿವಾಕರೌ ॥ ೬೨ ॥

ತಸ್ಯ ದರ್ಶನಮಾತ್ರೇಣ ಪುಣ್ಯಂ ನಶ್ಯತಿ ನಿಶ್ಚಿತಂ ।
ಗಂಗಾಂ ಸ್ನಾತ್ವಾ ರವಿಂ ನತ್ವಾ ತದಾ ವಿದ್ವಾನ್ವಿಶುಧ್ಯತಿ ॥ ೬೩ ॥

---

೫೯ ಉರಿಯುತ್ತಿರುವ ಅಗ್ನಿಯಲ್ಲಿ ಒಣಗಿದ ಹುಲ್ಲು ಹೇಗೆ ನಿಲ್ಲಲಾರದೋ ಹಾಗೆ ವಿಷ್ಣುಭಕ್ತರಮಧ್ಯದಲ್ಲಿ ಪಾಪಿಗಳ ಪಾಪವು ನಿಲ್ಲಲಾರದು.

೬೦ ಸನ್ಮಾರ್ಗದಲ್ಲಿ ನಡೆಯುತ್ತಿರುವ ವಿಷ್ಣುಭಕ್ತರನ್ನು ನೋಡಿದ ಮನುಜರ ಏಳು ಜನ್ಮದ ಪಾಪಗಳು ನಿಶ್ಚಯವಾಗಿಯೂ ನಾಶವಾಗುವುವು.

೬೧. ಯಾರು ಹೃಷೀಕೇಶನನ್ನೂ, ಪುಣ್ಯರೂಪಿಯಾದ ಅವನ ಭಕ್ತನನ್ನೂ ನಿಂದಿಸುವರೋ ಅವರ ನೂರುಜನ್ಮದ ಪುಣ್ಯಗಳೂ ನಾಶವಾಗುವುದು ನಿಶ್ಚಯ.

೬೨. ಅವರು ಅತ್ಯಂತ ಭಯಂಕರವಾದ ಕುಂಭೀಪಾಕವೆಂಬ ನರಕದಲ್ಲಿ ಬಿದ್ದು ಕೀಟಸಮೂಹಗಳಿಂದ ಭಕ್ಷಿತರಾಗಿ ಚಂದ್ರಸೂರ್ಯರಿರುವವರೆಗೆ ನರಳುವರು.

೬೩. ಅವನನ್ನು ನೋಡಿದ ಮಾತ್ರದಿಂದಲೇ ಪುಣ್ಯಾತ್ಮರ ಪುಣ್ಯವೆಲ್ಲ ನಾಶವಾಗುವುವು. ಆ ಪಾಪಿಯನ್ನು ನೋಡಿದವನು ಗಂಗೆಯಲ್ಲಿ ಮಿಂದು ಸೂರ್ಯನಿಗೆ ನಮಸ್ಕಾರಮಾಡಿದರೆ ಪರಿಶುದ್ಧವಾಗುವನು.

ವೈಷ್ಣವಸ್ಪರ್ಶಮಾತ್ರೇಣ ಮುಕ್ತೋ ಭವತಿ ಪಾತಕೀ ।
ತಸ್ಯ ಪಾಪಾನಿ ಹಂತ್ಯೇವ ಸ್ವಾಂತಃ ಸ್ಥೋ ಮಧುಸೂದನಃ　　॥ ೬೪ ॥

ಇತ್ಯೇವಂ ಕಥಿತೋ ವಿಪ್ರ ವಿಷ್ಣುವೈಷ್ಣವಯೋರ್ಗುಣಃ ।
ಅಧುನಾ ಶ್ರೀಹರೇರ್ಜನ್ಮ ನಿಬೋಧ ಕಥಯಾಮಿ ತೇ　　॥ ೬೫ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣನಾರದಸಂವಾದೇ ವಿಷ್ಣುವೈಷ್ಣವಯೋಃ
ಗುಣಪ್ರಶಂಸಾಪ್ರಸ್ತಾವವರ್ಣನಂ ನಾಮ
ಪ್ರಥಮೋಧ್ಯಾಯಃ

---

೬೪ ವಿಷ್ಣುಭಕ್ತನನ್ನು ಸ್ಪರ್ಶಮಾಡಿದ ಮಾತ್ರದಿಂದಲೇ ಪಾಪಿಯೂ ಮುಕ್ತಿಹೊಂದುವನು. ವೈಷ್ಣವನ ಅಂತರ್ಯಾಮಿಯಾದ ಮಧುಸೂದನನು ಪಾಪಿಯ ಪಾಪವನ್ನು ಪರಿಹರಿಸುವನು.

೬೫. ಎಲೈ ನಾರದನೇ ಈ ರೀತಿಯಾಗಿ ವಿಷ್ಣು ಮತ್ತು ವಿಷ್ಣುಭಕ್ತರ ಗುಣವನ್ನು ವಿವರಿಸಿದೆನು. ಈಗ ನಿನಗೆ ಶ್ರೀಹರಿಯು ಜನ್ಮವೆತ್ತಿದ ಸಮಾಚಾರ ವನ್ನು ಹೇಳುವೆನು ಕೇಳು.

ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ವಿಷ್ಣು ಮತ್ತು ವೈಷ್ಣವರ ಗುಣಪ್ರಶಂಸಾತ್ಮಕವಾದ
ಒಂದನೆಯ ಅಧ್ಯಾಯವು ಮುಗಿದುದು.



## ಒಂದನೆಯ ಅಧ್ಯಾಯದ ಸಾರಾಂಶ

ನಾರದನು ತಂದೆಯಾದ ಬ್ರಹ್ಮನ ಮುಖದಿಂದ ಬ್ರಹ್ಮಖಂಡವನ್ನೂ, ನಾರಾಯಣಮಹರ್ಷಿಯ ಬಾಯಿನಿಂದ ಪ್ರಕೃತಿಖಂಡ ಮತ್ತು ಗಣಪತಿಖಂಡವನ್ನೂ ಕೇಳಿದರೂ ತೃಪ್ತನಾಗದೆ ಸರ್ವೋತ್ತಮವಾದ ಶ್ರೀಕೃಷ್ಣನಜನ್ಮಖಂಡವನ್ನು ವಿಸ್ತರಿಸಿ ಹೇಳಬೇಕೆಂದು ಕೇಳಲು, ನಾರಾಯಣಮಹರ್ಷಿಯು, ನಾರದನ ಗುಣಪ್ರಶಂಸೆ ಮಾಡಿ, ಅವನೇ ಆ ಕಥೆಯನ್ನು ಕೇಳಲು ಸರಿಯಾದ ಅಧಿಕಾರಿಯೆಂದು ಬಗೆದು, ಶ್ರೀಕೃಷ್ಣಕಥಾಮಹಿಮೆಯನ್ನೂ, ಅದನ್ನು ಕೇಳುವ ವಿಷ್ಣುಭಕ್ತರ ಪುಣ್ಯವನ್ನೂ ವಿಸ್ತರಿಸಿ ಹೇಳಿದನು.

ಯಾರು ನಿಷ್ಕಾಮರಾಗಿ ತಮ್ಮ ಕರ್ತವ್ಯಕರ್ಮಗಳನ್ನು ಆತ್ಮಾರ್ಪಣಬುದ್ಧಿಯಿಂದ ಆಚರಿಸುವರೋ, ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದು ನವವಿಧಭಕ್ತಿಪೂರ್ವಕವಾಗಿ ಅವನನ್ನು ಯಾರು ಸೇವೆಮಾಡುವರೋ, ಯಾರು 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ತಿಳಿದು ಸಕಲಪ್ರಾಣಿಗಳಲ್ಲಿಯೂ ದಯಾಪೂರ್ಣರಾಗಿರುವರೋ, ಯಾರು ಜಾಗ್ರತ್, ಸ್ವಪ್ನ, ಸುಷುಪ್ತಿಯೆಂಬಮೂರು ಅವಸ್ಥೆಗಳಲ್ಲಿಯೂ 'ಏಕಮೇವಾದ್ವಿತೀಯಂ ಬ್ರಹ್ಮ' 'ನೇಹ ನಾನಾಸ್ತಿ ಕಿಂಚನ' ಎಂಬಂತೆ ಶ್ರೀಕೃಷ್ಣನೇ ಪರಮಾತ್ಮನೆಂದು ತಿಳಿದು ಅನನ್ಯಭಕ್ತಿಯಿಂದ ಧ್ಯಾನಿಸುವರೋ ಅವರೇ ವಿಷ್ಣುಭಕ್ತರೆನಿಸುವರು. ಅಂಥ ವಿಷ್ಣುಭಕ್ತರ ಸಂಪರ್ಕದಿಂದ ಸಕಲ ಪಾಪವೂ ನಾಶವಾಗುವುದು. ಅವರು ಅಪಾರ ಮಹಿಮರು. ವಿಷ್ಣುಭಕ್ತರನ್ನು ನಿಂದಿಸುವವನು ಮಹಾಪಾಪಕ್ಕೆ ಗುರಿಯಾಗಿ ಕುಂಭೀಪಾಕ ನರಕದಲ್ಲಿ ಬಿದ್ದು ನರಳುವನು ವಿಷ್ಣುಭಕ್ತರ ಸಂಗಮಾಡಿದ ಪಾಪಿಯೂ ಪವಿತ್ರನಾಗುವನು.



--॥ ಓಂ ॥--

--॥ ಶ್ರೀ ಗಣೇಶಾಯ ನಮಃ ॥--

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ದ್ವಿತೀಯೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಯೇನ ವಾ ಪ್ರಾರ್ಥಿತಃ ಕೃಷ್ಣ ಆಜಗಾಮ ಮಹೀತಲಂ।
ಯಂ ಯಂ ವಿಧಾಯ ಭೂಮೌ ಸ ಜಗಾಮ ಸ್ವಾಲಯಂ ವಿಭುಃ ॥ ೧ ॥

ಭಾರಾವತರಣೋಪಾಯಂ ದುಷ್ಟಾನಾಂ ಚ ವಧೋದ್ಯಮಂ।
ಸರ್ವಂ ತೇ ಕಥಯಿಷ್ಯಾಮಿ ಸುವಿಚಾರ್ಯ ವಿಧಾನತಃ ॥ ೨ ॥

ಅಧುನಾ ಗೋಪವೇಷಂ ಚ ಗೋಕುಲಾಗಮನಂ ಹರೇಃ।
ರಾಧಾ ಗೋಪಾಲಿಕಾ ಯೇನ ನಿಬೋಧ ಕಥಯಾಮಿ ತೇ ॥ ೩ ॥

---

### ಎರಡನೆಯ ಅಧ್ಯಾಯವು

೧-೨. ನಾರಾಯಣಮಹರ್ಷಿ :—ಎಲೈ ನಾರದನೇ, ಶ್ರೀಕೃಷ್ಣನು ಯಾರ ಪ್ರಾರ್ಥನೆಯಂತೆ ಭೂಮಂಡಲದಲ್ಲಿ ಅವತರಿಸಿದನು. ಭೂಮಿಯಲ್ಲಿ ಯಾವ ಮಹತ್ಕಾರ್ಯವನ್ನು ಮಾಡಿ ತನ್ನ ಲೋಕಕ್ಕೆ ಹಿಂತಿರುಗಿದನು, ದುಷ್ಟರ ದಮನ ಮಾಡಿ ಭೂಭಾರವನ್ನಿಳುಹಲು ಅವನು ಮಾಡಿದ ಉಪಾಯವೇನು? ಎಂಬುದನ್ನು ನಿನಗೆ ವಿಸ್ತರಿಸಿ ಹೇಳುವೆನು. ಅವಧರಿಸು.

೩. ಈಗ ಶ್ರೀಕೃಷ್ಣನು ಗೋಪವೇಷವನ್ನು ಧರಿಸಿ ಗೋಕುಲಕ್ಕೆ ಬಂದುದನ್ನೂ, ರಾಧೆಯು ಗೋಪಸ್ತ್ರೀಯಾದುದನ್ನೂ ಸಕಾರಣವಾಗಿ ಹೇಳುವೆನು. ಕೇಳು.

ಶಂಖಚೂಡವಧಂ ಪೂರ್ವಂ ಸಂಕ್ಷೇಪಾತ್ಕಥಿತಂ ಶ್ರುತಂ |
ಅಧುನಾ ತತ್ಸುವಿಸ್ತಾರ್ಯ ನಿಬೋಧ ಕಥಯಾಮಿ ತೇ || ೪ ||

ಶ್ರೀದಾಮ್ನಃ ಕಲಹಶ್ಚೈವ ಬಭೂವ ರಾಧಯಾ ಸಹ |
ಶ್ರೀದಾಮಾ ಶಂಖಚೂಡಶ್ಚ ಶಾಪಾತ್ತಸ್ಯಾ ಬಭೂವ ಹ || ೫ ||

ರಾಧಾಂ ಶಶಾಪ ಶ್ರೀದಾಮಾ ಯಾಹಿ ಯೋನಿಂ ಚ ಮಾನವೀಂ |
ವ್ರಜೇ ವ್ರಜಾಂಗನಾ ಭೂತ್ವಾ ವಿಚರಸ್ವ ಮಹೀತಲೇ || ೬ ||

ಭೀತಾ ಶ್ರೀದಾಮಶಾಪಾತ್ಸಾ ಶ್ರೀಕೃಷ್ಣಂ ಸಮುವಾಚ ಹ |
ಗೋಪೀರೂಪಾ ಭವಿಷ್ಯಾಮಿ ಶ್ರೀದಾಮಾ ಮಾಂ ಶಶಾಪ ಹ || ೭ ||

ಕಮುಪಾಯಂ ಕರಿಷ್ಯಾಮಿ ವದ ಮಾಂ ಭಯಭಂಜನ |
ತ್ವಯಾ ವಿನಾ ಕಥಮಹಂ ಧರಿಷ್ಯಾಮಿ ಸ್ವಜೀವನಂ || ೮ ||

---

೪. ಹಿಂದೆ ಪ್ರಕೃತಿಖಂಡದಲ್ಲಿ ಶಂಖಚೂಡನೆಂಬ ರಾಕ್ಷಸನ ವಧೆಯಾದುದನ್ನು ಸಂಕ್ಷೇಪವಾಗಿ ಹೇಳಿದುದು ನಿನಗೆ ಜ್ಞಾಪಕವಿರಬಹುದು. ಈಗ ಅದನ್ನೂ ವಿಸ್ತರಿಸಿ ಹೇಳುವೆನು. ಸಾವಧಾನದಿಂದ ಕೇಳು.

೫. ಶ್ರೀದಾಮನು (ಸುದಾಮ) ರಾಧೆಯ ಶಾಪದಿಂದ ಶಂಖಚೂಡನೆಂಬ ರಾಕ್ಷಸನಾಗಿ ಜನ್ಮವೆತ್ತಿದನು.

೬. ಆಗ ಶ್ರೀದಾಮನೂ ಕೂಡ ರಾಧೆಯನ್ನು ಕುರಿತು ' ನೀನು ಮಾನವ ಯೋನಿಯಲ್ಲಿ ಜನ್ಮವೆತ್ತಿ, ನಂದಗೋಕುಲದಲ್ಲಿ ಗೋಪಾಂಗನೆಯಾಗಿ ಭೂಮಂಡಲ ಅಲೆದಾಡು ' ಎಂದು ಶಾಪವಿತ್ತನು.

೭ ಶ್ರೀದಾಮನ ಶಾಪದಿಂದ ಭೀತಳಾದ ರಾಧೆಯು ಕೃಷ್ಣನನ್ನು ಕುರಿತು ' ಶ್ರೀದಾಮನು ನನ್ನನ್ನು ಶಪಿಸಿದನು ನಾನು ಗೋಪಕನ್ಯೆಯಾಗಿ ಅವತರಿಸುವೆನು ' ಎಂದು ಹೇಳಿದಳು.

೮. ಎಲೈ ಸಂಸಾರನಾಶಕನೇ, ನಾನು ಅಲ್ಲಿಂದ ಪಾರಾಗಿ ಬರಲು ಯಾವ ಉಪಾಯ ಮಾಡಲಿ. ನಿನ್ನನ್ನು ಬಿಟ್ಟು ನಾನೊಬ್ಬಳೇ ಹೇಗೆ ಪ್ರಾಣಧಾರಣೆ ಮಾಡಿಕೊಂಡಿರಲಿ.

ಕ್ಷಣಮೇಕಂ ಯುಗಶತಂ ಕಾಲನಾಥ ತ್ವಯಾ ವಿನಾ ।
ಚಕ್ಷುರ್ನಿಮೇಷವಿರಹಾದ್ಭವೇದಂಧಂ ಮನೋ ಮಮ ॥ ೯ ॥

ಶರತ್ಪಾರ್ವಣಚಂದ್ರಾಭಂ ಸುಧಾಪೂರ್ಣಾನನಂ ತವ ।
ನಾಥ ಚಕ್ಷುಶ್ಚಕೋರಾಭ್ಯಾಂ ಪಿಬಾಮ್ಯಹಮಹರ್ನಿಶಂ ॥ ೧೦ ॥

ತ್ವಮಾತ್ಮಾ ಮೇ ಮನಃ ಪ್ರಾಣಾ ದೇಹಮಾತ್ರಂ ವಹಾಮ್ಯಹಂ ।
ದೃಷ್ಟಿಶಕ್ತಿಶ್ಚ ಚಕ್ಷುಸ್ತ್ವಂ ಜೀವನಂ ಪರಮಂ ಧನಂ ॥ ೧೧ ॥

ಸ್ವಪ್ನೇ ಜ್ಞಾನೇ ತ್ವಯಿ ಮನಃ ಸ್ಮರಾಮಿ ತ್ವತ್ಪದಾಂಬುಜಂ ।
ತವ ದಾಸ್ಯಂ ವಿನಾ ನಾಥ ನ ಜೀವಾಮಿ ಕ್ಷಣಂ ವಿಭೋ ॥ ೧೨ ॥

ಕೃಷ್ಣಸ್ತದ್ವಚನಂ ಶ್ರುತ್ವಾ ಬೋಧಯಾಮಾಸ ಸುಂದರೀಂ ।
ವಕ್ಷಸಿ ಪ್ರೇಯಸೀಂ ಕೃತ್ವಾ ಚಕಾರ ನಿರ್ಭಯಾಂ ಚ ತಾಂ ॥ ೧೩ ॥

---

೯ ಎಲೈ ಕಾಲಾಧಿಪನೇ, ನಿನ್ನ ವಿರಹದಿಂದ ನನಗೆ ಒಂದು ಕ್ಷಣವೂ ಕೂಡ ನೂರು ಯುಗವಾಗಿ ತೋರುವುದು. ರೆಪ್ಪೆಹೊಡೆಯುವಷ್ಟು ಕಾಲ ನಿನ್ನ ವಿರಹ ವುಂಟಾದರೂ ನನ್ನ ಮನಸ್ಸು ಅಂಧಕಾರದಿಂದಾವೃತವಾಗುವುದು.

೧೦ ಎಲೈ ನಾಥನೇ, ಶರತ್ಪೂರ್ಣಿಮಾಚಂದ್ರನಂತೆ ಅಮೃತಪೂರ್ಣವಾದ ನಿನ್ನ ಮುಖದ ಕಾಂತಿಯನ್ನು ನನ್ನ ಕಣ್ಣುಗಳೆಂಬ ಚಕೋರಪಕ್ಷಿಗಳಿಂದ ಹಗಲೂ ರಾತ್ರಿ ಪಾನಮಾಡುವೆನು.

೧೧. ನೀನೇ ನನ್ನ ಆತ್ಮ, ಮನಸ್ಸು ಮತ್ತು ಪ್ರಾಣರೂಪನಾಗಿರುವೆ. ನಿನ್ನನ್ನು ಬಿಟ್ಟ ನಾನು ಕೇವಲ ಜಡ ಶರೀರಳಾಗುವೆನು. ನೋಡುವ ಶಕ್ತಿಯುಳ್ಳ ಕಣ್ಣೂ, ಪರಮಧನವಾದ ನನ್ನ ಜೀವನವೂ ನೀನೇ ಆಗಿರುವೆ.

೧೨. ಸ್ವಪ್ನಕಾಲದಲ್ಲಿಯೂ, ಜಾಗ್ರದವಸ್ಥೆಯಲ್ಲಿಯೂ ನಿನ್ನಲ್ಲಿಯೇ ನನ್ನ ಮನಸ್ಸಿರುವುದು ಸರ್ವದಾ ನಿನ್ನ ಪಾದಕಮಲಗಳನ್ನು ಸ್ಮರಿಸುತ್ತಿರುವೆನು. ಎಲೈ ವಿಭುವೇ, ನಿನ್ನ ಸೇವೆಯನ್ನುಳಿದು ನಾನು ಕ್ಷಣಮಾತ್ರವೂ ಜೀವಿಸಲಾರೆನು.

೧೩. ರಾಧೆಯಾಡಿದ ಈ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಆ ದೇವಿಯನ್ನು ತನ್ನ ವಕ್ಷಃ ಸ್ಥಲದಲ್ಲಿ ಅಪ್ಪಿಕೊಂಡು ಆ ಸುಂದರಿಯನ್ನು ಆಶ್ವಾಸನೆಗೊಳಿಸಿ ನಿರ್ಭೀತಳನ್ನಾಗಿ ಮಾಡಿದನು.

ಮಹೀತಲಂ ಗಮಿಷ್ಯಾಮಿ ವಾರಾಹೇ ಚ ವರಾನನೇ ।
ಮಯಾ ಸಾರ್ಧಂ ಭೂಗಮನಂ ಜನ್ಮತೇಽಪಿ ನಿರೂಪಿತಂ ॥ ೧೪ ॥

ವ್ರಜಂ ಗತ್ವಾ ವ್ರಜೇ ದೇವಿ ವಿಹರಿಷ್ಯಾಮಿ ಕಾನನೇ ।
ಮಮ ಪ್ರಾಣಾಧಿಕಾ ತ್ವಂ ಚ ಭಯಂ ಕಿಂ ತೇ ಮಯಿ ಸ್ಥಿತೇ ॥ ೧೫ ॥

ತಾಮಿತ್ಯುಕ್ತ್ವಾ ಹರಿಸ್ತತ್ರ ವಿರರಾಮ ಜಗತ್ಪತಿಃ ।
ಅತೋ ಹೇತೋರ್ಜಗನ್ನಾಥೋ ಜಗಾಮ ನಂದಗೋಕುಲಂ ॥ ೧೬

ಕಿಂ ವಾ ತಸ್ಯ ಭಯಂ ಕಂಸಾದ್ಭಯಾಂತಕಾರಕಸ್ಯ ಚ ।
ಮಾಯಾ ಭಯಾಕುಲೇನೈವ ಜಗಾಮ ರಾಧಿಕಾಂತಿಕಂ ॥ ೧೭ ॥

ವಿಜಹಾರ ತಯಾ ಸಾರ್ಧಂ ಗೋಪವೇಷಂ ವಿಧಾಯ ಸಃ ।
ಸಹ ಗೋಪಾಂಗನಾಭಿಶ್ಚ ಪ್ರತಿಜ್ಞಾಪಾಲನಾಯ ಚ ॥ ೧೮ ॥

---

೧೪. ಎಲೌ ಸುಂದರಿಯೇ, ವರಾಹಕಲ್ಪದಲ್ಲಿ ನಾನು ಭೂಮಂಡಲದಲ್ಲಿ ಅವತರಿಸುವೆನು. ನನ್ನೊಡನೆ ನೀನೂ ಭೂಮಿಯಲ್ಲಿ ಜನ್ಮವೆತ್ತಬೇಕಾಗಿರುವುದು.

೧೫. ಎಲೌ ದೇವಿಯೇ, ಗೋಕುಲದಲ್ಲಿ ಹುಟ್ಟಿ ನಾನು ನಿನ್ನೊಡನೆ ಉಪವನಗಳಲ್ಲಿ ವಿಹರಿಸುವೆನು. ನನ್ನ ಪ್ರಾಣಕ್ಕಿಂತಲೂ ಅಧಿಕಳಾದ ನಿನಗೆ ನಾನಿರುವಾಗ ಭಯವೇತರದು ?

೧೬. ಜಗತ್ಪತಿಯಾದ ಶ್ರೀಕೃಷ್ಣನು ರಾಧೆಯನ್ನು ಕುರಿತು ಈ ರೀತಿಯಾಗಿ ಹೇಳಿ ಸುಮ್ಮನಾದನು. ಈ ಕಾರಣದಿಂದಲೇ ಜಗನ್ನಾಥನಾದ ಕೃಷ್ಣನು ನಂದಗೋಕುಲದಲ್ಲಿ ಅವತರಿಸಿದನು.

೧೭. ಎಲ್ಲರ ಭಯವನ್ನೂ ನಾಶಗೊಳಿಸುವಂಥ ಆ ಕೃಷ್ಣನಿಗೆ ಕಂಸನಿಂದ ಭಯವೆಲ್ಲಿ ಬಂತು ? ಮಾಯೆಗೆ ಅಧೀನನಾಗಿ ಕಪಟರೂಪದಿಂದ ರಾಧೆಯ ಸಮೀಪಕ್ಕೆ ಹೋದನು.

೧೮. ತನ್ನ ಪ್ರತಿಜ್ಞೆಯನ್ನು ಪರಿಪಾಲಿಸಿಕೊಳ್ಳಲು, ಗೋಪವೇಷವನ್ನು ಧರಿಸಿ, ರಾಧೆಯೊಡನೆಯೂ, ಇತರ ಗೋಪಸ್ತ್ರೀಯೊಡನೆಯೂ ವಿಹರಿಸಿದನು.

ಬ್ರಹ್ಮಣಾ ಪ್ರಾರ್ಥಿತಃ ಕೃಷ್ಣಃ ಸಮಾಗತ್ಯ ಮಹೀತಲಂ ।
ಭಾರಾವತರಣಂ ಕೃತ್ವಾ ಜಗಾಮ ಸ್ವಾಲಯಂ ವಿಭುಃ ॥ ೧೯ ॥

॥ ನಾರದ ಉವಾಚ ॥

ಶ್ರೀದಾಮ್ನಃ ಕಲಹಶ್ಚೈವ ಕಥಂ ವಾ ರಾಧಯಾ ಸಹ ।
ಸಂಕ್ಷೇಪಾತ್ಕಥಿತಂ ಪೂರ್ವಂ ಸಂವ್ಯಸ್ಯ ಕಥಯಾಧುನಾ ॥ ೨೦ ॥

॥ ಶ್ರೀ ನಾರಾಯಣ ಉವಾಚ ॥

ಏಕದಾ ರಾಧಯಾ ಸಾರ್ಧಂ ಗೋಲೋಕೇ ಶ್ರೀಹರಿಃ ಸ್ವಯಂ ।
ವಿಜಹಾರ ಮಹಾರಣ್ಯೇ ನಿರ್ಜನೇ ರಾಸಮಂಡಲೇ ॥ ೨೧ ॥

ರಾಧಿಕಾ ಸುಖಸಂಭೋಗಾದ್ಬುಬುಧೇ ನ ಸ್ವಕಂ ಪರಂ ।
ಕೃತ್ವಾ ವಿಹಾರಂ ಶ್ರೀಕೃಷ್ಣಸ್ತಾಮಪೃಷ್ಟ್ವಾ ವಿಹಾಯ ಚ ॥ ೨೨ ॥

ಗೋಪಿಕಾಂ ವಿರಜಾಮನ್ಯಾಂ ಶೃಂಗಾರಾರ್ಥಂ ಜಗಾಮ ಹ ।
ವೃಂದಾರಣ್ಯೇ ಚ ವಿರಜಾ ಸುಭಗಾ ರಾಧಿಕಾಸಮಾ ॥ ೨೩ ॥

೧೯. ಶ್ರೀಕೃಷ್ಣನು ಬ್ರಹ್ಮನ ಪ್ರಾರ್ಥನೆಯಂತೆ ಭೂಮಿಯಲ್ಲಿ ಅವತರಿಸಿ, ಭೂಭಾರವನ್ನಿಳುಹಿ, ತನ್ನ ಲೋಕಕ್ಕೆ ಹಿಂತಿರುಗಿದನು.

೨೦. ನಾರದ :—ಎಲೈ ಮಹರ್ಷಿಯೇ, ಶ್ರೀದಾಮನಿಗೆ ರಾಧೆಯೊಡನೆ ಕಲಹವುಂಟಾಗಲು ಕಾರಣವೇನು ? ಪ್ರಕೃತಿಖಂಡದಲ್ಲಿ ಸಂಕ್ಷೇಪವಾಗಿ ಹೇಳಿದ ಈ ಕಥೆಯನ್ನು ಈಗ ವಿಸ್ತರಿಸಿ ಹೇಳು.

೨೧. ಶ್ರೀನಾರಾಯಣಮಹರ್ಷಿ :—ಹಿಂದೊಮ್ಮೆ ಗೋಕುಲದಲ್ಲಿ ಶ್ರೀಹರಿಯು ರಾಧೆಯೊಡನೆ ನಿರ್ಜನವಾದ ರಾಸಮಂಡಲದಲ್ಲಿ ವಿಹರಿಸುತ್ತಿದ್ದನು.

೨೨—೨೩. ರಾಧೆಯ ಸುಖಸಂಭೋಗದಿಂದ ಶ್ರೀಕೃಷ್ಣನು ಪ್ರೇಮರತನು. ರಾಧೆಯೊಡನೆ ಯಥೇಚ್ಛವಾಗಿ ವಿಹರಿಸಿದನಂತರ ಆಕೆಯನ್ನು ಅಲ್ಲಿಯೇ ಬಿಟ್ಟು ಅವಳಿಗೆ ತಿಳಿಸದೆ, ವಿರಜೆಯೆಂಬ ಮತ್ತೊಬ್ಬ ಗೋಪಿಯೊಡನೆ ವಿಹರಿಸಲು ಹೊರಟುಹೋದನು. ವೃಂದಾರಣ್ಯದಲ್ಲಿದ್ದ ಆ ವಿರಜೆಯು ಸೌಂದರ್ಯದಲ್ಲಿ ರಾಧೆಗೆ ಸಮಳಾಗಿದ್ದಳು.

ತಸ್ಯಾ ವಯಸ್ಯಾಃ ಸುಂದರ್ಯೋ ಗೋಪೀನಾಂ ಶತಕೋಟಯಃ ।
ಕೃಷ್ಣಪ್ರಾಣಾಧಿಕಾ ಗೋಪೀ ಧನ್ಯಾ ಮಾನ್ಯಾ ಚ ಯೋಷಿತಾಂ ॥ ೨೪ ॥

ರತ್ನಸಿಂಹಾಸನಸ್ಥಾ ಸಾ ದದರ್ಶ ಹರಿಮಂತಿಕೇ ।
ದದರ್ಶ ಶ್ರೀಹರಿಸ್ತಾಂ ಚ ಶರಚ್ಚಂದ್ರನಿಭಾನನಾಂ ॥ ೨೫ ॥

ಮನೋಹರಾಂ ಸಸ್ಮಿತಾಂ ಚ ಪಶ್ಯಂತೀಂ ವಕ್ರಚಕ್ಷುಷಾ ।
ಸದಾ ಷೋಡಶವರ್ಷೀಯಾಂ ಪ್ರೋದ್ಭಿನ್ನನವಯೌವನಾಂ ॥ ೨೬ ॥

ರತ್ನಾಲಂಕಾರಶೋಭಾಢ್ಯಾಂ ಭೂಷಿತಾಂ ಶುಕ್ಲವಾಸಸಾ ।
ಪುಲಕಾಂಕಿತಸರ್ವಾಂಗೀಂ ಕಾಮಬಾಣಪ್ರಪೀಡಿತಾಂ ॥ ೨೭ ॥

ದೃಷ್ಟ್ವಾ ತಾಂ ಶ್ರೀಹರಿಸ್ತೂರ್ಣಂ ವಿಜಹಾರ ತಯಾ ಸಹ ।
ಪುಷ್ಪತಲ್ಪೇ ಮಹಾರಣ್ಯೇ ನಿರ್ಜನೇ ರತ್ನಮಂಡಪೇ ॥ ೨೮ ॥

---

೨೪. ಅವಳಿಗೆ ಸುಂದರಿಯರಾದ ನೂರುಕೋಟಿ ಗೋಪಿಯರು ಗೆಳತಿಯರಾಗಿದ್ದರು. ಕೃಷ್ಣನ ಪ್ರಾಣಕ್ಕಿಂತಲೂ ಪ್ರಿಯಳಾದ ಆ ಗೋಪಿಯು (ವಿರಜೆಯು) ಸ್ತ್ರೀಯರಲ್ಲೆಲ್ಲ ಪೂಜ್ಯಳಾದಳು.

೨೫ ರತ್ನಸಿಂಹಾಸನದಲ್ಲಿ ಕುಳಿತಿದ್ದ ಆ ವಿರಜೆಯು ತನ್ನ ಸಮೀಪದಲ್ಲಿ ಶ್ರೀಹರಿಯನ್ನು ಕಂಡಳು. ಶ್ರೀಹರಿಯು ಶರಚ್ಚಂದ್ರನಿಗೆ ಸಮಾನವಾದ ಮುಖವುಳ್ಳ ಆ ವಿರಜೆಯನ್ನು ನೋಡಿದನು.

೨೬. ಸರ್ವದಾ ಹದಿನಾರು ವರ್ಷದ ನವಯುವತಿಯಾಗಿದ್ದ ಆ ವಿರಜೆಯು ಸ್ಮಿತಮುಖಿಯಾಗಿ ತನ್ನ ವಕ್ರವಾದ ಕಟಾಕ್ಷಗಳಿಂದ ಶ್ರೀಕೃಷ್ಣನನ್ನು ನೋಡುತ್ತಿದ್ದಳು.

೨೭. ಶ್ವೇತವಸ್ತ್ರಗಳನ್ನು ಧರಿಸಿ ರತ್ನಾಲಂಕಾರಭೂಷಿತಳಾಗಿದ್ದ ಆ ವಿರಜೆ ಮನ್ಮಥನ ಬಾಣದಿಂದ ಪೀಡಿತಳಾಗಿ ರೋಮಾಂಚಿತಶರೀರಳಾಗಿದ್ದಳು.

೨೮. ಶ್ರೀಕೃಷ್ಣನು ಆ ವಿರಜೆಯನ್ನು ನೋಡಿದ ಕೂಡಲೆ ಕಾಮೋದ್ದೀಪಿತನಾಗಿ ನಿರ್ಜನಪ್ರದೇಶದಲ್ಲಿ ರತ್ನಮಂಟಪದ ಪುಷ್ಪಶಯನದಲ್ಲಿ ಆಕೆಯೊಡನೆ ವಿಹರಿಸಿದನು.

ಮೂರ್ಛಾಮವಾಪ ವಿರಜಾ ಕೃಷ್ಣ ಶೃಂಗಾರಕೌತುಕಾತ್ ।
ಕೃತ್ವಾ ವಕ್ಷಸಿ ಪ್ರಾಣೇಶಂ ಕೋಟಿಕಂದರ್ಪಸನ್ನಿಭಂ ॥ ೨೯ ॥

ತಯಾ ಸಕ್ತಂ ಶ್ರೀಹರಿಂ ಚ ರತ್ನಮಂಡಪಸಂಸ್ಥಿತಂ ।
ದೃಷ್ಟ್ವಾ ಚ ರಾಧಿಕಾಲ್ಯಶ್ಚ ಚಕ್ರುಸ್ತಾಂ ಚ ನಿವೇದನಂ ॥ ೩೦ ॥

ತಾಸಾಂ ಚ ವಚನಂ ಶ್ರುತ್ವಾ ಸುಷ್ವಾಪ ಚ ಚುಕೋಪ ಹ ।
ಭೃಶಂ ರುರೋದ ಸಾ ದೇವೀ ರಕ್ತಪಂಕಜಲೋಚನಾ ॥ ೩೧ ॥

ತಾ ಉವಾಚ ಮಹಾದೇವೀ ಮಾಂ ತಂ ದರ್ಶಯಿತುಂ ಕ್ಷಮಾಃ ।
ಯದಿ ಸತ್ಯಂ ಬ್ರೂತ ಯೂಯಂ ಮಯಾ ಸಾರ್ಧಂ ಪ್ರಗಚ್ಛತ ॥ ೩೨ ॥

ಕರಿಷ್ಯಾಮಿ ಫಲಂ ಗೋಪ್ಯಾಃ ಕೃಷ್ಣಸ್ಯ ಚ ಯಥೋಚಿತಂ ।
ಕೋ ರಕ್ಷಿತಾದ್ಯ ತಸ್ಯಾಶ್ಚ ಮಯಿ ಶಾಸ್ತಿಂ ಪ್ರಕುರ್ವತಿ ॥ ೩೩ ॥

---

೨೯. ಶ್ರೀಕೃಷ್ಣನ ಶೃಂಗಾರ ಸುಖಕ್ಕೆ ಪರವಶಳಾದ ವಿರಜೆಯು, ಕೋಟಿ ಮನ್ಮಥರ ಲಾವಣ್ಯಕ್ಕೆ ಬೀಡಾದ ಆ ಪ್ರಾಣಕಾಂತನನ್ನು ತನ್ನ ವಕ್ಷಃಸ್ಥಲದಲ್ಲಿ ಧರಿಸಿಕೊಂಡಿದ್ದಂತೆಯೇ ಮೂರ್ಛೆಹೋದಳು

೩೦. ಈ ರೀತಿಯಾಗಿ ಶ್ರೀಹರಿಯು ರತ್ನಮಂಡಪದಲ್ಲಿ ಅವಳೊಡನೆ ವಿಹರಿಸುತ್ತಿದ್ದುದನ್ನು ರಾಧೆಯ ಗೆಳತಿಯರು ಕಂಡು ರಾಧೆಗೆ ಆ ವಿಷಯವನ್ನು ತಿಳಿಸಿದರು.

೩೧. ಗೆಳತಿಯರ ಮಾತನ್ನು ಕೇಳಿ ರಾಧೆಯು ಕುಪಿತಳಾಗಿ ಮಲಗಿ ಕೊಂಡಳು. ಬಹಳ ಹೊತ್ತು ಕೆಂದಾವರೆಯಂತೆ ಅತ್ತು ಕಣ್ಣುಗಳನ್ನು ಕೆಂಪಾಗಿ ಮಾಡಿಕೊಂಡಳು.

೩೨. ಅನಂತರ ರಾಧೆಯು ಅವರೆಲ್ಲರನ್ನೂ ಕುರಿತು ನೀವು ನನಗೆ ಶ್ರೀಕೃಷ್ಣ ನನ್ನು ಈಗ ಸತ್ಯವಾಗಿಯೂ ತೋರಿಸುವುದಾದರೆ ನನ್ನೊಡನೆ ಖಂಡಿತವಾಗಿಯೂ ಬನ್ನಿರಿ' ಎಂದಳು.

೩೩. ಶ್ರೀಕೃಷ್ಣನಿಗೂ ಆ ಗೋಪಿಗೂ ತಕ್ಕ ಶಾಸ್ತಿಯನ್ನು ಮಾಡುವೆನು. ನಾನು ಶಿಕ್ಷೆಮಾಡಲು ಹೊರಟಿರುವಾಗ ಯಾರು ತಾನೆ ಆ ಗೋಪಿಯನ್ನು ರಕ್ಷಿಸ ಬಲ್ಲರು.

ಶೀಘ್ರಮಾನಯತಾಲ್ಯಶ್ಚ ತಯಾ ಸಾರ್ಧಂ ಹರಿಂ ಪ್ರಿಯಂ।
ಅಂತರ್ವಕ್ರಂ ಸಸ್ಮಿತಂ ಚ ವಿಷಕುಂಭಂ ಸುಧಾಮುಖಂ ॥ ೩೪ ॥

ಮದಾಶ್ರಯಂ ಸಮಾಗಂತುಂ ಯೂಯಂ ದಾಸಂ ನ ದಾಸ್ಯಥ।
ತಮೇವ ಮಂಡಪಂ ರಮ್ಯಂ ಯಾತ ಸಂರಕ್ಷತೇಶ್ವರಂ ॥ ೩೫ ॥

ರಾಧಿಕಾ ವಚನಂ ಶ್ರುತ್ವಾ ಕಾಶ್ಚಿತ್ ಗೋಪ್ಯೋ ಭಯಾನ್ವಿತಾಃ।
ತಾಃ ಸರ್ವಾಃ ಸಂಪುಟಾಂಜಲ್ಯೋ ಭಕ್ತಿನಮ್ರಾತ್ಮಕಂಧರಾಃ।
ತಾಮೂಚುಃ ಪುರತಃ ಸ್ಥಿತ್ವಾ ಸರ್ವಾ ಏವ ಪ್ರಿಯಾಂ ಸತೀಂ ॥ ೩೬ ॥

॥ ಆಲ್ಯ ಊಚುಃ ॥

ವಯಂ ತಂ ದರ್ಶಯಿಷ್ಯಾಮೋ ವಿರಜಾಸಹಿತಂ ವಿಭುಂ ॥ ೩೭ ॥

ತಾಸಾಂ ಚ ವಚನಂ ಶ್ರುತ್ವಾ ರಥಮಾರುಹ್ಯ ಸುಂದರೀ।
ಜಗಾಮ ಸಾರ್ಧಂ ಗೋಪೀಭಿಸ್ತ್ರಿಷಷ್ಟಿ ಶತಕೋಟಿಭಿಃ ॥ ೩೮ ॥

---

೩೪. ಎಲೌ ಗೆಳತಿಯರೇ, ಆ ವಿರಜೆಯೊಡನೆ, ನನ್ನ ಪ್ರಿಯನಾದ ಕೃಷ್ಣನನ್ನೂ ಜಾಗ್ರತೆಯಾಗಿ ಕರೆತನ್ನಿರಿ ವಕ್ರಮನಸ್ಸುಳ್ಳವನೂ, ನಗುಮುಖವುಳ್ಳವನೂ ಆದ ಆ ಕೃಷ್ಣನು ಮುಖದಲ್ಲಿ ಅಮೃತವಿರುವ ವಿಷಕುಂಭದಂತಿರುವನು.

೩೫. ಅಥವಾ ನೀವೆಲ್ಲರೂ ಸೇರಿ ದಾಸನಾದ ಆ ಕೃಷ್ಣನು ನನ್ನ ಆಶ್ರಯಕ್ಕೆ ಬರಲು ಅವಕಾಶಕೊಡಬೇಡಿ. ಅವನಿರುವ ಮಂಟಪಕ್ಕೇ ಹೋಗಿ ನಿಮ್ಮ ಒಡೆಯನನ್ನು ರಕ್ಷಿಸಿಕೊಳ್ಳಿ.

೩೬. ರಾಧೆಯಾಡಿದ ಮಾತನ್ನು ಕೇಳಿ ಭೀತರಾದ ಕೆಲವು ಗೋಪಿಯರು ಭಕ್ತಿಯಿಂದ ತಲೆಬಾಗಿ ಕೈಮುಗಿದು, ಪ್ರಿಯಳಾದ ಆ ದೇವಿಯನ್ನು ಕುರಿತು ಕೆಲವು ಮಾತುಗಳನ್ನಾಡಿದರು.

೩೭. ಸಖಿಯರು :—ಎಲೈ ದೇವಿಯೇ, ವಿರಜೆಯೊಡನಿರುವ ಪ್ರಭುವಾದ ಶ್ರೀಕೃಷ್ಣನನ್ನು ನಾವು ನಿನಗೆ ತೋರುವೆವು.

೩೮. ಸಖಿಯರಾಡಿದ ಮಾತನ್ನು ಕೇಳಿ, ಸುಂದರಿಯಾದ ರಾಧೆಯು ರಥವನ್ನೇರಿ, ಅಸಂಖ್ಯಗೋಪಿಯರೊಡನೆ ಕೃಷ್ಣನ ಸಮೀಪಕ್ಕೆ ಹೊರಟಳು.

ರತ್ನೇಂದ್ರಸಾರರಚಿತಂ ಕೋಟಿಸೂರ್ಯಸಮಪ್ರಭಂ ।
ಮಣೀಂದ್ರಸಾರರಚಿತಂ ಕಲಶಾನಾಂ ತ್ರಿಕೋಟಿಭಿಃ ॥ ೩೯ ॥

ರಾಜಿತಂ ಚಿತ್ರರಾಜೀಭಿರ್ವೈಜಯಂತೀ ವಿರಾಜಿತಂ ।
ಲಕ್ಷಚಕ್ರಸಮಾಯುಕ್ತಂ ಮನೋಯಾಯಿ ಮನೋಹರಂ ॥ ೪೦ ॥

ಮಣಿಸಾರವಿಕಾರೈಶ್ಚ ಕೋಟಿಸ್ತಂಭೈಃ ಸುಶೋಭಿತಂ ।
ನಾನಾಚಿತ್ರವಿಚಿತ್ರೈಶ್ಚ ಸಹಿತೈಃ ಸುಮನೋಹರೈಃ ॥ ೪೧ ॥

ಸಿಂದೂರಾಕಾರಮಣಿಭಿರ್ಮಧ್ಯದೇಶೇ ವಿಭೂಷಿತೈಃ ।
ರತ್ನಕೃತ್ರಿಮಸಿಂಹೈಶ್ಚ ರಥಚಕ್ರೋರ್ಧ್ವಸಂಸ್ಥಿತೈಃ ॥ ೪೨ ॥

ಚತುರ್ಲಕ್ಷಪರಿಮಿತೈಶ್ಚಿತ್ರಘಂಟಾಸಮನ್ವಿತೈಃ ।
ಚಿತ್ರಪುತ್ತಲಿಶೋಭಾಢ್ಯೈರ್ವಿಚಿತ್ರೈಶ್ಚ ವಿರಾಜಿತಂ ॥ ೪೩ ॥

---

೩೯. ರಾಧಾದೇವಿಯು ಕುಳಿತಿದ್ದ ಆ ರಥವು ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿ, ಕೋಟಿಸೂರ್ಯರ ಪ್ರಭೆಯಿಂದ ಕೂಡಿ ಶ್ರೇಷ್ಠಮಣಿಗಳಿಂದ ನಿರ್ಮಿತವಾದ ಮೂರು ಕಲಶಗಳಿಂದ ಪರಿಪೂರ್ಣವಾಗಿದ್ದಿತು.

೪೦. ಅನೇಕ ಚಿತ್ರಗಳಿಂದಲೂ ವೈಜಯಂತೀ ಮಾಲೆಯಿಂದಲೂ ಶೋಭಿಸುತ್ತಿದ್ದ ಆ ರಥವು, ಲಕ್ಷಚಕ್ರಗಳಿಂದ ಕೂಡಿ ಮನೋಹರವಾಗಿದ್ದುದಲ್ಲದೆ ಮನೋವೇಗದಲ್ಲಿ ಹೋಗುತ್ತಿದ್ದಿತು.

೪೧. ಶ್ರೇಷ್ಠಮಣಿಗಳಿಂದ ನಿರ್ಮಿತವಾದ ಕೋಟಿಕಂಭಗಳಿಂದ ಶೋಭಿತವಾದ ಆ ರಥವು ನಾನಾ ಚಿತ್ರಗಳಿಂದ ಚಿತ್ರಿತವಾಗಿ ಮನೋಹರವಾಗಿದ್ದಿತು.

೪೨. ಮಧ್ಯಪ್ರದೇಶದಲ್ಲಿ ಅಲಂಕರಿಸುವ, ಸಿಂದೂರವರ್ಣದ ಪದ್ಮರಾಗ ಮಣಿಗಳಿಂದಲೂ, ರಥಚಕ್ರದ ಮೇಲುಭಾಗದಲ್ಲಿರುವ ರತ್ನನಿರ್ಮಿತವಾದ ಕೃತ್ರಿಮ ಸಿಂಹಗಳಿಂದಲೂ ಆ ರಥವು ಶೋಭಿಸುತ್ತಿದ್ದಿತು.

೪೩. ನಾಲ್ಕುಲಕ್ಷಪರಿಮಾಣವುಳ್ಳ ವಿಚಿತ್ರವಾದ ಘಂಟೆಗಳಿಂದಲೂ, ವಿಚಿತ್ರವಾದ ಚಿತ್ರಪ್ರತಿಮೆಗಳಿಂದಲೂ ಆ ರಥವು ವಿರಾಜಿಸುತ್ತಿದ್ದಿತು.

ರತಿಮಂದಿರಲಕ್ಷೈಶ್ಚ ರತ್ನಸಾರವಿನಿರ್ಮಿತೈಃ ।
ಮಣಿಸಾರಕಪಾಟೈಶ್ಚ ಶೋಭಿತೈಶ್ಚಿತ್ರವಾಜಿಭಿಃ ॥ ೪೪ ॥

ಮಣೀಂದ್ರಸಾರಕಲಶೈಃ ಶೇಖರೋಜ್ಜ್ವಲಿತೈರ್ಯುತಂ ।
ಭೋಗದ್ರವ್ಯಸಮಾಯುಕ್ತಂ ವೇಷದ್ರವ್ಯಸಮನ್ವಿತಂ ॥ ೪೫ ॥

ಶೋಭಿತಂ ರತ್ನಶಯ್ಯಾಭೀ ರತ್ನಪಾತ್ರಘಟಾನ್ವಿತಂ ।
ಪರಿನ ಣೀನಾಂ ವೇದೀನಾಂ ಸಮೂಹೇನ ಸಮನ್ವಿತಂ ॥ ೪೬ ॥

ಕುಂಕುಮಾಭಮಣೀನಾಂ ಚ ಸೋಪಾನಕೋಟಿಭಿರ್ಯುತಂ ।
ಸ್ಯಮಂತಕೈಃ ಕೌಸ್ತುಭೈಶ್ಚ ರುಚಕೈಃ ಪ್ರವರೈಸ್ತಥಾ ॥ ೪೭ ॥

ಪದ್ಮಕೃತ್ರಿಮಕೋಟೀನಾಂ ಶತಕೈಶ್ಚ ಸುಶೋಭಿತಂ ।
ಚಿತ್ರಕಾನನವಾಪೀಭಿರ್ವಿಶಿಷ್ಟಾಭಿರ್ವಿರಾಜಿತಂ ॥ ೪೮ ॥

---

೪೪. ಶ್ರೇಷ್ಠರತ್ನಗಳಿಂದ ನಿರ್ಮಿತವಾದ ಲಕ್ಷಾಂತರ ಏಕಾಂತಮಂದಿರಗಳಿಂದಲೂ, ಅನರ್ಘಮಣಿಗಳಿಂದ ಮಾಡಿದ ಬಾಗಿಲುಗಳಿಂದಲೂ, ಅದರಲ್ಲಿ ಕಟ್ಟಿರುವ ಚಿತ್ರವಿಚಿತ್ರವಾದ ಕುದುರೆಗಳಿಂದಲೂ, ಆ ರಥವು ಚಿತ್ತಾಕರ್ಷಕವಾಗಿದ್ದಿತು.

೪೫. ಥಳಥಳನೆ ಹೊಳೆಯುತ್ತಿರುವ ರತ್ನಕಲಶಗಳಿಂದ ಶೋಭಿತವಾದ ಆ ರಥದಲ್ಲಿ, ಅನೇಕ ವೇಷಭೂಷಣಗಳೂ ಭೋಗಸಾಮಗ್ರಿಗಳೂ ತುಂಬಿದ್ದವು.

೪೬. ಪಚ್ಚೆರತ್ನಗಳಿಂದ ನಿರ್ಮಿತವಾದ ಜಗಲಿಗಳ ಮೇಲೆ ಹಾಸಿರುವ ರತ್ನಶಯನಗಳಿಂದಲೂ, ಅಕ್ಕಪಕ್ಕದಲ್ಲಿ ಇಟ್ಟಿರುವ ರತ್ನಕಲಶಗಳಿಂದಲೂ ಆ ರಥವು ಮನೋಹರವಾಗಿದ್ದಿತು.

೪೭. ಪದ್ಮರಾಗ, ಸ್ಯಮಂತಕ, ಕೌಸ್ತುಭ, ರುಚಕ, ಮುಂತಾದ ಶ್ರೇಷ್ಠ ಮಣಿಗಳಿಂದ ನಿರ್ಮಿತವಾದ, ಕೋಟಿಗಟ್ಟಲೆ ಸೋಪಾನಗಳು ಆ ರಥದಲ್ಲಿದ್ದವು.

೪೮. ಕೃತ್ರಿಮವಾದ ನೂರಾರುಕೋಟಿ ಪದ್ಮಗಳಿಂದ ಶೋಭಿತವಾದ ಕೊಳಗಳೂ, ಸುಂದರವಾದ ಉಪವನಗಳೂ ಆ ರಥದಲ್ಲಿ ಚಿತ್ರಿತವಾಗಿದ್ದವು.

ರತ್ನೇಂದ್ರಸಾರರಚಿತಕಲಶೋಜ್ಜ್ವಲಶೇಖರಂ ।
ಶತಯೋಜನಮೂರ್ಧ್ವಂ ಚ ದಶಯೋಜನವಿಸ್ತೃತಂ ॥ ೪೯ ॥

ಪಾರಿಜಾತಪ್ರಸೂನಾನಾಂ ಮಾಲಾಕೋಟಿವಿರಾಜಿತಂ ।
ಕುಂದಾನಾಂ ಕರವೀರಾಣಾಂ ಯೂಥಿಕಾನಾಂ ತಥೈವ ಚ ॥ ೫೦ ॥

ಸುಚಾರುಚಂಪಕಾನಾಂ ಚ ನಾಗೇಶಾನಾಂ ಮನೋಹರೈಃ ।
ಮಲ್ಲಿಕಾನಾಂ ಮಾಲತೀನಾಂ ಮಾಧವೀನಾಂ ಸುಗಂಧಿನಾಂ ॥ ೫೧ ॥

ಕದಂಬಾನಾಂ ಚ ಮಾಲಾನಾಂ ಕದಂಬೈಶ್ಚ ವಿರಾಜಿತಂ ।
ಸಹಸ್ರದಲಪದ್ಮಾನಾಂ ಮಾಲಾಭಿಶ್ಚ ವಿರಾಜಿತಂ ॥ ೫೨ ॥

ಚಿತ್ರಪುಷ್ಪೋದ್ಯಾನಸರಃ ಕಾನನೈಶ್ಚ ವಿಭೂಷಿತಂ ।
ಸರ್ವೇಷಾಂ ಸ್ಯಂದನಾನಾಂ ಚ ಶ್ರೇಷ್ಠಂ ವಾಯುವಹಂ ಪರಂ ॥ ೫೩ ॥

---

೪೯. ಶ್ರೇಷ್ಠರತ್ನಗಳಿಂದ ನಿರ್ಮಿತವಾದ ಉಜ್ವಲಕಲಶದಿಂದ ಪ್ರಜ್ವಲಿಸುತ್ತಿದ್ದ ಆ ರಥವು ನೂರುಯೋಜನ ಎತ್ತರವಾಗಿಯೂ, ಹತ್ತುಯೋಜನ ವಿಸ್ತೀರ್ಣವಾಗಿಯೂ, ಇದ್ದಿತು.

೫೦. ಪಾರಿಜಾತ, ಮೊಲ್ಲೆ, ಕಣಿಗಲೆ ಮತ್ತು ಕಾಡುಮಲ್ಲಿಗೆ ಹೂಗಳಿಂದ ಗ್ರಥಿತವಾದ ಅನೇಕ ಮಾಲೆಗಳಿಂದ ಕೂಡಿದ ಆ ರಥವು ಸುವಾಸಿತವಾಗಿದ್ದವು.

೫೧–೫೨. ಸುಂದರವಾದ ಸಂಪಿಗೆ, ಮಲ್ಲಿಗೆ, ಜಾಜಿ, ಇರುವಂತಿಗೆ, ಈಚಲ ಮುಂತಾದ ಪುಷ್ಪಗಳ ಮಾಲೆಯಿಂದಲಂಕೃತವಾದ ಆ ರಥವು ಸಹಸ್ರದಳ ಪದ್ಮಗಳ ಮಾಲೆಯಿಂದ ಮನೋಹರವಾಗಿದ್ದಿತು.

೫೩. ಚಿತ್ರಪುಷ್ಪಗಳಿಂದ ಕೂಡಿದ ದಿವ್ಯೋದ್ಯಾನಗಳಿಂದಲೂ, ತಿಳಿಗೊಳಗಳಿಂದಲೂ, ಕೂಡಿ ಮನೋಹರವಾಗಿದ್ದ ಆ ರಥವು ವಾಯುವೇಗವನ್ನು ಮೀರಿ ರಥಗಳಲ್ಲೆಲ್ಲಾ ಶ್ರೇಷ್ಠವಾಗಿದ್ದಿತು.

[illegible]ಸೂಕ್ಷ್ಮವಸ್ತ್ರಸಾರಾಣಾಂ ವರೈರಾಚ್ಛಾದಿತಂ ಪರಂ |
ರತ್ನದರ್ಪಣಲಕ್ಷಾಣಾಂ ಶತಕೈಶ್ಚ ಸಮನ್ವಿತಂ || ೩೪ ||

ಶ್ವೇತಚಾಮರಕೋಟೀಭಿರ್ವಜ್ರಕೋಟಿಭಿರನ್ವಿತಂ |
ಚಂದನಾಗರುಕಸ್ತೂರೀ ಕುಂಕುಮದ್ರವಚರ್ಚಿತೈಃ || ೩೫ ||

ಪಾರಿಜಾತಪ್ರಸೂನಾನಾಂ ಕೋಟಿತಲ್ಪವಿರಾಜಿತಂ |
ಕೋಟಿಘಂಟಾಸಮಾಯುಕ್ತಂ ಪತಾಕಾಕೋಟಿಭಿರ್ಯುತಂ || ೩೬ ||

ರತ್ನಶಯ್ಯಾ ಕೋಟಿಭಿಶ್ಚ ಚಿತ್ರವಜ್ರಪರಿಚ್ಛದೈಃ |
ಚಂದನಾಕ್ತೈಶ್ಚಂಪಕಾನಾಂ ಕುಂಕುಮೈಶ್ಚ ವಿಚಿತ್ರಿತೈಃ || ೩೭ ||

ಪುಷ್ಪೋಪಧಾನಸಂಯುಕ್ತೈಃ ಶೃಂಗಾರಾರ್ಹಾಭಿರನ್ವಿತಂ |
ಅದೃಶ್ಯೈರಶ್ರುತೈರ್ದ್ರವ್ಯೈಃ ಸುಂದರೈಶ್ಚ ವಿಭೂಷಿತಂ || ೩೮ ||

---

೩೪. ಅತ್ಯುತ್ತಮವಾದ ಸೂಕ್ಷ್ಮವಸ್ತ್ರಗಳಿಂದ ಆವೃತವಾದ ಆ ರಥದಲ್ಲಿ ನೂರಾರು ರತ್ನಗನ್ನಡಿಗಳು ಸುಸಜ್ಜಿತವಾಗಿದ್ದುವು.

೩೫. ಕೋಟ್ಯಂತರ ಶ್ವೇತಚಾಮರಗಳಿಂದಲೂ, ವಜ್ರಾಯುಧಗಳಿಂದಲೂ, ಪೂರ್ಣವಾಗಿದ್ದ ಆ ರಥವು, ಅಗುರು, ಚಂದನ, ಕಸ್ತೂರಿ, ಮತ್ತು ಕುಂಕುಮಾದಿ ಅನುಲೇಪನದ್ರವ್ಯಗಳಿಂದ ಚರ್ಚಿತವಾಗಿದ್ದಿತು

೩೬. ಆ ರಥದಲ್ಲಿ, ಪಾರಿಜಾತಪುಷ್ಪಗಳ ಕೋಟ್ಯಂತರ ಶಯನ (ಹಾಸಿಗೆ) ಗಳೂ, ಕೋಟ್ಯಂತರ ಘಂಟೆಗಳೂ, ಧ್ವಜಗಳೂ ಯಥಾನುಗುಣವಾಗಿ ಜೋಡಿಸಲ್ಪಟ್ಟಿದ್ದುವು.

೩೭ ಚಿತ್ರವಿಚಿತ್ರವಾದ ಮಗ್ಗಲುಹಾಸಿಗೆಯನ್ನು ಹಾಸಿರುವ ಕೋಟ್ಯಂತರ ರತ್ನಶಯನಗಳಿಂದ ಕೂಡಿದ ಆ ರಥಕ್ಕೆ ಚಂದನಸಹಿತವಾದ ಸಂಪಿಗೆ ಹೂವನ್ನು ಅಲಂಕರಿಸಿದ್ದಿತು.

೩೮. ಶೃಂಗಾರಸುಖಕ್ಕೆ ಯೋಗ್ಯವಾದ ಹೂವಿನ ತಲೆದಿಂಬುಗಳಿಂದಲೂ, ಹಿಂದೆಂದೂ ನೋಡಿ ಕೇಳದಿರುವ ಸುಂದರವಾದ ಉಪಭೋಗಸಾಮಗ್ರಿಗಳಿಂದಲೂ, ಆ ರಥವು ಭೂಷಿತವಾಗಿದ್ದಿತು.

ಏವಂ ಭೂತಾದ್ರಥಾತ್ತೂರ್ಣಮವರುಹ್ಯ ಹರಿಪ್ರಿಯಾ ।
ಜಗಾಮ ಸಹಸಾ ದೇವೀ ತಂ ರತ್ನಮಂಡಪಂ ಮುನೇ ॥ ೫೯ ॥

ದ್ವಾರೇ ನಿಯುಕ್ತಂ ದದರ್ಶ ದ್ವಾರಪಾಲಂ ಮನೋಹರಂ ।
ಲಕ್ಷಗೋಪೈಃ ಪರಿವೃತಂ ಸ್ಮೇರಾನನಸರೋರುಹಂ ॥ ೬೦ ॥

ಗೋಪಂ ಶ್ರೀದಾಮನಾಮಾನಂ ಶ್ರೀಕೃಷ್ಣಪ್ರಿಯಕಿಂಕರಂ ।
ತಮುವಾಚ ರುಷಾ ದೇವೀ ರಕ್ತಪಂಕಜಲೋಚನಾ ॥ ೬೧ ॥

ಗಚ್ಛ ದೂರಂ ಗಚ್ಛ ದೂರಂ ರತಿಲಂಪಟಕಿಂಕರ ।
ಕೀದೃಶೀಂ ಮತ್ಪರಾಂ ಕಾಂತಾಂ ದ್ರಕ್ಷ್ಯಾಮಿ ತ್ವತ್ಪ್ರಭೋರಹಂ ॥ ೬೨ ॥

---

೫೯. ಎಲೈ ನಾರದಮುನಿಯೇ, ಈ ಪ್ರಕಾರವಾದ ರಥದಿಂದ ಶ್ರೀಹರಿಯ ಪ್ರಿಯಳಾದ ರಾಧೆಯು ಜಾಗ್ರತೆಯಾಗಿ ಬಂದಿಳಿದು ಶ್ರೀಕೃಷ್ಣನಿದ್ದ ರತ್ನಮಂಟಪಕ್ಕೆ ಹೋದಳು.

೬೦. ಆ ಮಂಟಪದ ದ್ವಾರದಲ್ಲಿ ಲಕ್ಷಗೋಪರಿಂದ ಪರಿವೃತನಾದ ದ್ವಾರಪಾಲಕನು ಮಂದಹಾಸಯುತನಾಗಿ ನಿಂತಿರುವುದನ್ನು ರಾಧೆಯು ನೋಡಿದಳು.

೬೧. ಶ್ರೀಕೃಷ್ಣನ ಪ್ರಿಯಸೇವಕನಾದ ಶ್ರೀದಾಮನೆಂಬ ಗೋಪನನ್ನು ಕುರಿತು, ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ರಾಧೆಯು ಈ ರೀತಿಯಾಗಿ ನುಡಿದಳು.

೬೨. ಎಲೈ ರತಿಲಂಪಟನಾದ ಕೃಷ್ಣನ ಕಿಂಕರನೇ ದೂರ ಹೋಗು, ದೂರ ಹೋಗು, ನಿನ್ನ ಪ್ರಭುವಿಗೆ ಪ್ರಿಯಳಾದ ವಿರಜೆಯನ್ನು ನನಗಿಂತ ಶ್ರೇಷ್ಠಳೆಂದು ಬಗೆದು ಹೇಗೆ ನೋಡಲಿ.

ಕೋಟಿಯೋಜನವಿಸ್ತೀರ್ಣಂ ಪ್ರಸ್ಥೇತಿನಿಮ್ನಮೇವ ಚ ।
ದೈರ್ಘ್ಯೇ ದಶಗುಣಂ ಚಾರು ನಾನಾ ರತ್ನಾಕರಂ ಪರಂ ॥ ೬೮ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣ ಜನ್ಮಖಂಡೇ ನಾರಾಯಣ
ನಾರದಸಂವಾದೇ ವಿರಜಾನಂದಪ್ರಸ್ತಾವವರ್ಣನಂ ನಾಮ
ದ್ವಿತೀಯೋಽಧ್ಯಾಯಃ

೬೮. ಆ ವಿರಜಾನದಿಯು ಕೋಟಿಯೋಜನ ವಿಸ್ತೀರ್ಣವಾಗಿಯೂ ಅದಕ್ಕೆ ಹತ್ತರಷ್ಟು ದೀರ್ಘವಾಗಿಯೂ, ಅತ್ಯಂತ ಆಳವಾಗಿಯೂ ಇದ್ದು! ರತ್ನಗಳಿಗೆ ಆಕರವಾಯಿತು

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ವಿರಜಾನಂದ ಪ್ರಸ್ತಾಪವರ್ಣನೆ ಎಂಬ ಎರಡನೆಯ
ಅಧ್ಯಾಯವು ಮುಗಿದುದು.



ರಾಧಿಕಾವಚನಂ ಶ್ರುತ್ವಾ ನಿಃಶಂಕಃ ಪುರತಃ ಸ್ಥಿತಃ ।
ತಾಮೇವ ನ ದದೌ ಗಂತುಂ ವೇತ್ರಪಾಣಿರ್ಮಹಾಬಲಃ ॥ ೬೩ ॥

ತೂರ್ಣಂ ಚ ರಾಧಿಕಾಲ್ಯಶ್ಚ ಶ್ರೀದಾಮಾನಂ ಸ ಕಿಂಕರಂ ।
ಬಲೇನ ಪ್ರೇರಯಾಮಾಸುಃ ಕೋಪೇನ ಸ್ಫುರಿತಾಧರಾಃ ॥ ೬೪ ॥

ಶ್ರುತ್ವಾ ಕೋಲಾಹಲಂ ಶಬ್ದಂ ಗೋಪಿಕಾನಾಂ ಹರಿಃ ಸ್ವಯಂ ।
ಜ್ಞಾತ್ವಾ ಚ ಕೋಪಿತಾಂ ರಾಧಾಮಂತರ್ಧಾನಂ ಚಕಾರ ಹ ॥ ೬೫ ॥

ವಿರಜಾ ರಾಧಿಕಾಶಬ್ದಾದಂತರ್ಧಾನಂ ಹರೇರಪಿ ।
ದೃಷ್ಟ್ವಾ ರಾಧಾಂ ಭಯಾರ್ತಾ ಸಾ ಜಹೌ ಪ್ರಾಣಾಂಶ್ಚ ಯೋಗತಃ ॥ ೬೬ ॥

ಸದ್ಯಸ್ತತ್ರ ಸರಿದ್ರೂಪಂ ತಚ್ಛರೀರಂ ಬಭೂವ ಹ ।
ವ್ಯಾಪ್ತಂ ಚ ವರ್ತುಲಾಕಾರಂ ತಯಾ ಗೋಲೋಕಮೇವ ಚ ॥ ೬೭ ॥

---

೬೩. ದಂಡಪಾಣಿಯೂ, ಮಹಾಬಲಿಷ್ಠನೂ ಆದ ಶ್ರೀದಾಮನು ರಾಧೆಯಾಡಿದ ಮಾತುಗಳನ್ನು ಕೇಳಿ, ಅವಳಿಗೆ ಪ್ರವೇಶಿಸಲವಕಾಶಕೊಡದೆ ನಿರ್ಭಯನಾಗಿ ತಡೆದನು.

೬೪. ಆಗ ರಾಧೆಯ ಸಖಿಯರೆಲ್ಲರೂ ಒಟ್ಟುಗೂಡಿ, ಕೋಪದಿಂದ ಕೆಳತುಟಿಯು ನಡಗುತ್ತಿರಲು, ಪರಿವಾರದೊಡನಿರುವ ಶ್ರೀದಾಮನನ್ನು ಎದುರಿಸಿದರು

೬೫. ಮಂಡಪದೊಳಗಿದ್ದ ಶ್ರೀಕೃಷ್ಣನು, ಬಾಗಿಲಿನಲ್ಲಿ ಗೋಪಿಯರ ಈ ಕೋಲಾಹಲಧ್ವನಿಯನ್ನು ಕೇಳಿ, ರಾಧೆಯು ಕುಪಿತಳಾಗಿರುವಳೆಂದು ತಿಳಿದು ಕಣ್ಮರೆಯಾದನು.

೬೬. ರಾಧೆಯ ಧ್ವನಿಯನ್ನು ಕೇಳಿ ಶ್ರೀಕೃಷ್ಣನು ಅಂತರ್ಧಾನನಾದುದನ್ನು ನೋಡಿ, ವಿರಜೆಯೂ ಭಯಚಕಿತಳಾಗಿ, ಯೋಗಬಲದಿಂದ ಪ್ರಾಣತ್ಯಾಗಮಾಡಿದಳು.

೬೭. ಕೂಡಲೇ ಅವಳ ಶರೀರವು ನದೀರೂಪವನ್ನು ಪಡೆದು, ಗೋಲೋಕದ ಸುತ್ತಲೂ ವರ್ತುಲಾಕಾರವಾಗಿ ಆವರಿಸಿಕೊಂಡಿತು.

## ಎರಡನೆಯ ಅಧ್ಯಾಯದ ಸಾರಾಂಶ

ಒಮ್ಮೆ ಶ್ರೀಕೃಷ್ಣನ ಸಖನಾದ ಶ್ರೀದಾಮ (ಸುದಾಮ) ನಿಗೂ ರಾಧಾದೇವಿಗೂ ಕಲಹವುಂಟಾಗಿ, ಶ್ರೀದಾಮನ ಶಾಪದಿಂದ ರಾಧೆಯು ಗೋಪಕನ್ಯೆಯಾಗಿ ನಂದ ಗೋಕುಲದಲ್ಲಿ ಅವತರಿಸಿದಳು. ಶ್ರೀಕೃಷ್ಣನೂ ವಸುದೇವನಿಗೆ ಪುತ್ರನಾಗಿ ಅವತರಿಸಿ ರಾಧೆಯೇ ಮುಂತಾದ ಅನೇಕ ಗೋಪಸ್ತ್ರೀಯರನ್ನು ವರಿಸಿ ಸುಖವಾಗಿದ್ದನು. ರಾಧೆಗೆ ಶ್ರೀದಾಮನ ಶಾಪಬರಲು ಕಾರಣವೇನೆಂದರೆ, ಒಮ್ಮೆ ಗೋಲೋಕದ ರಾಸ ಮಂಡಲದಲ್ಲಿ ಶ್ರೀಕೃಷ್ಣನು ರಾಧೆಯೊಡನೆ ವಿಹರಿಸುತ್ತಿದ್ದು, ರಾಧೆಯು ರತಿಸುಖದಿಂದ ಮೈಮರೆತ ಸಮಯದಲ್ಲಿ, ಅವಳನ್ನು ಅಲ್ಲಿಯೇ ಬಿಟ್ಟು, ವಿರಜೆಯೆಂಬ ಮತ್ತೊಬ್ಬ ಗೋಪಿಯೊಡನೆ ರತಿಕ್ರೀಡೆಗಾಗಿ ಬೇರೆ ಸ್ಥಳಕ್ಕೆ ತೆರಳಿದನು. ಅದನ್ನು ಕಂಡ ರಾಧೆಯ ಗೆಳತಿಯರು ರಾಧೆಗೆ ತಿಳಿಸಲು ಕುಪಿತಳಾದ ರಾಧೆಯು ರಥವನ್ನೇರಿ ಅವರಿದ್ದ ಸ್ಥಳಕ್ಕೆ ಬಂದಳು. ವಿರಜೆ ಮತ್ತು ಶ್ರೀಕೃಷ್ಣರ ವಿಹರಿಸುತ್ತಿದ್ದ ಮಂಡಪದ ದ್ವಾರದಲ್ಲಿ ಶ್ರೀದಾಮನೆಂಬ ಗೋಪನು ರಾಧೆಯನ್ನು ಒಳಕ್ಕೆ ಬಿಡದೆ ಅಲ್ಲಿಯೇ ತಡೆದನು. ರಾಧೆಯ ಸಖಿಯರು ಶ್ರೀದಾಮನೊಡನೆ ವಾದಿಸುತ್ತಿರಲು, ಈ ಕೋಲಾಹಲವನ್ನು ಕೇಳಿ ಶ್ರೀಕೃಷ್ಣನು ಅಂತರ್ಧಾನನಾದನು. ವಿರಜೆಯು ಯೋಗಬಲದಿಂದ ಪ್ರಾಣತ್ಯಾಗ ಮಾಡಿ ನದೀರೂಪಳಾಗಿ ಗೋಲೋಕವನ್ನೆಲ್ಲ ಆವರಿಸಿಕೊಂಡಳು.



— || ಓಂ ||—

—|| ಶ್ರೀ ಗಣೇಶಾಯ ನಮಃ ||—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### || ತೃತೀಯೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

**ರಾಧಾ ರತಿಗೃಹಂ ಗತ್ವಾ ನ ದದರ್ಶ ಹರಿಂ ಮುನೇ |**
**ವಿರಜಾಂ ಚ ಸರಿದ್ರೂಪಾಂ ದೃಷ್ಟ್ವಾ ಗೇಹಂ ಜಗಾಮ ಸಾ || ೧ ||**

**ಶ್ರೀಕೃಷ್ಣೋ ವಿರಜಾಂ ದೃಷ್ಟ್ವಾ ಸರಿದ್ರೂಪಾಂ ಪ್ರಿಯಾಂ ಸತೀಂ |**
**ಉಚ್ಚೈ ರುರೋದ ವಿರಜಾತೀರೇ ನೀರಮನೋಹರೇ || ೨ ||**

**ಮಮಾಂತಿಕಂ ಸಮಾಗಚ್ಛ ಪ್ರೇಯಸೀನಾಂ ಪರೇ ವರೇ |**
**ತ್ವಯಾ ವಿನಾಹಂ ಸುಭಗೇ ಕಥಂ ಜೀವಾಮಿ ಸುಂದರಿ || ೩ ||**

---

### ಮೂರನೆಯ ಅಧ್ಯಾಯವು

೧. ನಾರಾಯಣಮಹರ್ಷಿ :—ಎಲೈ ನಾರದನೇ, ಇತ್ತ ರಾಧೆಯು ಆ ರತಿ ಮಂಡಪಕ್ಕೆ ಹೋಗಿ ಶ್ರೀಕೃಷ್ಣನನ್ನು ಕಾಣದೆ ವಿರಜೆಯು ನದೀರೂಪಳಾಗಿರುವುದನ್ನು ಕಂಡು ತನ್ನ ಮಂದಿರಕ್ಕೆ ಹಿಂತಿರುಗಿದಳು

೨. ಶ್ರೀಕೃಷ್ಣನು, ತನ್ನ ಪ್ರಿಯಳಾದ ವಿರಜೆಯು ನದಿಯಾದುದನ್ನು ಕಂಡು ಮನೋಹರವಾದ ಆ ನದಿಯ ದಡದಲ್ಲಿ ಕುಳಿತು ಗಟ್ಟಿಯಾಗಿ ಅತ್ತು ಗೋಳಾಡಿದನು.

೩. ಪ್ರಿಯ ಕಾಂತೆಯಲ್ಲಿ ಅತ್ಯುತ್ತಮಳಾದ ಎಲೌ ವಿರಜೆಯೇ ನನ್ನ ಸಮೀಪಕ್ಕೆ ಬಾ, ಸೌಭಾಗ್ಯವತಿಯಾದ ನಿನ್ನೊಡನಾಟವನ್ನು ಬಿಟ್ಟು ನಾನು ಹೇಗೆ ಜೀವಿಸಲಿ.

ಸದ್ಯಧಿಷ್ಠಾತ್ರಿ ದೇವಿ ತ್ವಂ ಭವ ಮೂರ್ತಿಮತೀ ಸತೀ।
ಮಮಾಶಿಷಾ ರೂಪವತೀ ಸುಂದರೀ ಯೋಷಿತಾಂ ವರಾ ॥ ೪ ॥

ಪೂರ್ವರೂಪಾಚ್ಚ ಸೌಭಾಗ್ಯಾದಿದಾನೀಂ ಸುಭಗಾ ಭವ।
ಪುರಾತನಂ ಶರೀರಂ ತೇ ಸರಿದ್ರೂಪಮಭೂತ್ಸತಿ ॥ ೫ ॥

ಜಲಾದುತ್ತಿಷ್ಠ ಯಾಗಚ್ಛ ವಿಧಾಯ ತನುಮುತ್ತಮಾಂ।
ಅಷ್ಟೌ ಸಿದ್ಧೀರ್ಮಯಾ ದತ್ತಾಃ ಸುರಸುಂದರಿ ಸತ್ವರಂ ॥ ೬ ॥

ಕೃಷ್ಣಾಜ್ಞಯಾ ಚ ವಿರಜಾ ವಿಧಾಯ ತನುಮುತ್ತಮಾಂ।
ಆಜಗಾಮ ಹರೇರಗ್ರೇ ಸಾಕ್ಷಾದ್ರಾಧೇವ ಸುಂದರೀ ॥ ೭ ॥

ಪೀತವಸ್ತ್ರಪರೀಧಾನಾ ಸ್ಮೇರಾನನಸರೋರುಹಾ।
ಪಶ್ಯಂತಂ ಪ್ರಾಣನಾಥಂ ಚ ಪಶ್ಯಂತೀ ವಕ್ರಚಕ್ಷುಷಾ ॥ ೮ ॥

೪. ಎಲೌ ಸತಿಯೇ, ನೀನು ಸಾಕಾರಳಾದ ನದಿಯ ಅಧಿಷ್ಠಾತೃದೇವಿಯಾಗು. ನನ್ನ ಆಶೀರ್ವಾದದಂತೆ ಸುಂದರಿಯೂ, ಸ್ತ್ರೀಯರಲ್ಲಿ ಶ್ರೇಷ್ಠಳೂ ಆಗು.

೫. ನಿನ್ನ ಪೂರ್ವಸೌಭಾಗ್ಯದ ಮಹಿಮೆಯಿಂದ ಈಗಲೂ ಸುಭಗಳಾಗು. ನಿನ್ನ ಹಿಂದಿನ ಶರೀರವು ಈಗ ನದೀರೂಪವನ್ನು ತಾಳಿದೆ.

೬. ನೀನು ಉತ್ತಮವಾದ ಶರೀರವನ್ನು ಕಲ್ಪಿಸಿಕೊಂಡು ನೀರಿನಿಂದ ಮೇಲಕ್ಕೆದ್ದು ಬಾ. ಎಲೌ ದೇವ ಸುಂದರಿಯೇ, ನಿನಗೆ ನಾನು ಅಷ್ಟಸಿದ್ಧಿಗಳನ್ನೂ ಅನುಗ್ರಹಿಸುವೆನು.

೭. ಈ ರೀತಿಯಾದ ಶ್ರೀಕೃಷ್ಣನ ಆಜ್ಞೆಯನ್ನನುಸರಿಸಿ ವಿರಜೆಯು ಸುಂದರವಾದ ಶರೀರವನ್ನು ಧರಿಸಿಕೊಂಡು ಸಾಕ್ಷಾತ್ ರಾಧೆಯಂತೆ ಅವನ ಮುಂದೆ ಬಂದು ನಿಂತಳು.

೮. ಪೀತಾಂಬರವನ್ನುಟ್ಟು ಮುಖದಲ್ಲಿ ಮುಗುಳುನಗೆಯನ್ನು ಸೂಸುತ್ತಿದ್ದ ಆ ದೇವಿಯು ತನ್ನನ್ನೇ ನೋಡುತ್ತಿದ್ದ ಪ್ರಾಣನಾಥನನ್ನು ವಕ್ರವಾದ ಕಟಾಕ್ಷದಿಂದ ನೋಡುತ್ತಿದ್ದಳು.

ನಿತಂಬಶ್ರೋಣಿಭಾರಾರ್ತಾ ಪೀನೋನ್ನತಪಯೋಧರಾ ।
ಮಾನಿನೀ ಮಾನಿನೀನಾಂ ಚ ಗಜೇಂದ್ರಮಂದಗಾಮಿನೀ ॥ ೯ ॥

ಸುಂದರೀ ಸುಂದರೀಣಾಂ ಚ ಧನ್ಯಾ ಮಾನ್ಯಾ ಚ ಯೋಷಿತಾಂ ।
ಚಾರುಚಂಪಕವರ್ಣಾಭಾ ಪಕ್ವಬಿಂಬಾಧರಾ ವರಾ ॥ ೧೦ ॥

ಪಕ್ವದಾಡಿಮಬೀಜಾಭದಂತಪಂಕ್ತಿಮನೋಹರಾ ।
ಶರತ್ಪಾರ್ವಣಚಂದ್ರಾಸ್ಯಾ ಫುಲ್ಲೇಂದೀವರಲೋಚನಾ ॥ ೧೧ ॥

ಕಸ್ತೂರೀಬಿಂದುನಾ ಸಾರ್ಧಂ ಸಿಂದೂರಬಿಂದುಭೂಷಿತಾ ।
ಚಾರುಪತ್ರಕಶೋಭಾಢ್ಯಾ ಸುಚಾರುಕಬರೀಯುತಾ ॥ ೧೨ ॥

---

೯. ಮಾನಿನಿಯರಲ್ಲೆಲ್ಲ ಅತ್ಯಂತ ಮಾನ್ಯಳಾದ ಆಕೆಯು ಅತಿವಪ್ಪವಾದ ಪೃಷ್ಠಭಾಗದಿಂದಲೂ, ಅತ್ಯುನ್ನತವಾದ ಸ್ತನಯುಗಗಳಿಂದಲೂ ಕೂಡಿ ಗಜದಂತೆ ಮಂದಗಾಮಿನಿಯಾಗಿದ್ದಳು.

೧೦ ಸುಂದರಿಯರಿಗೆಲ್ಲ ಸುಂದರಿಯೂ, ಸ್ತ್ರೀಯರಲ್ಲಿ ಮಾನ್ಯಳೂ ಆದ ಆಕೆಯು ಸಂಪಿಗೆಯಂತಿರುವ ದೇಹಕಾಂತಿಯಿಂದಲೂ, ಪಕ್ವವಾದ ಬಿಂಬಫಲದಂತಿರುವ ಕೆಳತುಟಿಯಿಂದಲೂ ಮನೋಹರಳಾಗಿದ್ದಳು.

೧೧. ಚೆನ್ನಾಗಿ ಮಾಗಿದ ದಾಳಿಂಬೆಬೀಜದಂತೆ ಮನೋಹರವಾದ ಹಲ್ಲುಗಳ ಸಾಲಿನಿಂದಲೂ, ಶರತ್ಪೂರ್ಣಿಮಾಚಂದ್ರನಂತಿರುವ ಮುಖದಿಂದಲೂ, ಅರಳಿದ ನೈದಿಲೆಯಂತಿರುವ ಕಣ್ಣುಗಳಿಂದಲೂ ಆಕೆಯು ಶೋಭಿಸುತ್ತಿದ್ದಳು.

೧೨. ಹಣೆಯಲ್ಲಿ ಕಸ್ತೂರಿ ಮತ್ತು ಸಿಂದೂರ(ಚಂದ)ದ ಬೊಟ್ಟುಗಳನ್ನಿಟ್ಟು, ಕಪೋಲಗಳಲ್ಲಿ ಮಕರಿಕಾದಿ ಪತ್ರಗಳನ್ನು ರಚಿಸಿಕೊಂಡು, ಕೇಶಪಾಶಗಳನ್ನು ಚೆನ್ನಾಗಿ ಬಾಚಿ ಹೆರಳುಹಾಕಿದ್ದಳು.

ರತ್ನೈ ಕುಂಡಲಗಂಡಸ್ಥಾ ಭೂಷಿತಾ ರತ್ನಮಾಲಯಾ ।
ಗಜಮೌಕ್ತಿಕನಾಸಾಗ್ರಾ ಮುಕ್ತಾಹಾರವಿರಾಜಿತಾ ॥ ೧೩ ॥

ರತ್ನಕಂಕಣಕೇಯೂರ ಚಾರುಶಂಖಕರೋಜ್ಜ್ವಲಾ ।
ಕಿಂಕಿಣೀಜಾಲಶಬ್ದಾಢ್ಯಾ ರತ್ನಮಂಜೀರರಂಜಿತಾ ॥ ೧೪ ॥

ತಾಂ ಚ ರೂಪವತೀಂ ದೃಷ್ಟ್ವಾ ಪ್ರೇಮೋದ್ರೇಕಾಜ್ಜಗತ್ಪತಿಃ ।
ಚಕಾರಾಲಿಂಗನಂ ತೂರ್ಣಂ ಚುಚುಂಬ ಚ ಮುಹುರ್ಮುಹುಃ ॥ ೧೫ ॥

ನಾನಾಪ್ರಕಾರಶೃಂಗಾರಂ ವಿಪರೀತಾದಿಕಂ ವಿಭುಃ ।
ರಹಸಿ ಪ್ರೇಯಸೀಂ ಪ್ರಾಪ್ಯ ಚಕಾರ ಚ ಪುನಃ ಪುನಃ ॥ ೧೬ ॥

ವಿರಜಾ ಸಾ ರಜೋಯುಕ್ತಾ ಧೃತ್ವಾ ವೀರ್ಯಮಮೋಘಕಂ ।
ಸದ್ಯೋ ಬಭೂವ ತತ್ರೈವ ಧನ್ಯಾ ಗರ್ಭವತೀ ಸತೀ ॥ ೧೭ ॥

---

೧೩. ಕಪೋಲಗಳಲ್ಲಿ ಪ್ರತಿಬಿಂಬಿಸಿರುವ ರತ್ನಕುಂಡಲಗಳಿಂದಲೂ, ಕಂಠದಲ್ಲಿರುವ ರತ್ನಮಾಲೆಯಿಂದಲೂ ಭೂಷಿತಳಾಗಿ ಮೂಗಿನತುದಿಯಲ್ಲಿ ಆನೆಯ ಕುಂಭಸ್ಥಳದ ಮುತ್ತನ್ನು ಧರಿಸಿ, ಕಂಠದಲ್ಲಿರುವ ಮುತ್ತಿನಹಾರದಿಂದ ಮನೋಹರಳಾಗಿದ್ದಳು

೧೪. ರತ್ನದ ಕಂಕಣ ಮತ್ತು ಬಾಹುಪುರಿಗಳಿಂದಲೂ, ಸುಂದರವಾದ ಶಂಖದ ಬಳೆಗಳಿಂದಲೂ, ಗೆಜ್ಜೆಗಳ ಧ್ವನಿಯಿಂದ ಮನೋಹರವಾದ ರತ್ನದ ಡಾಬಿನಿಂದಲೂ ಆಕೆಯು ಅಲಂಕೃತಳಾಗಿದ್ದಳು.

೧೫. ಅತ್ಯಂತರೂಪವತಿಯಾದ ಆಕೆಯನ್ನು ನೋಡಿ ಜಗದೊಡೆಯನು ಪ್ರೇಮೋನ್ಮತ್ತನಾಗಿ, ಆಲಿಂಗಿಸಿಕೊಂಡು ಮತ್ತೆ ಮತ್ತೆ ಚುಂಬಿಸಿದನು.

೧೬. ಆ ಪ್ರಿಯೆಯನ್ನು ನಿರ್ಜನಪ್ರದೇಶಕ್ಕೆ ಕರೆದೊಯ್ದು ಆಕೆಯೊಡನೆ ವಿಪರೀತರತವೇ ಮುಂತಾದ ಶೃಂಗಾರಸುಖವನ್ನು ಪುನಃ ಪುನಃ ಅನುಭವಿಸಿದನು

೧೭ ರಜಸ್ವಲೆಯಾಗಿದ್ದ ಆ ವಿರಜೆಯು, ಜಗತ್ಪ್ರಭುವಿನ ಅಮೋಘ ವೀರ್ಯವನ್ನು ಧರಿಸಿ ಕೂಡಲೇ ಗರ್ಭವತಿಯಾಗಿ ಧನ್ಯಳೆನಿಸಿದಳು.

ದಧಾರ ಗರ್ಭಮೀಶಸ್ಯ ದಿವ್ಯಂ ವರ್ಷಶತಂ ಚ ಸಾ ।
ತತಃ ಸುಷಾವ ತತ್ರೈವ ಪುತ್ರಾನ್ ಸಪ್ತಮನೋಹರಾನ್ ॥ ೧೮ ॥

ಮಾತಾ ಸಾ ಸಪ್ತಪುತ್ರಾಣಾಂ ಶ್ರೀಕೃಷ್ಣಸ್ಯ ಪ್ರಿಯಾ ಸತೀ ।
ತಸ್ಥೌ ತತ್ರ ಸುಖಾಸೀನಾ ಸಾರ್ಧಂ ಪುತ್ರೈಶ್ಚ ಸಪ್ತಭಿಃ ॥ ೧೯ ॥

ಏಕದಾ ಹರಿಣಾ ಸಾರ್ಧಂ ವೃಂದಾರಣ್ಯೇ ಚ ನಿರ್ಜನೇ ।
ವಿಜಹಾರ ಪುನಃ ಸಾಧ್ವೀ ಶೃಂಗಾರಾಸಕ್ತಮಾನಸಾ ॥ ೨೦ ॥

ಏತಸ್ಮಿನ್ನಂತರೇ ತತ್ರ ಮಾತುಃ ಕ್ರೋಡಂ ಜಗಾಮ ಹ ।
ಕನಿಷ್ಠಪುತ್ರಸ್ತಸ್ಯಾಶ್ಚ ಭ್ರಾತೃಭಿಃ ಪೀಡಿತೋ ಭಿಯಾ ॥ ೨೧ ॥

ಭೀತಂ ಸ್ವತನಯಂ ದೃಷ್ಟ್ವಾ ತತ್ಯಾಜ ತಾಂ ಕೃಪಾನಿಧಿಃ ।
ಕ್ರೋಡೇ ಚಕಾರ ಬಾಲಂ ಸಾ ಕೃಷ್ಣೋ ರಾಧಾಗೃಹಂ ಯಯೌ ॥ ೨೨ ॥

---

೧೮. ದಿವ್ಯ ನೂರುವರ್ಷಗಳಕಾಲ ಸರ್ವೇಶ್ವರನ ಆ ವೀರ್ಯವನ್ನು ಧರಿಸಿದ್ದು, ಅನಂತರ ಮನೋಹರರಾದ ಏಳು ಮಂದಿ ಪುತ್ರರನ್ನು ಅಲ್ಲಿಯೇ ಹಡೆದಳು.

೧೯. ಏಳು ಮಕ್ಕಳ ತಾಯಿಯೂ, ಶ್ರೀಕೃಷ್ಣನ ಪ್ರಿಯಳೂ ಆದ ಆ ವಿರಜೆಯು ತನ್ನ ಮಕ್ಕಳೊಡನೆ ಅಲ್ಲಿ ಸುಖವಾಗಿದ್ದಳು.

೨೦. ಹೀಗಿರಲು ಒಮ್ಮೆ ಆ ವಿರಜೆಯು ಶೃಂಗಾರಲೋಲುಪಳಾಗಿ, ಶ್ರೀಹರಿಯೊಡನೆ ನಿರ್ಜನವಾದ ವೃಂದಾರಣ್ಯದಲ್ಲಿ ವಿಹರಿಸುತ್ತಿದ್ದಳು.

೨೧. ಆ ಸಮಯದಲ್ಲಿ ಆಕೆಯ ಕನಿಷ್ಠಪುತ್ರನು ಇತರ ಸಹೋದರರಿಂದ ಪೀಡಿತನಾಗಿ ತಾಯಿಯ ತೊಡೆಯ ಮೇಲೆ ಬಂದು ಕುಳಿತನು.

೨೨ ತನ್ನ ಪುತ್ರನು ಭಯಗೊಂಡುದನ್ನು ನೋಡಿ ದಯಾಮಯನಾದ ಶ್ರೀಹರಿಯು ವಿರಜೆಯನ್ನು ಬಿಡಲು ಆಕೆಯು ಆ ಪುತ್ರನನ್ನು ಎತ್ತಿಕೊಂಡಳು. ಅನಂತರ ಶ್ರೀಕೃಷ್ಣನು ರಾಧೆಯ ಮಂದಿರಕ್ಕೆ ತೆರಳಿದನು.

ಪ್ರಬೋಧ್ಯ ಬಾಲಂ ಸಾ ಸಾಧ್ವೀ ನ ದದರ್ಶಾಂತಿಕೇ ಪ್ರಿಯಂ |
ವಿಲಲಾಪ ಭೃಶಂ ತತ್ರ ಶೃಂಗಾರಾತೃಪ್ತಮಾನಸಾ || ೨೩ ||

ಶಶಾಪ ಸ್ವಸುತಂ ಕೋಪಾಲ್ಲವಣೋದೋ ಭವಿಷ್ಯಸಿ |
ಕದಾಪಿ ತೇ ಜಲಂ ಕೇಚಿನ್ನ ಖಾದಿಷ್ಯಂತಿ ಜೀವಿನಃ || ೨೪ ||

ಶಶಾಪ ಬಾಲಾನ್ಸರ್ವಾಂಶ್ಚ ಯಾಂತು ಮೂಢಾ ಮಹೀತಲಂ |
ಗಚ್ಛಧ್ವಂ ಚ ಮಹೀಂ ಮೂಢಾ ಜಂಬುದ್ವೀಪಂ ಮನೋಹರಂ || ೨೫ ||

ಸ್ಥಿತಿರ್ನೈಕತ್ರ ಯುಷ್ಮಾಕಂ ಭವಿಷ್ಯತಿ ಪೃಥಕ್ಪೃಥಕ್ |
ದ್ವೀಪೇ ದ್ವೀಪೇ ಸ್ಥಿತಿಂ ಕೃತ್ವಾ ತಿಷ್ಠಂತು ಸುಖಿನಃ ಸದಾ | ೨೬ ||

ದ್ವೀಪಸ್ಥಾಭಿರ್ನದೀಭಿಶ್ಚ ಸಹ ಕ್ರೀಡಂತು ನಿರ್ಜನೇ |
ಕನಿಷ್ಠೋ ಮಾತೃಶಾಪಾಚ್ಚ ಲವಣೋದೋ ಬಭೂವ ಹ || ೨೭ ||

---

೨೩. ಸಾಧ್ವೀಮಣಿಯಾದ ಆ ವಿರಜೆಯು ಬಾಲಕನನ್ನು ಸಮಾಧಾನಪಡಿಸಿ ಅತ್ತ ನೋಡಲು ಪ್ರಿಯನು ಸಮೀಪದಲ್ಲಿರಲಿಲ್ಲ. ಶೃಂಗಾರ ಸುಖದಲ್ಲಿ ತೃಪ್ತಿಯಾಗದ ಮನಸ್ಸುಳ್ಳ ಆಕೆಯು ಬಹಳ ಅತ್ತು ಗೋಳಾಡಿದಳು.

೨೪. ಕೂಡಲೇ ಕುಪಿತಳಾಗಿ ತನ್ನ ಪುತ್ರನನ್ನು ಕುರಿತು 'ನೀನು ಉಪ್ಪಿನ ಸಮುದ್ರವಾಗು. ನಿನ್ನ ನೀರನ್ನು ಯಾವ ಪ್ರಾಣಿಗಳೂ ಕುಡಿಯದಂತಾಗಲಿ.' ಎಂದು ಶಪಿಸಿದಳು.

೨೫. ಅಂತೆಯೇ ತನ್ನ ಇತರ ಆರು ಮಕ್ಕಳನ್ನೂ ಕುರಿತು 'ಎಲೈ ಮೂರ್ಖರೇ, ನೀವೆಲ್ಲರೂ ಭೂಮಂಡಲದಲ್ಲಿ ಮನೋಹರವಾದ ಜಂಬೂದ್ವೀಪಕ್ಕೆ ಹೋಗಿರಿ

೨೬. ನೀವೆಲ್ಲರೂ ಒಂದೇ ಕಡೆಯಲ್ಲಿ ಇರುವಂತಿಲ್ಲ. ಬೇರೆ ಬೇರೆ ದ್ವೀಪಗಳಲ್ಲಿದ್ದುಕೊಂಡು ಸರ್ವದಾ ಸುಖದಿಂದಿರಿ.

೨೭. ಆಯಾ ದ್ವೀಪದಲ್ಲಿರುವ ನದಿಗಳೊಡನೆ ನಿರ್ಜನಪ್ರದೇಶದಲ್ಲಿ ಕ್ರೀಡಿಸಿರಿ.' ಈ ರೀತಿಯಾದ ತಾಯಿಯ ಶಾಪದಿಂದ ಚಿಕ್ಕವನು ಉಪ್ಪಿನ ಸಮುದ್ರವಾದನು

ರುರೋದ ಚ ಭೃಶಂ ಸಾಧ್ವೀ ಪುತ್ರವಿಚ್ಛೇದಕಾತರಾ ।
ಮೂರ್ಛಾಮವಾಪ ಶೋಕೇನ ಪುತ್ರಾಣಾಂ ಭರ್ತುರೇವ ಚ ॥ ೩೩ ॥

ತಾಂ ಶೋಕಸಾಗರೇ ಮಗ್ನಾಂ ವಿಜ್ಞಾಯ ರಾಧಿಕಾಪತಿಃ ।
ಆಜಗಾಮ ಪುನಸ್ತಸ್ಯಾಃ ಸ್ಮೇರಾನನ ಸರೋರುಹಃ ॥ ೩೪ ॥

ದೃಷ್ಟ್ವಾ ಹರಿಂ ಸಾ ತತ್ಯಾಜ ಶೋಕಂ ರೋದನಮೇವ ಚ ।
ಆನಂದಸಾಗರೇ ಮಗ್ನಾ ದೃಷ್ಟ್ವಾ ಕಾಂತಂ ಬಭೂವ ಹ ॥ ೩೫ ॥

ಚಕಾರ ಶ್ರೀಹರಿಂ ಕ್ರೋಡೇ ವಿಜಹಾರ ಸ್ಮರಾತುರಾ ।
ತಾಂ ಚ ಪುತ್ರಪರಿತ್ಯಕ್ತಾಂ ಹರಿಸ್ತುಷ್ಟೋ ಬಭೂವ ಹ ॥ ೩೬ ॥

ವರಂ ತಸ್ಯೈ ದದೌ ಪ್ರೀತ್ಯಾ ಪ್ರಸನ್ನವದನೇಕ್ಷಣಃ ।
ಕಾಂತೇ ನಿತ್ಯಂ ತವಸ್ಥಾನಮಾಗಮಿಷ್ಯಾಮಿ ನಿಶ್ಚಿತಂ ॥ ೩೭ ॥

---

೩೩. ಸಾಧ್ವೀಮಣಿಯಾದ ವಿರಜೆಯು ಪುತ್ರವಿರಹದಿಂದ ಕಾತರಳಾಗಿ, ಪತಿಪುತ್ರರ ವಿಚ್ಛೇದದುಃಖದಿಂದ ಮೂರ್ಛೆಹೊಂದಿದಳು.

೩೪. ಈ ರೀತಿಯಾಗಿ ಅವಳು ದುಃಖಸಂತಪ್ತಳಾಗಿರುವುದನ್ನು ತಿಳಿದು ರಾಧಾಪತಿಯಾದ ಶ್ರೀಕೃಷ್ಣನು ಮುಖದಲ್ಲಿ ಮಂದಹಾಸವನ್ನು ಬೀರುತ್ತ ಪುನಃ ಅವಳ ಸಮೀಪಕ್ಕೆ ಬಂದನು.

೩೫. ಶ್ರೀಕೃಷ್ಣನನ್ನು ನೋಡಿ ಆಕೆಯು ಅಳುವುದನ್ನು ಬಿಟ್ಟಳು. ಪ್ರಾಣ ಕಾಂತನನ್ನು ನೋಡಿ ಆನಂದಸಾಗರದಲ್ಲಿ ಮುಳುಗಿದಳು.

೩೬. ಕಾಮಾತುರಳಾದ ಆಕೆಯು ಶ್ರೀಹರಿಯನ್ನು ಅಪ್ಪಿಕೊಂಡು, ಕ್ರೀಡಿಸಿದಳು. ಪುತ್ರರೆಲ್ಲರಿಂದ ತ್ಯಕ್ತಳಾದ ಆಕೆಯನ್ನು ನೋಡಿ ಶ್ರೀಹರಿಯು ದಯಾಯುತನಾದನು.

೩೭. ಪ್ರಸನ್ನವಾದ ಮುಖ ಮತ್ತು ಕಣ್ಣುಗಳುಳ್ಳವನಾಗಿ ಪ್ರೀತಿಯಿಂದ ಆಕೆಗೆ ವರವನ್ನು ಕೊಟ್ಟನು. ಎಲೌ ಕಾಂತೆಯೇ, ನಿತ್ಯವೂ ನಾನು ನೀನಿರುವ ಸ್ಥಳಕ್ಕೆ ನಿಶ್ಚಯವಾಗಿಯೂ ಬರುವೆನು.

ಕನಿಷ್ಠಃ ಕಥಯಾಮಾಸ ಮಾತೃಶಾಪಂ ಚ ಬಾಲಕಾನ್ ।
ಅಜಗ್ಮುರ್ದುಃಖಿತಾಃ ಸರ್ವೇ ಮಾತೃಸ್ಥಾನಂ ಚ ಬಾಲಕಾಃ ॥ ೨೮ ॥

ಶ್ರುತ್ವಾ ವಿವರಣಂ ಸರ್ವೇ ಪ್ರಜಗ್ಮುರ್ಧರಣೀತಲಂ ।
ಪ್ರಣಮ್ಯ ಚರಣಂ ಮಾತುರ್ಭಕ್ತಿನಮ್ರಾತ್ಮಮೂರ್ತಯಃ ॥ ೨೯ ॥

ಸಪ್ತದ್ವೀಪಸಮುದ್ರಾಶ್ಚ ಸಪ್ತ ತಸ್ಥುರ್ವಿಭಾಗಶಃ ।
ಕನಿಷ್ಠಾದ್ವೃದ್ಧಪರ್ಯಂತಂ ದ್ವಿಗುಣಂ ದ್ವಿಗುಣಂ ಮುನೇ ॥ ೩೦ ॥

ಲವಣೇಕ್ಷುಸುರಾಸರ್ಪಿರ್ದಧಿದುಗ್ಧಜಲಾರ್ಣವಾಃ ।
ಏತೇಷಾಂ ಚ ಜಲಂ ಪೃಥ್ವ್ಯಾಂ ಸಸ್ಯಾರ್ಥಂ ಚ ಭವಿಷ್ಯತಿ ॥ ೩೧ ॥

ವ್ಯಾಪ್ತಾಃ ಸಮುದ್ರಾಃ ಸಪ್ತೈವ ಸಪ್ತದ್ವೀಪಾಂ ವಸುಂಧರಾಂ ।
ರುರುದುರ್ಬಾಲಕಾಃ ಸರ್ವೇ ಮಾತೃಭ್ರಾತೃಶುಚಾನ್ವಿತಾಃ ॥ ೩೨ ॥

೨೮. ಅವನು ತಾಯಿಯ ಶಾಪವನ್ನು ತನ್ನ ಸಹೋದರರಿಗೆಲ್ಲ ತಿಳಿಸಿದನು. ಕೂಡಲೆ ಅವರೆಲ್ಲರೂ ದುಃಖಗೊಂಡು ತಾಯಿಯ ಸಮಿಪಕ್ಕೆ ಓಡಿಬಂದರು.

೨೯. ಎಲ್ಲರೂ ಶಾಪದ ವಿವರಣೆಯನ್ನು ಕೇಳಿ, ಭಕ್ತಿಯಿಂದ ತಲೆಬಾಗಿ ತಾಯಿಯ ಪಾದಗಳಿಗೆ ವಂದಿಸಿ, ಭೂಮಂಡಲಕ್ಕೆ ತೆರಳಿದರು.

೩೦. ಏಳು ಜನವೂ ಏಳು ದ್ವೀಪಗಳಲ್ಲಿ ಒಂದೊಂದು ಸಮುದ್ರವಾಗಿ ನೆಲೆಸಿದರು. ಎಲೈ ನಾರದನೇ, ಚಿಕ್ಕವನಿಂದ ದೊಡ್ಡವನವರೆಗೆ ಕ್ರಮವಾಗಿ ಎರಡೆರಡ ರಷ್ಟು ಪರಿಮಿತಿಯುಳ್ಳ ಸಮುದ್ರವಾದರು.

೩೧. ಉಪ್ಪು, ಕಬ್ಬಿನರಸ, ಮದ್ಯ, ತುಪ್ಪ, ಮೊಸರು, ಹಾಲು, ಮತ್ತು ನೀರಿನ ಆ ಏಳು ಸಮುದ್ರಗಳ ಜಲವು ಭೂಮಿಯಲ್ಲಿ ಸಸ್ಯಗಳಿಗೆ ಉಪಯುಕ್ತ ವಾಯಿತು.

೩೨. ಆ ಏಳು ಸಮುದ್ರಗಳೂ ಸಪ್ತದ್ವೀಪಪರಿವೃತವಾದ ಭೂಮಂಡಲವನ್ನು ವ್ಯಾಪಿಸಿಕೊಂಡವು ಈ ರೀತಿಯಾಗಿ ಸಮುದ್ರರೂಪವನ್ನು ತಾಳಿದ ಆ ಬಾಲಕ ರೆಲ್ಲರೂ ತಾಯಿ ಮತ್ತು ಸಹೋದರರ ವಿಯೋಗದಿಂದ ಅತ್ತು ಗೋಳಾಡಿದರು.

ಯಥಾ ರಾಧಾ ತಥಾ ತ್ವಂ ಭವಿಷ್ಯಸಿ ಪ್ರಿಯಾ ಮಮ ।
ಪುತ್ರಾನ್ದ್ರಕ್ಷ್ಯಸಿ ನಿತ್ಯಂ ತ್ವಂ ಮದ್ವರಸ್ಯ ಪ್ರಸಾದತಃ ॥ ೩೮ ॥

ಇತ್ಯುಕ್ತವಂತಂ ಶ್ರೀಕೃಷ್ಣಂ ವಸಂತಂ ವಿರಜಾಂತಿಕೇ ।
ದೃಷ್ಟ್ವಾ ರಾಧಾ ವಯಸ್ಯಾಶ್ಚ ಕಥಯಾಮಾಸುರೀಶ್ವರೀಂ ॥ ೩೯ ॥

ಶ್ರುತ್ವಾ ರುರೋಷ ಸಾ ದೇವೀ ಸುಷ್ವಾಪ ಕ್ರೋಧಮಂದಿರೇ ।
ಏತಸ್ಮಿನ್ನಂತರೇ ಕೃಷ್ಣೋ ಜಗಾಮ ರಾಧಿಕಾಂತಿಕಂ ॥ ೪೦ ॥

ಸ ತಸ್ಥೌ ರಾಧಿಕಾದ್ವಾರೇ ಶ್ರೀದಾಮ್ನಾ ಸಹ ನಾರದ ।
ರಾಸೇಶ್ವರೀ ಹರಿಂ ದೃಷ್ಟ್ವಾ ರುಷ್ಟೋವಾಚ ಪ್ರಿಯಂ ಪುರಃ ॥ ೪೧ ॥

ಮತ್ತೋ ಬಹುತರಾಃ ಕಾಂತಾ ಗೋಲೋಕೇ ಸಂತಿ ತೇ ಹರೇ ।
ಯಾಹಿ ತಾಸಾಂ ಸನ್ನಿಧಾನಂ ಮಯಾ ತೇ ಕಿಂ ಪ್ರಯೋಜನಂ ॥ ೪೨ ॥

---

೩೮. ನನಗೆ ರಾಧೆಯು ಹೇಗೋ ಹಾಗೆ ನೀನೂ ಪಾತ್ರಳಾಗಿರುವೆ. ನನ್ನ ವರದ ಪ್ರಭಾವದಿಂದ ಪ್ರತಿದಿನವೂ ನಿನ್ನ ಮಕ್ಕಳನ್ನು ನೋಡುತ್ತಿರುವೆ.

೩೯. ಈ ರೀತಿಯಾಗಿ ಹೇಳುತ್ತ ವಿರಜೆಯ ಸಮೀಪದಲ್ಲಿದ್ದ ಶ್ರೀಕೃಷ್ಣನನ್ನು ರಾಧೆಯ ಸಖಿಯರು ಪುನಃ ಕಂಡು ಸರ್ವೇಶ್ವರಿಯಾದ ರಾಧೆಗೆ ಹೇಳಿದರು.

೪೦. ಆ ಸಮಾಚಾರವನ್ನು ಕೇಳಿ ಕುಪಿತಳಾದ ರಾಧೆಯು ಕ್ರೋಧಾಗಾರದಲ್ಲಿ ಪವಡಿಸಿದಳು. ಅಷ್ಟು ಹೊತ್ತಿಗೆ ಶ್ರೀಕೃಷ್ಣನು ರಾಧೆಯ ಸಮೀಪಕ್ಕೆ ಬಂದನು.

೪೧. ಎಲೈ ನಾರದನೇ, ರಾಧೆಯ ಮಂದಿರದ ಮುಂದೆ ಅವನು ಶ್ರೀದಾಮನೊಡನೆ ನಿಂತಿರುವುದನ್ನು ನೋಡಿ ರಾಸೇಶ್ವರಿಯಾದ ರಾಧೆಯು ಕುಪಿತಳಾಗಿ ಆ ಪ್ರಿಯನನ್ನು ಕುರಿತಿಂತೆಂದಳು.

೪೨. ಎಲೈ ಶ್ರೀಹರಿಯೇ, ಗೋಲೋಕದಲ್ಲಿ ನನಗಿಂತಲೂ ಪ್ರೀತಿಪಾತ್ರರಾದ ಕಾಂತೆಯರು ನಿನಗಿರುವರು. ನೀನು ಅವರ ಸಮೀಪಕ್ಕೇ ಹೋಗು ನನ್ನಿಂದ ನಿನಗೇನು ಪ್ರಯೋಜನ.

ವಿರಜಾ ಪ್ರೇಯಸೀ ಕಾಂತಾ ಸರಿದ್ರೂಪಾ ಬಭೂವ ಹ ।
ದೇಹಂ ತ್ಯಕ್ತ್ವಾ ಮಮ ಭಯಾತ್ತಥಾಪಿ ಯಾಹಿ ತಾಂ ಪ್ರತಿ ॥ ೪೩ ॥

ತತ್ತೀರೇ ಮಂದಿರಂ ಕೃತ್ವಾ ತಿಷ್ಠ ತಿಷ್ಠ ಚ ಯಾಹಿ ತಾಂ ।
ನದೀ ಬಭೂವ ಸಾ ತ್ವಂ ಚ ನದೋ ಭವಿತುಮರ್ಹಸಿ ॥ ೪೪ ॥

ನದಸ್ಯ ನದ್ಯಾ ಸಾರ್ಧಂ ಚ ಸಂಗಮೋ ಗುಣವಾನ್ಭವೇತ್ ।
ಸ್ವಜಾತೌ ಪರಮಾ ಪ್ರೀತಿಃ ಶಯನೇ ಭೋಜನೇ ಸುಖಾತ್ ॥ ೪೫ ॥

ದೇವಚೂಡಾಮಣೇಃ ಕ್ರೀಡಾ ನದ್ಯಾ ಸಾರ್ಧಮಹೋ ಬತ ।
ಮಹಾಜನಃ ಸ್ಮೇರಮುಖಃ ಶ್ರುತ್ವಾ ಸದ್ಯೋ ಭವಿಷ್ಯತಿ ॥ ೪೬ ॥

ಯೇ ತ್ವಾಂ ವದಂತಿ ಸರ್ವೇಶಂ ತೇ ಕಿಂ ಜಾನಂತಿ ತತ್ವತಃ ।
ಭಗವಾನ್ಸರ್ವಭೂತಾತ್ಮಾ ನದೀಂ ಸಂಭೋಕ್ತುಮಿಚ್ಛತಿ ॥ ೪೭ ॥

---

೪೩. ನಿನಗೆ ಅತ್ಯಂತ ಪ್ರಿಯಳಾದ ವಿರಜೆಯು ನನ್ನ ಭಯದಿಂದ ದೇಹತ್ಯಾಗ ಮಾಡಿ ನದೀರೂಪಳಾದಳು ಆದರೂ ನೀನು ಅವಳನ್ನೇ ಅನುಸರಿಸಿ ಹೋಗು.

೪೪. ನೀನು ಅವಳಲ್ಲಿಗೆ ಹೋಗಿ ಆ ನದೀತೀರದಲ್ಲಿಯೇ ಮನೆಮಾಡಿಕೊಂಡು ವಾಸಿಸು. ಅವಳು ನದೀರೂಪಳಾಗಿರುವುದರಿಂದ ನೀನೂ ನದ (ಗಂಡು ಹೊಳೆ) ರೂಪನಾಗುವುದುಚಿತ.

೪೫. ನದವು ನದಿಯೊಡನೆ ಬೆರೆಯುವುದು ಗುಣವೆನಿಸುವುದು. ಸ್ವಜಾತಿಯವರೊಡನೆ ಶಯನ ಭೋಜನಗಳಲ್ಲಿ ಪರಮಪ್ರೀತಿಯಿಡುವುದು ಸುಖಕರವಾದುದು.

೪೬. ದೇವದೇವೋತ್ತಮನಾದ ನೀನು ನದಿಯೊಡನೆ ಕ್ರೀಡಿಸುತ್ತಿರುವುದನ್ನು ಕೇಳಿ ಮಹಾತ್ಮರು ಕೂಡಲೇ ನಕ್ಕು ಹಾಸ್ಯಮಾಡುವರು.

೪೭. ಸರ್ವೇಶ್ವರನೆಂದು ನಿನ್ನನ್ನು ತಿಳಿದಿರುವವರು ನಿನ್ನ ತತ್ವಾಂಶವನ್ನೇನು ಬಲ್ಲರು ? ಸರ್ವಭೂತಾಂತರ್ಯಾಮಿಯಾದ ಭಗವಂತನು ನದಿಯೊಡನೆ ಸಂಭೋಗಿಸಲು ಬಯಸುವುದೆಂವರೇನು ?

ಇತ್ಯುಕ್ತ್ವಾ ರಾಧಿಕಾದೇವೀ ವಿರರಾಮ ರುಷಾನ್ವಿತಾ ।
ನೋತ್ತಸ್ಥೌ ಭೂಮಿಶಯನಾದ್ಗೋಪೀಲಕ್ಷಸಮನ್ವಿತಾ ॥ ೪೮ ॥

ಕಾಶ್ಚಿಚ್ಚಾಮರಹಸ್ತಾಶ್ಚ ಕಾಶ್ಚಿತ್ಸೂಕ್ಷ್ಮಾಂಶುಕಾಂಬರಾಃ ।
ಕಾಶ್ಚಿತ್ತಾಂಬೂಲಹಸ್ತಾಶ್ಚ ಕಾಶ್ಚಿನ್ಮಾಲಾಕರಾ ವರಾಃ ॥ ೪೯ ॥

ವಾಸಿತೋದಕರಾಃ ಕಾಶ್ಚಿತ್ಕಾಶ್ಚಿತ್ಪದ್ಮಕರಾವರಾಃ ।
ಕಾಶ್ಚಿತ್ಸಿಂದೂರಹಸ್ತಾಶ್ಚ ಪಾನಹಸ್ತಾಶ್ಚ ಕಾಶ್ಚನ ॥ ೫೦ ॥

ರತ್ನಾಲಂಕಾರಹಸ್ತಾಶ್ಚ ಕಾಶ್ಚಿತ್ಕಜ್ಜಲವಾಹಿಕಾಃ ।
ವೇಣುವೀಣಾಕರಾಃ ಕಾಶ್ಚಿತ್ಕಾಶ್ಚಿತ್ಕಂಕತಿಕಾಕರಾಃ ॥ ೫೧ ॥

ಕಾಶ್ಚಿದಾಬೀರಹಸ್ತಾಶ್ಚ ಯಂತ್ರಹಸ್ತಾಶ್ಚ ಕಾಶ್ಚನ ।
ಸುಗಂಧಿತೈಲಹಸ್ತಾಶ್ಚ ಕಾಶ್ಚನ ಪ್ರಮದೋತ್ತಮಾಃ ॥ ೫೨ ॥

---

೪೮. ಕುಪಿತಳಾದ ರಾಧಾದೇವಿಯು ಇಂತು ನುಡಿದು ಸುಮ್ಮನಾದಳು. ಭೂಮಿಯ ಮೇಲೆ ಮಲಗಿದ್ದ ಆಕೆಯು ಮೇಲಕ್ಕೇಳಲಿಲ್ಲ ಆಕೆಯ ಸುತ್ತಲೂ ಲಕ್ಷಗೋಪಿಯರು ಸೇವೆಗೈಯ್ಯುತ್ತಿದ್ದರು.

೪೯. ಕೆಲವು ಗೋಪಿಯರು ಚಾಮರವನ್ನೂ, ಮತ್ತೆ ಕೆಲವರು ಸೂಕ್ಷ್ಮ ವಸ್ತ್ರಗಳನ್ನೂ, ಕೆಲವರು ತಾಂಬೂಲವನ್ನೂ, ಇನ್ನೂ ಕೆಲವರು ಹೂವಮಾಲೆಗಳನ್ನೂ ಕೈಯಲ್ಲಿ ಧರಿಸಿದ್ದರು.

೫೦. ಕೆಲವರ ಕೈಯ್ಯಲ್ಲಿ ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ಶೀತಲೋದಕವೂ, ಕೆಲವರ ಕೈಯ್ಯಲ್ಲಿ ತಾವರೆಹೂವೂ, ಕೆಲವರ ಕೈಯ್ಯಲ್ಲಿ ಸಿಂದೂರ ಚೂರ್ಣವೂ, ಮತ್ತೆಕೆಲವರ ಕೈಯ್ಯಲ್ಲಿ ರುಚಿಕರವಾದ ಪಾನೀಯವೂ ಇದ್ದಿತು.

೫೧. ರತ್ನಾಲಂಕಾರಗಳನ್ನು ಕೆಲವರೂ, ಕಣ್ಣಿಗೆ ಹಚ್ಚುವ ಕಾಡಿಗೆಗಳನ್ನು ಮತ್ತೆ ಕೆಲವರೂ, ಕೊಳಲು ಮತ್ತು ವೀಣೆಗಳನ್ನು ಕೆಲವರೂ, ಬಾಚಣಿಗೆಗಳನ್ನೂ ಕೆಲವರೂ ಕೈಯ್ಯಲ್ಲಿ ಧರಿಸಿದ್ದರು.

೫೨. ಕೆಲವು ಸಖಿಯರು (ಆಬೀರ) ವನ್ನೂ, ಕೆಲವರು ಯಂತ್ರವನ್ನೂ, ಮತ್ತೆ ಕೆಲವರು ಸುಗಂಧವಾದ ತೈಲವನ್ನೂ, ಕೈಯಲ್ಲಿ ಧರಿಸಿದ್ದರು.

ಕರತಾಲಕರಾಃ ಕಾಶ್ಚಿದ್ಗೇಂದುಹಸ್ತಾಶ್ಚ ಕಾಶ್ಚನ ।
ಕಾಶ್ಚಿನ್ಮೃದಂಗಮುರಜಮುರಲೀತಾನಕಾರಿಕಾಃ ॥ ೫೩ ॥

ಸಂಗೀತನಿಪುಣಾಃ ಕಾಶ್ಚಿತ್ಕಾಶ್ಚಿನ್ನರ್ತನತತ್ಪರಾಃ ।
ಕ್ರೀಡಾವಸ್ತುಕರಾಃ ಕಾಶ್ಚಿನ್ಮಧುಹಸ್ತಾಶ್ಚ ಕಾಶ್ಚನ ॥ ೫೪ ॥

ಸುಧಾಪಾತ್ರಕರಾಃ ಕಾಶ್ಚಿದಂಘ್ರಿಪೀಠಕರಾಃ ಪರಾಃ ।
ವೇಷವಸ್ತುಕರಾಃ ಕಾಶ್ಚಿತ್ಕಾಶ್ಚಿಚ್ಚರಣಸೇವಿಕಾಃ ॥ ೫೫ ॥

ಪುಟಾಂಜಲಿವರಾಃ ಕಾಶ್ಚಿತ್ಕಾಶ್ಚಿತ್ಸ್ತುತಿಪರಾ ವರಾಃ ।
ಏವಂ ಕತಿವಿಧಾಃ ಸಂತಿ ರಾಧಿಕಾಪುರತೋ ಮುನೇ ॥ ೫೬ ॥

ಬಹಿರ್ದೇಶಸ್ಥಿತಾಃ ಕಾಶ್ಚಿತ್ಕೋಟಿಶಃ ಕೋಟಿಶಃ ಸದಾ ।
ಕಾಶ್ಚಿದ್ದ್ವಾರನಿಯುಕ್ತಾಶ್ಚ ವಯಸ್ಯಾ ವೇತ್ರಧಾರಿಕಾಃ ॥ ೫೭ ॥

---

೫೩. ಕೆಲವು ಸ್ತ್ರೀಯರು ಕೈಯಲ್ಲಿ ತಾಳವನ್ನು ಹಿಡಿದು ಧ್ವನಿ ಮಾಡುತ್ತಿದ್ದರು ಕೆಲವರ ಕೈಯ್ಯಲ್ಲಿ ಚಂಡುಗಳಿದ್ದವು ಮತ್ತೆ ಕೆಲವರು ಮೃದಂಗ ಮುರಜ, ಕೊಳಲು ಮುಂತಾದ ವಾದ್ಯವನ್ನು ಬಾರಿಸುತ್ತಿದ್ದರು.

೫೪. ಕೆಲವರು ಸಂಗೀತದಲ್ಲಿಯೂ, ಮತ್ತೆ ಕೆಲವರು ನರ್ತನಮಾಡುವುದರಲ್ಲಿಯೂ ಕುಶಲರಾಗಿದ್ದರು. ಕೆಲವರ ಕೈಯಲ್ಲಿ ಆಟದ ಸಾಮಾನುಗಳೂ, ಮತ್ತೆ ಕೆಲವರ ಕೈಯಲ್ಲಿ ಪಾನವಸ್ತುವೂ ಇದ್ದವು.

೫೫. ಕೆಲವರು ಕೈಯಲ್ಲಿ ಅಮೃತಕಲಶವನ್ನೂ, ಮತ್ತೆ ಕೆಲವರು ಪಾದಪೀಠಗಳನ್ನೂ, ಕೆಲವರು ವೇಷಭೂಷಣಗಳನ್ನೂ ಧರಿಸಿದ್ದರು. ಕೆಲವರು ಆ ದೇವಿಯ ಚರಣ ಸೇವೆಗೈಯ್ಯುತ್ತಿದ್ದರು

೫೬. ಕೈಮುಗಿದುಕೊಂಡು ನಿಂತಿದ್ದವರು ಕೆಲವರು. ಸ್ತೋತ್ರನಿರತರಾದವರು ಮತ್ತೆ ಕೆಲವರು. ಎಲೈ ನಾರದನೇ, ಈ ರೀತಿಯಾದ ರಾಧಾದೇವಿಯ ಮುಂದೆ ಅನೇಕ ತರಹ ಸಖಿಯರಿದ್ದರು.

೫೭. ಕೆಲವು ಸಖಿಯರು ಕೋಟಿಗಟ್ಟಲೆ ಮಂದಿರದ ಹೊರಭಾಗದಲ್ಲಿಯೂ, ಮತ್ತೆ ಕೆಲವರು ಬೆತ್ತಗಳನ್ನು ಹಿಡಿದು ಬಾಗಿಲಿನಲ್ಲಿಯೂ ನಿಂತಿದ್ದರು.

ಕೃಷ್ಣಮಭ್ಯಂತರಂ ಗಂತುಂ ನ ದದುರ್ದ್ವಾರಸಂಸ್ಥಿತಾಃ ।
ಪುರಃ ಸ್ಥಿತಂ ತಂ ಪ್ರಾಣೇಶಂ ರಾಧಾ ಪ್ರಶರುವಾಚ ಸಾ ।
ನಾನುರೂಪಮತ್ಯಕಥ್ಯಮಯೋಗ್ಯಮತಿಕರ್ಕಶಂ ॥ ೫೮ ॥

॥ ರಾಧಿಕೋವಾಚ ॥

ಹೇ ಕೃಷ್ಣ ವಿರಜಾಕಾಂತ ಗಚ್ಛ ಮತ್ಪುರತೋ ಹರೇ ।
ಕಥಂ ದುನೋಷಿ ಮಾಂ ಲೋಲ ರತಿಚೌರಾತಿಲಂಪಟ ॥ ೫೯ ॥

ಶೀಘ್ರಂ ಪದ್ಮಾವತೀಂ ಗಚ್ಛ ರತ್ನಮಾಲಾಂ ಮನೋರಮಾಂ ।
ಅಥವಾ ವನಮಾಲಾಂ ವಾ ರೂಪೇಣಾಪ್ರತಿಮಾಂ ವ್ರಜ ॥ ೬೦ ॥

ಹೇ ನದೀಕಾಂತ ದೇವೇಶ ದೇವಾನಾಂ ಚ ಗುರೋರ್ಗುರೋ ।
ಮಯಾ ಜ್ಞಾತೋಽಸಿ ಭದ್ರಂ ತೇ ಗಚ್ಛ ಗಚ್ಛ ಮಮಾಶ್ರಮಾತ್ ॥ ೬೧ ॥

---

೫೮. ಬಾಗಿಲಿನಲ್ಲಿ ನಿಂತಿದ್ದ ಆ ಸಖಿಯರೆಲ್ಲರೂ ಶ್ರೀಕೃಷ್ಣನನ್ನು ಒಳಗೆ ಹೋಗಗೊಡಲಿಲ್ಲ. ಆಗ ರಾಧಾದೇವಿಯು ಮುಂದೆ ನಿಂತಿರುವ ತನ್ನ ಪ್ರಾಣೇಶ್ವರನನ್ನು ಕುರಿತು, ಅನನುರೂಪವೂ, ಹೇಳಬಾರದುದೂ, ಅಯೋಗ್ಯವೂ, ಅತಿಕ್ರೂರವೂ ಆದ ಕೆಲವು ನುಡಿಗಳನ್ನಾಡಿದಳು.

೫೯. ರಾಧಿಕೆ :—ವಿರಜೆಯ ಪ್ರಿಯನಾದ ಎಲೈ ಕೃಷ್ಣನೇ, ನನ್ನ ಮುಂದಿರದೆ ಕಣ್ಮರೆಯಾಗಿ ಹೋಗು. ಅತ್ಯಂತ ಚಂಚಲನೂ, ಲಂಪಟನೂ, ಕದ್ದು ಪರಸ್ತ್ರೀ ಸಂಭೋಗಮಾಡುವುದರಲ್ಲಿ ಆಸಕ್ತನೂ ಆದ ನೀನು ಇಲ್ಲಿದ್ದುಕೊಂಡು ನನ್ನನ್ನೇಕೆ ವ್ಯಥೆಗೊಳಿಸುವೆ.

೬೦. ಜಾಗ್ರತೆಯಾಗಿ ಪದ್ಮಾವತಿಯನ್ನೋ, ರತ್ನಮಾಲೆಯನ್ನೋ ಮನೋರಮೆಯನ್ನೋ ಅರಸಿಕೊಂಡು ಹೋಗು. ಅಥವಾ ಅಪ್ರತಿಮರೂಪವತಿಯಾದ ವನಮಾಲೆಯ ಹತ್ತಿರಕ್ಕೆ ಹೋಗು.

೬೧. ಎಲೈ ನದೀಪ್ರಿಯನೇ, ದೇವೇಶನೂ, ದೇವತೆಗಳ ಗುರುವಿಗೆ ಗುರುವೂ ಆದ ನಿನ್ನ ಅಂತರಂಗವನ್ನರಿತೆನು. ಒಳ್ಳೆಯದು. ನೀನು ನನ್ನ ಆಶ್ರಮದಿಂದ ಮೊದಲು ಹೊರಡು.

ಶಶ್ವತ್ತೇ ಮಾನುಷಾಣಾಂ ಚ ವ್ಯವಹಾರಸ್ಯ ಲಂಪಟ ।
ಲಭತಾಂ ಮಾನುಷೀಂ ಯೋನಿಂ ಗೋಲೋಕಾದ್ವ್ರಜ ಭಾರತಂ ॥ ೬೨ ॥

ಹೇ ಸುಶೀಲೇ ಶಶಿಕಲೇ ಹೇ ಪದ್ಮಾವತಿ ಮಾಧವಿ ।
ನಿವಾರ್ಯತಾಂ ಚ ಧೂರ್ತೋಽಯಂ ಕಿಮಸ್ಯಾತ್ರಪ್ರಯೋಜನಂ ॥ ೬೩ ॥

ರಾಧಿಕಾವಚನಂ ಶ್ರುತ್ವಾ ತಮೂಚುರ್ಗೋಪಿಕಾ ಹರಿಂ ।
ಹಿತಂ ತಥ್ಯಂ ಚ ವಿನಯಂ ಸಾರಂ ಯತ್ಸಮಯೋಚಿತಂ ॥ ೬೪ ॥

ಕಾಶ್ಚಿದೂಚುರಿತಿ ಹರೇ ಗಚ್ಛ ಸ್ಥಾನಾಂತರಂ ಕ್ಷಣಂ ।
ರಾಧಾಕೋಪಾಪನಯನೇ ಹ್ಯಾಗಮಿಷ್ಯಾಮಹೇ ವಯಂ ॥ ೬೫ ॥

---

೬೨. ನಿನಗೆ ಪದೇ ಪದೇ ಮನುಷ್ಯವ್ಯವಹಾರದಲ್ಲಿ ಅತ್ಯಾಸಕ್ತಿಯಿರುವುದರಿಂದ ಆ ಮನುಷ್ಯಯೋನಿಯಲ್ಲಿಯೇ ಜನ್ಮವೆತ್ತು. ಈಗ ಗೋಲೋಕದಿಂದ ಭಾರತಕ್ಕೆ ಹೋಗು

೬೩. ಎಲೌ ಗೆಳತಿಯರಾದ ಸುಶೀಲೆ, ಶಶಿಕಲೆ, ಪದ್ಮಾವತಿ, ಮತ್ತು ಮಾಧವಿ ಮುಂತಾದವರೇ ಈ ಧೂರ್ತನನ್ನು ಇಲ್ಲಿಂದ ಹೊರಕ್ಕೆ ಕಳುಹಿಸಿ. ಇವನು ಇಲ್ಲಿದ್ದು ಪ್ರಯೋಜನವೇನು?

೬೪. ಈ ರೀತಿಯಾಡಿದ ರಾಧೆಯ ನುಡಿಯನ್ನು ಕೇಳಿ ಆಕೆಯ ಸಖಿಯರಾದ ಗೋಪಿಕೆಯರು ಶ್ರೀಹರಿಯನ್ನು ಕುರಿತು, ಹಿತವೂ, ನತ್ಯವೂ, ಸಾರಭೂತವೂ ಸಮಯೋಚಿತವೂ ಆದ ಕೆಲವು ಮಾತುಗಳನ್ನು ವಿನಯದಿಂದ ವಿಜ್ಞಾಪಿಸಿಕೊಂಡರು

೬೫. ಎಲೈ ಹರಿಯೇ, ಒಂದುಕ್ಷಣಕಾಲ ನೀನು ಬೇರೆ ಸ್ಥಳಕ್ಕೆ ಹೋಗಿರು. ರಾಧೆಯ ಕೋಪವು ಇಳಿದಕೂಡಲೆ ನಾವು ಬಂದು ತಿಳಿಸುವೆವು ' ಎಂದು ಕೆಲವರು ಹೇಳಿದರು.

ಕಾಶ್ಚಿದೂಚುರಿತಿ ಪ್ರೀತ್ಯಾ ಕ್ಷಣಂ ಗಚ್ಛ ಗೃಹಾಂತರಂ ।
ತ್ವಯೈವ ವರ್ಧಿತಾ ರಾಧಾ ತ್ವಾಂ ವಿನಾಕಂ ಚ ವಕ್ಷ್ಯತಿ ॥ ೧೬ ॥

ಕಾಶ್ಚಿದೂಚುರಿತಿ ಪ್ರೇಮ್ಣಾ ರಾಧಿಕಾಯಾಂ ಹರಿಂ ಮುನೇ ।
ಕ್ಷಣಂ ವೃಂದಾವನಂ ಗಚ್ಛ ಮಾನಾಪನಯನಾವಧಿ ॥ ೧೭ ॥

ಕಾಶ್ಚಿದಿತ್ಯೂಚುರೀಶಂ ಚ ಪರಿಹಾಸಪರಂ ವಚಃ ।
ಮಾನಾಪನಯನಂ ಭಕ್ತ್ಯಾ ಮಾನಿನ್ಯಾಃ ಕುರು ಕಾಮುಕ ॥ ೧೮ ॥

ಕಾಶ್ಚನೋಚುರಿತೀಶಂ ತಂ ಯಾಹಿ ಜಾಯಾಂತರಂ ತವ ।
ಲೋಲುಪಸ್ಯ ಕಥಂ ನಾಥ ಕರಿಷ್ಯಾಮೋ ಯಥೋಚಿತಂ ॥ ೧೯ ॥

ಕಾಶ್ಚನೋಚುರಿತಿ ಹರಿಂ ಸಸ್ಮಿತಂ ಪುರತಃ ಸ್ಥಿತಂ ।
ಗತ್ವಾ ಸಮೀಪಮುತ್ಥಾಯ ಮಾನಾಪನಯನಂ ಕುರು ॥ ೨೦ ॥

---

೧೬. ಕೆಲವರು ಪ್ರೀತಿಯಿಂದ 'ನೀನು ಒಂದು ಕ್ಷಣಕಾಲ ಬೇರೆ ಮಂದಿರಕ್ಕೆ ಹೋಗು ರಾಧೆಯನ್ನು ಪೋಷಿಸಿದವನೇ ನೀನು ನಿನ್ನನ್ನು ಬಿಟ್ಟು ಮತ್ತೆ ಯಾರೊಡನೆ ಅವಳು ಬಿರುನುಡಿ ಯಾಡಿಯಾಳು' ಎಂದು ಹೇಳಿದರು.

೧೭. ಮತ್ತೆ ಕೆಲವರು ರಾಧೆಯ ಪ್ರೇಮದಿಂದ ಕೃಷ್ಣನನ್ನು ಕುರಿತು 'ರಾಧೆಯ ಕೋಪವು ಶಮನವಾಗುವವರೆಗೆ ನೀನು ಬೃಂದಾವನಕ್ಕಾದರೂ ಹೋಗಿರು' ಎಂದು ಹೇಳಿದರು.

೧೮. ಕೆಲವು ಸಖಿಯರು ಸರ್ವೇಶ್ವರನಾದ ಶ್ರೀಕೃಷ್ಣನನ್ನು ಕುರಿತು 'ಎಲೈ ಕಾಮುಕನೇ ಮಾನವತಿಯಾದ ರಾಧಾದೇವಿಯ ಮುನಿಸನ್ನು ಪರಿಹರಿಸು' ಎಂದು ಪರಿಹಾಸ್ಯಮಾಡಿದರು.

೧೯. 'ಎಲೈ ನಾಥನೇ, ನೀನು ಸ್ತ್ರೀಲೋಲುಪನಾಗಿ ಬೇರೆ ಸ್ತ್ರೀಯನ್ನು ವರಿಸುವುದೆಂದರೇನು? ಹೋಗು ನಿನಗೆ ತಕ್ಕುದನ್ನು ಮಾಡುವೆವು' ಎಂದು ಕೆಲವರಾಡಿದರು.

೨೦. ಹುಸಿನಗೆ ನಗುತ್ತ ಮುಂದೆ ನಿಂತಿರುವ ಶ್ರೀಹರಿಯನ್ನು ಕುರಿತು ಕೆಲವರು 'ರಾಧೆಯ ಸಮೀಪಕ್ಕೆ ಹೋಗಿ ಆಕೆಯ ಕೋಪವನ್ನು ಶಮನಮಾಡು' ಎಂದು ನುಡಿದರು.

ಕಾಶ್ಚನೋಚುರಿತಿ ಪ್ರಾಣನಾಥಂ ಗೋಪ್ಯೋ ದುರಕ್ಷರಂ |
ಕಃ ಕ್ಷಮಃ ಸಾಂಪ್ರತಂ ದ್ರಷ್ಟುಂ ರಾಧಿಕಾಮುಖಪಂಕಜಂ || ೭೦ ||

ಕಾಶ್ಚನೋಚುರಿತಿ ವಿಭುಂ ವ್ರಜ ಸ್ಥಾನಾಂತರಂ ಹರೇ |
ಕೋಪಾಪನಯನೇ ಕಾಲೇ ಪುನರಾಗಮನಂ ತವ || ೭೨ ||

ಕಾಶ್ಚನೋಚುರಿತೀದಂ ತಂ ಪ್ರಗಲ್ಭಾಃ ಪ್ರಮದೋತ್ತಮಾಃ |
ವಯಂ ತ್ವಾಂ ವಾರಯಿಷ್ಯಾಮೋ ನ ಚೇದ್ಯಾಹಿ ಗೃಹಾಂತರಂ || ೭೩ ||

ಕಾಶ್ಚಿನ್ನಿವಾರಯಾಮಾಸುರ್ಮಾಧವಂ ಪ್ರಮದೋತ್ತಮಾಃ |
ಸ್ಮಿತವಕ್ತ್ರಂ ಚ ಸರ್ವೇಶಂ ಸ್ವಸ್ಥಮಕ್ರೋಧಮೀಶ್ವರಂ || ೭೪ ||

ಗೋಪೀಭಿರ್ವಾರ್ಯಮಾಣೇ ಚ ಜಗತ್ಕಾರಣಕಾರಣೇ |
ಸದ್ಯಶ್ಚುಕೋಪ ಶ್ರೀದಾಮಾ ಹರೌ ಗೇಹಾಂತರಂ ಗತೇ || ೭೫ ||

---

೭೧ ಕೆಲವು ಗೋಪಿಯರು ಪ್ರಾಣೇಶ್ವರನಾದ ಶ್ರೀಕೃಷ್ಣನನ್ನು ಕುರಿತು 'ದುಃಖಿತಳಾದ ರಾಧೆಯ ಮುಖಕಮಲವನ್ನು ಯಾರು ತಾನೆ ನೋಡಿಯಾರು ? ಎಂದು ಕಟುನುಡಿಯಾಡಿದರು.

೭೨. ಸರ್ವವ್ಯಾಪಕನಾದ ಶ್ರೀಕೃಷ್ಣನನ್ನು ಕುರಿತು 'ಎಲೈ ಶ್ರೀಹರಿಯೇ ಈಗ ಎಲ್ಲಿಯಾದರೂ ಹೋಗು, ರಾಧೆಯ ಕೋಪವು ಶಮನವಾದ ಮೇಲೆ ಪುನಃ ಇಲ್ಲಿಗೆ ಬರುವೆಯಂತೆ' ಎಂದು ಕೆಲವರು ಹೇಳಿದರು.

೭೩. ಮತ್ತೆ ಕೆಲವರು ಪ್ರೌಢೆಯರಾದ ಗೋಪಿಯರು 'ನಾವೇ ನಿನ್ನನ್ನು ನಿವಾರಿಸುವೆವು. ಇಲ್ಲದಿದ್ದರೆ ನೀನೇ ಬೇರೆಯವರ ಮನೆಗೆ ಹೋಗು' ಎಂದು ಧಾರ್ಷ್ಟ್ಯದಿಂದ ಹೇಳಿದರು.

೭೪. ಶಾಂತನೂ, ಸ್ಮಿತವದನನೂ, ಸರ್ವೇಶ್ವರನೂ ಆದ ಶ್ರೀಕೃಷ್ಣನನ್ನು ಕುರಿತು ಉತ್ತಮರಾದ ಕೆಲವರು ಗೋಪಿಯರು ಕಾಲೋಚಿತ ನುಡಿಗಳಿಂದ ಸಮಾಧಾನ ಮಾಡಿದರು.

೭೫. ಈ ರೀತಿಯಾಗಿ ಜಗತ್ಕಾರಣನಾದ ಶ್ರೀಕೃಷ್ಣಪರಮಾತ್ಮನು ಗೋಪಿಯರಿಂದ ನಿವಾರಿತನಾಗಿ ಬೇರೆ ಮಂದಿರಕ್ಕೆ ಹೊರಟುಹೋಗಲು, ಶ್ರೀದಾಮನು ರಾಧೆಯ ಮೇಲೆ ಕೋಪಗೊಂಡನು.

**ಕೋಪಾದುವಾಚ ಶ್ರೀದಾಮಾ ರಾಧಿಕಾಂ ಪರಮೇಶ್ವರೀಂ ।**
**ರಕ್ತಪದ್ಮೇಕ್ಷಣಾಂ ರುಷ್ಟಾಂ ರಕ್ತಪಂಕಜಲೋಚನಾಂ ॥ ೨೬ ॥**

**॥ ಶ್ರೀದಾಮೋವಾಚ ॥**

**ಕಥಂ ವದಸಿ ಮಾತಸ್ತ್ವಂ ಕಟುವಾಕ್ಯಂ ಮದೀಶ್ವರಂ ।**
**ವಿಚಾರಣಾಂ ವಿನಾ ದೇವಿ ಕರೋಷಿ ಭರ್ತ್ಸನಂ ವೃಥಾ ॥ ೨೭ ॥**

**ಬ್ರಹ್ಮಾನಂತೇಶದೇವೇಶಂ ಜಗತ್ಕಾರಣಕಾರಣಂ ।**
**ವಾಣೀಪದ್ಮಾಲಯಾಮಾಯಾಪ್ರಕೃತೀಶಂ ಚ ನಿರ್ಗುಣಂ ॥ ೨೮ ॥**

**ಸ್ವಾತ್ಮಾರಾಮಂ ಪೂರ್ಣಕಾಮಂ ಕರೋಷಿ ತ್ವಂ ವಿಡಂಬನಂ ।**
**ದೇವೀನಾಂ ಪ್ರವರಾ ತ್ವಂ ಚ ನಿಬೋಧ ಯಸ್ಯ ಸೇವಯಾ ॥ ೨೯ ॥**

**ಯಸ್ಯ ಪಾದಾರ್ಚನೇನೈವ ಸರ್ವೇಷಾಮೀಶ್ವರೀ ಪರಾ ।**
**ತನ್ನ ಜಾನಾಸಿ ಕಲ್ಯಾಣಿ ಕಿಮಹಂ ವಕ್ತುಮೀಶ್ವರಃ ॥ ೩೦ ॥**

---

೨೬. ಕೋಪದಿಂದ ಕೆಂಪಾದ ನೇತ್ರಕಮಲವುಳ್ಳ ಸರ್ವೇಶ್ವರಿಯಾದ ರಾಧೆಯನ್ನು ಕುರಿತು ಶ್ರೀದಾಮನು ಕೋಪದಿಂದ ಈ ರೀತಿಯಾಗಿ ನುಡಿದನು.

೨೭. ಶ್ರೀದಾಮ :—ಎಲೌ ಮಾತೆಯೇ ನೀನು ನಮ್ಮ ಪ್ರಭುವನ್ನು ಕುರಿತು ಕಟುನುಡಿಯಾಡುತ್ತಿದ್ದೀಯೇ. ದೇವಿಯೇ, ಯುಕ್ತಾಯುಕ್ತವನ್ನು ವಿಮರ್ಶಿಸದೆ ದೂಷಿಸುವುದು ವ್ಯರ್ಥವಲ್ಲವೇ ?

೨೮.–೨೯ ಬ್ರಹ್ಮ, ಆದಿಶೇಷ, ಶಿವ ಮತ್ತು ದೇವತೆಗಳಿಗೆ ಪ್ರಭುವೂ ಜಗತ್ತಿಗೆಲ್ಲ ಆದಿಕಾರಣನೂ, ಸರಸ್ವತಿ, ಲಕ್ಷ್ಮಿ, ಮತ್ತು ಪ್ರಕೃತಿದೇವಿಯರಿಗೆ ಒಡೆಯನೂ, ನಿರ್ಗುಣನೂ, ಆತ್ಮಾರಾಮನೂ, ಪೂರ್ಣಕಾಮನೂ ಆದ ಪರಮಾತ್ಮನನ್ನು ನೀನು ದೂಷಿಸುವೆಯಲ್ಲ, ಯಾರ ಸೇವೆಮಾಡಿ ನೀನು ದೇವಿಯರಲ್ಲೆಲ್ಲ ಉತ್ತಮಳೆನಿಸಿರುವೆ ಎಂಬುದನ್ನು ಯೋಚಿಸಿನೋಡು.

೩೦. ಎಲೌ ಮಂಗಳಕರಳೇ, ಯಾರ ಪಾದವನ್ನು ಪೂಜಿಸಿ ನೀನು ಸರ್ವೇಶ್ವರಿಯೆನಿಸಿರುವೆಯೋ ಆತನ ಮಹಿಮೆಯನ್ನರಿಯೆಯಾ ? ಸರ್ವಜ್ಞಳಾದ ನಿನಗೆ ನಾನೇನು ಹೇಳಬಲ್ಲೆ ?

ಭ್ರೂಭಂಗಲೀಲಯಾ ಕೃಷ್ಣಃ ಸ್ರಷ್ಟುಂ ಶಕ್ತಶ್ಚ ತ್ವದ್ವಿಧಾಃ ।
ಕೋಟಿಶಃ ಕೋಟಿಶೋ ದೇವ್ಯಸ್ತಂ ನ ಜಾನಾಸಿ ನಿರ್ಗುಣಂ ॥ ೮೧ ॥

ವೈಕುಂಠೇ ಶ್ರೀಹರೇರಸ್ಯ ಚರಣಾಂಬುಜಮಾರ್ಜನಂ ।
ಕರೋತಿ ಕೇಶೈಃ ಶಶ್ವಚ್ಛ್ರೀಃ ಸೇವನಂ ಭಕ್ತಿಪೂರ್ವಕಂ ॥ ೮೨ ॥

ಸರಸ್ವತೀ ಚ ಸ್ತವನೈಃ ಕರ್ಣಪೀಯೂಷಸುಂದರೈಃ ।
ಸತತಂ ಸ್ತೌತಿ ಯಂ ಭಕ್ತ್ಯಾ ನ ಜಾನಾಸಿ ತಮೀಶ್ವರಂ ॥ ೮೩ ॥

ಭೀತಾ ಚ ಪ್ರಕೃತಿರ್ಮಾಯಾ ಸರ್ವೇಷಾಂ ಬೀಜರೂಪಿಣೀ ।
ಸತತಂ ಸ್ತೌತಿ ಯಂ ಭಕ್ತ್ಯಾ ತಂ ನ ಜಾನಾಸಿ ಮಾನಿನಿ ॥ ೮೪ ॥

ಸ್ತುವಂತಿ ಸತತಂ ವೇದಾ ಮಹಿಮ್ನಃ ಷೋಡಶೀಂ ಕಲಾಂ ।
ಕದಾಪಿ ನ ವಿಜಾನಂತಿ ತಂ ನ ಜಾನಾಸಿ ಭಾಮಿನಿ ॥ ೮೫ ॥

---

೮೧ ಶ್ರೀಕೃಷ್ಣಪರಮಾತ್ಮನು ಹುಬ್ಬುಕುಣಿಸುವಷ್ಟು ಸುಲಭವಾಗಿ ನಿನ್ನಂಥ ಕೋಟ್ಯಾಂತರ ದೇವಿಯರನ್ನು ಸೃಷ್ಟಿಮಾಡಬಲ್ಲನು. ನಿರ್ಗುಣನಾದ ಆ ಪರಮಾತ್ಮನ ಮಹಿಮೆಯನ್ನು ಅರಿಯೆಯಾ ?

೮೨. ವೈಕುಂಠದಲ್ಲಿ ಶ್ರೀಮನ್ನಾರಾಯಣನೆನಿಸಿರುವ ಪರಮಾತ್ಮನ ಪಾದ ಕಮಲದ ಧೂಳಿಯನ್ನು ಲಕ್ಷ್ಮೀದೇವಿಯು ತನ್ನ ಕೇಶಪಾಶಗಳಿಂದ ತೊಡೆದು ಭಕ್ತಿಪೂರ್ವಕವಾಗಿ ಸೇವೆಗೈಯ್ಯುವಳು.

೮೩. ಸರಸ್ವತೀದೇವಿಯು ಕರ್ಣಾಮೃತವಾದ ದಿವ್ಯಸ್ತೋತ್ರಗಳಿಂದ ಭಕ್ತಿಪೂರ್ವಕವಾಗಿ ಯಾರನ್ನು ಸ್ತುತಿಸುವಳೋ ಆ ಸರ್ವೇಶ್ವರನನ್ನು ನೀನು ತಿಳಿಯೆಯಾ ?

೮೪. ಆದಿಮಾಯೆಯೂ, ಆದಿಕಾರಣಿಯೂ ಆದ ಪ್ರಕೃತಿಯೂ ಭಯ ಭಕ್ತಿಯಿಂದ ಸರ್ವದಾ ಯಾರನ್ನು ಸ್ತುತಿಸುವಳೋ ಆ ಮಹಾಮಹಿಮನನ್ನು ಅರಿಯೆಯಾ ?

೮೫. ಚತುರ್ವೇದಗಳೂ ಯಾವ ಪರಮಾತ್ಮನ ಮಹಿಮೆಯ ಹದಿನಾರನೆಯ ಒಂದು ಭಾಗವನ್ನು ಮಾತ್ರ ಸ್ತುತಿಸಿ, ಆತನ ನಿಜಸ್ವರೂಪವನ್ನು ತಿಳಿಯಲಾರವೋ ಆ ಪರಮಾತ್ಮನನ್ನು ನೀನು ತಿಳಿಯೆಯಾ ?

ವಕ್ತ್ರೈಶ್ಚತುರ್ಭಿರ್ಯಂ ಬ್ರಹ್ಮಾ ವೇದಾನಾಂ ಜನಕೋ ವಿಭುಃ |
ಸ್ತೌತಿ ಸೇವಾಂ ಚ ಕುರುತೇ ಚರಣಾಂಬುಜಮೀಶ್ವರಿ | ೮೬ ||

ಶಂಕರಃ ಪಂಚಭಿರ್ವಕ್ತ್ರೈಃ ಸ್ತೌತಿ ಯಂ ಯೋಗಿನಾಂ ಗುರುಃ |
ಸಾಶ್ರುಪೂರ್ಣಃ ಸಪುಲಕಃ ಸೇವತೇ ಚರಣಾಂಬುಜಂ || ೮೭ ||

ಶೇಷಃ ಸಹಸ್ರವದನೈಃ ಪರಮಾತ್ಮಾನಮೀಶ್ವರಂ |
ಸತತಂ ಸ್ತೌತಿ ಯಂ ಭಕ್ತ್ಯಾ ಸೇವತೇ ಚರಣಾಂಬುಜಂ || ೮೮ ||

ಧರ್ಮಃ ಪಾತಾ ಚ ಸರ್ವೇಷಾಂ ಸಾಕ್ಷೀ ಚ ಜಗತಾಂ ಪತಿಃ |
ಭಕ್ತ್ಯಾ ಚ ಚರಣಾಂಭೋಜಂ ಸೇವತೇ ಸತತಂ ಮುದಾ || ೮೯ ||

ಶ್ವೇತದ್ವೀಪನಿವಾಸೀ ಯಃ ಪಾತಾ ವಿಷ್ಣುಃ ಸ್ವಯಂ ವಿಭುಃ |
ಅಸ್ಯಾಂಶಶ್ಚ ತಥಾ ಚಾಯಂ ಧ್ಯಾಯತೇಽನುಕ್ಷಣಂ ಪರಂ || ೯೦ ||

---

೮೬. ಎಲೌ ಸರ್ವೇಶ್ವರಿಯೇ, ಚತುರ್ವೇದಗಳನ್ನು ಸೃಷ್ಟಿಮಾಡಿದ ಬ್ರಹ್ಮದೇವನು ತನ್ನ ಚತುರ್ಮುಖಗಳಿಂದ ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸಿ, ಆತನ ಚರಣಕಮಲಗಳನ್ನು ಭಕ್ತಿಯಿಂದ ಸೇವಿಸುವನು.

೮೭. ಯೋಗಿಶ್ರೇಷ್ಠನಾದ ಶಂಕರನು ರೋಮಾಂಚಿತಶರೀರನಾಗಿ, ಕಣ್ಣುಗಳಲ್ಲಿ ಆನಂದಾಶ್ರುವನ್ನು ಸುರಿಸುತ್ತ, ತನ್ನ ಐದು ಮುಖಗಳಿಂದ ಶ್ರೀಕೃಷ್ಣಪರ ಪರಮಾತ್ಮನನ್ನು ಸ್ತುತಿಸಿ, ಭಕ್ತಿಯಿಂದ ಅವನ ಚರಣಾರವಿಂದಗಳನ್ನು ಸೇವಿಸುವನು.

೮೮. ಆದಿಶೇಷನು ತನ್ನ ಸಾವಿರಮುಖಗಳಿಂದ ಸರ್ವೇಶ್ವರನಾದ ಪರಮಾತ್ಮನನ್ನು ಸ್ತುತಿಸಿ, ಭಕ್ತಿಯಿಂದ ಅವನ ಚರಣಪಂಕಜಗಳನ್ನು ಸೇವಿಸುವನು

೮೯. ಜಗತ್ಪತಿಯೂ ಸಕಲಕರ್ಮಗಳಿಗೆ ಸಾಕ್ಷಿಯೂ ಆದ ಧರ್ಮದೇವನು ಭಕ್ತಿಪೂರ್ವಕವಾಗಿ ಸಂತೋಷದಿಂದ ಆ ಪರಮಾತ್ಮನ ಪಾದಾರವಿಂದಗಳ ಸೇವೆಗೈಯ್ಯುವನು.

೯೦. ಶ್ವೇತದ್ವೀಪನಿವಾಸಿಯೂ, ಜಗತ್ಪರಿಪಾಲಕನೂ ಆದ ವಿಷ್ಣುವೂ ಕೂಡ ಶ್ರೀಕೃಷ್ಣಪರಮಾತ್ಮನ ಅಂಶದಿಂದ ಅವತರಿಸಿರುವನು. ಆದುದರಿಂದಲೇ ಎಲ್ಲಾ ಕಾಲವೂ ಬಿಡದೆ ಆ ಪರಮಾತ್ಮನನ್ನು ಧ್ಯಾನಿಸುವನು.

**ಸುರಾಸುರಮುನೀಂದ್ರಾಶ್ಚ ಮನವೋ ಮಾನವಾ ಬುಧಾಃ ।**
**ಸೇವಂತೇ ನ ಹಿ ಪಶ್ಯಂತಿ ಸ್ವಪ್ನೇಽಪಿ ಚರಣಾಂಬುಜಂ ॥ ೯೧ ॥**

**ಕ್ಷಿಪ್ರಂ ರೋಷಂ ಪರಿತ್ಯಜ್ಯ ಭಜ ಪಾದಾಂಬುಜಂ ಹರೇಃ ।**
**ಭ್ರೂಭಂಗಲೀಲಾಮಾತ್ರೇಣ ಸೃಷ್ಟಿಂ ಸಂಹರ್ತುರೇವ ಚ ॥ ೯೨ ॥**

**ನಿಮೇಷಮಾತ್ರಾದಸ್ಯೈವ ಬ್ರಹ್ಮಣಃ ಪತನಂ ಭವೇತ್ ।**
**ಯಸ್ಯೈಕದಿವಸೇಽಪ್ಯಷ್ಟಾವಿಂಶತೀಂದ್ರಾಃ ಪತಂತ್ಯಪಿ ॥ ೯೩ ॥**

**ಏವಮಷ್ಟೋತ್ತರಶತಮಾಯುರ್ಯಸ್ಯ ಜಗದ್ವಿಧೇಃ ।**
**ತ್ವಂ ವಾ ಕಾನ್ಯಾಶ್ಚ ವಾ ರಾಧೇ ಮದೀಶ್ವರವಶೇಽಖಿಲಂ ॥ ೯೪ ॥**

**ಶ್ರೀದಾಮ್ನೋ ವಚನಂ ಶ್ರುತ್ವಾ ಕೇವಲಂ ಕಟುಮುಜ್ವಲಂ ।**
**ಸದ್ಯಶ್ಚುಕೋಪ ಸಾ ಬ್ರಹ್ಮನ್ಸದ್ಯಃ ಪ್ರಾಣೇಶ್ವರೀ ಹರೇಃ ॥ ೯೫ ॥**

---

೯೧ ಸುರಾಸುರರೂ, ಮನುಗಳೂ, ಮುನಿಮಾನವರೂ, ಪಂಡಿತರೂ, ಯಾವ ಪರಮಾತ್ಮನ ಪಾದಸೇವೆಯಲ್ಲಿ ನಿರತರಾಗಿದ್ದರೂ ಅವನ ದರ್ಶನವನ್ನು ಮಾತ್ರ ಸ್ವಪ್ನದಲ್ಲಿಯೂ ಪಡೆಯಲಾರರು.

೯೨ ಯಾವ ಪರಮಾತ್ಮನು ಹುಬ್ಬುಕುಣಿಸುವಷ್ಟು ಲೀಲಾಜಾಲವಾಗಿ ಜಗತ್ಸೃಷ್ಟಿಸಂಹಾರಗಳನ್ನು ಮಾಡುವನೋ ಆತನ ಪಾದಕಮಲಗಳನ್ನು ಭಜಿಸು. ಜಾಗ್ರತೆಯಾಗಿ ಕೋಪವನ್ನು ಬಿಡು.

೯೩. ಪರಮಾತ್ಮನು ರೆಪ್ಪೆಬಡಿಯುವಷ್ಟು ಕಾಲದಲ್ಲಿ ಚತುರ್ಮುಖಬ್ರಹ್ಮನ ಪತನವಾಗುವುದು ಪರಮಾತ್ಮನ ಒಂದು ದಿವಸದಲ್ಲಿ ಇಪ್ಪತ್ತುನಾಲ್ಕು ಇಂದ್ರರೂ ಅಳಿಯುವರು.

೯೪. ಈ ರೀತಿಯಾದ ನೂರೆಂಟುವರ್ಷ ಆಯುಸ್ಸುಳ್ಳ ಜಗತ್ಸೃಷ್ಟಿಕರ್ತನಾದಿಯಾಗಿ ಎಲ್ಲವೂ ಆ ಪರಮಾತ್ಮನ ಅಧೀನವಾಗಿರುವಾಗ, ಎಲೌ ರಾಧೆಯೇ, ನೀನಾಗಲೀ ಮತ್ತಾರಾಗಲೀ ಏನು ಮಾಡಬಲ್ಲರಿ?

೯೫. ಎಲೈ ಬ್ರಾಹ್ಮಣೋತ್ತಮನೇ ಇಂತಾಡಿದ ಶ್ರೀದಾಮನ ಕಟುನುಡಿಗಳನ್ನು ಕೇಳಿ ಶ್ರೀಕೃಷ್ಣನ ಪ್ರಾಣೇಶ್ವರಿಯಾದ ರಾಧೆಯು ಕೂಡಲೇ ಕುಪಿತಳಾದಳು.

ರಾಸೇಶ್ವರೀ ಬಹಿರ್ಗತ್ವಾ ತಮುವಾಚ ಹ ನಿಷ್ಠುರಂ ।
ಸ್ಫುರದೋಷ್ಠೀ ಮುಕ್ತಕೇಶೀ ರಕ್ತಾಂಭೋರುಹಲೋಚನಾ || ೯೬ ||

|| ರಾಧಿಕೋವಾಚ ||

ರೇ ರೇ ಜಾಲ್ಮ ಮಹಾಮೂಢ ಶೃಣು ಲಂಪಟಕಿಂಕರ ।
ತ್ವಂ ಚ ಜಾನಾಸಿ ಸರ್ವಾರ್ಥಂ ನ ಜಾನಾಮಿ ತ್ವದೀಶ್ವರಂ || ೯೭ ||

ತ್ವದೀಶ್ವರಶ್ಚ ಶ್ರೀಕೃಷ್ಣೋ ನ ಹ್ಯಸ್ಮಾಕಂ ವ್ರಜಾಧಮ ।
ಜಾನಾಮಿ ಜನಕಂ ಸ್ತೌಷಿ ಸದಾ ನಿಂದಸಿ ಮಾತರಂ || ೯೮ ||

ಯಥಾಽಸುರಾಶ್ಚ ತ್ರಿದಶಾನ್ನಿತ್ಯಂ ನಿಂದಂತಿ ಸಂತತಂ ।
ತಥಾ ನಿಂದಸಿ ಮಾಂ ಮೂಢ ತಸ್ಮಾತ್ತ್ವಮಸುರೋ ಭವ || ೯೯ ||

---

೯೬. ಮರುಕ್ಷಣದಲ್ಲಿಯೇ ರಾಸೇಶ್ವರಿಯಾದ ರಾಧೆಯು ಹೊರಕ್ಕೆ ಬಂದು ಕೂದಲನ್ನು ಕೆದರಿಕೊಂಡು, ಕೆಂದಾವರೆಯಂತಿರುವ ಕಣ್ಣುಗಳಿಂದ ಶ್ರೀದಾಮನನ್ನು ದುರುಗುಟ್ಟಿಕೊಂಡು ನೋಡುತ್ತ, ತುಟಿಗಳನ್ನು ನಡುಗಿಸುತ್ತ, ನಿಷ್ಠುರನುಡಿಗಳನ್ನಾಡಿದಳು.

೯೭ ರಾಧೆ:—ಮಹಾಮೂರ್ಖನೂ, ಸ್ತ್ರೀಲಂಪಟನ ಸೇವಕನೂ ಆದ ಎಲೈ ದುಷ್ಟನೇ, ನೀನೇ ಸಮಸ್ತವನ್ನೂ ಬಲ್ಲವನು. ನಿನ್ನೊಡೆಯನ ವಿಷಯವು ನನಗೇನೂ ತಿಳಿಯದಲ್ಲವೇ?

೯೮ ಶ್ರೀಕೃಷ್ಣನು ನಿನಗೆ ಮಾತ್ರ ಪ್ರಭು. ನಮಗಲ್ಲವೋ? ಎಲಾ ಅಧಮ ದೂರ ಹೋಗು ತಂದೆಯನ್ನು ಹೊಗಳಿಕೊಂಡು ತಾಯಿಯನ್ನು ದೂಷಿಸುವೆಯಲ್ಲ.

೯೯. ರಾಕ್ಷಸರು ದೇವತೆಗಳನ್ನು ನಿತ್ಯವೂ ದೂಷಿಸುವಂತೆ ಮೂಢನಾದ ನೀನು ನನ್ನನ್ನು ದೂಷಿಸುವುದರಿಂದ ನೀನೂ ಅಸುರ (ರಾಕ್ಷಸ) ನಾಗಿ ಹುಟ್ಟು.

ಗೋಪ ವ್ರಜಾಸುರೀಂ ಯೋನಿಂ ಗೋಲೋಕಾಚ್ಚ ಬಹಿರ್ಭವ ।
ಮಯಾದ್ಯ ಶಪ್ತೋ ಮೂಢಸ್ತ್ವಂ ಕಸ್ತ್ವಾಂ ರಕ್ಷಿತುಮೀಶ್ವರಃ ॥ ೧೦೦ ॥

ರಾಸೇಶ್ವರೀ ತಮಿತ್ಯುಕ್ತ್ವಾ ಸುಷ್ವಾಪ ವಿರರಾಮ ಚ ।
ವಯಸ್ಯಾಃ ಸೇವಯಾಮಾಸುಶ್ಚಾಮರೈ ರತ್ನಮುಷ್ಟಿಭಿಃ ॥ ೧೦೧ ॥
ಶ್ರುತ್ವಾ ಚ ವಚನಂ ತಸ್ಯಾ ಕೋಪೇನ ಸ್ಫುರಿತಾಧರಃ ।
ಶಶಾಪ ತಾಂ ಚ ಶ್ರೀದಾಮಾ ವ್ರಜ ಯೋನಿಂ ಚ ಮಾನುಷೀಂ ॥ ೧೦೨ ॥

॥ ಶ್ರೀದಾಮೋವಾಚ ॥

ಮಾನುಷ್ಯಾ ಇವ ಕೋಪಸ್ತೇ ತಸ್ಮಾತ್ತ್ವಂ ಮಾನುಷೀ ಭುವಿ ।
ಭವಿಷ್ಯಸಿ ನ ಸಂದೇಹೋ ಮಯಾ ಶಪ್ತಾ ತ್ವಮಂಬಿಕೇ ।
ಛಾಯಯಾ ಕಲಯಾ ವಾಪಿ ಪರಶಕ್ತ್ಯಾಃಕಲಂಕಿನಾ ॥ ೧೦೩ ॥

---

೧೦೦. ಎಲೈ ಗೋಪನೇ, ನೀನು ಗೋಲೋಕದಿಂದ ಹೊರಕ್ಕೆ ಹೋಗಿ ರಾಕ್ಷಸಯೋನಿಯಲ್ಲಿ ಜನ್ಮವೆತ್ತು. ಮೂಢತನದಿಂದ ನನ್ನ ಶಾಪಕ್ಕೊಳಗಾದ ನಿನ್ನನ್ನು ಯಾರೂ ರಕ್ಷಿಸಲಾರರು.

೧೦೧. ರಾಧೆಯು ಇಂತು ನುಡಿದು ಸುಮ್ಮನೆ ಮಲಗಿಕೊಂಡಳು. ಆಗ ಅವಳ ಗೆಳತಿಯರೆಲ್ಲರೂ ರತ್ನದ ಹಿಡಿಯುಳ್ಳ ಚಾಮರಗಳನ್ನು ಬೀಸತೊಡಗಿದರು.

೧೦೨. ಇತ್ತ ಶ್ರೀದಾಮನೂ ಕೂಡ ರಾಧೆಯ ಶಾಪನುಡಿಗಳಿಂದ ಕುಪಿತನಾಗಿ ತುಟಿಗಳು ನಡುಗುತ್ತಿರಲು ‘ ನೀನು ಮಾನುಷ ಯೋನಿಯಲ್ಲಿ ಜನ್ಮವೆತ್ತು ’ ಎಂದು ರಾಧೆಗೆ ಪ್ರತಿಶಾಪವಿತ್ತನು

೧೦೩. ಶ್ರೀದಾಮಾ :—ಎಲೌ ಅಂಬಿಕೆಯೇ, ನಿನಗೆ ಮನುಷ್ಯ ಸ್ತ್ರೀಯಂತೆ ಕೋಪವಿರುವುದರಿಂದ, ಅಕಳಂಕನಾದ ನನ್ನ ಶಾಪದಿಂದ ನೀನು ಭೂಲೋಕದಲ್ಲಿ ಮನುಷ್ಯಸ್ತ್ರೀಯಾಗಿ ಹುಟ್ಟುವೆ. ನೀನು ಪರಾಶಕ್ತಿಯ ಛಾಯೆಯಿಂದಲೋ, ಕಲೆಯಿಂದಲೋ ಭೂಮಿಯಲ್ಲಿ ಜನಿಸುವೆ.

**ಮೂಢಾ ರಾಪಾಣಪತ್ನೀಂ ತ್ವಾಂ ವಕ್ಷ್ಯಂತಿ ಜಗತೀತಲೇ ।**
**ರಾಪಾಣಃ ಶ್ರೀಹರೇರಂಶೋ ವೈಶ್ಯೋ ವೃಂದಾವನೇ ವನೇ ॥ ೧೦೪ ॥**

**ಭವಿಷ್ಯತಿ ಮಹಾಯೋಗೀ ರಾಧಾಶಾಪೇನ ಗರ್ಭಜಃ ।**
**ಗೋಕುಲೇ ಪ್ರಾಪ್ಯ ತಂ ಕೃಷ್ಣಂ ವಿಹರಿಷ್ಯಸಿ ಕಾನನೇ ॥ ೧೦೫ ॥**

**ಭವಿತಾ ತೇ ವರ್ಷಶತಂ ವಿಚ್ಛೇದೋ ಹರಿಣಾ ಸಹ ।**
**ಪುನಃ ಪ್ರಾಪ್ಯ ತಮೀಶಂ ಚ ಗೋಲೋಕಮಾಗಮಿಷ್ಯಸಿ ॥ ೧೦೬ ॥**

**ತಾಮಿತ್ಯುಕ್ತ್ವಾ ಚ ನತ್ವಾ ಚ ಸ ಜಗಾಮ ಹರೇಃ ಪುರಃ ।**
**ಗತ್ವಾ ಪ್ರಣಮ್ಯ ಶ್ರೀಕೃಷ್ಣಂ ಶಾಪಾಖ್ಯಾನಮುವಾಚ ಹ ॥ ೧೦೭ ॥**

---

೧೦೪. ವೃಂದಾವನದಲ್ಲಿ ಶ್ರೀಹರಿಯ ಅಂಶದಿಂದ ರಾಪಾಣನೆಂಬುವನು ವೈಶ್ಯನಾಗಿ ಹುಟ್ಟುವನು. ಭೂಲೋಕದಲ್ಲಿ ಹುಟ್ಟುವ ನೀನು ಮೂಢರಿಂದ ರಾಪಾಣನ ಪತ್ನಿಯೆನಿಸಿಕೊಳ್ಳುವೆ.

೧೦೫. ಯೋಗಿಶ್ರೇಷ್ಠನಾದ ಆ ರಾಪಾಣನು ರಾಧೆಯ ಶಾಪದಿಂದ ಶ್ರೀಕೃಷ್ಣನ ಅಂಶದಿಂದ ಭೂಮಿಯಲ್ಲಿ ಹುಟ್ಟುವನು. ಗೋಕುಲದಲ್ಲಿ ಆತನೊಡನೆ ಸೇರಿ ಮನೋಹರವಾದ ಕಾನನಗಳಲ್ಲಿ ನೀನು ವಿಹರಿಸುವೆ.

೧೦೬. ನೂರು ವರ್ಷಗಳ ಕಾಲ ನಿನಗೆ ಶ್ರೀಹರಿಯ ವಿರಹವುಂಟಾಗುವುದು. ಅನಂತರ ಆ ಸರ್ವೇಶ್ವರನನ್ನು ಪುನಃ ಪಡೆದು ಗೋಲೋಕಕ್ಕೆ ಹಿಂತಿರುಗಿ ಬರುವೆ.

೧೦೭. ಈ ರೀತಿಯಾಗಿ ಶ್ರೀದಾಮನು ರಾಧೆಗೆ ಶಪಿಸಿ, ಆಕೆಗೆ ಮನಸ್ಸಿನಲ್ಲಿಯೇ ವಂದಿಸಿ, ಶ್ರೀಕೃಷ್ಣನ ಸಮೀಪಕ್ಕೆ ಬಂದು ನಮಸ್ಕರಿಸಿ ಶಾಪವೃತ್ತಾಂತವನ್ನು ಹೇಳಿದನು.

ಆನುಪೂರ್ವ್ಯಾತ್ತತ್ಸರ್ವಂ ರುರೋದ ಚ ಭೃಶಂ ಪುನಃ ।
ಉವಾಚ ತಂ ರುದಂತಂ ಚ ಗಚ್ಛತ್ವಂ ಧರಣೀತಲಂ ॥ ೧೦೮ ॥

ನ ಜೇತಾ ತೇ ತ್ರಿಭುವನೇ ಹ್ಯಸುರೇಂದ್ರೋ ಭವಿಷ್ಯಸಿ ।
ಕಾಲೇ ಶಂಕರಶೂಲೇನ ದೇಹಂ ತ್ಯಕ್ತ್ವಾ ಮಮಾಂತಿಕಂ ॥ ೧೦೯ ॥

ಆಗಮಿಷ್ಯಸಿ ಪಂಚಾಶದ್ಯುಗಾಂತೇ ತು ಮಮಾಶಿಷಾ ।
ಶ್ರೀಕೃಷ್ಣಸ್ಯ ವಚಃ ಶ್ರುತ್ವಾ ತಮುವಾಚ ಶುಚಾನ್ವಿತಃ ॥ ೧೧೦ ॥

ತ್ವದ್ಭಕ್ತಿರಹಿತಂ ಮಾಂ ಚ ಕದಾಚಿನ್ನ ಕರಿಷ್ಯಸಿ ।
ಇತ್ಯುಕ್ತ್ವಾ ಶ್ರೀಹರಿಂ ನತ್ವಾ ಜಗಾಮ ಸ್ವಾಶ್ರಮಾದ್ಬಹಿಃ ॥ ೧೧೧ ॥

---

೧೦೮. ಶ್ರೀಕೃಷ್ಣನ ಎದುರಿನಲ್ಲಿ ಶಾಪವೃತ್ತಾಂತವನ್ನೆಲ್ಲ ಮತ್ತೆ ಮತ್ತೆ ಹೇಳಿ ಗಟ್ಟಿಯಾಗಿ ಅಳತೊಡಗಿದನು. ಆ ರೀತಿಯಾಗಿ ಅಳುತ್ತಿದ್ದ ಶ್ರೀದಾಮನನ್ನು ಕುರಿತು 'ನೀನು ಅಳಬೇಡ, ಭೂಮಿಗೆ ಹೋಗು' ಎಂದು ಶ್ರೀಕೃಷ್ಣನು ಹೇಳಿದನು.

೧೦೯-೧೧೦. ಮೂರು ಲೋಕದಲ್ಲಿಯೂ ನಿನ್ನನ್ನು ಜಯಿಸುವಂಥ ಶೂರನು ಜನಿಸಲಾರನು. ನನ್ನ ಆಶೀರ್ವಾದದಿಂದ ರಾಕ್ಷಸರೊಡೆಯನಾಗಿ ಐವತ್ತು ವರ್ಷಗಳ ಕಾಲ ಸುಖವಾಗಿದ್ದು ಅಂತ್ಯಕಾಲದಲ್ಲಿ ಶಂಕರನ ಶೂಲಾಯುಧಕ್ಕೆ ನಿನ್ನ ದೇಹವನ್ನರ್ಪಿಸಿ ನನ್ನ ಸನ್ನಿಧಿಗೆ ಬರುವವನಾಗು. ಈ ಮಾತುಗಳನ್ನು ಕೇಳಿ ದುಃಖಿತನಾದ ಶ್ರೀದಾಮನು ಶ್ರೀಕೃಷ್ಣನನ್ನು ಕುರಿತು ಇಂತೆಂದನು.

೧೧೧. ಯಾವಾಗಲೂ ನಿನ್ನಲ್ಲಿ ಅಚಲವಾದ ಭಕ್ತಿಯಿಡುವಂತೆ ನನಗೆ ಅನುಗ್ರಹಿಸು' ಎಂದು ಹೇಳಿ ಶ್ರೀಕೃಷ್ಣನಿಗೆ ವಂದಿಸಿ ಶ್ರೀದಾಮನು ಆಶ್ರಮದಿಂದ ಹೊರಕ್ಕೆ ಹೋದನು.

ಪಶ್ಚಾಜ್ಜಗಾಮ ಸಾ ದೇವೀ ರುರೋದ ಚ ಪುನಃ ಪುನಃ ।
ಕ್ವ ಯಾಸಿ ವತ್ಸೇತ್ಯುಚ್ಚಾರ್ಯ ವಿಲಲಾಪ ಭೃಶಂ ಸತೀ		॥ ೧೧೨ ॥

ಶ್ರೀದಾಮಾಪಿ ಚ ತಾಂ ನತ್ವಾ ರುರೋದ ಪ್ರೇಮವಿಹ್ವಲಃ ।
ಸ ಏವ ಶಂಖಚೂಡಶ್ಚ ಬಭೂವ ತುಲಸೀಪತಿಃ		॥ ೧೧೩ ॥

ಗತೇ ಶ್ರೀದಾಮ್ನಿ ಸಾ ದೇವೀ ಜಗಾಮೇಶ್ವರಸನ್ನಿಧಿಂ ।
ಸರ್ವಂ ನಿವೇದಯಾಮಾಸ ಹರಿಃ ಪ್ರತ್ಯುತ್ತರಂ ದದೌ		॥ ೧೧೪ ॥

ಶೋಕಾತುರಾಂ ಚ ತಾಂ ಕೃಷ್ಣೋ ಬೋಧಯಾಮಾಸ ಪ್ರೇಯಸೀಂ ।
ಶಂಖಚೂಡಶ್ಚ ಕಾಲೇನ ಸಂಪ್ರಾಪ ಪುನರೀಶ್ವರಂ		॥ ೧೧೫ ॥

ರಾಧಾ ಜಗಾಮ ಧರಣೀಂ ವಾರಾಹೇ ಹರಿಣಾ ಸಹ ।
ವೃಷಭಾನುಗೃಹೇ ಜನ್ಮ ಲಲಾಭ ಗೋಕುಲೇ ಮುನೇ		॥ ೧೧೬ ॥

---

೧೧೨ ಇತ್ತ ರಾಧಾದೇವಿಯೂ ಕೂಡ 'ವತ್ಸ, ಎಲ್ಲಿಗೆ ಹೋಗುವೆ,' ಎಂದು ಗೋಳಾಡುತ್ತ ಶ್ರೀದಾಮನ ಹಿಂದೆಯೇ ಹೋದಳು

೧೧೩. ಶ್ರೀದಾಮನೂ ಕೂಡ ಭಕ್ತಿಪ್ರೇಮಪುರಸ್ಸರವಾಗಿ ಆಕೆಗೆ ನಮಸ್ಕರಿಸಿ, ಆಕೆಯ ವಿರಹಕ್ಕಾಗಿ ವ್ಯಥೆಪಟ್ಟನು. ಮುಂದೆ ಅವನೇ ತುಳಸೀ ದೇವಿಯ ಪತಿಯಾಗಿ ಶಂಖಚೂಡನೆಂಬ ಹೆಸರಿನಿಂದ ಪ್ರಸಿದ್ಧನಾದನು.

೧೧೪. ಇಂತು ಶ್ರೀದಾಮನು ಹೊರಟುಹೋಗಲು, ರಾಧಾದೇವಿಯು ಶ್ರೀಕೃಷ್ಣನ ಸಮೀಪಕ್ಕೆ ಬಂದು ನಡೆದ ಸಮಾಚಾರವನ್ನೆಲ್ಲ ತಿಳಿಸಿದಳು ಶ್ರೀಹರಿಯು ಆಕೆಗೆ ಪ್ರತ್ಯುತ್ತರವಿತ್ತನು.

೧೧೫. ಮತ್ತು ದುಃಖಿತಳಾದ ಪ್ರೇಯಸಿಯನ್ನು ಶ್ರೀಕೃಷ್ಣನು ಸಾಂತ್ವನ ಗೊಳಿಸಿದನು. ಇತ್ತ ಶಂಖಚೂಡನೂ ಕೂಡ ಶಾಪಾವಸಾನಕಾಲದಲ್ಲಿ ಶ್ರೀಹರಿಯ ಸಮೀಪಕ್ಕೆ ಮತ್ತೆ ಬಂದನು.

೧೧೬. ಎಲೈ ನಾರದ ಮಹರ್ಷಿಯೇ, ಇತ್ತ ರಾಧಾದೇವಿಯೂ ಕೂಡ ವಾರಾಹ ಕಲ್ಪದಲ್ಲಿ ಶ್ರೀಹರಿಯೊಡನೆ ಭೂಮಂಡಲಕ್ಕೆ ಹೋಗಿ, ಗೋಕುಲದಲ್ಲಿ ವೃಷಭಾನುವೆಂಬ ಗೊಲ್ಲನ ಮಂದಿರದಲ್ಲಿ ಜನ್ಮವೆತ್ತಿದಳು.

**ಇತ್ಯೇವಂ ಕಥಿತಂ ಸರ್ವಂ ಶ್ರೀಕೃಷ್ಣಾಖ್ಯಾನಮಂಗಲಂ ।**
**ಸರ್ವೇಷಾಂ ವಾಂಛಿತಂ ಸಾರಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೧೭ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣ ಜನ್ಮಖಂಡೇ**
**ನಾರಾಯಣ ನಾರದಸಂವಾದೇ ಸಪ್ತಸಮುದ್ರಜನ್ಮ-**
**ರಾಧಾಶ್ರೀದಾಮಶಾಪೋದ್ಭವೋ ನಾಮ**
**ತೃತೀಯೋಽಧ್ಯಾಯಃ**

---

೧೧೭. ಈ ರೀತಿಯಾಗಿ ಅತ್ಯಂತ ಸಾರಭೂತವೂ, ಸಕಲರ ಅಭೀಪ್ಸಿತವೂ ಸರ್ವಮಂಗಳದಾಯಕವೂ ಆದ ಶ್ರೀಕೃಷ್ಣನ ಚರಿತ್ರೆಯನ್ನು ಹೇಳಿದೆನು. ಮುಂದೆ ಏನನ್ನು ಕೇಳಲು ನಿನಗೆ ಇಚ್ಛೆಯಿರುವುದು ?

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ಸಪ್ತ
ಸಮುದ್ರಗಳ ಉತ್ಪತ್ತಿ ಮತ್ತು ರಾಧಾ ಶ್ರೀದಾಮರ ಶಾಪವನ್ನು
ವಿವರಿಸುವ ಮೂರನೆಯ ಅಧ್ಯಾಯವು ಮುಗಿದುದು.



## ಮೂರನೆಯ ಅಧ್ಯಾಯದ ಸಾರಾಂಶ

ರಾಧೆಯು ರತಿಮಂಡಪಕ್ಕೆ ಬಂದು, ವಿರಜೆಯು ನದೀರೂಪಳಾಗಿರುವುದನ್ನೂ, ಶ್ರೀಕೃಷ್ಣನು ಅಲ್ಲಿಲ್ಲದುದನ್ನೂ ನೋಡಿ ತನ್ನ ಮಂದಿರಕ್ಕೆ ಹಿಂತಿರುಗಿದಳು. ಅನಂತರ ಶ್ರೀಕೃಷ್ಣನು ಆ ನದಿಯ ದಡದಲ್ಲಿ ಕುಳಿತು ವಿರಜೆಗಾಗಿ ಬಹಳ ಹೊತ್ತು ಗೋಳಾಡಿ, ಸುಂದರರೂಪದಿಂದ ಎದ್ದು ಬರಬೇಕೆಂದು ವಿರಜೆಯನ್ನು ಕೇಳಿಕೊಂಡನು ಕೂಡಲೇ ವಿರಜೆಯು ಲೋಕೋತ್ತರ ಸೌಂದರ್ಯದಿಂದ ಕೂಡಿ ಮೇಲಕ್ಕೆ ಬರಲು ಅವರೀರ್ವರೂ ಬಹಳಕಾಲ ರತಿಸುಖನಿರತರಾಗಿದ್ದರು. ಆ ಸಮಯದಲ್ಲಿ ವಿರಜೆಯು ಗರ್ಭವತಿಯಾಗಿ ಏಳು ಮಕ್ಕಳನ್ನು ಹಡೆದಳು. ಹೀಗಿರಲು ಒಮ್ಮೆ ಅವಳ ಕಿರಿಯಮಗನು ಹಿರಿಯಸಹೋದರರಿಂದ ಪೀಡಿತನಾಗಿ ಬಂದು ತಾಯಿಯ ತೊಡೆಯ ಮೇಲೆ ಕುಳಿತುಕೊಳ್ಳಲು ಸಮಯಕಾಯುತ್ತಿದ್ದ ಶ್ರೀಕೃಷ್ಣನು ಅಲ್ಲಿಂದ ಕಣ್ಮರೆಯಾದನು. ವಿರಜೆಯು ಪುತ್ರನನ್ನು ಸಮಾಧಾನಮಾಡಿದನಂತರ ಅತ್ತ ತಿರುಗಿ ಶ್ರೀಕೃಷ್ಣನನ್ನು ಕಾಣದೆ ಶೋಕಾಕುಲಳಾಗಿ, ಪತಿಯ ವಿರಹಕ್ಕೆ ತನ್ನ ಮಕ್ಕಳೇ ಕಾರಣವೆಂದು ತಿಳಿದು, ಕಿರಿಯವನು ಉಪ್ಪಿನ ಸಮುದ್ರವಾಗುವಂತೆಯೂ, ಉಳಿದ ಆರು ಜನರೂ, ಕಬ್ಬಿನರಸವೇ ಮುಂತಾದ ಆರು ಸಮುದ್ರಗಳಾಗುವಂತೆಯೂ ಶಾಪವಿತ್ತು ಸಪ್ತದ್ವೀಪಗಳಲ್ಲಿ ಒಬ್ಬೊಬ್ಬರು ಒಂದೊಂದು ದ್ವೀಪಕ್ಕೆ ಹೋಗಬೇಕೆಂದು ಹೇಳಿದಳು. ಈ ರೀತಿಯಾಗಿ ಪುತ್ರರಿಗೆಲ್ಲ ಶಾಪವಿತ್ತು, ಪತಿಪುತ್ರರ ವಿರಹದಿಂದ ದುಃಖಿತಳಾಗಿದ್ದ ವಿರಜೆಯ ಸಮೀಪಕ್ಕೆ ಶ್ರೀಕೃಷ್ಣನು ಪುನಃ ಬಂದು ವಿಹರಿಸುತ್ತಿರುವುದನ್ನು ರಾಧೆಯ ಸಖಿಯರು ಕಂಡು ಆಕೆಗೆ ತಿಳಿಸಲು ರಾಧೆಯು ಕುಪಿತಳಾದಳು ಶ್ರೀಕೃಷ್ಣನು ಬಂದು ಎಷ್ಟು ಸಮಾಧಾನಗೊಳಿಸಿದರೂ ಆಕೆಯು ಶಾಂತಳಾಗಲಿಲ್ಲ. ಕಡೆಗೆ ಶ್ರೀಕೃಷ್ಣನು ಸಾಮಾನ್ಯ ಮನುಜನಂತೆ ಸ್ತ್ರೀಲಂಪಟನಾಗಿರುವುದನ್ನು ನೋಡಿ, ' ನೀನು ಭೂಲೋಕದಲ್ಲಿ ಮಾನುಷಯೋನಿಯಲ್ಲಿ ಹುಟ್ಟಿ ಸ್ತ್ರೀಲಂಪಟನಾಗಿರು ' ಎಂದು ರಾಧೆಯು ಶಾಪವಿತ್ತಳು. ಆಗ ರಾಧೆಯ ಸಖಿಯರು ಸಮಯೋಚಿತವಾದ ಕೆಲವು ಹಿತನುಡಿಗಳಿಂದ ಶ್ರೀಕೃಷ್ಣನನ್ನು ಸಮಾಧಾನಗೊಳಿಸಿ ದೂರಕ್ಕೆ ಕಳುಹಿಸಿದರು ಈ ರೀತಿಯಾಗಿ ಶ್ರೀಕೃಷ್ಣನಿಗೆ ಶಾಪವಿತ್ತ ರಾಧೆಯನ್ನು ಕುರಿತು ಶ್ರೀದಾಮನು

ಶ್ರೀಕೃಷ್ಣನ ಮಹಿಮೆಯನ್ನು ಆಕೆಗೆ ವಿವರಿಸಿದನು. ಆಗ ರಾಧೆಯು ಸರ್ವಜ್ಞಳಾದ ತನಗೆ ಬುದ್ಧಿಹೇಳಲು ಬಂದ ಆ ಶ್ರೀದಾಮನನ್ನು 'ರಾಕ್ಷಸನಾಗಿ ಹುಟ್ಟು' ಎಂದು ಶಪಿಸಲು, ಶ್ರೀದಾಮನೂ 'ಮಾನುಷಯೋನಿಯಲ್ಲಿ ಜನ್ಮವೆತ್ತಿ ನೂರುವರ್ಷಗಳ ಕಾಲ ಶ್ರೀಹರಿಯ ವಿರಹ ಪೀಡಿತಳಾಗುವಂತೆ' ಆಕೆಗೆ ಪ್ರತಿಶಾಪವಿತ್ತನು. ಅನಂತರ ಶ್ರೀದಾಮನು ಶ್ರೀಕೃಷ್ಣನ ಸಮೀಪಕ್ಕೆ ಬಂದು ನಡೆದ ಸಮಾಚಾರ ವನ್ನೆಲ್ಲ ತಿಳಿಸಿ, ಆತನ ಅನುಮತಿ ಪಡೆದು ಶಂಖಚೂಡನೆಂಬ ರಾಕ್ಷಸನಾಗಿ ಹುಟ್ಟಿ, ತುಳಸಿಯ ಪತಿಯಾಗಿದ್ದು ಶಾಪಾವಸಾನದಲ್ಲಿ ಶಂಕರನ ಶೂಲಾಯುಧದ ಏಟಿನಿಂದ ದೇಹತ್ಯಾಗಮಾಡಿ ಶ್ರೀಹರಿಯನ್ನು ಸೇರಿದನು. ಇತ್ತ ಶ್ರೀದಾಮನು ಹೊರಟು ಹೋದಮೇಲೆ ರಾಧೆಯೂ ಕೂಡ ಶ್ರೀಕೃಷ್ಣನ ಸಮೀಪಕ್ಕೆ ಬಂದು ನಡೆದ ಸಮಾಚಾರವನ್ನೆಲ್ಲ ತಿಳಿಸಿ, ಶ್ರೀಹರಿಯ ಅನುಮತಿಯಂತೆ ವಾರಾಹ ಕಲ್ಪದಲ್ಲಿ, ಗೋಕುಲದಲ್ಲಿ ವೃಷಭಾನುವೆಂಬ ಗೊಲ್ಲನ ಪುತ್ರಿಯಾಗಿ ಜನ್ಮವೆತ್ತಿ ತನ್ನ ಶಾಪ ದಿಂದಲೇ ಮಾನುಷಯೋನಿಯಲ್ಲಿ ಹುಟ್ಟಿದ್ದ ಶ್ರೀಹರಿಯನ್ನು ವರಿಸಿದಳು.



—॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

# ಶ್ರೀಕೃಷ್ಣಜನ್ಮಖಂಡೇ

---

## ॥ ಚತುರ್ಥೋಽಧ್ಯಾಯಃ ॥

॥ ನಾರದ ಉವಾಚ ॥

**ಕೇನ ವಾ ಪ್ರಾರ್ಥಿತಃ ಕೃಷ್ಣೋ ಮಹೀಂ ಚ ಕೇನ ಹೇತುನಾ ।**
**ಆಜಗಾಮ ಜಗನ್ನಾಥೋ ವದ ವೇದವಿದಾಂ ವರ ॥ ೧ ॥**

॥ ನಾರಾಯಣ ಉವಾಚ ॥

**ಪುರಾ ವಾರಾಹಕಲ್ಪೇ ಸಾ ಭಾರಾಕ್ರಾಂತಾ ವಸುಂಧರಾ ।**
**ಭೃಶಂ ಬಭೂವ ಶೋಕಾರ್ತಾ ಬ್ರಹ್ಮಾಣಂ ಶರಣಂ ಯಯೌ ॥ ೨ ॥**

**ಸುರೈಶ್ಚಾಸುರಸಂತಪ್ತೈರ್ಭೃಶಮುದ್ವಿಗ್ನಮಾನಸೈಃ ।**
**ಸಾರ್ಧಂ ತೈಸ್ತ್ರಾಂ ದುರ್ಗಮಾಂ ಚ ಜಗಾಮ ವೇಧಸಃ ಸಭಾಂ ॥ ೩ ॥**

---

## ನಾಲ್ಕನೆಯ ಅಧ್ಯಾಯವು

೧. ನಾರದಮಹರ್ಷಿ :—ಎಲೈ ವೇದಜ್ಞರಲ್ಲಿ ಶ್ರೇಷ್ಠನಾದ ನಾರಾಯಣ ಮಹರ್ಷಿಯೇ. ಜಗನ್ನಾಥನಾದ ಶ್ರೀಕೃಷ್ಣನು ಯಾವ ಕಾರಣದಿಂದ ಯಾರ ಪ್ರಾರ್ಥನೆಯಂತೆ ಭೂಲೋಕಕ್ಕೆ ಬಂದನೆಂಬುದನ್ನು ಹೇಳು.

೨ ನಾರಾಯಣಮಹರ್ಷಿ :—ಹಿಂದೆ ವಾರಾಹಕಲ್ಪದಲ್ಲಿ ದುಸ್ಸ್ತರ ಭಾರದಿಂದ ಬಗ್ಗಿಹೋದ ಭೂದೇವಿಯು ಶೋಕಾಕುಲಳಾಗಿ ಚತುರ್ಮುಖ ಬ್ರಹ್ಮನನ್ನು ಶರಣುಹೊಂದಿದಳು.

೩. ರಾಕ್ಷಸರ ಬಾಧೆಗೊಳಗಾಗಿ ಚಿಂತಾಕ್ರಾಂತರಾದ ದೇವತೆಗಳೂ ಕೂಡ ಆ ಭೂದೇವಿಯೊಡನೆ ಸರ್ವಸುಲಭವಲ್ಲದ ಬ್ರಹ್ಮನ ಸಭೆಗೆ ಬಂದರು.

ದದರ್ಶ ತಸ್ಯಾಂ ದೇವೇಶಂ ಜ್ವಲಂತಂ ಬ್ರಹ್ಮತೇಜಸಾ ।
ಋಷೀಂದ್ರೈಶ್ಚ ಮುನೀಂದ್ರೈಶ್ಚ ಸಿದ್ಧೇಂದ್ರೈಃ ಸೇವಿತಂ ಮುದಾ ॥ ೪ ॥

ಅಪ್ಸರೋಗಣನೃತ್ಯಂ ಚ ಪಶ್ಯಂತಂ ಸಸ್ಮಿತಂ ಮುದಾ ।
ಗಂಧರ್ವಾಣಾಂ ಚ ಸಂಗೀತಂ ಶ್ರುತವಂತಂ ಮನೋಹರಂ ॥ ೫ ॥

ಜಪಂತಂ ಪರಮಂ ಬ್ರಹ್ಮ ಕೃಷ್ಣ ಇತ್ಯಕ್ಷರದ್ವಯಂ ।
ಭಕ್ತ್ಯಾನಂದಾಶ್ರುಪೂರ್ಣಂ ತಂ ಪುಲಕಾಂಕಿತ ವಿಗ್ರಹಂ ॥ ೬ ॥

ಭಕ್ತ್ಯಾ ಸಾ ತ್ರಿದಶೈಃ ಸಾರ್ಧಂ ಪ್ರಣಮ್ಯ ಚತುರಾನನಂ ।
ಸರ್ವಂ ನಿವೇದನಂ ಚಕ್ರೇ ದೈತ್ಯಭಾರಾದಿಕಂ ಮುನೇ ।
ಸಾಶ್ರುಪೂರ್ಣಾ ಸಪುಲಕಾ ತುಷ್ಟಾವ ಚ ರುರೋದ ಚ ॥ ೭ ॥

---

೪. ಆ ಸಭೆಯಲ್ಲಿ ಋಷಿಮುನಿಗಳಿಂದಲೂ, ಸಿದ್ಧಶ್ರೇಷ್ಠರಿಂದಲೂ ಸೇವಿತನಾಗಿ ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿದ್ದ ದೇವದೇವನಾದ ಬ್ರಹ್ಮನನ್ನು ಭೂದೇವಿಯು ನೋಡಿದಳು.

೫. ಬ್ರಹ್ಮದೇವನು ಅಪ್ಸರಸ್ತ್ರೀಯರ ನರ್ತನವನ್ನು ಸ್ಮಿತಮುಖನಾಗಿ ನೋಡುತ್ತ ಗಂಧರ್ವರ ಮನೋಹರವಾದ ಸಂಗೀತವನ್ನು ಆನಂದದಿಂದ ಕೇಳುತ್ತಿದ್ದನು.

೬. 'ಕೃಷ್ಣ' ಎಂಬ ಎರಡು ಅಕ್ಷರಗಳನ್ನು ಉಚ್ಚರಿಸಿ ಭಕ್ತಿಪೂರ್ವಕವಾಗಿ ಪರಬ್ರಹ್ಮನನ್ನು ಜಪಿಸುತ್ತ ಆನಂದಪರವಶನಾಗಿ ರೋಮಾಂಚಿತಶರೀರನಾಗಿದ್ದನು.

೭. ಈ ರೀತಿಯಾಗಿದ್ದ ಚತುರ್ಮುಖನಿಗೆ ಭೂದೇವಿಯು, ದೇವತೆಗಳೊಡನೆ ಭಕ್ತಿಪೂರ್ವಕವಾಗಿ ವಂದಿಸಿ ರಾಕ್ಷಸರ ಬಾಧೆಯ ಸಂಬಂಧವಾದ ಸಕಲ ವಿಷಯಗಳನ್ನೂ ವಿಜ್ಞಾಪಿಸಿಕೊಂಡಳು. ಮತ್ತು ರೋಮಾಂಚಿತ ಶರೀರಳಾಗಿ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತ ಬ್ರಹ್ಮನನ್ನು ಸ್ತುತಿಸಿ ದುಃಖದಿಂದ ಗೋಳಾಡಲಾರಂಭಿಸಿದಳು.

ತಾಮುವಾಚ ಜಗದ್ಧಾತಾ ಕಥಂ ಸ್ತೌಷಿ ಚ ರೋದಿಷಿ ।
ಕಥಮಾಗಮನಂ ಭದ್ರೇ ವದ ಭದ್ರಂ ಭವಿಷ್ಯತಿ ॥ ೮ ॥

ಸುಸ್ಥಿರಾ ಭವ ಕಲ್ಯಾಣಿ ಭಯಂ ಕಿಂ ತೇ ಮಯಿ ಸ್ಥಿತೇ ।
ಆಶ್ವಾಸ್ಯ ಪೃಥಿವೀಂ ಬ್ರಹ್ಮಾ ದೇವಾನ್ಪಪ್ರಚ್ಛ ಸಾದರಂ ॥ ೯ ॥

ಕಥಮಾಗಮನಂ ದೇವಾ ಯುಷ್ಮಾಕಂ ಮಮ ಸನ್ನಿಧಿಂ ।
ಬ್ರಹ್ಮಣೋ ವಚನಂ ಶ್ರುತ್ವಾ ದೇವಾ ಊಚುಃ ಪ್ರಜಾಪತಿಂ ॥ ೧೦ ॥

ಭಾರಾಕ್ರಾಂತಾ ಚ ವಸುಧಾ ದಸ್ಯುಗ್ರಸ್ತಾ ವಯಂ ಪ್ರಭೋ ।
ತ್ವಮೇವ ಜಗತಾಂ ಸ್ರಷ್ಟಾ ಶೀಘ್ರಂ ನೋ ನಿಷ್ಕೃತಿಂ ಕುರು ॥ ೧೧ ॥

ಗತಿಸ್ತ್ವಮಸ್ಯಾ ಭೋ ಬ್ರಹ್ಮನ್ನಿರ್ವೃತಿಂ ಕರ್ತುಮರ್ಹಸಿ ।
ಪೀಡಿತಾ ಯೇನ ಭಾರೇಣ ಪೃಥಿವೀಯಂ ಪಿತಾಮಹ ॥ ೧೨ ॥

---

೮. ಆಕೆಯು ಗೋಳಿಡುವುದನ್ನು ನೋಡಿ ಜಗತ್ಸೃಷ್ಟಿಕರ್ತನು ಎಲೌ ಮಂಗಳಾಂಗಿಯೇ, ನೀನು ನನ್ನನ್ನು ಹೊಗಳುತ್ತಿರುವುದೇನು? ಪುನಃ ಗೋಳಾಡುತ್ತಿರುವುದೇನು? ನೀನು ಇಲ್ಲಿಗೆ ಬರಲು ಕಾರಣವೇನು? ಹೇಳು. ಎಲ್ಲವೂ ಶುಭವಾಗುವುದು.

೯. ಎಲೌ ಕಲ್ಯಾಣಿಯೇ, ಶಾಂತಳಾಗು. ನಾನಿರುವಾಗ ನಿನಗೇತರ ಭಯ? ಎಂದು ಭೂದೇವಿಯನ್ನು ಆಶ್ವಾಸನೆಗೊಳಿಸಿ, ದೇವತೆಗಳನ್ನು ಕುರಿತು ಅತ್ಯಾದರದಿಂದ ಈ ರೀತಿ ಪ್ರಶ್ನಿಸಿದನು.

೧೦. ಎಲೈ ದೇವತೆಗಳೇ, ನೀವೆಲ್ಲರೂ ನನ್ನ ಸಮೀಪಕ್ಕೆ ಬರಲು ಕಾರಣವೇನು? ಬ್ರಹ್ಮನ ಮಾತನ್ನು ಕೇಳಿ ದೇವತೆಗಳೆಲ್ಲರೂ ಅವನನ್ನು ಕುರಿತಿಂತೆಂದರು.

೧೧. ಎಲೈ ಪ್ರಭುವೇ, ಭೂದೇವಿಯು ಭಾರಾಕ್ರಾಂತಳಾಗಿದ್ದಾಳೆ. ನಾವೆಲ್ಲ ಶತ್ರುಪೀಡಿತರಾಗಿದ್ದೇವೆ. ಜಗತ್ಸೃಷ್ಟಿಕರ್ತನಾದ ನೀನೇ ನಮ್ಮನ್ನು ಜಾಗ್ರತೆಯಾಗಿ ಪಾರುಗಾಣಿಸು.

೧೨. ಎಲೈ ಪಿತಾಮಹನೇ, ದುಸ್ತರ ಭಾರದಿಂದ ಪೀಡಿತಳಾದ ಈ ಭೂದೇವಿಯನ್ನು ಉದ್ಧಾರಮಾಡಲು ನೀನಲ್ಲದೆ ಬೇರಾರು ದಿಕ್ಕಿರುವರು.

ನಯಂ ತೇನ್ಯೈವ ದುಃಖಾರ್ತಾಸ್ತದ್ಭಾರಹರಣಂ ಕುರು ।
ದೇವಾನಾಂ ವಚನಂ ಶ್ರುತ್ವಾ ಪಪ್ರಚ್ಛ ತಾಂ ಜಗದ್ವಿಧಿಃ ॥ ೧೩ ॥

ದೂರೀಕೃತ್ಯ ಭಯಂ ವತ್ಸೇ ಸುಖಂ ತಿಷ್ಠ ಮಮಾಂತಿಕಂ ।
ಕೇಷಾಂ ಭಾರಮಶಕ್ತಾ ತ್ವಂ ಸೋಢುಂ ಪಂಕಜಲೋಚನೇ ॥ ೧೪ ॥

ಅಪನೇಷ್ಯಾಮಿ ತಂ ಭದ್ರೇ ಭದ್ರಂ ತೇ ಭವಿತಾ ಧ್ರುವಂ ।
ತಸ್ಯ ಸಾ ವಚನಂ ಶ್ರುತ್ವಾ ತಮುವಾಚ ಸ್ವಪೀಡನಂ ।
ಪೀಡಿತಾ ಯೇನ ಯೈರ್ನ್ಯೈವಂ ಪ್ರಸನ್ನವದನೇಕ್ಷಣಾ ॥ ೧೫ ॥

॥ ಕ್ಷಿತಿರುವಾಚ ॥

ಶೃಣು ತಾತ ಪ್ರವಕ್ಷ್ಯಾಮಿ ಸ್ವಕೀಯಾಂ ಮಾನಸೀಂ ವ್ಯಥಾಂ ।
ವಿನಾ ಬಂಧುಂ ಸವಿಶ್ವಾಸಂ ನಾನ್ಯಂ ಕಥಿತುಮರ್ಹತಿ ॥ ೧೬ ॥

---

೧೩. ಭೂಭಾರದಿಂದ ನಾವೂ ದುಃಖಿತರಾಗಿರುವುದರಿಂದ ಮೊದಲು ಭೂಭಾರವನ್ನು ಪರಿಹರಿಸು. ದೇವತೆಗಳಾಡಿದ ಈ ಮಾತುಗಳನ್ನು ಕೇಳಿ ಬ್ರಹ್ಮನು ಭೂದೇವಿಯನ್ನು ಪ್ರಶ್ನಿಸಿದನು

೧೪. ಎಲೌ ವತ್ಸೆಯೇ, ಭಯವನ್ನು ದೂರಮಾಡಿ ನನ್ನ ಹತ್ತಿರ ಸುಖವಾಗಿರು. ಪಂಕಜಾಕ್ಷಿಯೇ, ನೀನು ಯಾರ ಭಾರವನ್ನು ಹೊರಲು ಅಸಮರ್ಥಳಾಗಿರುವೆ. ಎಂಬುದನ್ನು ನನಗೆ ತಿಳಿಸು.

೧೫. ಎಲೌ ಮಂಗಳಾಂಗಿಯೇ, ನಿನ್ನ ಭಾರವನ್ನಿಳುಹುವೆನು. ನಿನಗೆ ಮಂಗಳವಾಗುವುದು. ಬ್ರಹ್ಮನ ಮಾತುಗಳನ್ನು ಕೇಳಿ ಪ್ರಸನ್ನಮುಖಿಯಾದ ಭೂದೇವಿಯು ಯಾರಿಂದ ತನಗೆ ಪೀಡೆಯುಂಟಾಗಿರುವುದೆಂಬುದನ್ನು ಅವನಲ್ಲಿ ವಿಜ್ಞಾಪಿಸಿಕೊಂಡಳು.

೧೬. ಭೂದೇವಿ :—ಎಲೈ ತಂದೆಯೇ, ನನ್ನ ಮನೋವ್ಯಥೆಯನ್ನು ಹೇಳಿಕೊಳ್ಳುವೆನು. ಕೇಳು, ವಿಶ್ವಾಸಪಾತ್ರರಾದ ಬಂಧುಗಳಿಗಲ್ಲದೆ ಇತರರಿಗೆ ನಮ್ಮ ಸಂಕಟಗಳನ್ನು ಹೇಳುವುದನುಚಿತ

ಸ್ತ್ರೀಜಾತಿರಬಲಾ ಶಶ್ವದ್ರಕ್ಷಣೀಯಾ ಸ್ವಬಂಧುಭಿಃ ।
ಜನಕಸ್ವಾಮಿಪುತ್ರೈಶ್ಚ ಗರ್ಹಿತಾನ್ಯೈಶ್ಚ ನಿಶ್ಚಿತಂ ॥ ೧೭ ॥

ತ್ವಯಾ ಪೃಷ್ಟಾ ಜಗತ್ತಾತ ನ ಲಜ್ಜಾ ಕಥಿತುಂ ಮಮ ।
ಯೇಷಾಂ ಭಾರೈಃ ಪೀಡಿತಾಹಂ ಶ್ರೂಯತಾಂ ಕಥಯಾಮಿ ತೇ ॥ ೧೮ ॥

ಕೃಷ್ಣಭಕ್ತಿವಿಹೀನಾ ಯೇ ಯೇ ಚ ತದ್ಭಕ್ತನಿಂದಕಾಃ ।
ತೇಷಾಂ ಮಹಾಪಾತಕಿನಾಮಶಕ್ತಾ ಭಾರವಾಹನೇ ॥ ೧೯ ॥

ಸ್ವಧರ್ಮಾಚಾರಹೀನಾ ಯೇ ನಿತ್ಯಕೃತ್ಯವಿವರ್ಜಿತಾಃ ।
ಶ್ರದ್ಧಾಹೀನಾಶ್ಚ ವೇದೇಷು ತೇಷಾಂ ಭಾರೇಣ ಪೀಡಿತಾ ॥ ೨೦ ॥

ಪಿತೃಮಾತೃಗುರುಸ್ತ್ರೀಣಾಂ ಪೋಷಣಂ ಪುತ್ರಪೋಷ್ಯಯೋಃ ।
ಯೇ ನ ಕುರ್ವಂತಿ ತೇಷಾಂ ಚ ನ ಶಕ್ತಾ ಭಾರವಾಹನೇ ॥ ೨೧ ॥

---

೧೭. ಅಬಲೆಯೆನಿಸಿದ ಸ್ತ್ರೀಯನ್ನು ತಂದೆಯಾಗಲೀ, ಪತಿಯಾಗಲೀ ಪುತ್ರನಾಗಲೀ ರಕ್ಷಣೆಮಾಡಬೇಕು. ಇವರನ್ನು ಬಿಟ್ಟು ಇತರರ ರಕ್ಷಣೆಗೊಳಗಾದ ಸ್ತ್ರೀಯು ನಿಂದಿತಳಾಗುವಳು.

೧೮ ಜಗತ್ತಿಗೇ ತಂದೆಯೆನಿಸಿದ ನಿನ್ನಲ್ಲಿ ನನ್ನ ಕಷ್ಟವನ್ನು ಹೇಳಿಕೊಳ್ಳಲು ನಾಚಿಕೆಯೇನೂ ಇಲ್ಲ. ನಾನು ಯಾರ ಭಾರದಿಂದ ಪೀಡಿತಳಾಗಿರುವೆನೆಂಬುದನ್ನು ಹೇಳುವೆನು. ಕೇಳು.

೧೯. ಶ್ರೀಕೃಷ್ಣನಲ್ಲಿ ಭಕ್ತಿಯಿಲ್ಲದ ಮತ್ತು ಶ್ರೀಕೃಷ್ಣಭಕ್ತರನ್ನು ನಿಂದಿಸುವ ಮಹಾಪಾತಕಿಗಳ ಭಾರವನ್ನು ಹೊರಲು ನಾನು ಅಶಕ್ತಳಾಗಿದ್ದೇನೆ.

೨೦. ಯಾರು ತಮ್ಮ ನಿತ್ಯಕರ್ಮಗಳನ್ನೂ ಸ್ವಧರ್ಮಾಚಾರಗಳನ್ನೂ ಬಿಟ್ಟು ವೇದವಾಕ್ಯಗಳಲ್ಲಿ ನಂಬಿಕೆಯನ್ನು ಕಳೆದುಕೊಂಡಿರುವರೋ ಅಂಥ ಪಾಪಿಗಳು ನನಗೆ ಭಾರವಾಗಿರುವರು.

೨೧. ಯಾರು ತಮ್ಮ ತಂದೆ ತಾಯಿಯರು, ಗುರುಗಳು, ಸ್ತ್ರೀಯರು, ಪುತ್ರರು ಮುಂತಾದವರನ್ನು ಪೋಷಿಸುವುದಿಲ್ಲವೋ ಅಂಥವರನ್ನು ಹೊರಲು ನಾನು ಅಶಕ್ತಳಾಗಿರುವೆನು

ಯೇ ಮಿಥ್ಯಾವಾದಿನಸ್ತಾತ ದಯಾಸತ್ಯವಿವರ್ಜಿತಾಃ ।
ನಿಂದಕಾ ಗುರುದೇವಾನಾಂ ತೇಷಾಂ ಭಾರೇಣ ಪೀಡಿತಾ ॥ ೨೨ ॥

ಮಿತ್ರದ್ರೋಹೀ ಕೃತಘ್ನಶ್ಚ ಮಿಥ್ಯಾಸಾಕ್ಷ್ಯಪ್ರದಾಯಕಃ ।
ವಿಶ್ವಾಸಘ್ನೋ ನ್ಯಾಸಹರ್ತಾ ತೇಷಾಂ ಭಾರೇಣ ಪೀಡಿತಾ ॥ ೨೩ ॥

ಕಲ್ಯಾಣಸೂಕ್ತನಾಮಾನಿ ಹರೇರ್ನಾಮ್ನೈಕಮಂಗಲಂ ।
ಕುರ್ವಂತಿ ವಿಕ್ರಯಂ ಯೇ ವೈ ತೇಷಾಂ ಭಾರೇಣ ಪೀಡಿತಾ ॥ ೨೪ ॥

ಜೀವಘಾತೀ ಗುರುದ್ರೋಹೀ ಗ್ರಾಮಯಾಜೀ ಚ ಲುಬ್ಧಕಃ ।
ಶವದಾಹೀ ಶೂದ್ರಭೋಜೀ ತೇಷಾಂ ಭಾರೇಣ ಪೀಡಿತಾ ॥ ೨೫ ॥

ಪೂಜಾಯಜ್ಞೋಪವಾಸಾದಿವ್ರತಾನಿ ವಿವಿಧಾನಿ ಚ ।
ಯೇ ಯೇ ಮೂಢಾ ನಿಹಂತಾರಸ್ತೇಷಾಂ ಭಾರೇಣ ಪೀಡಿತಾ ॥ ೨೬ ॥

---

೨೨. ಎಲೈ ತಂದೆಯೇ, ಯಾರು ಸತ್ಯ, ದಯೆ ಮುಂತಾದ ಸದ್ಗುಣಗಳನ್ನು ದೂರಮಾಡಿ, ಸರ್ವದಾ ಸುಳ್ಳು ನುಡಿಯುತ್ತಾ, ದೇವತೆ ಗುರು ಮುಂತಾದವರನ್ನು ನಿಂದಿಸುವರೋ ಅಂಥವರ ಭಾರದಿಂದ ನಾನು ಪೀಡಿತಳಾಗಿರುವೆನು.

೨೩. ಮಿತ್ರದ್ರೋಹಿಗಳು, ಉಪಕಾರಸ್ಮರಣೆಯಿಲ್ಲದವರು, ಸುಳ್ಳುಸಾಕ್ಷಿ ಹೇಳುವವರು, ನಂಬಿಸಿ ನಾಶಗೊಳಿಸುವವರು, ಅಡುವಿಟ್ಟ ವಸ್ತುಗಳನ್ನು ಅಪಹರಿಸುವವರು ಮುಂತಾದ ಪಾಪಿಗಳ ಭಾರವನ್ನು ನಾನು ಹೊರಲಾರೆನು.

೨೪. ಮಂಗಳಕರವಾದ ಶ್ರೀಹರಿಯ ದಿವ್ಯನಾಮಗಳನ್ನು ಯಾರು ವಿಕ್ರಯಿಸುವರೋ ಆ ಪಾಪಿಗಳ ಭಾರದಿಂದ ನಾನು ಪೀಡಿತಳಾಗಿರುವೆನು.

೨೫. ಪ್ರಾಣಿಹಿಂಸಕ, ಗುರುದ್ರೋಹಿ, ಗ್ರಾಮದ ಪುರೋಹಿತ, ಬೇಡರವ, ಶವದಹನ ಮಾಡುವವ, ಶೂದ್ರಾನ್ನಭೋಜಿ ಮುಂತಾದ ಪಾಪಿಗಳ ಭಾರವನ್ನು ನಾನು ಹೊರಲಾರೆನು.

೨೬. ದೇವತಾರಾಧನೆ, ಯಜ್ಞ, ಉಪವಾಸಾದಿವ್ರತಗಳನ್ನು ಬಿಟ್ಟು ಸ್ವೇಚ್ಛೆಯಿಂದಿರುವ ಮೂಢರ ಭಾರದಿಂದ ನಾನು ಪೀಡಿತಳಾಗಿದ್ದೇನೆ.

ಸದಾ ದ್ವಿಷಂತಿ ಯೇ ಪಾಪಾ ಗೋವಿಪ್ರಸುರವೈಷ್ಣವಾನ್ ।
ಹರಿಂ ಹರಿಕಥಾಂ ಭಕ್ತಿಂ ತೇಷಾಂ ಭಾರೇಣ ಪೀಡಿತಾ ॥ ೨೭ ॥

ಶಂಖಚೂಡಸ್ಯ ಭಾರೇಣ ಪೀಡಿತಾಹಂ ಯಥಾ ವಿಧೇ ।
ತತೋಧಿಕಾನಾಂ ದೈತ್ಯಾನಾಂ ಭಾರೇಣ ಪರಿಪೀಡಿತಾ ॥ ೨೮ ॥

ಇತ್ಯೇವಂ ಕಥಿತಂ ಸರ್ವಂ ಮದ್ವ್ಯಥಾಯಾ ನಿವೇದನಂ ।
ತ್ವಯಾ ಯದಿ ಸನಾಥಾಹಂ ಪ್ರತೀಕಾರಂ ಕುರು ಪ್ರಭೋ ॥ ೨೯ ॥

ಇತ್ಯೇವಮುಕ್ತ್ವಾ ವಸುಧಾ ರುರೋದ ಚ ಮುಹುರ್ಮುಹುಃ ।
ಬ್ರಹ್ಮಾ ತದ್ರೋದನಂ ದೃಷ್ಟ್ವಾ ತಾಮುವಾಚ ಕೃಪಾನಿಧಿಃ ॥ ೩೦ ॥

---

೨೭ ಗೋಬ್ರಾಹ್ಮಣರನ್ನೂ, ದೇವತೆಗಳನ್ನೂ, ವಿಷ್ಣುಭಕ್ತರನ್ನೂ, ಶ್ರೀಹರಿಯನ್ನೂ, ಹರಿಕಥೆ ಮತ್ತು ಹರಿಭಕ್ತಿಯನ್ನೂ ನಿಂದಿಸುವ ಪಾಪಿಗಳ ಭಾರದಿಂದ ನಾನು ಪೀಡಿತಳಾಗಿದ್ದೇನೆ.

೨೮ ಎಲೈ ಬ್ರಹ್ಮನೇ, ಶಂಖಚೂಡನೆಂಬ ರಾಕ್ಷಸನ ಭಾರದಿಂದ ನಾನು ಪೀಡಿತಳಾಗಿರುವಂತೆಯೇ, ಅವನಿಗಿಂತಲೂ ಬಲಿಷ್ಠರಾದ ರಾಕ್ಷಸರ ಭಾರದಿಂದ ಅತ್ಯಂತ ಪೀಡಿತಳಾಗಿದ್ದೇನೆ.

೨೯. ಈ ರೀತಿಯಾಗಿ ನನ್ನ ಮನೋವ್ಯಥೆಯ ಕಾರಣಗಳನ್ನೆಲ್ಲ ನಿನ್ನಲ್ಲಿ ವಿಜ್ಞಾಪಿಸಿಕೊಂಡಿರುವೆನು. ಎಲೈ ಪ್ರಭುವೇ, ನೀನು ನನ್ನ ರಕ್ಷಕನಾದರೆ ಇದಕ್ಕೆ ಉಚಿತವಾದ ಪ್ರತೀಕಾರವನ್ನು ಮಾಡು.

೩೦. ಭೂದೇವಿಯು ಈ ರೀತಿಯಾಗಿ ಹೇಳಿ ಪುನಃ ಪುನಃ ಗಟ್ಟಿಯಾಗಿ ಅಳಲಾರಂಭಿಸಿದಳು. ಆಕೆಯು ಅಳುವುದನ್ನು ನೋಡಿ ದಯಾಮಯನಾದ ಬ್ರಹ್ಮನು ಇಂತೆಂದನು

ಭಾರಂ ತವಾಪನೇಷ್ಯಾಮಿ ದಸ್ಯೂನಾಮುಪ್ಯುಪಾಯತಃ ।
ಉಪಾಯತೋಽಪಿ ಕಾರ್ಯಾಣಿ ಸಿದ್ಧ್ಯಂತ್ಯೇವ ವಸುಂಧರೇ ॥ ೩೧ ॥

ಕಾಲೇನ ಭಾರಹರಣಂ ಕರಿಷ್ಯತಿ ಮದೀಶ್ವರಃ ।
ಯಂತ್ರಂ ಮಂಗಲಕುಂಭಂ ಚ ಶಿವಲಿಂಗಂ ಚ ಕುಂಕುಮಂ ॥ ೩೨ ॥

ಮಧುಕಾಷ್ಠಂ ಚಂದನಂ ಚ ಕಸ್ತೂರೀಂ ತೀರ್ಥಮೃತ್ತಿಕಾಂ ।
ಖಡ್ಗಗಂಡಕಖಂಡಂ ಚ ಸ್ಫಾಟಿಕಂ ಪದ್ಮರಾಗಕಂ ॥ ೩೩ ॥

ಇಂದ್ರನೀಲಂ ಸೂರ್ಯಮಣಿಂ ರುದ್ರಾಕ್ಷಂ ಕುಶಮೂಲಕಂ ।
ಶಾಲಗ್ರಾಮಶಿಲಾಂ ಶಂಖಂ ತುಲಸೀಂ ಪ್ರತಿಮಾಂ ಜಲಂ ॥ ೩೪ ॥

ಶಂಖಂ ಪ್ರದೀಪಮಾಲಾಂ ಚ ಶಿಲಾಮರ್ಚ್ಯಾಂ ಚ ಘಂಟಿಕಾಂ ।
ನಿರ್ಮಾಲ್ಯಂ ಚೈವ ನೈವೇದ್ಯಂ ಹರಿದ್ವರ್ಣಮಣಿಂ ತಥಾ ।
ಗ್ರಂಥಿಯುಕ್ತಂ ಯಜ್ಞಸೂತ್ರಂ ದರ್ಪಣಂ ಶ್ವೇತಚಾಮರಂ ॥ ೩೫ ॥

---

೩೧. ಎಲೌ ವಸುಂಧರೆಯೇ, ನಿನಗುಂಟಾಗಿರುವ ರಾಕ್ಷಸರ ಭಾರವನ್ನು ನಾನು ಪರಿಹರಿಸಿಕೊಡುವೆನು ಕಾರ್ಯಗಳೆಲ್ಲವೂ ಉಪಾಯದಿಂದಲೇ ಕೈಗೂಡುವುವಲ್ಲವೇ ?

೩೨. ನಮ್ಮೆಲ್ಲರಿಗೂ ಒಡೆಯನಾದ ಶ್ರೀಕೃಷ್ಣಪರಮಾತ್ಮನು ಕಾಲಕ್ರಮದಲ್ಲಿ ನಿನ್ನ ಭಾರವನ್ನು ಪರಿಹರಿಸುವನು. ಎಲೌ ವಸುಂಧರೆಯೇ, ಯಾರು ನಿನ್ನ ಮೇಲೆ ಯಂತ್ರ, ಮಂಗಳಕಲಶ, ಶಿವಲಿಂಗ, ಮತ್ತು ಕುಂಕುಮಗಳೆನ್ನಿಡುವರೋ ಅವರು ಕಾಲಸೂತ್ರವೆಂಬ ನರಕದಲ್ಲಿ ಬಿದ್ದು ನರಳುವರು.

೩೩. ಕಬ್ಬು, ಚಂದನ, ಕಸ್ತೂರಿ, ಮತ್ತು ತೀರ್ಥಮೃತ್ತಿಕೆಗಳನ್ನೂ ಖಡ್ಗ ಗಂಡಕಗಳನ್ನೂ, ಸ್ಪಟಿಕ ಮತ್ತು ಪದ್ಮರಾಗ ಮಣಿಗಳನ್ನೂ ಭೂಮಿಯ ಮೇಲಿಡುವವರು ನರಕಭಾಜನರಾಗುವರು.

೩೪-೩೫. ಇಂದ್ರನೀಲ, ಸೂರ್ಯಮಣಿ, ರುದ್ರಾಕ್ಷ ಮತ್ತು ದರ್ಭೆಯ ಬೇರುಗಳನ್ನೂ, ಶಾಲಿಗ್ರಾಮ, ಶಂಖ, ತುಳಸಿ ಮತ್ತು ದೇವತಾಪ್ರತಿಮೆಗಳನ್ನೂ, ದೀಪಮಾಲೆ, ಪೂಜಾರ್ಹವಾದ ಶಿಲೆ ಮತ್ತು ಗಂಟೆಗಳನ್ನೂ, ದೇವತಾನಿರ್ಮಾಲ್ಯ, ಮತ್ತು ನಿವೇದಿತ ವಸ್ತುಗಳನ್ನೂ, ಪಚ್ಚೆಮಣಿಯನ್ನೂ ಭೂಮಿಯ ಮೇಲಿಡುವವರು ಕಾಲಸೂತ್ರವೆಂಬ ನರಕದಲ್ಲಿ ಬಿದ್ದು ನರಳುವರು.

ಗೋರೋಚನಾಂ ಚ ಮುಕ್ತಾಂ ಚ ಶುಕ್ತಿಂ ಮಾಣಿಕ್ಯಮೇವ ಚ ।
ಪುರಾಣಸಂಹಿತಾಂ ವಹ್ನಿಂ ಕರ್ಪೂರಂ ಪರಶುಂ ತಥಾ ॥ ೩೬ ॥

ರಜತಂ ಕಾಂಚನಂ ಚೈವ ಪ್ರವಾಲಂ ರತ್ನಮೇವ ಚ ।
ಕುಶಬೀಜಂ ತೀರ್ಥತೋಯಂ ಗವ್ಯಂ ಗೋಮೂತ್ರಗೋಮಯಂ ॥ ೩೭ ॥

ತ್ವಯಿ ಯೇ ಸ್ಥಾಪಯಿಷ್ಯಂತಿ ಮೂಢಾಶ್ಚೈತಾನಿ ಸುಂದರಿ ।
ತಿಷ್ಠಂತಿ ಕಾಲಸೂತ್ರೇ ತೇ ವರ್ಷಾಣಾಮಯುತಂ ಧ್ರುವಂ ॥ ೩೮ ॥

ಬ್ರಹ್ಮಾ ಪೃಥ್ವೀಂ ಸಮಾಶ್ವಾಸ್ಯ ದೇವತಾಭಿಸ್ತಯಾ ಸಹ ।
ಜಗಾಮ ಜಗತಾಂ ಧಾತಾ ಕೈಲಾಸಂ ಶಂಕರಾಲಯಂ ॥ ೩೯ ॥

ಗತ್ವಾ ತಮಾಶ್ರಮಂ ರಮ್ಯಂ ದದರ್ಶ ಶಂಕರಂ ವಿಧಿಃ ।
ವಸಂತಮಕ್ಷಯಮವಟಮೂಲೇ ಸ್ವಃಸರಿತಸ್ತಟೇ ॥ ೪೦ ॥

---

೩೬. ಗೋರೋಚನ, ಮುತ್ತು, ಕಪ್ಪೆಚಿಪ್ಪು, ಮತ್ತು ಮಾಣಿಕ್ಯಗಳನ್ನೂ, ಪುರಾಣಗ್ರಂಥ, ಅಗ್ನಿ, ಕರ್ಪೂರ ಮತ್ತು ಕೊಡಲಿಯನ್ನೂ ಭೂಮಿಯ ಮೇಲಿಡುವವರು ಕಾಲಸೂತ್ರವೆಂಬ ನರಕಕ್ಕೆ ಹೋಗುವರು

೩೭–೩೮. ಬೆಳ್ಳಿ ಭಂಗಾರಗಳನ್ನೂ, ಹವಳರತ್ನಗಳನ್ನೂ, ದರ್ಭೆಯಬೀಜ, ತೀರ್ಥೋದಕ, ಗಂಜಲ, ಸಗಣಿ, ಮುಂತಾದುವುಗಳನ್ನೂ ಭೂಮಿಯ ಮೇಲಿಡುವ ಮೂಢರು ಹತ್ತು ಸಾವಿರ ವರ್ಷಗಳ ಕಾಲ ಕಾಲಸೂತ್ರವೆಂಬ ನರಕದಲ್ಲಿ ತೊಳಲುವರು.

೩೯. ಈ ರೀತಿಯಾಗಿ ಬ್ರಹ್ಮನು ಪೃಥ್ವೀದೇವಿಯನ್ನು ಸಾಂತ್ವನಗೊಳಿಸಿ, ಆಕೆ ಮತ್ತು ದೇವತೆಗಳೊಡಗೂಡಿ ಶಂಕರನ ನಿವಾಸಸ್ಥಾನವಾದ ಕೈಲಾಸಕ್ಕೆ ತೆರಳಿದನು.

೪೦. ಬ್ರಹ್ಮನು ಕೈಲಾಸಪರ್ವತದ ಆಶ್ರಮಕ್ಕೆ ಹೋಗಿ, ದೇವಗಂಗಾ ತೀರದಲ್ಲಿರುವ ಅಕ್ಷಯ ವಟವೃಕ್ಷದ ಕೆಳಗೆ ಮಂಡಿಸಿರುವ ಶಂಕರನ ದಿವ್ಯ ಸುಂದರ ಮೂರ್ತಿಯನ್ನು ಕಂಡನು.

ವ್ಯಾಘ್ರಚರ್ಮಪರೀಧಾನಂ ದಕ್ಷಕನ್ಯಾಸ್ಥಿಭೂಷಣಂ ।
ತ್ರಿಶೂಲಪಟ್ಟಿಶಧರಂ ಪಂಚವಕ್ತ್ರಂ ತ್ರಿಲೋಚನಂ ॥ ೪೧ ॥

ನಾನಾಸಿದ್ಧೈಃ ಪರಿವೃತಂ ಯೋಗೀಂದ್ರಗಣಸೇವಿತಂ ।
ಪರಿತೋಽಪ್ಸರಸಾಂ ನೃತ್ಯಂ ಪಶ್ಯಂತಂ ಸಸ್ಮಿತಂ ಮುದಾ ॥ ೪೨ ॥

ಗಂಧರ್ವಾಣಾಂ ಚ ಸಂಗೀತಂ ಶೃಣ್ವಂತಂ ಕುತೂಹಲಾತ್ ।
ಪಶ್ಯಂತೀಂ ಪಾರ್ವತೀಂ ಪ್ರೀತ್ಯಾ ಪಶ್ಯಂತಂ ವಕ್ರಚಕ್ಷುಷಾ ॥ ೪೩ ॥

ಜಪಂತಂ ಪಂಚವಕ್ತ್ರೇಣ ಹರೇರ್ನಾಮೈಕಮಂಗಲಂ ।
ಮಂದಾಕಿನೀಪದ್ಮಬೀಜಮಾಲಯಾ ಪುಲಕಾಂಕಿತಂ ॥ ೪೪ ॥

ಏತಸ್ಮಿನ್ನಂತರೇ ಬ್ರಹ್ಮಾ ತಸ್ಥಾವಗ್ರೇ ಸ ಧೂರ್ಜಟೇಃ ।
ಪೃಥಿವ್ಯಾ ಸುರಸಂಘೈಶ್ಚ ಸಾರ್ಧಂ ಪ್ರಣತಕಂಧರೈಃ ॥ ೪೫ ॥

---

೪೧. ಹುಲಿಯ ಚರ್ಮವನ್ನು ಹೊದೆದು, ದಾಕ್ಷಾಯಣಿಯ ಮೂಳೆಗಳನ್ನು ಮಾಲೆಯಾಗಿ ಧರಿಸಿ, ಕೈಗಳಲ್ಲಿ ತ್ರಿಶೂಲ, ಪಟ್ಟಿಶ ಮುಂತಾದ ಆಯುಧಗಳನ್ನು ಹಿಡಿದಿರುವ, ಐದು ಮುಖಗಳುಳ್ಳ ಆ ತ್ರಿಲೋಚನನ್ನು ಕಂಡನು.

೪೨. ಅನೇಕ ಸಿದ್ಧಪುರುಷರಿಂದ ಪರಿವೃತನಾಗಿ, ಯೋಗಿಶ್ರೇಷ್ಠರ ಸೇವೆಯನ್ನು ಸ್ವೀಕರಿಸುತ್ತಿದ್ದ ಆ ಶಂಕರನು, ತನ್ನ ಸುತ್ತಲೂ ನಡೆಯುತ್ತಿದ್ದ ಅಪ್ಸರಸ್ತ್ರೀಯರ ನರ್ತನವನ್ನು ಸ್ಮಿತವದನದಿಂದ ನೋಡುತ್ತ ಕುಳಿತಿದ್ದನು.

೪೩. ಗಂಧರ್ವರ ಸಂಗೀತವನ್ನು ಕುತೂಹಲದಿಂದ ಕೇಳುತ್ತಿರುವ ಆ ಶಿವನು ಪ್ರೀತಿಪೂರ್ವಕವಾಗಿ ಕಟಾಕ್ಷದಿಂದ ತನ್ನನ್ನೇ ನೋಡುತ್ತಿದ್ದ ಪಾರ್ವತಿಯನ್ನು ತಾನೂ ಪ್ರೀತಿಪೂರ್ವಕವಾಗಿ ನೋಡುತ್ತಿದ್ದನು.

೪೪. ದೇವಗಂಗೆಯಲ್ಲಿ ಹುಟ್ಟಿದ ತಾವರೆಯ ಬೀಜಗಳಿಂದ ಮಾಡಿದ ಜಪಮಾಲೆಯನ್ನು ಹಿಡಿದು ತನ್ನ ಐದು ಮುಖಗಳಿಂದಲೂ ಶ್ರೀಹರಿಯ ಮಂಗಳ ನಾಮಗಳನ್ನು ಜಪಿಸುತ್ತಿದ್ದನು.

೪೫. ಆ ಸಮಯದಲ್ಲಿ ಬ್ರಹ್ಮನು ಭಕ್ತಿಯಿಂದ ತಲೆಬಾಗಿಸಿರುವ ಭೂದೇವಿ ಮತ್ತು ದೇವತೆಗಳೊಡಗೂಡಿ ಆ ಶಿವನ ಮುಂದೆ ಬಂದು ನಿಂತನು.

ಉತ್ತಸ್ಥೌ ಶಂಕರಃ ಶೀಘ್ರಂ ಭಕ್ತ್ಯಾ ದೃಷ್ಟ್ವಾ ಜಗದ್ಗುರುಂ ।
ನನಾಮ ಮೂರ್ಧ್ನಾ ಸಂಪ್ರೀತ್ಯಾ ಲಬ್ಧವಾನಾಶಿಷಂ ತತಃ ॥ ೪೬ ॥

ಪ್ರಣೇಮುರ್ದೇವತಾಃ ಸರ್ವೇ ಶಂಕರಂ ಚಂದ್ರಶೇಖರಂ ।
ಪ್ರಣನಾಮ ಧರಾ ಭಕ್ತ್ಯಾ ಚಾಶಿಷಂ ಯುಯುಜೇ ಹರಃ ॥ ೪೭ ॥

ವೃತ್ತಾಂತಂ ಕಥಯಾಮಾಸ ಪಾರ್ವತೀಶಂ ಪ್ರಜಾಪತಿಃ ।
ಶ್ರುತ್ವಾ ನತಮುಖಸ್ತೂರ್ಣಂ ಶಂಕರೋ ಭಕ್ತವತ್ಸಲಃ ॥ ೪೮ ॥

ಭಕ್ತಾಪಾಯಂ ಸಮಾಕರ್ಣ್ಯ ಪಾರ್ವತೀಪರಮೇಶ್ವರೌ ।
ಬಭೂವತುಸ್ತೌ ದುಃಖಾರ್ತೌ ಬೋಧಯಾಮಾಸ ತೌ ವಿಧಿಃ ॥ ೪೯ ॥

ತತೋ ಬ್ರಹ್ಮಾ ಮಹೇಶಶ್ಚ ಸುರಸಂಘಾನ್ವಸುಂಧರಾಂ ।
ಗೃಹಂ ಪ್ರಸ್ಥಾಪಯಾಮಾಸ ಸಮಾಶ್ವಾಸ್ಯ ಪ್ರಯತ್ನತಃ ॥ ೫೦ ॥

---

೪೬ ಜಗದೊಡೆಯನಾದ ಬ್ರಹ್ಮನು ಬಂದುದನ್ನು ನೋಡಿ ಶಂಕರನು ಭಕ್ತಿಯಿಂದ ಜಾಗ್ರತೆಯಾಗಿ ಮೇಲಕ್ಕೆದ್ದು ತಲೆಬಾಗಿ ನಮಸ್ಕರಿಸಿ, ಅವನ ಆಶೀರ್ವಾದ ಪಡೆದನು.

೪೭ ಇತ್ತ ಎಲ್ಲ ದೇವತೆಗಳೂ ಚಂದ್ರಶೇಖರನಾದ ಶಂಕರನಿಗೆ ನಮಸ್ಕರಿಸಿದರು. ಭೂದೇವಿಯೂ ಕೂಡ ಭಕ್ತಿಯಿಂದ ನಮಸ್ಕರಿಸಲು ಹರನು ಅವರೆಲ್ಲರಿಗೂ ಶುಭವಾಗಲೆಂದು ಹರಸಿದನು.

೪೮ ಅನಂತರ ಪ್ರಜಾಪತಿಯು, ಪಾರ್ವತೀಪತಿಗೆ ತಾವು ಬಂದಿರುವ ಸಮಾಚಾರವನ್ನು ತಿಳಿಸಿದನು. ಭಕ್ತವತ್ಸಲನಾದ ಶಂಕರನು ಅದನ್ನು ಕೇಳಿದ ಕೂಡಲೇ ತಲೆಬಾಗಿದನು.

೪೯. ತಮ್ಮ ಭಕ್ತರಿಗುಂಟಾಗಿರುವ ತೊಂದರೆಯನ್ನು ಕೇಳಿ ಪಾರ್ವತೀ ಪರಮೇಶ್ವರರು ದುಃಖಿತರಾಗಲು ಬ್ರಹ್ಮನು ಅವರನ್ನು ಸಮಾಧಾನಗೊಳಿಸಿದನು.

೫೦. ಅನಂತರ ಬ್ರಹ್ಮ ಮತ್ತು ಮಹೇಶ್ವರರು, ಆ ದೇವತೆಗಳನ್ನೂ, ಭೂದೇವಿಯನ್ನೂ ಪ್ರಯತ್ನಪೂರ್ವಕವಾಗಿ ಸಮಾಧಾನಗೊಳಿಸಿ ಅವರವರ ಮನೆಗೆ ಹಿಂತಿರುಗಿಸಿದರು.

ತತೋ ದೇವೇಶ್ವರೈಸ್ತೂರ್ಣಮಾಗತ್ಯ ಧರ್ಮಮಂದಿರಂ |
ಸಹ ತೇನ ಸಮಾಲೋಚ್ಯ ಪ್ರಜಗ್ಮುರ್ಭವನಂ ಹರೇಃ || ೫೧ ||

ವೈಕುಂಠಂ ಪರಮಂ ಧಾಮ ಜರಾಮೃತ್ಯುಹರಂ ಪರಂ |
ವಾಯುನಾ ಧಾರ್ಯಮಾಣಂ ಚ ಬ್ರಹ್ಮಾಂಡಾದೂರ್ಧ್ವಮುತ್ತಮಂ |
ಕೋಟಿಯೋಜನಮೂರ್ಧ್ವಂ ಚ ಬ್ರಹ್ಮಲೋಕಾತ್ಸನಾತನಂ || ೫೨ ||

ವರ್ಣನೀಯಂ ನ ಕವಿಭಿರ್ವಿಚಿತ್ರಂ ರತ್ನನಿರ್ಮಿತಂ |
ಪದ್ಮರಾಗೈರಿಂದ್ರನೀಲೈ ರಾಜಮಾರ್ಗೈರ್ವಿಭೂಷಿತಂ || ೫೩ ||

ತೇ ಮನೋಯಾಯಿನಃ ಸರ್ವೇ ಸಂಪ್ರಾಪುಸ್ತಂ ಮನೋಹರಂ |
ಹರೇರಂತಃಪುರಂ ಗತ್ವಾ ದದೃಶುಃ ಶ್ರೀಹರಿಂ ಸುರಾಃ || ೫೪ ||

---

೫೧ ಅನಂತರದಲ್ಲಿ ಬ್ರಹ್ಮ ಮತ್ತು ಈಶ್ವರರು ಧರ್ಮಪುರುಷನ ನಿವಾಸ ಸ್ಥಾನಕ್ಕೆ ಬಂದು ಅವನೊಡನೆ ಮಂತ್ರಾಲೋಚನೆ ಮಾಡಿ ಶ್ರೀಹರಿಯ ನಿವಾಸ ಸ್ಥಾನಕ್ಕೆ ಹೋದರು.

೫೨. ಬ್ರಹ್ಮಾಂಡದ ಮೇಲುಭಾಗದಲ್ಲಿ ಬ್ರಹ್ಮಲೋಕಕ್ಕಿಂತ ಕೋಟಿಯೋಜನ ಮೇಲಿರುವ ಅನಾದಿಯೂ ಪರಮಪದವೂ ಆದ ಆ ವೈಕುಂಠವು ವಾಯುವಿನಿಂದ ಧೃತವಾಗಿ ಜರಾಮರಣಪರಿಹಾರಕವಾಗಿದ್ದಿತು.

೫೩ ಪದ್ಮರಾಗ, ಇಂದ್ರನೀಲ ಮುಂತಾದ ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿ ರಾಜಬೀದಿಗಳಿಂದ ಶೋಭಿತವಾದ ಆ ವಿಚಿತ್ರಲೋಕವನ್ನು ಕವಿಗಳಿಗೂ ವರ್ಣಿಸಲು ಅಳವಲ್ಲ

೫೪. ಮನೋವೇಗದಲ್ಲಿ ಹೋಗಬಲ್ಲ ಬ್ರಹ್ಮಾದಿದೇವತೆಗಳು ವೈಕುಂಠ ಲೋಕಕ್ಕೆ ಜಾಗ್ರತೆಯಾಗಿ ಬಂದು ಶ್ರೀಹರಿಯ ಅಂತಃಪುರವನ್ನು ಹೊಕ್ಕು ಶ್ರೀಹರಿಯ ದರ್ಶನ ಮಾಡಿದರು

ರತ್ನಸಿಂಹಾಸನಸ್ಥಂ ಚ ರತ್ನಾಲಂಕಾರಭೂಷಿತಂ ।
ರತ್ನಕೇಯೂರವಲಯೈರತ್ನನೂಪುರಭೂಷಿತಂ ॥ ೫೫ ॥

ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತಂ ।
ಪೀತವಸ್ತ್ರಪರೀಧಾನಂ ವನಮಾಲಾವಿಭೂಷಿತಂ ॥ ೫೬ ॥

ಶಾಂತಂ ಸರಸ್ವತೀಕಾಂತಂ ಲಕ್ಷ್ಮೀಧೃತಪದಾಂಬುಜಂ ।
ಕೋಟಿಕಂದರ್ಪಲೀಲಾಭಂ ಸ್ಮಿತವಕ್ತ್ರಂ ಚತುರ್ಭುಜಂ ॥ ೫೭ ॥

ಸುನಂದನಂದಕುಮುದೈಃ ಪಾರ್ಷದೈರುಪಸೇವಿತಂ ।
ಚಂದನೋಕ್ಷಿತಸರ್ವಾಂಗಂ ಸುರತ್ನಮುಕುಟೋಜ್ಜ್ವಲಂ ॥ ೫೮ ॥

ತಂ ಪ್ರಣೇಮುಃ ಸುರೇಂದ್ರಾಶ್ಚ ಭಕ್ತ್ಯಾ ಬ್ರಹ್ಮಾದಯೋ ಮುನೇ ।
ತುಷ್ಟುವುಃ ಪರಯಾ ಭಕ್ತ್ಯಾ ಭಕ್ತಿನಮ್ರಾತ್ಮಕಂಧರಾಃ ।
ಪರಮಾನಂದಭಾರಾರ್ತಾಃ ಪುಲಕಾಂಚಿತವಿಗ್ರಹಾಃ ॥ ೫೯ ॥

---

೫೫. ಅಲ್ಲಿ ಶ್ರೀಹರಿಯು ರತ್ನಾಲಂಕಾರಗಳಿಂದ ಭೂಷಿತನಾಗಿ, ರತ್ನದ ಕಾಲ್ಗೊಲಸುಗಳನ್ನು ಧರಿಸಿ, ರತ್ನದ ಬಾಹುಪುರಿಗಳನ್ನು ತೊಟ್ಟು ರತ್ನಾಸಿಂಹಾಸನದಲ್ಲಿ ಮಂಡಿಸಿದ್ದನು.

೫೬. ಕಪೋಲಗಳಲ್ಲಿ ಪ್ರತಿಬಿಂಬಿತವಾದ ರತ್ನಕುಂಡಲಗಳಿಂದ ಶೋಭಿತನಾಗಿ, ಪೀತಾಂಬರವನ್ನುಟ್ಟು ವನಮಾಲೆಯನ್ನು ಕಂಠದಲ್ಲಿ ಧರಸಿದ್ದನು

೫೭. ಶಾಂತಾಕಾರನೂ, ಸ್ಮಿತವದನನೂ, ಚತುರ್ಭುಜನೂ, ಕೋಟಿಮನ್ಮಥರ ಸೌಂದರ್ಯದಿಂದ ಶೋಭಿತನೂ, ಸರಸ್ವತೀಕಾಂತನೂ ಆದ ಆ ಶ್ರೀಹರಿಯ ಪಾದ ಕಮಲಗಳನ್ನು ಲಕ್ಷ್ಮೀದೇವಿಯು ಸೇವಿಸುತ್ತಿದ್ದಳು.

೫೮. ಸರ್ವಾಂಗಗಳಿಗೂ ದಿವ್ಯ ಚಂದನವನ್ನು ಲೇಪಿಸಿಕೊಂಡು, ರತ್ನದ ಕಿರೀಟದಿಂದ ಶೋಭಿತನಾದ ಆ ಹರಿಯನ್ನು ಸನಂದ, ನಂದ, ಕುಮುದ, ಮುಂತಾದ ಪಾರ್ಷದರು ಸೇವಿಸುತ್ತಿದ್ದರು.

೫೯. ಈ ರೀತಿಯಾಗಿದ್ದ ಶ್ರೀಹರಿಗೆ ಬ್ರಹ್ಮನೇ ಮೊದಲಾದ ದೇವತೆಗಳು ಪರಮಭಕ್ತಿಯಿಂದ ನಮಸ್ಕರಿಸಿ ಆನಂದದಿಂದ ರೋಮಾಂಚಿತಶರೀರರಾಗಿ ಸುತ್ತಿಸ ಲಾರಂಭಿಸಿದರು.

|| ಬ್ರಹ್ಮೋವಾಚ ||

ನಮಾಮಿ ಕಮಲಾಕಾಂತಂ ಶಾಂತಂ ಸರ್ವೇಶಮಚ್ಯುತಂ |
ವಯಂ ಯಸ್ಯ ಕಲಾಭೇದಾಃ ಕಲಾಂಶಕಲಯಾ ಸುರಾಃ || ೬೦ ||

ಮನವಶ್ಚ ಮುನೀಂದ್ರಾಶ್ಚ ಮಾನುಷಾಶ್ಚ ಚರಾಚರಾಃ |
ಕಲಾಕಲಾಂಶಕಲಯಾ ಭೂತಾಸ್ತ್ವತ್ತೋ ನಿರಂಜನ || ೬೧ ||

|| ಶಂಕರ ಉವಾಚ ||

ತ್ವಾಮಕ್ಷಯಮಕ್ಷರಂ ವಾ ರಾಮಮವ್ಯಕ್ತಮೀಶ್ವರಂ |
ಅನಾದಿಮಾದಿಮಾನಂದರೂಪಿಣಂ ಸರ್ವರೂಪಿಣಂ || ೬೨ ||

ಅಣಿಮಾದಿಕಸಿದ್ಧೀನಾಂ ಕಾರಣಂ ಸರ್ವಕಾರಣಂ |
ಸಿದ್ಧಿಜ್ಞಂ ಸಿದ್ಧಿದಂ ಸಿದ್ಧಿರೂಪಂ ಕಃ ಸ್ತೋತುಮೀಶ್ವರಃ || ೬೩ ||

---

೬೦. ಬ್ರಹ್ಮ:—ಯಾರ ಒಂದು ಕಲೆಯಿಂದ ನಾವು ಅವತರಿಸಿರುವೆವೋ, ಯಾರ ಕಲಾಂಶದಿಂದ ದೇವತೆಗಳೆಲ್ಲರೂ ಆವಿರ್ಭವಿಸಿರುವೆವೋ, ಸರ್ವೇಶ್ವರನೂ, ನಾಶರಹಿತನೂ, ಲಕ್ಷ್ಮೀಕಾಂತನೂ, ಆದ ಆ ಶಾಂತಮೂರ್ತಿಗೆ ನಮಸ್ಕರಿಸುವೆನು.

೬೧. ಎಲೈ ನಿರ್ಲಿಪ್ತನಾದ ಪರಮಾತ್ಮನೇ ನಿನ್ನ ಕಲೆ ಮತ್ತು ಕಲಾಂಶಗಳಿಂದ ಮನು ಮುನಿ ಮಾನವರೂ, ಚರಾಚರಾದಿ ಜಂತುಗಳೂ ಜನಿಸಿರುವರು.

೬೨–೬೩. ಶಂಕರ:—ಎಲೈ ಸರ್ವಕಾರಣನಾದ ಪರಮಾತ್ಮನೇ, ನಾಶರಹಿತನೂ, ನಿತ್ಯಾನಂದಸ್ವರೂಪನೂ, ಸರ್ವೇಶ್ವರನೂ ಆದ ನೀನು ಅನಾದಿಯೆನಿಸಿಯೂ ಸರ್ವಭೂತಾತ್ಮಕನಾದುದರಿಂದ ಆದಿಯುಳ್ಳವನೆನಿಸಿಯೂ ಇರುವೆ. ಅಣಿಮಾದಿ ಅಷ್ಟಸಿದ್ಧಿಪ್ರದಾಯಕನೂ, ಸಿದ್ಧಿಸ್ವರೂಪನೂ ಆದ ನಿನ್ನನ್ನು ಹೊಗಳಲು ಸಮರ್ಥರಾರು?

|| ಧರ್ಮ ಉವಾಚ ||

ವೇದೇ ನಿರೂಪಿತಂ ವಸ್ತು ವರ್ಣನೀಯಂ ವಿಚಕ್ಷಣೈಃ ।
ವೇದೇಽನಿರ್ವಚನೀಯಂ ಯತ್ತನ್ನಿರ್ವಕ್ತುಂ ಚ ಕಃ ಕ್ಷಮಃ ।
ಯಸ್ಯ ಸಂಭಾವನೀಯಂ ಯದ್ಗುಣರೂಪಂ ನಿರಂಜನಂ || ೬೪ ||

ತದತಿರಿಕ್ತಂ ಸ್ತವನಂ ಕಿಮಹಂ ಸ್ತೌಮಿ ನಿರ್ಗುಣಂ ।
ಬ್ರಹ್ಮಾದೀನಾಮಿದಂ ಸ್ತೋತ್ರಂ ಷಟ್‌ಶ್ಲೋಕೋಕ್ತಂ ಮಹಾಮುನೇ ||

ಪಠಿತ್ವಾ ಮುಚ್ಯತೇ ದುರ್ಗಾದ್ವಾಂಛಿತಂ ಚ ಲಭೇನ್ನರಃ ।
ದೇವಾನಾಂ ಸ್ತವನಂ ಶ್ರುತ್ವಾ ತಾನುವಾಚ ಹರಿಃ ಸ್ವಯಂ || ೬೬ ||

ಗೋಲೋಕಂ ಯಾತ ಯೂಯಂ ಚ ಯಾಮಿ ಪಶ್ಚಾಚ್ಛ್ರಿಯಾ ಸಹ ।
ನರನಾರಾಯಣೌ ತೌ ದ್ವೌ ಶ್ವೇತದ್ವೀಪನಿವಾಸಿನೌ || ೬೭ ||

---

೬೪-೬೫. ಧರ್ಮ :—ವೇದದಲ್ಲಿ ವರ್ಣಿತವಾದ ವಿಷಯವನ್ನು ಕುಶಲಿಗಳಾದ ಕವಿಗಳು ವರ್ಣಿಸಬಲ್ಲರು, ವೇದದಿಂದಲೂ ಬಣ್ಣಿಸಲಾಗದ ಪರಾತ್ಪರ ವಸ್ತುಗಳನ್ನು ಯಾರು ತಾನೆ ಬಣ್ಣಿಸಿಯಾರು? ಯಾರಿಗೆ ಗುಣರೂಪಾದಿಗಳುಂಟೋ ಆತನನ್ನು ಬಣ್ಣಿಸಬಹುದು. ಗುಣರೂಪಗಳಿಗೆ ಅತಿರಿಕ್ತನೂ, ನಿರ್ಲಿಪ್ತನೂ ಆದ ಪರಮಾತ್ಮಸ್ವರೂಪವನ್ನು ನಾನೆಂತು ನುತಿಸಲಿ?

೬೬ ಎಲೈ ನಾರದ ಮಹರ್ಷಿಯೇ, ಬ್ರಹ್ಮ, ಶಂಕರ, ಮತ್ತು ಧರ್ಮ ಪುರುಷರು ಸ್ತುತಿಸಿರುವ ಈ ಆರು ಶ್ಲೋಕಗಳನ್ನು ಪಠಿಸುವವರು ಮುಕ್ತಿಹೊಂದುವರು. ಅಲ್ಲದೆ ದುರ್ಗಾದೇವಿಯ ಪ್ರಸಾದದಿಂದ ತಮ್ಮ ಇಷ್ಟಾರ್ಥವನ್ನು ಹೊಂದಬಹುದು. ಇತ್ತ ದೇವತೆಗಳ ಸ್ತೋತ್ರವನ್ನು ಕೇಳಿ ಶ್ರೀಹರಿಯು ಅವರನ್ನು ಕುರಿತಿಂತೆಂದನು.

೬೭. ನೀವೆಲ್ಲರೂ ಗೋಲೋಕಕ್ಕೆ ಹೋಗಿರಿ. ನಾನು ಅನಂತರ ಲಕ್ಷ್ಮೀದೇವಿಯೊಡನೆ ಬರುವೆನು. ಶ್ವೇತದ್ವೀಪನಿವಾಸಿಗಳಾದ ನರನಾರಾಯಣರೂ ಗೋಲೋಕಕ್ಕೆ ಬರುವರು.

ಏತೇ ಯಾಸ್ಯಂತಿ ಗೋಲೋಕಂ ತಥಾ ದೇವೀ ಸರಸ್ವತೀ ।
ಅನಂತಾ ಮಮ ಮಾಯಾ ಚ ಕಾರ್ತಿಕೇಯೋ ಗಣಾಧಿಪಃ ।
ಸಾವಿತ್ರೀ ವೇದಮಾತಾ ಚ ಪಶ್ಚಾದ್ಯಾಸ್ಯಂತಿ ನಿಶ್ಚಿತಂ ॥ ೬೮ ॥

ತತ್ರಾಹಂ ದ್ವಿಭುಜಂ ಕೃಷ್ಣೋ ಗೋಪೀಭೀ ರಾಧಯಾ ಸಹ ।
ಅತ್ರಾಹಂ ಕಮಲಾಯುಕ್ತಃ ಸುನಂದಾದಿಭಿರಾವೃತಃ ॥ ೬೯ ॥

ನಾರಾಯಣಶ್ಚ ಕೃಷ್ಣೋಽಹಂ ಶ್ವೇತದ್ವೀಪನಿವಾಸಕೃತ್ ।
ಮಮೈವಾವಿಮಾ ಕಲಾಃ ಸರ್ವೇ ದೇವಾ ಬ್ರಹ್ಮಾದಯಃ ಸ್ಮೃತಾಃ ॥ ೭೦ ॥

ಕಲಾಕಲಾಂಶಕಲಯಾ ಸುರಾಸುರನರಾದಯಃ ।
ಗೋಲೋಕಂ ಯಾತ ಯೂಯಂ ಚ ಕಾರ್ಯಸಿದ್ಧಿರ್ಭವಿಷ್ಯತಿ ॥ ೭೧ ॥

---

೬೮. ಸರಸ್ವತೀದೇವಿಯೂ, ಮಾಯಾರೂಪಿಣಿಯಾದ ಸಾವಿತ್ರಿಯೂ ಅನಂತರದಲ್ಲಿ ಗೋಲೋಕಕ್ಕೆ ಬಂದು ಸೇರುವರು

೬೯. ಗೋಲೋಕದಲ್ಲಿ ನಾನು ದ್ವಿಭುಜನಾಗಿ ರಾಧೆಯೊಡನೆಯೂ, ಗೋಪಿಯರೊಡನೆಯೂ ಕೂಡಿ ಕೃಷ್ಣನೆನಿಸಿರುವೆನು. ಇಲ್ಲಿ ಲಕ್ಷ್ಮಿ ಮತ್ತು ಸುನಂದಾ ಮುಂತಾದವರಿಂದ ಪರಿವೃತನಾಗಿದ್ದೇನೆ.

೭೦. ಗೋಲೋಕದಲ್ಲಿ ಕೃಷ್ಣನೆನಿಸಿರುವ ನಾನೇ ಶ್ವೇತದ್ವೀಪದಲ್ಲಿ ನಾರಾಯಣನೆಂಬ ಹೆಸರಿನಿಂದ ನೆಲೆಸಿದ್ದೇನೆ. ಬ್ರಹ್ಮಾದಿ ದೇವತೆಗಳೆಲ್ಲರೂ ನನ್ನ ಕಲೆಯಿಂದಲೇ ಅವತರಿಸುವರು.

೭೧. ನನ್ನ ಕಲೆ, ಕಲಾಂಶಗಳಿಂದಲೇ ಸುರಾಸುರರೂ ಮಾನವಾದಿಗಳೂ ಜನಿಸಿರುವರು. ನೀವೆಲ್ಲರೂ ಗೋಲೋಕಕ್ಕೆ ಹೋಗಿರಿ ನಿಮ್ಮ ಇಷ್ಟಾರ್ಥವು ಕೈಗೂಡುವುದು.

ವಯಂ ಪಶ್ಚಾದ್ಗಮಿಷ್ಯಾಮೋ ಸರ್ವೇಷಾಮಿಷ್ಟಸಿದ್ಧಯೇ ।
ಇತ್ಯುಕ್ತ್ವಾ ವೈ ಸಭಾಮಧ್ಯೇ ವಿರರಾಮ ಹರಿಃ ಸ್ವಯಂ ॥ ೭೨ ॥

ಪ್ರಣಮ್ಯ ದೇವತಾಃ ಸರ್ವಾ ಜಗ್ಮುರ್ಗೋಲೋಕಮದ್ಭುತಂ ।
ವಿಚಿತ್ರಂ ಪರಮಂ ಧಾಮ ಜರಾಮೃತ್ಯುಹರಂ ಪರಂ ॥ ೭೩ ॥

ಊರ್ಧ್ವಂ ವೈಕುಂಠತೋ ಗಮ್ಯಂ ಪಂಚಾಶತ್ಕೋಟಿಯೋಜನಂ ।
ವಾಯುನಾ ಧಾರ್ಯಮಾಣಂ ಚ ನಿರ್ಮಿತಂ ಸ್ವೇಚ್ಛಯಾ ವಿಭೋಃ ॥ ೭೪ ॥

ತಮನಿರ್ವಚನೀಯಂ ಚ ದೇವಾಸ್ತೇ ಗಮನೋತ್ಸುಕಾಃ ।
ತೇ ಮನೋಯಾಯಿನಃ ಸರ್ವೇ ಸಂಪ್ರಾಪುರ್ವಿರಜಾತಟಂ ॥ ೭೫ ॥

ದೃಷ್ಟ್ವಾ ದೇವಾಃ ಸರಿತ್ತೀರಂ ವಿಸ್ಮಯಂ ಪರಮಂ ಯಯುಃ ।
ಶುದ್ಧಸ್ಫಟಿಕಸಂಕಾಶಂ ಸುವಿಸ್ತೀರ್ಣಂ ಮನೋಹರಂ ॥ ೭೬ ॥

೭೨. ನಿಮ್ಮೆಲ್ಲರ ಇಷ್ಟಾರ್ಥವನ್ನು ಪೂರ್ಣಗೊಳಿಸುವುದಕ್ಕಾಗಿ ನಾನು ಹಿಂದಿನಿಂದ ಬರುವೆನು. ಶ್ರೀಹರಿಯು ಸಭೆಯ ಮಧ್ಯದಲ್ಲಿ ದೇವತೆಗಳಿಗೆ ಹೀಗೆ ಅಭಯಕೊಟ್ಟು ಸುಮ್ಮನಾದನು

೭೩. ಆನಂತರ ದೇವತೆಗಳೆಲ್ಲರೂ ಶ್ರೀಹರಿಗೆ ನಮಸ್ಕರಿಸಿ ಜರಾಮರಣ ಪರಿಹಾರಕವೂ, ಅತ್ಯದ್ಭುತವೂ ಪರಮಪದವೂ ಎನಿಸದ ಗೋಲೋಕಕ್ಕೆ ತೆರಳಿದರು.

೭೪. ಆ ಲೋಕವು ಸರ್ವೇಶ್ವರನ ಸ್ವೇಚ್ಛೆಮಾತ್ರದಿಂದ ನಿರ್ಮಿತವಾಗಿ, ವೈಕುಂಠಲೋಕಕ್ಕಿಂತ ಐವತ್ತುಕೋಟಿಯೋಜನ ಮೇಲುಭಾಗದಲ್ಲಿ ವಾಯುವಿನಿಂದ ಧರಿಸಲ್ಪಟ್ಟಿದ್ದಿತು.

೭೫. ಅನಿರ್ವಚನೀಯವಾದ ಆ ಲೋಕಕ್ಕೆ ಹೋಗಲು ದೇವತೆಗಳು ಕುತೂಹಲಯುತರಾಗಿ, ಮನೋವೇಗದಿಂದ ಎಲ್ಲರೂ ವಿರಜಾನದಿಯ ದಡಕ್ಕೆ ಹೋಗಿ ಸೇರಿದರು.

೭೬. ಶುದ್ಧಸ್ಫಟಿಕದಂತೆ ಕಾಂತಿಯುತವಾಗಿಯೂ ಸಾಕಾದಷ್ಟು ವಿಸ್ತೀರ್ಣವಾಗಿಯೂ, ಮನೋಹರವಾಗಿಯೂ, ಇದ್ದ ಆ ನದಿಯ ದಡವನ್ನು ನೋಡಿ ದೇವತೆಗಳೆಲ್ಲರೂ ಆಶ್ಚರ್ಯಭರಿತರಾದರು.

ಮುಕ್ತಾಮಾಣಿಕ್ಯಪರಮಮಣಿರತ್ನಾಕರಾನ್ವಿತಂ ।
ಕೃಷ್ಣಶುಭ್ರಹರಿದ್ರಕ್ತಮಣಿರಾಜ ವಿರಾಜಿತಂ ॥ ೭೭ ॥

ಪ್ರವಾಲಾಂಕುರಮುದ್ಭೂತಂ ಕುತ್ರಚಿತ್ಸುಮನೋಹರಂ ।
ಪರಮಾಮೂಲ್ಯ ಸದ್ರತ್ನಾಕರರಾಜಿ ವಿಭೂಷಿತಂ ॥ ೭೮ ॥

ವಿಧೇರದೃಶ್ಯಮಾಶ್ಚರ್ಯಂ ನಿಧಿಶ್ರೇಷ್ಠಾಕರಾನ್ವಿತಂ ।
ಪದ್ಮರಾಗೇಂದ್ರನೀಲಾನಾಮಾಕರಂ ಕುತ್ರಚಿನ್ಮುನೇ ॥ ೭೯ ॥

ಕುತ್ರಚಿಚ್ಚ ಮರಕತಾಕರಶ್ರೇಣೀ ಸಮನ್ವಿತಂ ।
ಸ್ಯಮಂತಕಾಕರಂ ಕುತ್ರ ಕುತ್ರಚಿದ್ರುಚಕಾಕರಂ ॥ ೮೦ ॥

ಅಮೂಲ್ಯ ಪೀತವರ್ಣಾಭಂ ಮಣಿಶ್ರೇಷ್ಠಾಕರಾನ್ವಿತಂ ।
ರತ್ನಾಕರಂ ಕುತ್ರಚಿಚ್ಚ ಕುತ್ರಚಿತ್ಕೌಸ್ತುಭಾಕರಂ ॥ ೮೧ ॥

---

೭೭ ಮುತ್ತು ಮಾಣಿಕ್ಯ ಮುಂತಾದ ಶ್ರೇಷ್ಠರತ್ನಗಳಿಂದಲೂ, ಮರಕತ, ಪಚ್ಚೆ, ಪದ್ಮರಾಗ, ಪುಷ್ಯರಾಗ ಮುಂತಾದ ಶ್ರೇಷ್ಠ ಮಣಿಗಳಿಂದಲೂ ಆ ನದಿಯ ತೀರವು ಪರಿಪೂರ್ಣವಾಗಿದ್ದಿತು

೭೮. ಕೆಲವು ಕಡೆ ಅತ್ಯಂತ ಮನೋಹರವಾದ ಹವಳದ ಮಣಿಯ ಅಂಕುರಗಳು ಕಾಣಿಸುತ್ತಿದ್ದವು. ಅತ್ಯಂತ ಅಮೂಲ್ಯವಾದ ರತ್ನಗಳಿಗೆ ಆ ತೀರವು ಆಕರ (ಗಣಿ) ವಾಗಿದ್ದಿತು.

೭೯. ಎಲೈ ನಾರದಮುನಿಯೇ, ಶ್ರೇಷ್ಠನಿಧಿಗಳಿಗೂ, ಪದ್ಮರಾಗ, ಇಂದ್ರನೀಲ ಮುಂತಾದ ಮಣಿಗಳಿಗೂ ಆಕರವಾದ ಆ ತೀರವು ಬ್ರಹ್ಮಾದಿಗಳಿಗೆ ಅತ್ಯಾಶ್ಚರ್ಯವನ್ನುಂಟುಮಾಡಿತು.

೮೦. ಕೆಲವು ಕಡೆ ಮರಕತಮಣಿಗಳಿಂದಲೂ, ಕೆಲವೆಡೆ ಸ್ಯಮಂತಕ ಮಣಿಗಳಿಂದಲೂ, ಇನ್ನೂ ಕೆಲವುಕಡೆ ರುಚಕಮಣಿಗಳಿಂದಲೂ ಆ ತೀರವು ಪರಿಪೂರ್ಣವಾಗಿದ್ದಿತು.

೮೧. ಹೊಂಬಣ್ಣದ ಅಮೂಲ್ಯಮಣಿಗಳಿಂದ ಪರಿಪೂರ್ಣವಾದ ಆ ತೀರದಲ್ಲಿ ಕೆಲವು ಕಡೆ ಶ್ರೇಷ್ಠರತ್ನಗಳೂ ಮತ್ತೆ ಕೆಲವೆಡೆ ಕೌಸ್ತುಭಮಣಿಗಳೂ ತುಂಬಿದ್ದವು.

ಕುತ್ರಾನಿರ್ವಚನೀಯಾನಾಂ ಮಣೀನಾಮಾಕರಂ ಪರಂ ।
ಕುತ್ರಚಿತ್ಕುತ್ರಚಿದ್ರಮ್ಯವಿಹಾರಸ್ಥಲಮುತ್ತಮಂ ॥ ೮೨ ॥

ದೃಷ್ಟ್ವಾ ತು ಪರಮಾಶ್ಚರ್ಯಂ ಜಗ್ಮುಸ್ತತ್ಪಾರಮೀಶ್ವರಾಃ ।
ದದೃಶುಃ ಪರ್ವತಶ್ರೇಷ್ಠಂ ಶತಶೃಂಗಂ ಮನೋಹರಂ ॥ ೮೩ ॥

ಪಾರಿಜಾತತರೂಣಾಂ ಚ ವನರಾಜಿವಿರಾಜಿತಂ ।
ಕಲ್ಪವೃಕ್ಷೈಃ ಪರಿವೃತಂ ವೇಷ್ಟಿತಂ ಕಾಮಧೇನುಭಿಃ ॥ ೮೪ ॥

ಕೋಟಿಯೋಜನಮೂರ್ಧ್ವಂ ಚ ದೈರ್ಘ್ಯಂ ದಶಗುಣೋತ್ತರಂ ।
ಶೈಲಪ್ರಸ್ಥಪರಿಮಿತಂ ಪಂಚಾಶತ್ಕೋಟಿಯೋಜನಂ ॥ ೮೫ ॥

ಪ್ರಾಕಾರಾಕಾರಮಸ್ಯೈವ ಶಿಖರೇ ರಾಸಮಂಡಲಂ ।
ದಶಯೋಜನವಿಸ್ತೀರ್ಣಂ ವರ್ತುಲಾಕಾರಮುತ್ತಮಂ ॥ ೮೬ ॥

---

೮೨. ಕೆಲವು ಕಡೆ ವರ್ಣಿಸಲಸದಳವಾದ ಮಣಿಗಳಿಗೆ ಆಕರವಾಗಿದ್ದ ಆ ತೀರದಲ್ಲಿ ಅತ್ಯುತ್ತಮವಾದ ವಿಹಾರ ಸ್ಥಳಗಳಿದ್ದವು.

೮೩. ಈ ರೀತಿಯಾಗಿ ಅತ್ಯದ್ಭುತವಾಗಿದ್ದ ಆ ನದಿಯ ತೀರವನ್ನು ನೋಡಿ ಆಶ್ಚರ್ಯಗೊಂಡ ಬ್ರಹ್ಮಾದಿದೇವತೆಗಳು ಅದರ ಆಚೆಯ ದಡಕ್ಕೆ ಹೋಗಿ ಶತಶೃಂಗವೆಂಬ ಮನೋಹರವಾದ ಪರ್ವತವನ್ನು ನೋಡಿದರು.

೮೪. ಪಾರಿಜಾತ ಮತ್ತು ಕಲ್ಪವೃಕ್ಷಗಳ ವನರಾಜಿಯಿಂದ ಪರಿವೃತವಾಗಿದ್ದ ಆ ಪರ್ವತದಲ್ಲಿ ಅಸಂಖ್ಯ ಕಾಮಧೇನುಗಳು ನೆಲೆಸಿದ್ದವು.

೮೫. ಕೋಟಿಯೋಜನ ಎತ್ತರವಾಗಿಯೂ, ಅದರ ಹತ್ತರಷ್ಟು ದೀರ್ಘವಾಗಿಯೂ, ಇದ್ದ ಆ ಪರ್ವತವು ಐವತ್ತು ಕೋಟಿಯೋಜನ ವಿಸ್ತೀರ್ಣವಾಗಿದ್ದಿತು.

೮೬. ಕೋಟೆಯ ಆಕಾರದಲ್ಲಿರುವ ಆ ಪರ್ವತದ ಶಿಖರದಲ್ಲಿ ಹತ್ತು ಯೋಜನ ವಿಸ್ತೀರ್ಣವಾಗಿಯೂ, ವರ್ತುಲಾಕಾರವಾಗಿಯೂ, ಮನೋಹರವಾಗಿಯೂ ಇದ್ದ ರಾಸಮಂಡಲವಿದ್ದಿತು.

ಪುಷ್ಪೋದ್ಯಾನಸಹಸ್ರೇಣ ಪುಷ್ಪಿತೇನ ಸುಗಂಧಿನಾ ।
ಸಂಕುಲೇನ ಮಧುಘ್ರಾಣಾಂ ಸಮೂಹೇನ ಸಮನ್ವಿತಂ ॥ ೮೭ ॥

ಸುರತದ್ರವ್ಯಸಂಯುಕ್ತೈ ರಾಜಿತಂ ರತಿಮಂದಿರೈಃ ।
ರತ್ನಮಂಡಪಕೋಟೀನಾಂ ಸಹಸ್ರೇಣ ಸಮನ್ವಿತಂ ॥ ೮೮ ॥

ರತ್ನಸೋಪಾನಯುಕ್ತೇನ ಸದ್ರತ್ನಕಲಶೇನ ಚ ।
ಹರಿನ್ಮಣೀನಾಂ ಸ್ತಂಭೇನ ಶೋಭಿತೇನ ಚ ಶೋಭಿತಂ ॥ ೮೯ ॥

ಸಿಂದೂರವರ್ಣಮಣಿಭಿಃ ಪರಿತಃ ಖಚಿತೇನ ಚ ।
ಇಂದ್ರನೀಲೈರ್ಮಧ್ಯಗತೈರ್ಮಂಡಿತೇನ ಮನೋಹರೈಃ ॥ ೯೦ ॥

ರತ್ನಪ್ರಾಕಾರಸಂಯುಕ್ತಂ ಮಣಿಭೇದೈರ್ವಿರಾಜಿತಂ ।
ದ್ವಾರೈಃ ಕಪಾಟಸಂಯುಕ್ತೈಶ್ಚತುರ್ಭಿಶ್ಚ ವಿರಾಜಿತಂ ॥ ೯೧ ॥

---

೮೭. ಚೆನ್ನಾಗಿ ಅರಳಿ ಸುವಾಸನೆಯನ್ನು ಬೀರುತ್ತಿರುವ ಹೂವುಗಳಿಂದ ತುಂಬಿದ್ದ ಸಾವಿರಾರು ಹೂದೋಟಗಳು ಆ ಪರ್ವತದಲ್ಲಿ ಕಂಗೊಳಿಸುತ್ತಿದ್ದವು.

೮೮. ಸುರತಸುಖಕ್ಕೆ ಉಪಯುಕ್ತವಾದ ಸಾಮಗ್ರಿಯಿಂದ ಪರಿಪೂರ್ಣವಾದ ರತಿಗೃಹಗಳಿಂದಲೂ, ಕೋಟ್ಯಂತರ ರತ್ನ ಮಂಟಪಗಳಿಂದಲೂ ಆ ಪರ್ವತವು ಶೋಭಿಸುತ್ತಿದ್ದಿತು.

೮೯. ರತ್ನಸೋಪಾನಗಳಿಂದಲೂ, ಪಚ್ಚೆಯ ಕಂಭಗಳಿಂದಲೂ ಶೋಭಿಸುತ್ತಿದ್ದ ಆ ಮಂದಿರಗಳಲ್ಲಿ ರತ್ನಕಲಶಗಳು ಬೆಳಗುತ್ತಿದ್ದವು

೯೦. ಆ ಮಂದಿರಗಳಲ್ಲಿ ಸುತ್ತಲೂ ಚಂದ್ರವರ್ಣದ ಮಣಿಗಳನ್ನು ಮೆಟ್ಟಿ ಮಧ್ಯದಲ್ಲಿ ಮನೋಹರವಾದ ಇಂದ್ರನೀಲ ಮಣಿಗಳನ್ನು ಮೆಟ್ಟಿದ್ದರು.

೯೧. ರತ್ನದ ಕೋಟೆಗಳಲ್ಲಿ ವಿವಿಧ ಮಣಿಗಳನ್ನು ಮೆಟ್ಟಿದ್ದುದು ಮನೋಹರವಾಗಿದ್ದಿತು. ನಾಲ್ಕು ದಿಕ್ಕಿನಲ್ಲಿಯೂ, ರತ್ನಗಳನ್ನು ಮೆಟ್ಟಿರುವ ನಾಲ್ಕು ಬಾಗಿಲುಗಳಿದ್ದವು.

ರಜ್ಜುಗ್ರಂಥಿಸಮಾಯುಕ್ತಂ ರಸಾಲಪಲ್ಲವಾನ್ವಿತೈಃ ।
ಪರಿತಃ ಕದಲೀಸ್ತಂಭಸಮೂಹೈಶ್ಚ ಸಮನ್ವಿತಂ ॥ ೯೨ ॥

ಶುಕ್ಲಧಾನ್ಯಪರ್ಣಜಾಲಫಲದೂರ್ವಾಂಕುರಾನ್ವಿತಂ ।
ಚಂದನಾಗರುಕಸ್ತೂರೀ ಕುಂಕುಮದ್ರವಚರ್ಚಿತಂ ॥ ೯೩ ॥

ವೇಷ್ಟಿತಂ ಗೋಪಕನ್ಯಾನಾಂ ಸಮೂಹೈಃ ಕೋಟಿಶೋ ಮುನೇ ।
ರತ್ನಾಲಂಕಾರಸಂಯುಕ್ತೈ ರತ್ನಮಾಲಾವಿರಾಜಿತೈಃ ॥ ೯೪ ॥

ರತ್ನಕಂಕಣಕೇಯೂರ ರತ್ನನೂಪುರಭೂಷಿತೈಃ ।
ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತೈಃ ॥ ೯೫ ॥

ರತ್ನಾಂಗುಲೀಯಲಲಿತೈರ್ಹಸ್ತಾಂಗುಲಿವಿರಾಜಿತೈಃ ।
ರತ್ನಪಾಶಕಷಟ್ಕೈಶ್ಚ ಪದಾಂಗುಲಿವಿರಾಜಿತೈಃ ॥ ೯೬ ॥

---

೯೨. ಆ ಮಂದಿರಗಳಲ್ಲಿ ಬಾಳೆಯ ಕಂಭಗಳನ್ನೂ, ಮಾವಿನ ಚಿಗುರುಗಳನ್ನೂ ಚೆನ್ನಾಗಿ ಅಲಂಕರಿಸಿ ಗಂಟಿಕ್ಕಿರುವ ಕಂಕಣ ದಾರಗಳನ್ನು ಸಿದ್ಧಗೊಳಿಸಿದ್ದರು

೯೩. ಬಿಳೀ ಧಾನ್ಯಗಳೂ, ಮುತ್ತುಗ, ಅರಳಿ ಮುಂತಾದ ಎಲೆಗಳೂ, ಗರಿಕೆಯ ಚಿಗುರುಗಳೂ, ವಿವಿಧ ಫಲಗಳೂ, ಚಂದನ, ಅಗುರು, ಕಸ್ತೂರಿ, ಕುಂಕುಮ ಕೇಸರಿ ಮುಂತಾದ ಲೇಪನ ವಸ್ತುಗಳೂ ಅಲ್ಲಿ ಶೋಭಿಸುತ್ತಿದ್ದವು.

೯೪ ಎಲೈ ನಾರದಮುನಿಯೇ, ಅಲ್ಲಿ ರತ್ನಾಲಂಕಾರಗಳನ್ನು ತೊಟ್ಟು, ರತ್ನಮಾಲೆಗಳನ್ನು ಧರಿಸಿದ್ದ ಕೋಟ್ಯಂತರ ಗೋಪಸ್ತ್ರೀಯರು ವಿರಾಜಿಸುತ್ತಿದ್ದರು

೯೫. ರತ್ನನಿರ್ಮಿತವಾದ ಬಳೆ ಮತ್ತು ಬಾಹುಪುರಿಗಳನ್ನೂ, ರತ್ನದ ಕಾಲುಬಳೆಗಳನ್ನೂ ಧರಿಸಿದ್ದ ಆ ಕನ್ನಿಕೆಯರ ರತ್ನಕುಂಡಲಗಳು ಕಪೋಲಸ್ಥಳಗಳಲ್ಲಿ ಪ್ರತಿಬಿಂಬಿಸಿದ್ದವು.

೯೬. ಕೈಬೆರಳುಗಳಲ್ಲಿ ರತ್ನದ ಉಂಗುರಗಳೂ, ಕಾಲುಬೆರಳುಗಳಲ್ಲಿ ರತ್ನ ಪಾಶಕಗಳೂ ವಿರಾಜಿಸುತ್ತಿದ್ದವು.

ಭೂಷಿತೈಃ ರತ್ನಭೂಷಾಭಿಃ ಸದ್ರತ್ನಮುಕುಟೋಜ್ಜ್ವಲೈಃ ।
ಗಜೇಂದ್ರಮುಕ್ತಾಲಂಕಾರೈ ರ್ನಾಸಿಕಾಮಧ್ಯರಾಜಿತೈಃ ॥ ೯೭ ॥

ಸಿಂದೂರಬಿಂದುನಾಸಾರ್ಧಮಲಕಾಧಃಸ್ಥಲೋಜ್ಜ್ವಲೈಃ ।
ಚಾರುಚಂಪಕವರ್ಣಾಭೈಶ್ಚಂದನದ್ರವಚರ್ಚಿತೈಃ ॥ ೯೮ ॥

ಪೀತವಸ್ತ್ರಪರೀಧಾನೈರ್ಬಿಂಬಾಧರಮನೋಹರೈಃ ।
ಶರತ್ಪಾರ್ವಣಚಂದ್ರಾಣಾಂ ಪ್ರಭಾಜುಷ್ಟಮುಖೋಜ್ಜ್ವಲೈಃ ॥ ೯೯ ॥

ಶರತ್ಪ್ರಫುಲ್ಲಪದ್ಮಾನಾಂ ಶೋಭಾಮೋಷಣಲೋಚನೈಃ ।
ಕಸ್ತೂರೀಪತ್ರಿಕಾಯುಕ್ತೈ ರೇಖಾಕ್ತಕಜ್ಜಲೋಜ್ಜ್ವಲೈಃ ॥ ೧೦೦ ॥

ಪ್ರಫುಲ್ಲಮಾಲತೀಮಾಲಾಜಾಲೈಃ ಕಬರಶೋಭಿತೈಃ ।
ಮಧುಲುಬ್ಧಮಧುಪ್ರಾಣಾಂ ಸಮೂಹೈಶ್ಚಾಪಿ ಸಂಕುಲೈಃ ।
ಚಾರುಣಾ ಗಮನೇನೈವ ಗಜಖಂಜನಗಂಜನೈಃ ॥ ೧೦೧ ॥

---

೯೭. ರತ್ನಾಭರಣಗಳಿಂದಲೂ, ರತ್ನದ ಕಿರೀಟಗಳಿಂದಲೂ ಭೂಷಿತರಾದ ಆ ಗೋಪಕನ್ಯೆಯರ ಮೂಗಿನ ಮಧ್ಯಭಾಗದಲ್ಲಿ ಆನೆಯ ಕುಂಭಸ್ಥಳದ ಮುತ್ತು ವಿರಾಜಿಸುತ್ತಿತ್ತು.

೯೮. ಮುಂಗುರುಳುಗಳ ಕೆಳಭಾಗದಲ್ಲಿ ಚಂದ್ರದ ಬೊಟ್ಟುಗಳನ್ನೂ ಸುಂದರವಾದ ಸಂಪಿಗೆಯಂತೆ ಹೊಂಬಣ್ಣವಾದ ಚಂದನದ ಬೊಟ್ಟುಗಳನ್ನೂ ಧರಿಸಿದ್ದರು.

೯೯. ಪೀತಾಂಬರಗಳನ್ನುಟ್ಟು, ತೊಂಡೆಯ ಹಣ್ಣನ್ನು ತಿರಸ್ಕರಿಸುವ ಕೆಳದುಟಿಗಳಿಂದ ಶೋಭಿತರಾದ ಆ ಗೋಪಸ್ತ್ರೀಯರ ಮುಖವು ಶರತ್ಪೂರ್ಣಿಮೆಯ ಪೂರ್ಣಚಂದ್ರನನ್ನು ಅಲ್ಲಗಳೆಯುತ್ತಿದ್ದಿತು.

೧೦೦. ಶರದೃತುವಿನಲ್ಲಿ ಅರಳಿದ ತಾವರೆಯ ಕಾಂತಿಯನ್ನು ಮೀರುವ ಕಣ್ಣುಗಳಲ್ಲಿ ಅಂಜನದ ರೇಖೆಯನ್ನೂ, ಕಸ್ತೂರಿ ಪತ್ರಗಳನ್ನೂ ರಚಿಸಿಕೊಂಡಿದ್ದರು.

೧೦೧. ಕೇಶಪಾಶಗಳಲ್ಲಿ ರಚಿಸಿಕೊಂಡಿರುವ ಅರಳಿದ ಜಾಜಿ ಹೂಮಾಲೆಯ ಮಕರಂದವನ್ನು ಪಾನಮಾಡಲು ದುಂಬಿಗಳು ಅವರ ಸುತ್ತಲೂ ಝೇಂಕರಿಸುತ್ತಿದ್ದವು. ಅವರೆಲ್ಲರೂ ಆನೆಯ ನಡಿಗೆಯನ್ನು ಅಲ್ಲಗಳೆಯುವಷ್ಟು ಮಂದಗಮನೆಯರಾಗಿದ್ದರು.

ವಕ್ರಭ್ರೂಭಂಗಸಂಯೋಗೈಶ್ಚ ಕ್ಷ್ಣ ಸ್ಮಿತೆಸಮನ್ವಿತೈಃ ।
ಪಕ್ವದಾಡಿಮಬೀಜಾಭದಂತಪಂಕ್ತಿ ವಿರಾಜಿತೈಃ ॥ ೧೦೨ ॥

ಖಗೇಂದ್ರಚಂಚುಶೋಭಾಢ್ಯ ನಾಸಿಕೋನ್ನತಭೂಷಿತೈಃ ।
ಗಜೇಂದ್ರ ಗಂಡಯುಗ್ಮಾಭಸ್ತನಭಾರನತೈರಿವ ॥ ೧೦೩ ॥

ನಿತಂಬಕಠಿನಶ್ರೋಣೀ ಪೀನಭಾರಭರಾನತೈಃ ।
ಕಂದರ್ಪಶರಚೇಷ್ಟಾಭಿರ್ಜರ್ಜರೀಭೂತಮಾನಸೈಃ ॥ ೧೦೪ ॥

ದರ್ಪಣೈಃ ಪೂರ್ಣಚಂದ್ರಾಸ್ಯ ಸೌಂದರ್ಯದರ್ಶನೋತ್ಸುಕೈಃ ।
ರಾಧಿಕಾಚರಣಾಂಭೋಜಸೇವಾಸಕ್ತಮನೋರಥೈಃ ॥ ೧೦೫ ॥

ಸುಂದರೀಣಾಂ ಸಮೂಹೈಶ್ಚ ರಕ್ಷಿತಂ ರಾಧಿಕಾಜ್ಞಯಾ ।
ಕ್ರೀಡಾಸರೋವರಾಣಾಂ ಚ ಲಕ್ಷೈಶ್ಚ ಪರಿವೇಷ್ಟಿತಂ ॥ ೧೦೬ ॥

---

೧೦೨ ವಕ್ರವಾದ ಭ್ರೂಭಂಗದಿಂದಲೂ, ಮನೋಹರವಾದ ಮುಗುಳು ನಗೆಯಿಂದಲೂ ಕೂಡಿದ ಅವರ ಮುಖಗಳಲ್ಲಿ ಚೆನ್ನಾಗಿ ಪಕ್ವವಾದ ದಾಳಿಂಬೆ ಬೀಜದಂತಿರುವ ಹಲ್ಲುಗಳು ವಿರಾಜಿಸುತ್ತಿದ್ದವು.

೧೦೩. ಗರುಡನ ಕೊಕ್ಕನ್ನು ಹೋಲುವ ಉನ್ನತವಾದ ನಾಸಿಕಗಳಿಂದಲೂ, ಗಜೇಂದ್ರನ ಕುಂಭಸ್ಥಲಗಳನ್ನು ಹೋಲುವ ಸ್ತನಯುಗಗಳಿಂದಲೂ ಆ ಗೋಪ ಕನ್ಯೆಯರು ಮನೋಹರರಾಗಿದ್ದರು.

೧೦೪. ಕಠಿನವಾದ ನಿತಂಬಬಿಂಬದ ಭಾರದಿಂದ ಸ್ವಲ್ಪ ಬಗ್ಗಿದ ಆ ಗೋಪಿಯರ ಮನಸ್ಸು ಮನ್ಮಥನ ಬಾಣಕ್ಕೆ ಗುರಿಯಾಗಿ ಚಂಚಲವಾಗಿದ್ದಿತು.

೧೦೫. ಪೂರ್ಣಚಂದ್ರನಂತಿರುವ ಅವರ ಮುಖದ ಸೌಂದರ್ಯವನ್ನು ನೋಡಲೋಸುಗವೋ ಎಂಬಂತೆ ರತ್ನಗನ್ನಡಿಗಳು ಅಲ್ಲಿ ಸಿದ್ಧವಾಗಿದ್ದವು. ಆ ಗೋಪಿಯರೆಲ್ಲರಿಗೂ ರಾಧಾದೇವಿಯ ಚರಣಕಮಲಗಳನ್ನು ಸೇವಿಸುವುದೇ ಪರಮ ಪ್ರೀತ್ಯಾಸ್ಪದವಾಗಿದ್ದಿತು.

೧೦೬. ಅಲ್ಲಿದ್ದ ಲಕ್ಷಾಂತರ ಕ್ರೀಡಾ ಸರೋವರಗಳಲ್ಲಿ ರಾಧಾದೇವಿಯ ಅಪ್ಪಣೆಯಂತೆ ಸಾವಿರಾರು ಸುಂದರಿಯರು ಕಾವಲು ಕಾಯುತ್ತಿದ್ದರು.

ಶ್ವೇತರಕ್ತೈರ್ಲೋಹಿತೈಶ್ಚ ವೇಷ್ಟಿತೈಃ ಪದ್ಮರಾಜಿತೈಃ ।
ಸುಕೂಜದ್ಭಿರ್ಮಧುಘ್ರಾಣಾಂ ಸಮೂಹೈಃ ಸಂಕುಲೈಃ ಸದಾ ॥ ೧೦೭ ॥

ಪುಷ್ಪೋದ್ಯಾನಸಹಸ್ರೇಣ ಪುಷ್ಪಿತೇನ ಸಮನ್ವಿತಂ ।
ಕೋಟಿಕುಂಜಕುಟೀರೈಶ್ಚ ಪುಷ್ಪಶಯ್ಯಾಸಮನ್ವಿತೈಃ ॥ ೧೦೮ ॥

ಭೋಗದ್ರವ್ಯಸಕರ್ಪೂರತಾಂಬೂಲವಸ್ತ್ರಸಂಯುತೈಃ ।
ರತ್ನಪ್ರದೀಪೈಃ ಪರಿತಃ ಶ್ವೇತಚಾಮರದರ್ಪಣೈಃ ॥ ೧೦೯ ॥

ವಿಚಿತ್ರಪುಷ್ಪಮಾಲಾಭಿಃ ಶೋಭಿತೈಃ ಶೋಭಿತಂ ಮುನೇ ।
ತಂ ರಾಸಮಂಡಪಂ ದೃಷ್ಟ್ವಾ ಜಗ್ಮುಸ್ತೇ ಪರ್ವತಾದ್ಬಹಿಃ ॥ ೧೧೦ ॥

---

೧೦೭. ಆ ಸರೋವರಗಳಲ್ಲಿ ಬಿಳುಪು, ಕೆಂಪು ಮತ್ತು ಆವೆರಡು ಬಣ್ಣಗಳೂ ಮಿಶ್ರಿತವಾದ ಕಮಲಗಳು ಶೋಭಿಸುತ್ತಿದ್ದವು. ಅವುಗಳ ಮಕರಂದವನ್ನು ಪಾನ ಮಾಡಲು ಬಂದಿದ್ದ ಭ್ರಮರಗಳು ಇಂಪಾಗಿ ಝೇಂಕರಿಸುತ್ತಿದ್ದವು.

೧೦೮. ಚೆನ್ನಾಗಿ ಅರಳಿದ ಹೂಗಳುಳ್ಳ ಸಾವಿರಾರು ಪುಷ್ಪೋದ್ಯಾನಗಳಿಂದಲೂ, ಪುಷ್ಪಶಯನದಿಂದ ಕೂಡಿರುವ ಕೋಟ್ಯಂತರ ಲತಾಕುಂಜಗಳಿಂದಲೂ ಆ ಉದ್ಯಾನವು ಮನೋಹರವಾಗಿದ್ದಿತು

೧೦೯. ಆ ಲತಾಮಂಡಪಗಳಲ್ಲಿ ದಿವ್ಯವಸ್ತ್ರಗಳೂ, ಪಚ್ಚಕರ್ಪೂರ, ತಾಂಬೂಲ ಮುಂತಾದ ಭೋಗಸಾಮಗ್ರಿಗಳೂ, ಇದ್ದುದಲ್ಲದೆ ರತ್ನದೀಪಗಳಿಂದಲೂ, ರತ್ನಗನ್ನಡಿಗಳಿಂದಲೂ ಶ್ವೇತಚಾಮರಗಳಿಂದಲೂ ಅವು ಶೋಭಿಸುತ್ತಿದ್ದವು.

೧೧೦. ಎಲೈ ನಾರದಮುನಿಯೇ, ಚಿತ್ರವಿಚಿತ್ರವಾದ ಪುಷ್ಪಮಾಲೆಗಳಿಂದ ಅಲಂಕೃತವಾದ ಆ ರಾಸಮಂಡಲವನ್ನು ನೋಡಿ ವಿಸ್ಮಿತರಾದ ಆ ದೇವತೆಗಳೆಲ್ಲರೂ ಆ ಶತಶೃಂಗಪರ್ವತದ ಹೊರಭಾಗಕ್ಕೆ ಹೋದರು.

ತತೋ ವಿಚಕ್ಷಣಂ ರಮ್ಯಂ ದದೃಶುಃ ಸುಂದರಂ ವನಂ ।
ವನಂ ವೃಂದಾವನಂ ನಾಮ ರಾಧಾ ಮಾಧವಯೋಃ ಪ್ರಿಯಂ ॥ ೧೧೧ ॥

ಕ್ರೀಡಾಸ್ಥಾನಂ ತಯೋರೇವ ಕಲ್ಪವೃಕ್ಷಚಯಾನ್ವಿತಂ ।
ವಿರಜಾತೀರನೀರಾಕ್ತೈಃ ಕಂಪಿತಂ ಮಂದವಾಯುಭಿಃ ॥ ೧೧೨ ॥

ಕಸ್ತೂರೀಯುಕ್ತಪತ್ರಾಬ್ಜೈಃ ಪುಷ್ಪೌಘೈಃ ಸುರಭೀಕೃತಂ ।
ನವಪಲ್ಲವಸಂಸಕ್ತಪರಪುಷ್ಟರುತೈರ್ಯುತಂ ॥ ೧೧೩ ॥

ಕುತ್ರಕೇಲಿಕದಂಬಾನಾಂ ಕದಂಬೈಃ ಕಮನೀಯಕಂ ।
ಮಂದಾರಾಣಾಂ ಚಂಪಕಾನಾಂ ಚಂದನಾನಾಂ ತಥೈವ ಚ ॥ ೧೧೪ ॥

ಸುಗಂಧಿಕುಸುಮಾನಾಂ ಚ ಗಂಧೇನ ಸುರಭೀಕೃತಂ ।
ಆಮ್ರಾಣಾಂ ನಾಗರಂಗಾಣಾಂ ಪನಸಾನಾಂ ತಥೈವ ಚ ॥ ೧೧೫ ॥

---

೧೧೧. ಅನಂತರ ರಾಧಾಮಾಧವರಿಗೆ ಅತ್ಯಂತ ಪ್ರಿಯವಾಗಿಯೂ, ಸುಸಜ್ಜಿತವಾಗಿಯೂ, ಅತಿಮನೋಹರವಾಗಿಯೂ ಇರುವ ವೃಂದಾವನವೆಂಬ ದಿವ್ಯವನವನ್ನು ಅಲ್ಲಿ ನೋಡಿದರು.

೧೧೨ ರಾಧಾಮಾಧವರ ಕ್ರೀಡಾಸ್ಥಾನವಾದ ಆ ಬೃಂದಾವನದಲ್ಲಿ, ಅನೇಕ ಕಲ್ಪವೃಕ್ಷಗಳಿದ್ದುದರಿಂದಲೂ, ಆ ವನವು ವಿರಜಾನದಿಯ ತೀರದಲ್ಲಿದ್ದುದರಿಂದಲೂ, ಶೈತ್ಯಸೌರಭ್ಯಮಾಂದ್ಯವಿಶಿಷ್ಟವಾದ ವಾಯುವು ಅಲ್ಲಿ ಬೀಸುತ್ತಿದ್ದಿತು.

೧೧೩. ಕಸ್ತೂರಿಯನ್ನು ಲೇಪಿಸಿರುವ ದಿವ್ಯಕಮಲಗಳಿಂದಲೂ, ಸುವಾಸಿತವಾದ ದಿವ್ಯಪುಷ್ಪಗಳಿಂದಲೂ, ಅಲಂಕೃತವಾದ ಆ ವನದಲ್ಲಿ ಹೊಸ ಚಿಗುರನ್ನು ತಿಂದು ಕೋಗಿಲೆಗಳು ಇಂಪಾಗಿ ಹಾಡುತ್ತಿದ್ದವು.

೧೧೪. ಆ ಬೃಂದಾವನದಲ್ಲಿ ಕದಂಬ (ದೇವ ಈಚಲು) ಪಾರಿಜಾತ, ಸಂಪಿಗೆ ಮತ್ತು ಶ್ರೀಗಂಧ ಮುಂತಾದ ದಿವ್ಯವೃಕ್ಷಗಳು ರಾಜಿಸುತ್ತಿದ್ದವು.

೧೧೫. ದಿವ್ಯಕುಸುಮಗಳ ಗಂಧದಿಂದ ಸುವಾಸಿತವಾದ ಆ ವನದಲ್ಲಿ ಮಾವು, ಕಿತ್ತಲೆ, ಹಲಸು ಮುಂತಾದ ಫಲವೃಕ್ಷಗಳು ತುಂಬಿದ್ದವು.

ತಾಲಾನಾಂ ನಾರಿಕೇಲಾನಾಂ ವೃಂದೈರ್ವೃಂದಾವನಂ ವನಂ।
ಜಂಬೂನಾಂ ಬದರೀಣಾಂ ಚ ಖರ್ಜೂರಾಣಾಂ ವಿಶೇಷತಃ ॥ ೧೧೬ ॥

ಗುವಾಕಾನಾಮ್ರಾತಕಾನಾಂ ಚ ಜಂಬೀರಾಣಾಂ ಚ ನಾರದ।
ಕದಲೀನಾಂ ಶ್ರೀಫಲಾನಾಂ ದಾಡಿಮಾನಾಂ ಮನೋಹರೈಃ ॥ ೧೧೭ ॥

ಸುಪಕ್ವಫಲಸಂಯುಕ್ತೈಃ ಸಮೂಹೈಶ್ಚ ವಿರಾಜಿತಂ।
ಪ್ರಿಯಾಲಾನಾಂ ಚ ಶಾಲಾನಾಮಶ್ವತ್ಥಾನಾಂ ತಥೈವ ಚ ॥ ೧೧೮ ॥

ನಿಂಬಾನಾಂ ಶಾಲ್ಮಲೀನಾಂ ಚ ತಿಂತ್ರಿಡೀನಾಂ ಚ ಶೋಭನೈಃ।
ಅನ್ಯೇಷಾಂ ತರುಭೇದಾನಾಂ ಸಂಕುಲೈಃ ಸಂಕುಲಂ ಸದಾ ॥ ೧೧೯ ॥

ಪರಿತಃ ಕಲ್ಪವೃಕ್ಷಾಣಾಂ ವೃಂದೈರ್ವೃಂದೈರ್ವಿರಾಜಿತಂ।
ಮಲ್ಲಿಕಾ ಮಾಲತೀಕುಂದ ಕೇತಕೀ ಮಾಧವೀಲತಾಃ ॥ ೧೨೦ ॥

ಏತಾಸಾಂ ಚ ಸಮೂಹೈಶ್ಚ ಯೂಥಿಕಾಭಿಃ ಸಮನ್ವಿತಂ।
ಚಾರುಕುಂಜಕುಟೀರೈಸ್ತೈಃ ಪಂಚಾಶತ್ಕೋಟಿಭಿರ್ಮುನೇ ॥ ೧೨೧ ॥

---

೧೧೬. ಆ ವೃಂದಾವನದಲ್ಲಿ ತಾಳೆ, ತೆಂಗು ಮುಂತಾದ ಉನ್ನತ ವೃಕ್ಷಗಳೂ, ನೇರಳೆ, ಯಗಚಿ, ಖರ್ಜೂರ ಮುಂತಾದ ಫಲವೃಕ್ಷಗಳೂ ಪರಿಪೂರ್ಣವಾಗಿದ್ದವು.

೧೧೭-೧೧೮. ಎಲೈ ನಾರದನೇ, ಅಡಿಕೆ, ಮಾವು, ನಿಂಬೆ, ಬಾಳೆ, ಬಿಲ್ವ ಮತ್ತು ದಾಳಿಂಬೆ ಮರಗಳಿಂದ ಮನೋಹರವಾಗಿಯೂ, ಪಕ್ವವಾದ ಅವುಗಳ ಫಲಗಳಿಂದ ಶೋಭಿತವಾಗಿಯೂ ಇದ್ದ ಆ ಬೃಂದಾವನದಲ್ಲಿ ಪ್ರಿಯಾಲ, ಸಾಲ ಅಶ್ವತ್ಥ ಮುಂತಾದ ಇನ್ನೂ ಅನೇಕ ವೃಕ್ಷಗಳಿದ್ದವು.

೧೧೯. ಬೇವು, ಬೂರಗ, ಹುಣಸೆ ಮುಂತಾದ ಮರಗಳೂ, ಇನ್ನೂ ಅನೇಕ ವಿಧವಾದ ವೃಕ್ಷಗಳೂ ಆ ಬೃಂದಾವನದಲ್ಲಿದ್ದವು

೧೨೦-೧೨೧. ಸುತ್ತಲೂ ಕಲ್ಪವೃಕ್ಷಗಳು ಸಾಲುಸಾಲಾಗಿ ಬೆಳೆದಿದ್ದವು. ಮಲ್ಲಿಗೆ, ಜಾಜಿ, ಮೊಲ್ಲೆ, ತಾಳೆ, ವಾಸಂತಿ ಮುಂತಾದ ಅನೇಕ ಪುಷ್ಪಲತೆಗಳೂ, ಗಿರಿಮಲ್ಲಿಕಾದಿ ಪುಷ್ಪಗಳಗೊಂಚಲುಗಳೂ, ಮನೋಹರವಾದ ಐವತ್ತು ಕೋಟಿ ಲತಾಮಂಡಪಗಳೂ ಆ ವನದಲ್ಲಿದ್ದವು.

ರತ್ನಪ್ರದೀಪದೀಪ್ತೈಶ್ಚ ಧೂಪೇನ ಸುರಭೀಕೃತೈಃ ।
ಶೃಂಗಾರದ್ರವ್ಯಯುಕ್ತೈಶ್ಚ ವಾಸಿತೈರ್ಗಂಧವಾಯುಭಿಃ ॥ ೧೨೨ ॥

ಚಂದನಾಕ್ತೈಃ ಪುಷ್ಪತಲ್ಪೈರ್ಮಾಲಾಜಾಲಸಮನ್ವಿತೈಃ ।
ಮಧುಲುಬ್ಧಮಧುಪ್ರಾಣಾಂ ಕಲಶಬ್ದೈಶ್ಚ ಶಬ್ದಿತಂ ॥ ೧೨೩ ॥

ರತ್ನಾಲಂಕಾರಶೋಭಾಢ್ಯೈರ್ಗೋಪೀವೃಂದೈಶ್ಚ ವೇಷ್ಟಿತಂ ।
ಪಂಚಾಶತ್ಕೋಟಿಗೋಪೀಭೀ ರಕ್ಷಿತಂ ರಾಧಿಕಾಜ್ಞಯಾ ॥ ೧೨೪ ॥

ದ್ವಾತ್ರಿಂಶತ್ಕಾನನಂ ತತ್ರ ರಮ್ಯಂ ರಮ್ಯಂ ಮನೋಹರಂ ।
ವೃಂದಾವನಾಭ್ಯಂತರಿತಂ ನಿರ್ಜನಸ್ಥಾನಮುತ್ತಮಂ ॥ ೧೨೫ ॥

ಸುಪಕ್ವಮಧುರಸ್ವಾದುಫಲೈರ್ವೃಂದಾವನಂ ಮುನೇ ।
ಗೋಷ್ಠಾನಾಂ ಚ ಗವಾಂ ಚೈವ ಸಮೂಹೈಶ್ಚ ಸಮನ್ವಿತಂ ॥ ೧೨೬ ॥

---

೧೨೨. ಆ ಲತಾಮಂಟಪಗಳೆಲ್ಲವೂ ಧೂಪದಿಂದ ಸುವಾಸಿತವಾಗಿಯೂ, ದೀಪಗಳಿಂದ ಉಜ್ವಲವಾಗಿಯೂ, ಇದ್ದುದಲ್ಲದೆ ಸುಗಂಧಿತವಾದ ಶೃಂಗಾರ ದ್ರವ್ಯಗಳಿಂದ ಪರಿಪೂರ್ಣವಾಗಿದ್ದವು.

೧೨೩. ಚಂದನಲಿಪ್ತವಾದ ಪುಷ್ಪಶಯನಗಳಿಂದಲೂ, ಅನೇಕ ದಿವ್ಯಹಾರ ಗಳಿಂದಲೂ, ಶೋಭಿತವಾದ ಆ ಲತಾಮಂಡಪಗಳಲ್ಲಿ ಮಕರಂದಪಾನಮಾಡಲು ಬಂದಿದ್ದ ದುಂಬಿಗಳು ಇಂಪಾಗಿ ಧ್ವನಿಗೈಯ್ಯುತ್ತಿದ್ದವು.

೧೨೪. ರತ್ನಾಲಂಕಾರಗಳಿಂದ ಶೋಭಿತರಾದ ಐವತ್ತು ಕೋಟಿ ಗೋಪಿಯರು ರಾಧಾದೇವಿಯ ಅನುಜ್ಞೆಯಂತೆ ಆ ಲತಾಮಂಡಪಗಳನ್ನು ಪರೀಕ್ಷಿಸುತ್ತಿದ್ದರು.

೧೨೫. ಅತ್ಯುತ್ತಮವೂ ನಿರ್ಜನ ಪ್ರದೇಶವೂ ಆದ ಆ ಬೃಂದಾವನದ ಮಧ್ಯದಲ್ಲಿ ಅತ್ಯಂತ ಮನೋಹರವಾದ ಮೂವತ್ತೆರಡು ವನಗಳಿದ್ದವು.

೧೨೬. ಎಲೈ ಮುನಿಯೇ, ಆ ವೃಂದಾವನವು ಚೆನ್ನಾಗಿ ಪಕ್ವವೂ ಮಧುರವೂ ಆಗಿದ್ದ ಅನೇಕ ಫಲಗಳಿಂದಲೂ, ವಿವಿಧ ಗೋವು ಮತ್ತು ಗೋಷ್ಠ (ಕೊಟ್ಟಿಗೆ) ಗಳಿಂದಲೂ ಭರಿತವಾಗಿದ್ದಿತು

ಪುಷ್ಪೋದ್ಯಾನಸಹಸ್ರೇಣ ಪುಷ್ಪಿತೇನ ಸುಗಂಧಿನಾ ।
ಮಧುಲುಬ್ಧಮಧುಘ್ರಾಣಾಂ ಸಮೂಹೇನ ಸಮನ್ವಿತಂ ॥ ೧೨೭ ॥

ಪಂಚಾಶತ್ಕೋಟಿಗೋಪೀನಾಂ ವಿಲಾಸೈಶ್ಚ ವಿರಾಜಿತಂ ।
ಶ್ರೀಕೃಷ್ಣತುಲ್ಯರೂಪಾಣಾಂ ಸದ್ರತ್ನಗುಂಠಿತೈರ್ವರೈಃ ॥ ೧೨೮ ॥

ದೃಷ್ಟ್ವಾ ವೃಂದಾವನಂ ರಮ್ಯಂ ಯಯುರ್ಗೋಲೋಕಮೀಶ್ವರಾಃ ।
ಪರಿತೋ ವರ್ತುಲಾಕಾರಂ ಕೋಟಿಯೋಜನವಿಸ್ತೃತಂ ॥ ೧೨೯ ॥

ರತ್ನಪ್ರಾಕಾರಸಂಯುಕ್ತಂ ಚತುರ್ದ್ವಾರಾನ್ವಿತಂ ಮುನೇ ।
ಗೋಪಾನಾಂ ಚ ಸಮೂಹೈಶ್ಚ ದ್ವಾರಪಾಲೈಃ ಸಮನ್ವಿತಂ ॥ ೧೩೦ ॥

ಆಶ್ರಮೈ ರತ್ನಖಚಿತೈರ್ನಾನಾಭೋಗಸಮನ್ವಿತೈಃ ।
ಗೋಪೀನಾಂ ಕೃಷ್ಣಭೃತ್ಯಾನಾಂ ಪಂಚಾಶತ್ಕೋಟಿಭಿರ್ಯುತಂ ॥ ೧೩೧ ॥

---

೧೨೭. ಚೆನ್ನಾಗಿ ಅರಳಿ ಸುವಾಸನೆಯನ್ನು ಬೀರುತ್ತಿರುವ ಸಾವಿರಾರು ಹೂದೋಟಗಳಿಂದಲೂ, ಅಲ್ಲಿ ಮಕರಂದ ಪಾನಮಾಡಲು ಬಯಸಿ ಬಂದಿರುವ ದುಂಬಿಗಳ ಇಂಚರದಿಂದಲೂ ಆ ವನವು ಅತಿ ಮನೋಹರವಾಗಿದ್ದಿತು.

೧೨೮ ಅಲ್ಲಿ ಶ್ರೀಕೃಷ್ಣನಿಗೆ ಸಮಾನವಾದ ರೂಪವುಳ್ಳ ಐವತ್ತುಕೋಟಿ ಗೋಪಿಕಾಸ್ತ್ರೀಯರು, ರತ್ನಾಭರಣಗಳಿಂದಲಂಕೃತರಾಗಿ ವಿಲಾಸಪರರಾಗಿದ್ದರು

೧೨೯. ಈ ರೀತಿಯಾದ ವೃಂದಾವನವನ್ನು ನೋಡಿದ ನಂತರ ದೇವತೆಗಳೆಲ್ಲರೂ, ಕೋಟಿಯೋಜನ ವಿಸ್ತೀರ್ಣವಾಗಿಯೂ, ಮಂಡಲಾಕಾರವಾಗಿಯೂ ಇದ್ದ ಗೋಲೋಕಕ್ಕೆ ತೆರಳಿದರು.

೧೩೦. ರತ್ನನಿರ್ಮಿತವಾದ ಕೋಟೆಗಳಿಂದಲೂ, ನಾಲ್ಕು ಮಹಾದ್ವಾರಗಳಿಂದಲೂ ಶೋಭಿತವಾದ ಆ ಗೋಲೋಕದಲ್ಲಿ ಅನೇಕ ದ್ವಾರಪಾಲಕರೂ, ಗೋಪಾಲಕರೂ ನೆಲೆಸಿದ್ದರು.

೧೩೧. ಅನೇಕ ಭೋಗಸಾಮಗ್ರಿಗಳಿಂದ ಕೂಡಿದ ರತ್ನಖಚಿತವಾದ ಆಶ್ರಮಗಳಲ್ಲಿ ಐವತ್ತುಕೋಟಿ ಗೋಪಿಯರೂ, ಶ್ರೀಕೃಷ್ಣನ ಭೃತ್ಯರೂ ನೆಲಸಿದ್ದರು.

ಭಕ್ತಾನಾಂ ಗೋಪವೃಂದಾನಾಮಾಶ್ರಮೈಃ ಶತಕೋಟಿಭಿಃ ।
ತತೋಽಧಿಕಸುವಿಸ್ತೀರ್ಣೈಃ ಸದ್ರತ್ನಗ್ರಥಿತೈರ್ಯುತಂ ॥ ೧೩೨ ॥

ಆಶ್ರಮೈಃ ಪಾರ್ಷದಾನಾಂ ಚ ತತೋಽಧಿಕವಿಲಕ್ಷಣೈಃ ।
ಅಮೂಲ್ಯರತ್ನರಚಿತೈಃ ಸಂಯುಕ್ತಂ ದಶಕೋಟಿಭಿಃ ॥ ೧೩೩ ॥

ಪಾರ್ಷದಪ್ರವರಾಣಾಂ ಚ ಶ್ರೀಕೃಷ್ಣರೂಪಧಾರಿಣಾಂ ।
ಆಶ್ರಮೈಃ ಕೋಟಿಭಿರ್ಯುಕ್ತಂ ಸದ್ರತ್ನೇನ ವಿನಿರ್ಮಿತೈಃ ॥ ೧೩೪ ॥

ರಾಧಿಕಾ ಶುದ್ಧಭಕ್ತಾನಾಂ ಗೋಪೀನಾಮಾಶ್ರಮೈರ್ವರೈಃ ।
ಸದ್ರತ್ನರಚಿತೈರ್ದ್ರವ್ಯೈರ್ದ್ವಾತ್ರಿಂಶತ್ಕೋಟಿಭಿರ್ಯುತಂ ॥ ೧೩೫ ॥

ತಾಸಾಂ ಚ ಕಿಂಕರೀಣಾಂ ಚ ಭವನೈಃ ಸುಮನೋಹರೈಃ ।
ಮಣಿರತ್ನಾದಿರಚಿತೈಃ ಶೋಭಿತಂ ದಶಕೋಟಿಭಿಃ ॥ ೧೩೬ ॥

---

೧೩೨. ಆ ಆಶ್ರಮಗಳಿಗಿಂತಲೂ ವಿಸ್ತೀರ್ಣವಾಗಿ, ರತ್ನಖಚಿತವಾಗಿದ್ದ ನೂರುಕೋಟಿ ಆಶ್ರಮಗಳಲ್ಲಿ ಶ್ರೀಕೃಷ್ಣನ ಭಕ್ತರಾದ ಗೋಪಾಲಕರನೇಕರಿದ್ದರು.

೧೩೩. ಅವುಗಳಿಗಿಂತಲೂ ಹೆಚ್ಚು ಮನೋಹರವಾಗಿ, ಅಮೂಲ್ಯರತ್ನಖಚಿತವಾದ ಹತ್ತುಕೋಟಿ ಆಶ್ರಮಗಳಲ್ಲಿ ಶ್ರೀಕೃಷ್ಣನ ಪಾರ್ಷದರು ನೆಲೆಸಿದ್ದರು.

೧೩೪ ಶ್ರೀಕೃಷ್ಣನ ರೂಪವನ್ನೇ ಧರಿಸಿರುವ ಕೆಲವು ಪಾರ್ಷದಶ್ರೇಷ್ಠರು ಸದ್ರತ್ನಗಳಿಂದ ನಿರ್ಮಿತವಾದ ಕೋಟ್ಯಾಂತರ ಆಶ್ರಮಗಳಲ್ಲಿ ನೆಲೆಸಿದ್ದರು

೧೩೫. ರಾಧಾದೇವಿಯ ಪರಮಭಕ್ತೆಯರಾದ ಗೋಪಿಯರನೇಕರು ಸದ್ರತ್ನಖಚಿತವಾಗಿ ಸಕಲ ಸಂಭಾರಗಳಿಂದ ಪರಿಪೂರ್ಣವಾದ ಮೂವತ್ತೆರಡು ಕೋಟಿ ಆಶ್ರಮಗಳಲ್ಲಿ ನೆಲೆಸಿದ್ದರು.

೧೩೬. ಆ ಭಕ್ತೆಯರ ಸೇವಕಿಯರಿಗಾಗಿ ರತ್ನಾದಿ ಶ್ರೇಷ್ಠ ಮಣಿಗಳಿಂದ ಮನೋಹರವಾಗಿದ್ದ ಹತ್ತುಕೋಟಿ ಮಂದಿರಗಳು ನಿರ್ಮಿತವಾಗಿದ್ದವು.

ಶತಜನ್ಮತಪಃ ಪೂತಾ ಭಕ್ತಾ ಯೇ ಭಾರತೇ ಭುವಿ ।
ಹರಿಭಕ್ತಿಪರಾ ಯೇ ಚ ಕರ್ಮನಿರ್ಮೂಲಕಾರಕಾಃ ॥ ೧೩೭ ॥

ಸ್ವಪ್ನೇ ಜ್ಞಾನೇ ಹರೇರ್ಧ್ಯಾನೇ ನಿವಿಷ್ಟಮಾನಸಾ ಮುನೇ ।
ರಾಧಾಕೃಷ್ಣೇತಿ ಕೃಷ್ಣೇತಿ ಪ್ರಜಪಂತೋ ದಿವಾನಿಶಂ ॥ ೧೩೮ ॥

ತೇಷಾಂ ಶ್ರೀಕೃಷ್ಣಭಕ್ತಾನಾಂ ನಿವಾಸೈಃ ಸುಮನೋಹರೈಃ ।
ಸದ್ರತ್ನಮಣಿನಿರ್ಮಾಣೈರ್ನಾನಾಭೋಗಸಮನ್ವಿತೈಃ ॥ ೧೩೯ ॥

ಪುಷ್ಪಶಯ್ಯಾ ಪುಷ್ಪಮಾಲಾ ಶ್ವೇತಚಾಮರಶೋಭಿತೈಃ ।
ರತ್ನದರ್ಪಣಶೋಭಾಢ್ಯೈರ್ಹರಿನ್ಮಣಿಸಮರ್ಪಿತೈಃ ॥ ೧೪೦ ॥

ಅಮೂಲ್ಯರತ್ನಕಲಶಸಮೂಹಾನ್ವಿತಶೇಖರೈಃ ।
ಸೂಕ್ಷ್ಮವಸ್ತ್ರಾಭ್ಯಂತರಿತೈಃ ಸಂಯುಕ್ತಂ ಶತಕೋಟಿಭಿಃ ॥ ೧೪೧ ॥

---

೧೩೭-೧೩೯. ಯಾವ ಶ್ರೀಕೃಷ್ಣಭಕ್ತರು ಭರತಖಂಡದಲ್ಲಿ ನೂರು ಜನ್ಮವೆತ್ತಿ ತಪಸ್ಸಿನಿಂದ ಪೂತರಾಗಿರುವರೋ, ಯಾರು ಶ್ರೀಹರಿಯಲ್ಲಿ ಭಕ್ತಿಯುತರಾಗಿ ಕರ್ಮಬಂಧನವಿಮುಕ್ತರಾಗುವರೋ ಸ್ವಪ್ನಾವಸ್ಥೆಯಲ್ಲಿಯೂ, ಜಾಗ್ರದವಸ್ಥೆಯಲ್ಲಿಯೂ ಯಾರು ಶ್ರೀಹರಿಯ ಧ್ಯಾನದಲ್ಲಿ ಆಸಕ್ತರಾಗಿರುವರೋ, ಹಗಲೂ ರಾತ್ರಿ ಯಾರು 'ರಾಧಾಕೃಷ್ಣ' ಎಂದು ಜಪಿಸುವರೋ, ಅಂಥ ಶ್ರೀಕೃಷ್ಣಭಕ್ತರ ಮನೋಹರವಾದ ನಿವಾಸಸ್ಥಾನಗಳು ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿ ವಿವಿಧ ಭೋಗಸಾಮಗ್ರಿಗಳಿಂದ ತುಂಬಿದ್ದವು.

೧೪೦. ಪುಷ್ಪಶಯನದಿಂದಲೂ, ಪುಷ್ಪಮಾಲೆಗಳಿಂದಲೂ, ಬಿಳಿಚಾಮರಗಳಿಂದಲೂ ಶೋಭಿತವಾದ ಆ ಮಂದಿರಗಳಲ್ಲಿ ಮರಕತ ಪಚ್ಚೆ ಮುಂತಾದ ರತ್ನಗಳನ್ನು ಪೆಟ್ಟಿ ರತ್ನಗನ್ನಡಿಗಳನ್ನು ಸಿದ್ಧಪಡಿಸಿದ್ದರು

೧೪೧ ಸೂಕ್ಷ್ಮವಸ್ತ್ರಗಳಿಂದ ಮುಚ್ಚಲ್ಪಟ್ಟ ಅಮೂಲ್ಯವಾದ ನೂರುಕೋಟಿ ರತ್ನಕಲಶಗಳು ಅಲ್ಲಿ ರಾಜಿಸುತ್ತಿದ್ದವು.

ದೇವಾಸ್ತಮದ್ಭುತಂ ದೃಷ್ಟ್ವಾ ಕಿಯದ್ದೂರಂ ಯಯುರ್ಮುದಾ ।
ತತ್ರಾಕ್ಷಯವಟಂ ರಮ್ಯಂ ದದೃಶುರ್ಜಗದೀಶ್ವರಾಃ ॥ ೧೪೨ ॥

ಪಂಚಯೋಜನವಿಸ್ತೀರ್ಣಮೂರ್ಧ್ವಂ ತದ್ದ್ವಿಗುಣಂ ಮುನೇ ।
ಸಹಸ್ರಸ್ಕಂಧಸಂಯುಕ್ತಶಾಖಾಸಂಸ್ಥಾ ಸಮನ್ವಿತಂ ॥ ೧೪೩ ॥

ರಕ್ತಪಕ್ವಫಲಾಕೀರ್ಣಂ ಶೋಭಿತಂ ರತ್ನವೇದಿಭಿಃ ।
ಕೃಷ್ಣಸ್ವರೂಪಾಂಸ್ತನ್ಮೂಲೇ ದದೃಶುಃಪ್ರಬಲಾಂಚ್ಛಿಶೂನ್ ॥ ೧೪೪ ॥

ಪೀತವಸ್ತ್ರಪರೀಧಾನಾನ್ಕ್ರೀಡಾಸಕ್ತಾನ್ಮನೋಹರಾನ್ ।
ಚಂದನೋಕ್ಷಿತಸರ್ವಾಂಗಾನ್ರತ್ನಭೂಷಣಭೂಷಿತಾನ್ ॥ ೧೪೫ ॥

---

೧೪೨. ದೇವತೆಗಳೆಲ್ಲರೂ ಆ ಆಶ್ಚರ್ಯವನ್ನು ಕಂಡು ಸಂತುಷ್ಟರಾಗಿ ಇನ್ನು ಸ್ವಲ್ಪಮುಂದೆ ಹೋದರು ಅಲ್ಲಿ ರಮ್ಯವಾದ ಅಕ್ಷಯ ವಟವೃಕ್ಷವೊಂದನ್ನು ಕಂಡರು.

೧೪೩. ಆ ವಟವೃಕ್ಷವು ಐದುಯೋಜನ ವಿಸ್ತೀರ್ಣವಾಗಿಯೂ, ಅದಕ್ಕೆ ಎರಡರಷ್ಟು ಎತ್ತರವಾಗಿಯೂ, ಇದ್ದುದಲ್ಲದೆ ಸಾವಿರಾರು ದಪ್ಪಕೊಂಬೆಗಳಿಂದಲೂ, ಅಗಣಿತ ಶಾಖೆಗಳಿಂದಲೂ ಕೂಡಿ ಮನೋಹರವಾಗಿದ್ದಿತು.

೧೪೪. ಮಾಗಿ ಕೆಂಪಾದ ಹಣ್ಣುಗಳಿಂದ ಕೂಡಿರುವ ಆ ಮರದ ಕೆಳಗೆ ರತ್ನ ವಿಕಾರವಾದ ಜಗಲಿಗಳಿದ್ದುವು ಅವುಗಳ ಮೇಲೆ ಶ್ರೀಕೃಷ್ಣನ ರೂಪರೇಖೆಗಳನ್ನು ಹೋಲುವ ಪುಷ್ಟರಾದ ಕೆಲವು ಮಕ್ಕಳಿದ್ದುದನ್ನು ಆ ದೇವತೆಗಳು ಕಂಡರು.

೧೪೫ ಸರ್ವಾಂಗಗಳಿಗೂ ದಿವ್ಯ ಚಂದನವನ್ನು ಲೇಪಿಸಿಕೊಂಡು ಪೀತಾಂಬರ ವನ್ನುಟ್ಟು ರತ್ನಾಭರಣಗಳನ್ನು ತೊಟ್ಟಿರುವ ಮನೋಹರವಾದ ಆ ಬಾಲಕರು ಕ್ರೀಡಾಸಕ್ತರಾಗಿದ್ದರು.

ದದೃಶುಸ್ತತ್ರ ದೇವೇಶಾಃ ಪಾರ್ಷದಪ್ರವರಾನ್ಹರೇಃ ।
ತತೋಽವಿದೂರೇ ದದೃಶೂ ರಾಜಮಾರ್ಗಂ ಮನೋಹರಂ ॥ ೧೪೬ ॥

ಸಿಂದೂರಾಕಾರಮಣಿಭಿಃ ಪರಿತೋ ರಚಿತಂ ಮುನೇ ।
ಇಂದ್ರನೀಲೈಃ ಪದ್ಮರಾಗೈರ್ಹೀರಕೈ ರುಚಕೈಸ್ತಥಾ ॥ ೧೪೭ ॥

ನಿರ್ಮಿತೈರ್ವೇದಿಭಿರ್ಯುಕ್ತಂ ಪರಿತೋ ರತ್ನಮಂಡಪಂ ।
ಚಂದನಾಗರುಕಸ್ತೂರೀಕುಂಕುಮದ್ರವಚರ್ಚಿತಂ ॥ ೧೪೮ ॥

ದಧಿಪೂರ್ಣಲಾಜಫಲಪುಷ್ಪದೂರ್ವಾಂಕುರಾನ್ವಿತಂ ।
ಸೂಕ್ಷ್ಮಸೂತ್ರಗ್ರಂಥಿಯುಕ್ತ ಶ್ರೀಖಂಡಪಲ್ಲವಾನ್ವಿತಂ ॥ ೧೪೯ ॥

ರಂಭಾಸ್ತಂಭಸಮೂಹೈಶ್ಚ ಕುಂಕುಮಾಕ್ತೈರ್ವಿರಾಜಿತಂ ।
ಸದ್ರತ್ನಮಂಡಲಘಟೈಃ ಫಲಶಾಖಾಸಮನ್ವಿತೈಃ ॥ ೧೫೦ ॥

---

೧೪೬. ಅಲ್ಲದೆ ಅಲ್ಲಿ ದೇವತೆಗಳು ಶ್ರೀಹರಿಯ ಅನೇಕ ಪಾರ್ಷದ ಶ್ರೇಷ್ಠರನ್ನೂ ಕಂಡರು. ಮುಂದೆ ಸಮೀಪದಲ್ಲಿಯೇ ಮನೋಹರವಾದ ರಾಜಮಾರ್ಗವಿದ್ದುದು ಅವರ ದೃಷ್ಟಿಗೆ ಗೋಚರವಾಯಿತು.

೧೪೭-೧೪೮. ಚಂದ್ರವರ್ಣದ ಮಣಿಗಳಿಂದಲೂ, ಇಂದ್ರನೀಲ, ಪದ್ಮರಾಗ ವಜ್ರ, ರುಚಕಮುಂತಾದ ಶ್ರೇಷ್ಠರತ್ನಗಳಿಂದಲೂ ನಿರ್ಮಿತವಾದ ಅನೇಕ ವೇದಿಕೆಗಳಿಂದ, ಮನೋಹರವಾಗಿದ್ದ ಆ ರಾಜಮಾರ್ಗದಲ್ಲಿ ಅಲ್ಲಲ್ಲೇ ರತ್ನಮಂಡಪಗಳೂ ಅವುಗಳಲ್ಲಿ ಚಂದನ, ಅಗುರು, ಕಸ್ತೂರಿ, ಕುಂಕಮಕೇಸರಿ ಮುಂತಾದ ಸುಗಂಧ ದ್ರವ್ಯಗಳೂ ಪರಿಪೂರ್ಣವಾಗಿದ್ದುವು.

೧೪೯. ಆ ರತ್ನಮಂಡಪಗಳಲ್ಲಿ ಮೊಸರು, ಅರಳು, ಹೂವು, ಹಣ್ಣು, ಗರಿಕೆಯಚಿಗುರು, ಸೂಕ್ಷ್ಮಗ್ರಂಥಿಯುತವಾದ ದಾರಗಳು, ಗಂಧದಮರದ ಚಿಗುರುಗಳೂ ಸಜ್ಜುಗೊಳಿಸಿದ್ದುವು.

೧೫೦. ಕುಂಕುಮವನ್ನು ಲೇಪಿಸಿರುವ ದಿವ್ಯವಾದ ರಂಭಾಸ್ತಂಭಗಳಿಂದಲೂ, ಶಾಖಾಪಲ್ಲವಾದಿಗಳಿಂದ ಕೂಡಿ ಮಂಗಳಯೋಗ್ಯವಾದ ರತ್ನಕಲಶಗಳಿಂದಲೂ ಆ ಮಂಡಪಗಳು ಮನೋಹರವಾಗಿದ್ದುವು.

ಸಿಂದೂರಕುಂಕುಮಾಕ್ತೈಶ್ಚ ಗಂಧಚಂದನಚರ್ಚಿತೈಃ ।
ಭೂಷಿತೈಃ ಪುಷ್ಪಮಾಲಾಭಿಃ ಪಾದಪೈಃ ಪರಿಭೂಷಿತಂ ॥ ೧೫೧ ॥

ಗೋಪಿಕಾನಾಂ ಸಮೂಹೈಶ್ಚ ಕ್ರೀಡಾಸಕ್ತೈಶ್ಚ ವೇಷ್ಟಿತಂ ।
ಬಹುಮೂಲ್ಯೇನ ರತ್ನೇನ ರತ್ನಸೋಪಾನನಿರ್ಮಿತಾನ್ ॥ ೧೫೨ ॥

ವಹ್ನಿಶೌಚಾಂಶುಕೈ ರಮ್ಯೈಃ ಶ್ವೇತಚಾಮರದರ್ಪಣೈಃ ।
ರತ್ನತಲ್ಪವಿಚಿತ್ರೈಶ್ಚ ಪುಷ್ಪಮಾಲ್ಯೈರ್ವಿರಾಜಿತಾನ್ ॥ ೧೫೩ ॥

ಷೋಡಶದ್ವಾರಸಂಯುಕ್ತಾನ್ ದ್ವಾರಪಾಲೈಶ್ಚ ರಕ್ಷಿತಾನ್ ।
ಪರಿತಃ ಪರಿಖಾಯುಕ್ತಾನ್ರತ್ನಪ್ರಾಕಾರವೇಷ್ಟಿತಾನ್ ॥ ೧೫೪ ॥

ಚಂದನಾಗರುಕಸ್ತೂರೀ ಕುಂಕುಮದ್ರವಚರ್ಚಿತಾನ್ ।
ಗೃಹಾನ್ಮನೋರಮಾನ್ದೃಷ್ಟ್ವಾ ತೇ ದೇವಾ ಗಮನೋತ್ಸುಕಾಃ ॥ ೧೫೫ ॥

---

೧೫೧. ಸಿಂದೂರ ಕುಂಕುಮಾದಿಗಳಿಂದ ಲೇಪಿತವಾಗಿ, ಗಂಧಚಂದನಾದಿಗಳಿಂದ ಚರ್ಚಿತವಾಗಿ, ಪುಷ್ಪಮಾಲೆಗಳಿಂದ ಭೂಷಿತವಾಗಿರುವ ಅನೇಕ ಮರಗಳು ಅಲ್ಲಿದ್ದವು.

೧೫೨–೧೫೩. ಕ್ರೀಡಾಸಕ್ತರಾದ ಅನೇಕ ಗೋಪಿಯರು ಅಲ್ಲಿದ್ದರು. ಬಹಳ ಬೆಲೆಬಾಳುವ ರತ್ನಗಳಿಂದ ನಿರ್ಮಿತವಾದ ಸೋಪಾನಗಳಿಂದಲೂ, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳಿಂದಲೂ, ಬಿಳಿಚಾಮರ ಮತ್ತು ರತ್ನಗನ್ನಡಿಗಳಿಂದಲೂ, ವಿಚಿತ್ರವಾದ ರತ್ನಮಂಚಗಳಿಂದಲೂ, ಪುಷ್ಪಮಾಲೆಗಳಿಂದಲೂ ವಿರಾಜಿಸುತ್ತಿರುವ ಅನೇಕ ಮಂದಿರಗಳು ಅಲ್ಲಿದ್ದವು.

೧೫೪. ಷೋಡಶದ್ವಾರಗಳಲ್ಲಿಯೂ ದ್ವಾರಪಾಲಕರಿಂದ ರಕ್ಷಿತವಾದ ಆ ಮಂದಿರಗಳ ಸುತ್ತಲೂ ರತ್ನನಿರ್ಮಿತವಾದ ಕೋಟೆಗಳೂ ಅದರ ಸುತ್ತಲೂ ಕಂದಕಗಳೂ ನಿರ್ಮಿತವಾಗಿದ್ದವು.

೧೫೫. ಚಂದನ, ಅಗುರು, ಕಸ್ತೂರಿ, ಮತ್ತು ಕುಂಕುಮದ್ರವಗಳಿಂದ ಲಿಪ್ತವಾಗಿ ಮನೋಹರವಾಗಿರುವ ಆ ಮಂದಿರಗಳನ್ನು ನೋಡಿ ಆ ದೇವತೆಗಳೆಲ್ಲರೂ ಮುಂದುವರಿಯುತ್ತಿದ್ದರು.

ಜಗ್ಮುಃ ಶೀಘ್ರಂ ಕಿಯದ್ದೂರಂ ದದೃಶುಃ ಸುಂದರಂ ತತಃ ।
ಆಶ್ರಮಂ ರಾಧಿಕಾಯಾಶ್ಚ ರಾಸೇಶ್ವರ್ಯಾಶ್ಚ ನಾರದ ॥ ೧೫೬ ॥

ದೇವಾಧಿದೇವ್ಯಾ ಗೋಪೀನಾಂ ವರಾಯಾಶ್ಚಾರುನಿರ್ಮಿತಂ ।
ಪ್ರಾಣಾಧಿಕಾಯಾಃ ಕೃಷ್ಣಸ್ಯ ರಮ್ಯದ್ರವ್ಯಮನೋಹರಂ ॥ ೧೫೭ ॥

ಸರ್ವಾನಿರ್ವಚನೀಯಂ ಚ ಪಂಡಿತೈರ್ನ ನಿರೂಪಿತಂ ।
ಸುಚಾರುವರ್ತುಲಾಕಾರಂ ಷಡ್ಗವ್ಯೂತಿಪ್ರಮಾಣಕಂ ॥ ೧೫೮ ॥

ಶತಮಂದಿರಸಂಯುಕ್ತಂ ಜ್ವಲಿತಂ ರತ್ನತೇಜಸಾ ।
ಅಮೂಲ್ಯರತ್ನಸಾರಾಣಾಂ ಚಯೈರ್ವಿರಚಿತಂ ವರಂ ॥ ೧೫೯ ॥

ದುರ್ಲಂಘ್ಯಾಭಿರ್ಗಭೀರಾಭಿಃ ಪರಿಖಾಭಿಃ ಸುಶೋಭಿತಂ ।
ಕಲ್ಪವೃಕ್ಷೈಃ ಪರಿವೃತಂ ಪುಷ್ಪೋದ್ಯಾನಶತಾಂತರಂ ॥ ೧೬೦ ॥

---

೧೫೬. ಎಲೈ ನಾರದನೇ, ಈ ರೀತಿಯಾಗಿ ದೇವತೆಗಳು ಸ್ವಲ್ಪದೂರ ಮುಂದೆ ಹೋಗಿ ರಾಸೇಶ್ವರಿಯಾದ ರಾಧಾದೇವಿಯ ಸುಂದರವಾದ ಆಶ್ರಮವನ್ನು ಕಂಡರು.

೧೫೭. ದೇವಾಧಿದೇವಿಯೂ, ಗೋಪಿಯರಲ್ಲಿ ಶ್ರೇಷ್ಠಳೂ, ಶ್ರೀಕೃಷ್ಣನಿಗೆ ಪ್ರಾಣಕ್ಕಿಂತ ಪ್ರಿಯಳೂ ಆದ ರಾಧಾದೇವಿಗಾಗಿ ನಿರ್ಮಿತವಾಗಿದ್ದ ಆ ಆಶ್ರಮವು ರಮ್ಯದ್ರವ್ಯಗಳಿಂದ ಮನೋಹರವಾಗಿದ್ದಿತು.

೧೫೮. ಪಂಡಿತರೂ ಕೂಡ ವರ್ಣಿಸಲಸದಳವಾದ ಆ ಆಶ್ರಮವು ವರ್ತುಳಾಕಾರವಾಗಿಯೂ, ಹನ್ನೆರಡು ಹರಿದಾರಿ ವಿಸ್ತೀರ್ಣವಾಗಿಯೂ ಇದ್ದಿತು.

೧೫೯. ಆ ಆಶ್ರಮದಲ್ಲಿ ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿ ಅತ್ಯುಜ್ವಲವಾದ ನೂರಾರು ಮಂದಿರಗಳು ಕಂಗೊಳಿಸುತ್ತಿದ್ದವು

೧೬೦. ಆಶ್ರಮದ ಸುತ್ತಲೂ ಅತ್ಯಂತ ಆಳವಾಗಿ ದಾಟಲಸಾಧ್ಯವಾದ ಕಂದಕಗಳಿದ್ದವು. ಅನೇಕ ಕಲ್ಪವೃಕ್ಷಗಳೂ, ಅಗಣಿತ ಪುಷ್ಪೋದ್ಯಾನಗಳೂ ಅಲ್ಲಿ ಚಿತ್ತಾಕರ್ಷಕವಾಗಿದ್ದವು

ಸುಮೂಲ್ಯರತ್ನಖಚಿತಪ್ರಾಕಾರೈಃ ಪರಿವೇಷ್ಟಿತಂ ।
ಸದ್ರತ್ನವೇದಿಕಾಯುಕ್ತೈರ್ಯುಕ್ತಂ ದ್ವಾರೈಶ್ಚ ಸಪ್ತಭಿಃ ॥ ೧೬೧ ॥

ಸಂಯುಕ್ತಂ ರತ್ನಚಿತ್ರೈಶ್ಚ ವಿಚಿತ್ರೈರ್ವರ್ತರ್ಜಲಂ ಮುನೇ ।
ಪ್ರಧಾನಸಪ್ತದ್ವಾರೇಭ್ಯಃ ಕ್ರಮಶಃ ಕ್ರಮಶೋ ಮುನೇ ॥ ೧೬೨ ॥

ಸರ್ವತೋಽಪಿ ತತಸ್ತತ್ರ ಷೋಡಶದ್ವಾರಸಂಯುತಂ ।
ದೇವಾ ದೃಷ್ಟ್ವಾ ಚ ಪ್ರಾಕಾರಂ ಸಹಸ್ರಧನುರುಚ್ಛ್ರಿತಂ ॥ ೧೬೩ ॥

ಸದ್ರತ್ನಕ್ಷುದ್ರಕಲಶಸಮೂಹೈಃ ಸುಮನೋಹರೈಃ ।
ಪ್ರದೀಪ್ತಂ ತೇಜಸಾ ರಮ್ಯಂ ಪರಮಂ ವಿಸ್ಮಯಂ ಯಯುಃ ॥ ೧೬೪ ॥

ತತಃ ಪ್ರದಕ್ಷಿಣೀಕೃತ್ಯ ಕಿಯದ್ದೂರಂ ಯಯುರ್ಮುದಾ ।
ಪುರತೋ ಗಚ್ಛತಾಂ ತೇಷಾಂ ಪಶ್ಚಾದ್ಭೂತಸ್ತದಾಶ್ರಮಃ ॥ ೧೬೫ ॥

---

೧೬೧. ಬಹಳ ಬೆಲೆ ಬಾಳುವ ರತ್ನಗಳಿಂದ ನಿರ್ಮಿತವಾದ ಕೋಟೆಗಳೂ, ರತ್ನದ ಜಗಲಿಗಳೂ, ಏಳು ಮಹಾದ್ವಾರಗಳೂ ಆ ಆಶ್ರಮದಲ್ಲಿದ್ದವು.

೧೬೨. ಪ್ರಧಾನವಾದ ಆ ಮಹಾದ್ವಾರಗಳಲ್ಲಿ ಅತ್ಯಂತ ಮನೋಹರವಾದ ಚಿತ್ರಗಳನ್ನು ರಚಿಸಿ ರತ್ನಗಳನ್ನು ಮೆಟ್ಟಿದ್ದರು.

೧೬೩. ಆ ಸಪ್ತದ್ವಾರಗಳ ಮುಖಾಂತರ ಒಳಕ್ಕೆ ಹೋದರೆ ಅಲ್ಲಿ ಷೋಡಶ ದ್ವಾರಗಳುಳ್ಳ ಪ್ರಧಾನ ಮಂದಿರವು ಕಂಗೊಳಿಸುತ್ತಿತ್ತು. ಸಾವಿರ ಧನುಸ್ಸಿನ ಪ್ರಮಾಣದಷ್ಟು ಎತ್ತರವುಳ್ಳ ಆ ಮಂದಿರದ ಪ್ರಾಕಾರವನ್ನು ದೇವತೆಗಳು ಕಂಡರು.

೧೬೪. ಶ್ರೇಷ್ಠವಾದ ರತ್ನದ ಕಲಶಗಳಿಂದ ಪ್ರಜ್ವಲಿಸುತ್ತಿರುವ ಮನೋಹರವಾದ ಆ ಕೋಟೆಯನ್ನು ನೋಡಿ ದೇವತೆಗಳು ಪರಮಾಶ್ಚರ್ಯಗೊಂಡರು.

೧೬೫ ಅನಂತರ ಆ ಆಶ್ರಮವನ್ನು ಪ್ರದಕ್ಷಿಣೆಮಾಡಿಕೊಂಡು ದೇವತೆಗಳು ಮುಂದೆ ಹೋಗಲು ಆ ಆಶ್ರಮವು ಹಿಂದುಳಿಯಿತು.

**ಗೋಪಾನಾಂ ಗೋಪಿಕಾನಾಂ ಚ ದದೃಶುಶ್ಚಾ ಶ್ರಮಾನ್ಪರಾನ್ ।**
**ಅಮೂಲ್ಯರತ್ನರಚಿತಾಂಚ್ಛತಕೋಟಿಮಿತಾನ್ ಮುನೇ ॥ ೧೬೬ ॥**

**ದರ್ಶನ್ ದರ್ಶನ್ ಚ ಪರಿತೋ ಗೋಪಾನಾಂ ಸರ್ವಮಾಶ್ರಮಂ ।**
**ಗೋಪಿಕಾನಾಂ ಚಾಪರಂ ವಾ ರಮ್ಯಂ ರಮ್ಯಂ ನವಂ ನವಂ ॥ ೧೬೭ ॥**

**ಗೋಲೋಕಂ ನಿಖಿಲಂ ದೃಷ್ಟ್ವಾ ಪುಲಕಾಂಗಂ ಯಯುಃ ಸುರಾಃ ।**
**ತದೇವ ವರ್ತುಲಾಕಾರಂ ರಮ್ಯಂ ವೃಂದಾವನಂ ವನಂ ॥ ೧೬೮ ॥**

**ದದೃಶುಃ ಶತಶೃಂಗಂ ಚ ತದ್ಬಹಿರ್ವಿರಜಾನದೀಂ ।**
**ವಿರಜಾಂ ತಾಂ ಯಯುರ್ದೇವಾ ದದೃಶುಃ ಶೂನ್ಯಮೇವ ಚ ॥ ೧೬೯ ॥**

**ವಾಯ್ವಾಧಾರಂ ಚ ಗೋಲೋಕಂ ಸದ್ರತ್ನಮಯಮದ್ಭುತಂ ।**
**ಈಶ್ವರೇಚ್ಛಾವಿನಿರ್ಮಾಣಂ ರಾಧಿಕಾಜ್ಞಾನುಬಂಧನಾತ್ ॥ ೧೭೦ ॥**

---

೧೬೬. ಎಲೈ ನಾರದನೇ, ಮುಂದೆ ನೂರುಕೋಟಿ ಪರಿಮಿತಿಯುಳ್ಳ ಅಮೂಲ್ಯರತ್ನಗಳಿಂದ ನಿರ್ಮಿತವಾದ ಆಶ್ರಮಗಳನ್ನು ದೇವತೆಗಳು ಕಂಡರು. ಅಲ್ಲಿ ಅಸಂಖ್ಯ ಗೋಪಗೋಪಿಯರು ನೆಲಸಿದ್ದರು.

೧೬೭–೧೬೮. ಈ ರೀತಿಯಾಗಿ ಸುತ್ತಲೂ ಮನೋಹರವಾಗಿರುವ ಗೋಪಗೋಪಿಯರ ಆಶ್ರಮವನ್ನೂ, ಹೊಸ ಹೊಸದಾದ ಉದ್ಯಾನವನಗಳನ್ನೂ, ನಿಖಿಲವಾದ ಗೋಲೋಕವನ್ನೂ ವರ್ತುಳಾಕಾರವಾದ ವೃಂದಾವನವನ್ನೂ ನೋಡಿ ದೇವತೆಗಳೆಲ್ಲರೂ ಆನಂದದಿಂದ ರೋಮಾಂಚಿತಶರೀರರಾದರು.

೧೬೯. ಅನಂತರ ಶತಶೃಂಗಪರ್ವತವನ್ನೂ ಅದರ ಹೊರಭಾಗದಲ್ಲಿ ವಿರಜಾ ನದಿಯನ್ನೂ ನೋಡಿದರು. ಆ ನದಿಯ ತೀರಕ್ಕೆ ಹೋಗಿ ಅದು ಶೂನ್ಯವಾಗಿದ್ದುದನ್ನು ಕಂಡರು.

೧೭೦. ರತ್ನವಿಕಾರವಾಗಿಯೂ, ಅತ್ಯದ್ಭುತವಾಗಿಯೂ ಇದ್ದ ಆ ಗೋಲೋಕವು ರಾಧಾದೇವಿಯ ಇಷ್ಟದಂತೆ ಸರ್ವೇಶ್ವರನ ಇಚ್ಛಾಮಾತ್ರದಿಂದ ನಿರ್ಮಿತವಾಗಿ ವಾಯುವಿನಿಂದ ಧರಿಸಲ್ಪಟ್ಟಿದ್ದಿತು.

**ಯುಕ್ತಂ ಸಹಸ್ರೈಃ ಸರಸಾಂ ಕೇವಲಂ ಮಂಗಲಾಲಯಂ ।**
**ನೃತ್ಯಂ ಚ ದದೃಶುಸ್ತತ್ರ ದೇವಾಶ್ಚ ಸುಮನೋಹರಂ ॥ ೧೭೧ ॥**

**ಸುತಾನಂ ಚಾರುಸಂಗೀತಂ ರಾಧಾಕೃಷ್ಣಗುಣಾನ್ವಿತಂ ।**
**ಶ್ರುತ್ವೈವ ಗೀತಪೀಯೂಷಂ ಮೂರ್ಛಾಮಾಪುಃ ಸುರಾ ಮುನೇ ॥ ೧೭೨ ॥**

**ಕ್ಷಣೇನ ಚೇತನಾಂ ಪ್ರಾಪ್ಯ ತೇ ದೇವಾಃ ಕೃಷ್ಣಮಾನಸಾಃ ।**
**ದದೃಶುಃ ಪರಮಾಶ್ಚರ್ಯಂ ಸ್ಥಾನೇ ಸ್ಥಾನೇ ಮನೋಹರಂ ॥ ೧೭೩ ॥**

**ದದೃಶುರ್ಗೋಪಿಕಾಃ ಸರ್ವಾಃ ನಾನಾವೇಷವಿಧಾಯಿಕಾಃ ।**
**ಕಾಶ್ಚಿನ್ಮೃದಂಗಹಸ್ತಾಶ್ಚ ಕಾಶ್ಚಿದ್ವೀಣಾಕರಾ ವರಾಃ ॥ ೧೭೪ ॥**

**ಕಾಶ್ಚಿಚ್ಚಾಮರಹಸ್ತಾಶ್ಚ ಕರತಾಲಕರಾಃ ಪರಾಃ ।**
**ಕಾಶ್ಚಿದ್ಯಂತ್ರವಾದ್ಯಹಸ್ತಾ ರತ್ನನೂಪುರಶೋಭಿತಾಃ ॥ ೧೭೫ ॥**

---

೧೭೧. ಸಾವಿರಾರು ಸರೋವರಗಳಿಂದ ಮನೋಹರವಾಗಿ ಮಂಗಳಾಲಯ ವೆನಿಸಿದ ಅಲ್ಲಿ ದೇವತೆಗಳು ಮನದಣಿಯುವಂತೆ ನೃತ್ಯವನ್ನು ನೋಡಿ ಸಂತಸ ಗೊಂಡರು.

೧೭೨. ರಾಧಾಕೃಷ್ಣರ ಗುಣಗಾನಗಳನ್ನು ವರ್ಣಿಸುವ ತಾಳಲಯಬದ್ಧ ವಾದ ಗಾನಾಮೃತವನ್ನು ಪಾನಮಾಡಿ ದೇವತೆಗಳೆಲ್ಲರೂ, ಆನಂದ ಪರವಶರಾಗಿ ಮೂರ್ಛೆಗೊಂಡರು.

೧೭೩ ಶ್ರೀಕೃಷ್ಣನ ಪರಮಭಕ್ತರಾದ ಆ ದೇವತೆಗಳೆಲ್ಲರೂ ಕ್ಷಣಕಾಲದಲ್ಲಿ ಚೇತನವನ್ನು ಹೊಂದಿ, ಅಲ್ಲಲ್ಲಿ ಮನೋಹರವಾದ ಆಶ್ಚರ್ಯ ದೃಶ್ಯಗಳನ್ನು ನೋಡಿದರು.

೧೭೪. ವಿಚಿತ್ರವೇಷಧಾರಿಗಳಾದ ಕೆಲವರು ಗೋಪಿಯರು ಮೃದಂಗವನ್ನೂ, ಮತ್ತೆಕೆಲವರು ವೀಣೆಯನ್ನೂ ಕೈಯಲ್ಲಿ ಧರಿಸಿ ಬಾರಿಸುತ್ತಿದ್ದರು.

೧೭೫. ರತ್ನದ ಕಾಲ್ಗೊಲಸುಗಳಿಂದ ಶೋಭಿತರಾದ ಕೆಲವು ಗೋಪಿಯರು ದಿವ್ಯಚಾಮರಗಳನ್ನು ಧರಿಸಿದ್ದರು. ಕೆಲವರು ಯಂತ್ರವಾದ್ಯಗಳನ್ನೂ ಮತ್ತೆ ಕೆಲವರು ತಾಳವಾದ್ಯವನ್ನೂ ಧರಿಸಿದ್ದರು.

ಸದ್ರತ್ನಕಿಂಕಿಣೀಜಾಲಶಬ್ದೇನ ಶಬ್ದಿತಾ ವರಾಃ ।
ಕಾಶ್ಚಿನ್ಮಸ್ತಕಕುಂಭಾಶ್ಚ ನೃತ್ಯಭೇದಮನೋರಥಾಃ ॥ ೧೭೬ ॥

ಪುಂವೇಷನಾಯಿಕಾಃ ಕಾಶ್ಚಿತ್ಕಾಶ್ಚಿತ್ತಾಸಾಂ ಚ ನಾಯಿಕಾಃ ।
ಕೃಷ್ಣವೇಷಧರಾಃ ಕಾಶ್ಚಿದ್ರಾಧಾವೇಷಧರಾಃ ಪರಾಃ ॥ ೧೭೭ ॥

ಕಾಶ್ಚಿತ್ಸಂಯೋಗವಿರತಾಃ ಕಾಶ್ಚಿದಾಲಿಂಗನೇ ರತಾಃ ।
ಕ್ರೀಡಾಸಕ್ತಾಶ್ಚ ತಾ ದೃಷ್ಟ್ವಾ ಸಸ್ಮಿತಾ ಜಗದೀಶ್ವರಾಃ ॥ ೧೭೮ ॥

ಪ್ರಗಚ್ಛಂತಂ ಕಿಯದ್ದೂರಂ ದದೃಶುಶ್ಚಾಶ್ರಮಾನ್ಬಹೂನ್ ।
ರಾಧಾಸಖೀನಾಂ ಗೇಹಾಂಶ್ಚ ಪ್ರಧಾನಾನಾಂ ಚ ನಾರದ ॥ ೧೭೯ ॥

ರೂಪೇಣೈವ ಗುಣೇನೈವ ವೇಷೇಣ ಯೌವನೇನ ಚ ।
ಸೌಭಾಗ್ಯೇನೈವ ವಯಸಾ ಸದೃಶೀನಾಂ ಚ ತತ್ರ ವೈ ॥ ೧೮೦ ॥

---

೧೭೬. ಕೆಲವು ಗೋಪಿಯರು ತಲೆಯ ಮೇಲೆ ಕುಂಭವನ್ನು ಧರಿಸಿ, ನರ್ತನಮಾಡುತ್ತಿದ್ದಾಗ, ಅವರ ವಡ್ಯಾಣದಲ್ಲಿದ್ದ ರತ್ನದ ಗೆಜ್ಜೆಗಳು ಇಂಪಾಗಿ ಧ್ವನಿಗೈಯ್ಯುತ್ತಿದ್ದವು.

೧೭೭. ಕೆಲವರು ಪುರುಷವೇಷವನ್ನು ಧರಿಸಿದ್ದರು. ಮತ್ತೆ ಕೆಲವರು ಆ ಪುರುಷರ ನಾಯಿಕೆಯರಾಗಿದ್ದರು. ಕೆಲವರು ಕೃಷ್ಣನ ವೇಷವನ್ನೂ, ಮತ್ತೆ ಕೆಲವರು ರಾಧೆಯ ವೇಷವನ್ನೂ ಧರಿಸಿದ್ದರು.

೧೭೮. ಕೆಲವರು ಪುರುಷಸಂಯೋಗದಲ್ಲಿ ವಿರತರಾಗಿಯೂ ಮತ್ತೆ ಕೆಲವರು ಆಲಿಂಗನಾಸಕ್ತರಾಗಿಯೂ, ಇದ್ದರು. ಈ ರೀತಿಯಾಗಿ ಕ್ರಿಡಾಸಕ್ತರಾದ ಆ ಗೋಪಿಯರನ್ನು ನೋಡಿ ದೇವತೆಗಳು ಪರಮಾಶ್ಚರ್ಯಭರಿತರಾದರು.

೧೭೯. ಎಲೈ ನಾರದನೇ ಈ ರೀತಿಯಾಗಿ ನೋಡುತ್ತಾ ಮುಂದೆ ಹೋಗಿ ರಾಧೆಯ ಪ್ರಧಾನಸಖಿಯರ ಅನೇಕ ಆಶ್ರಮಗಳನ್ನು ಕಂಡರು.

೧೮೦. ಆ ಸಖಿಯರೆಲ್ಲರೂ ವಯೋರೂಪಗುಣಗಳಿಂದಲೂ, ವೇಷಭೂಷಣಗಳಿಂದಲೂ, ಯೌವನ ಸೌಭಾಗ್ಯಗಳಿಂದಲೂ ರಾಧಾದೇವಿಗೆ ಸಮಾನರಾಗಿದ್ದರು.

ತ್ರಯಸ್ತ್ರಿಂಶದ್ವಯಸ್ಯಾಶ್ಚ ರಾಧಿಕಾಯಾಶ್ಚ ಗೋಪಿಕಾಃ ।
ವೇಷಾನಿರ್ವಚನೀಯಾಶ್ಚ ತಾಸಾಂ ನಾಮಾನಿ ಚ ಶೃಣು ॥ ೧೮೧ ॥

ಸುಶೀಲಾ ಚ ಶಶಿಕಲಾ ಯಮುನಾ ಮಾಧವೀ ರತೀ ।
ಕದಂಬಮಾಲಾ ಕುಂತೀ ಚ ಜಾಹ್ನವೀ ಚ ಸ್ವಯಂಪ್ರಭಾ ॥ ೧೮೨ ॥

ಚಂದ್ರಮುಖೀ ಚ ಸಾವಿತ್ರೀ ಗಾಯತ್ರೀ ಸುಮುಖೀ ಸುಖಾ ।
ಪದ್ಮಾಲಯಾ ಪಾರಿಜಾತಾ ಗೌರೀ ಚ ಸರ್ವಮಂಗಲಾ ॥ ೧೮೩ ॥

ಕಾಲಿಕಾ ಕಮಲಾ ದುರ್ಗಾ ಭಾರತೀ ಚ ಸರಸ್ವತೀ ।
ಗಂಗಾಂಬಿಕಾ ಮಧುಮತೀ ಚಂಪಾಽಪರ್ಣಾ ಚ ಸುಂದರೀ ॥ ೧೮೪ ॥

ಕೃಷ್ಣಪ್ರಿಯಾ ಸತೀ ಚೈವ ನಂದಿನೀ ನಂದನೇತಿ ಚ ।
ಏತಾಃ ಸಮಾನಾಃ ಸದ್ರತ್ನರಚಿತಾ ರಾಧಿಕಾಪ್ರಿಯಾಃ ॥ ೧೮೫ ॥

ಏತಾಸಾಂ ಸಮರೂಪಾಣಾಂ ರತ್ನಧಾತುವಿಚಿತ್ರಿತಾನ್ ।
ನಾನಾಪ್ರಕಾರಚಿತ್ರೇಣ ವಿಚಿತ್ರಾನ್ಸುಮನೋಹರಾನ್ । ೧೮೬ ॥

---

೧೮೧. ರಾಧಾನಸಖಿಯರಲ್ಲಿ ಮೂವತ್ತುಮೂರು ಜನ ಗೋಪಿಯರು ಪ್ರಧಾನರಾಗಿದ್ದರು. ಅನಿರ್ವಚನೀಯವಾದ ವೇಷಭೂಷಣವುಳ್ಳ ಆ ಸಖಿಯರ ದಿವ್ಯನಾಮಗಳನ್ನು ಹೇಳುವೆನು ಕೇಳು.

೧೮೨-೧೮೫. ಸುಶೀಲಾ, ಶಶಿಕಲಾ, ಯಮುನಾ, ಮಾಧವಿ, ರತಿ, ಕದಂಬಮಾಲಾ, ಕುಂತಿ, ಜಾಹ್ನವಿ, ಸ್ವಯಂಪ್ರಭಾ, ಚಂದ್ರಮುಖಿ, ಸಾವಿತ್ರಿ, ಗಾಯತ್ರಿ, ಸುಮುಖಿ,|ಸುಖಾ, ಪದ್ಮಾಲಯಾ, ಪಾರಿಜಾತಾ, ಗೌರಿ, ಸರ್ವಮಂಗಲಾ, ಕಾಲಿಕಾ, ಕಮಲಾ, ದುರ್ಗಾ, ಭಾರತಿ, ಸರಸ್ವತಿ, ಗಂಗಾ, ಅಂಬಿಕಾ, ಮಧುಮತಿ, ಚಂಪಾ, ಅಪರ್ಣಾ, ಸುಂದರಿ, ಕೃಷ್ಣಪ್ರಿಯಾ, ಸತಿ, ನಂದಿನಿ, ನಂದನಾ ಎಂದು ಕ್ರಮವಾಗಿ ಆ ಸಖಿಯರ ದಿವ್ಯನಾಮಗಳು. ಶ್ರೇಷ್ಠರತ್ನಾಭರಣಗಳಿಂದ ಅಲಂಕೃತರಾದ ಈ ನಖಿಯರೆಲ್ಲರೂ ರಾಧೆಗೆ ಸಮಾನರು ಮತ್ತು ಅತ್ಯಂತ ಪ್ರೀತಿಪಾತ್ರರು.

೧೮೬-೧೮೭. ಶ್ರೇಷ್ಠರತ್ನಗಳಿಂದಲೂ, ಗೈರಿಕಾದಿ ಧಾತುಗಳಿಂದಲೂ, ರಚಿತವಾಗಿ, ನಾನಾವಿಧವಾದ ಚಿತ್ರಗಳಿಂದ ಮನೋಹರವಾಗಿ, ಅಮೂಲ್ಯವಾದ ರತ್ನ

ಅಮೂಲ್ಯರತ್ನಕಲಶಸಮೂಹೈಃ ಶಿಖರೋಜ್ವಲಾನ್ ।
ಸದ್ರತ್ನರಚಿತಾನ್ ಶುಭ್ರಾನಾಶ್ರಮಾನ್ದದೃಶುಸ್ತಥಾ ॥ ೧೮೭ ॥

ಬ್ರಹ್ಮಾಂಡಾದ್ಬಹಿರೂರ್ಧ್ವಂ ಚ ನಾಸ್ತಿಲೋಕಸ್ತದೂರ್ಧ್ವಕಃ ।
ಊರ್ಧ್ವಂ ಶೂನ್ಯಮಯಂ ಸರ್ವಂ ತದಂತಾ ಸೃಷ್ಟಿರೇವ ಚ ॥ ೧೮೮ ॥

ರಸಾತಲೇಭ್ಯಃ ಸಪ್ತಭ್ಯೋ ನಾಸ್ತ್ಯಧಃ ಸೃಷ್ಟಿರೇವ ಚ ।
ತದಧಶ್ಚ ಜಲಂ ಧ್ವಾಂತಮಗಂತವ್ಯಮದೃಶ್ಯಕಂ ।
ಬ್ರಹ್ಮಾಂಡಾಂತಂ ತದ್ಬಹಿಶ್ಚ ಸರ್ವಂ ಮತ್ತೋ ನಿಶಾಮಯ ॥ ೧೮೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣ ಜನ್ಮಖಂಡೇ
ನಾರಾಯಣನಾರದಸಂವಾದೇ ಗೋಲೋಕವರ್ಣನಂ
ನಾಮ ಚತುರ್ಥೋಽಧ್ಯಾಯಃ

---

ಕಲಶಗಳಿಂದ ಉಜ್ವಲವಾಗಿ, ಆನಂದಕರವಾಗಿರುವ, ಆ ಸಖಿಯರ ದಿವ್ಯಾಶ್ರಮ ಗಳನ್ನು ಕಂಡರು.

೧೮೮. ನಿಖಿಲಬ್ರಹ್ಮಾಂಡಕ್ಕೂ ಮೇಲುಭಾಗದಲ್ಲಿರುವ ಆ ಗೋಲೋಕದ ಮೇಲೆ ಬೇರೆ ಲೋಕವಿಲ್ಲ. ಅಲ್ಲಿಂದ ಮೇಲಕ್ಕೆಲ್ಲ ಶೂನ್ಯಮಯವಾಗಿದೆ. ಮೇಲ ಭಾಗದಲ್ಲಿ ಗೋಲೋಕವೇ ಸೃಷ್ಟಿಯ ಎಲ್ಲೆಯಾಗಿರುವುದು.

೧೮೯. ಅಂತೆಯೇ ಏಳುಪಾತಾಳಲೋಕಗಳೇ ಕೆಳಭಾಗದ ಕೊನೆಯ ಎಲ್ಲೆ ಯಾಗಿರುವುದು. ಅದರ ಕೆಳಗೆ ಜಲಪೂರಿತವಾಗಿ ಅಂಧಕಾರಮಯವೂ ದುರ್ಗಮವೂ ಆಗಿರುವುದು. ಈ ರೀತಿಯಾಗಿ ಬ್ರಹ್ಮಾಂಡದ ಆದ್ಯಂತಗಳನ್ನು ವಿವರಿಸಿದೆನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ಗೋಲೋಕವರ್ಣನವೆಂಬ ನಾಲ್ಕನೆಯ
ಅಧ್ಯಾಯವು ಮುಗಿದುದು.



## ನಾಲ್ಕನೆಯ ಅಧ್ಯಾಯದ ಸಾರಾಂಶ

ಹಿಂದೆ ವಾರಾಹ ಕಲ್ಪದಲ್ಲಿ ದುಷ್ಟರ ಭಾರವನ್ನು ಸಹಿಸಲಾರದೆ ಭೂದೇವಿಯು ದೇವತೆಗಳೊಡಗೂಡಿ ಬ್ರಹ್ಮನ ಸಭೆಗೆ ಬಂದು, ತನ್ನ ಕಷ್ಟಗಳನ್ನು ಬ್ರಹ್ಮನಲ್ಲಿ ವಿಜ್ಞಾಪಿಸಿಕೊಂಡು ಶರಣಾಗತಳಾದಳು ಆಗ ಬ್ರಹ್ಮದೇವನು ಭೂದೇವಿಯನ್ನೂ, ಇತರ ದೇವತೆಗಳನ್ನೂ ಸ್ವಾಂತನಗೊಳಿಸಿ ಅವರೊಡನೆ ಕೈಲಾಸಪರ್ವತಕ್ಕೆ ಹೋಗಿ ಪ್ರಶಾಂತಸ್ವರೂಪನಾದ ಶಂಕರನಲ್ಲಿ ಎಲ್ಲ ವಿಷಯವನ್ನೂ ವಿಜ್ಞಾಪಿಸಿಕೊಂಡನು. ಅನಂತರ ಶಂಕರನು ಬ್ರಹ್ಮಾದಿ ದೇವತೆಗಳನ್ನೂ, ಧರ್ಮಪುರುಷನನ್ನೂ ಕರೆದು ಕೊಂಡು ವೈಕುಂಠಕ್ಕೆ ಹೋಗಿ ಶ್ರೀಹರಿಗೆ ತಾವು ಬಂದ ಸಮಾಚಾರವನ್ನು ಅರುಹಿ ದನು. ಆಗ ಶ್ರೀಮನ್ನಾರಾಯಣನು ಗೋಲೋಕದಲ್ಲಿರುವ ಶ್ರೀಕೃಷ್ಣ ಪರಮಾತ್ಮನೂ, ತಾನೂ ಅಭಿನ್ನರೆಂಬುದನ್ನು ತಿಳಿಸಿ 'ನೀವೆಲ್ಲರೂ ಗೋಕುಲಕ್ಕೆ ತೆರಳಿ, ನಾನೂ ಹಿಂದಿನಿಂದ ಅಲ್ಲಿಗೆ ಬರುವೆನು' ಎಂಬುದಾಗಿ ಹೇಳಿದನು. ಆಗ ಬ್ರಹ್ಮಾದಿ ದೇವತೆ ಗಳೆಲ್ಲರೂ ಗೋಲೋಕಾಭಿಮುಖರಾಗಿ ಹೊರಟು ದಾರಿಯಲ್ಲಿ ಮನೋಹರವಾದ ವಿರಜಾನದಿಯನ್ನೂ, ಶತಶೃಂಗಪರ್ವತವನ್ನೂ, ಸುಂದರವಾದ ಉದ್ಯಾನವನಗಳನ್ನೂ ನೋಡಿ ಆನಂದಪರವಶವಾದರು. ಮುಂದೆ ಹೋಗುತ್ತ ಅನೇಕ ದಿವ್ಯಾಶ್ರಮ ಗಳನ್ನೂ, ಮನೋಹರವಾದ ವೃಂದಾವನವನ್ನೂ, ರಾಸಮಂಡಲವನ್ನೂ, ದಿವ್ಯಾ ಲಂಕಾರಭೂಷಿತರಾದ ಅಸಂಖ್ಯಗೋಪಗೋಪಿಯರನ್ನೂ ಆ ದೇವತೆಗಳು ನೋಡಿ ದರು ವರ್ಣಿಸಲಸದಳವಾದ ಸಮಸ್ತಭೋಗಸಾಮಗ್ರಿಗಳಿಂದ ಪರಿಪೂರ್ಣವಾದ ಆ ಗೋಲೋಕದಲ್ಲಿ ಶ್ರೀಕೃಷ್ಣಪರಮಾತ್ಮನ ಅನನ್ಯ ಭಕ್ತರೆಲ್ಲರೂ ಆನಂದಸ್ವರೂಪ ರಾಗಿದ್ದರು. ಈ ರೀತಿಯಾಗಿ ಬ್ರಹ್ಮಾಂಡಕ್ಕೆಲ್ಲಾ ಮೇಲುಭಾಗದಲ್ಲಿರುವ ಆನಂದ ಮಯವಾದ ಗೋಲೋಕವನ್ನು ದೇವತೆಗಳು ನೋಡಿ ಆನಂದತುಂದಿಲರಾದರು.



— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ಪಂಚಮೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

**ಗೋಲೋಕಂ ನಿಖಿಲಂ ದೃಷ್ಟ್ವಾ ದೇವಾಸ್ತೇ ಹೃಷ್ಟಮಾನಸಾಃ ।**
**ಪುನರಾಜಗ್ಮೂ ರಾಧಾಯಾಃ ಪ್ರಧಾನದ್ವಾರಮೇವ ಚ ॥ ೧ ॥**

**ಸದ್ರತ್ನಮಣಿನಿರ್ಮಾಣಂ ವೇದಿಕಾಯುಗ್ಮಸಂಯುತಂ ।**
**ಹರಿದ್ರಾಕಾರಮಣಿನಾ ವಜ್ರಸಂಮಿಶ್ರಿತೇನ ಚ ॥ ೨ ॥**

**ಅಮೂಲ್ಯರತ್ನರಚಿತಕಪಾಟೇನ ವಿಭೂಷಿತಂ ।**
**ದ್ವಾರೇ ನಿಯುಕ್ತಂ ದದೃಶುರ್ವೀರಭಾನುಮನುತ್ತಮಂ ॥ ೩ ॥**

---

### ಐದನೆಯ ಅಧ್ಯಾಯವು

೧. ಶ್ರೀನಾರಾಯಣ :—ಈ ರೀತಿಯಾಗಿ ದೇವತೆಗಳೆಲ್ಲರೂ ಗೋಲೋಕವನ್ನೂ ಅಲ್ಲಿಯ ವೈಭವವನ್ನೂ ಮನದಣಿಯುವಂತೆ ನೋಡಿ ಆನಂದತುಂದಿಲರಾಗಿ, ರಾಧಾಮಂದಿರದ ಪ್ರಧಾನ ದ್ವಾರಕ್ಕೆ ಹಿಂತಿರುಗಿದರು.

೨ ಆ ದ್ವಾರದಲ್ಲಿ ಶ್ರೇಷ್ಠರತ್ನಗಳಿಂದಲೂ, ಅರಶಿನಬಣ್ಣದ ಮಣಿಗಳಿಂದಲೂ, ವಜ್ರ ವೈಡೂರ್ಯಾದಿಗಳಿಂದಲೂ ರಚಿತವಾದ ಎರಡು ಜಗಲಿಗಳಿದ್ದುವು.

೩. ಅಮೂಲ್ಯರತ್ನಗಳಿಂದ ರಚಿತವಾದ ಬಾಗಿಲುಗಳುಳ್ಳ ಆ ಮಂದಿರದ ದ್ವಾರದಲ್ಲಿ ವೀರಭಾನುವೆಂಬ ದ್ವಾರಪಾಲಕನಿದ್ದುದನ್ನು ಆ ದೇವತೆಗಳು ಕಂಡರು

ರತ್ನಸಿಂಹಾಸನಸ್ಥಂ ಚ ರತ್ನಾಭರಣಭೂಷಿತಂ ।
ಪೀತವಸ್ತ್ರಪರೀಧಾನಂ ಸದ್ರತ್ನಮುಕುಟೋಜ್ಜ್ವಲಂ ॥ ೪ ॥

ದ್ವಾರಂ ಚಿತ್ರವಿಚಿತ್ರೇಣ ವಿಚಿತ್ರಂ ಪರಮಾದ್ಭುತಂ ।
ಸರ್ವಂ ನಿವೇದನಂ ಚಕ್ರುರ್ದೇವಾ ದೌವಾರಿಕಂ ಮುದಾ ॥ ೫ ॥

ತಾನುವಾಚ ದ್ವಾರಪಾಲೋ ನಿಃಶಂಕಂ ತ್ರಿದಶೇಶ್ವರಾನ್ ।
ನಾಹಂ ವಿನಾಜ್ಞಯಾ ಗಂತುಂ ದಾತುಂ ಸಾಂಪ್ರತಮೀಶ್ವರಃ ॥ ೬ ॥

ಕಿಂಕರಾನ್ಪ್ರೇಷಯಾಮಾಸ ಶ್ರೀಕೃಷ್ಣಸ್ಥಾನಮೇವ ಚ ।
ಹರೇರನುಜ್ಞಾಂ ಸಂಪ್ರಾಪ್ಯ ದದೌ ಗಂತುಂ ಸುರಾನ್ಮುನೇ ॥ ೭ ॥

ತಂ ಸಂಭಾಷ್ಯ ಯಯುರ್ದೇವಾ ದ್ವಿತೀಯಂ ದ್ವಾರಮುತ್ತಮಂ ।
ತತೋಽಧಿಕಂ ವಿಚಿತ್ರಂ ಚ ಸುಂದರಂ ಸುಮನೋಹರಂ ॥ ೮ ॥

---

೪ ಅವನು ಪೀತಾಂಬರವನ್ನುಟ್ಟು, ರತ್ನದ ಕಿರೀಟವನ್ನೂ ರತ್ನಾಭರಣಗಳನ್ನೂ ಧರಿಸಿ, ರತ್ನಸಿಂಹಾಸನದಲ್ಲಿ ಮಂಡಿಸಿದ್ದನು.

೫. ಚಿತ್ರವಿಚಿತ್ರವಾದ ಆ ದ್ವಾರವನ್ನು ನೋಡಿ ಆಶ್ಚರ್ಯಭರಿತರಾದ ಆ ದೇವತೆಗಳು ಆ ದ್ವಾರಪಾಲಕನಲ್ಲಿ ತಾವು ಬಂದಿರುವ ಸಮಾಚಾರವನ್ನು ತಿಳುಹಿದರು.

೬. ಆಗ ದ್ವಾರಪಾಲಕನು 'ನಮ್ಮ ಪ್ರಭುವಿನ ಆಜ್ಞೆಯಾಗದೆ ನಾನು ಯಾರನ್ನೂ ಒಳಕ್ಕೆ ಹೋಗಗೊಡಲಾರೆನು' ಎಂದು ಆ ದೇವತೆಗಳಿಗೆ ಹೇಳಿದನು.

೭ ಮತ್ತು ಶ್ರೀಕೃಷ್ಣಪರಮಾತ್ಮನ ಸಮೀಪಕ್ಕೆ ಕಿಂಕರರನ್ನು ಕಳುಹಿಸಿ, ಅವನ ಅನುಜ್ಞೆಯನ್ನು ಪಡೆದು ಅನಂತರ ದೇವತೆಗಳನ್ನು ಒಳಕ್ಕೆ ಬಿಟ್ಟನು.

೮ ವೀರಭಾನುವಿನ ಕುಶಲಪ್ರಶ್ನೆಮಾಡಿ ದೇವತೆಗಳು ಮುಂದೆಹೊರಟು ಅದಕ್ಕಿಂತಲೂ ಮನೋಹರವಾದ ಎರಡನೆಯ ದ್ವಾರವನ್ನು ಕಂಡರು.

ದ್ವಾರೇ ನಿಯುಕ್ತಂ ದದೃಶುಶ್ಚಂದ್ರಭಾನುಂ ಚ ನಾರದ ।
ಕಿಶೋರಂ ಶ್ಯಾಮಲಂ ಚಾರು ಸ್ವರ್ಣವೇತ್ರಧರಂ ವರಂ ॥ ೯ ॥

ರತ್ನಸಿಂಹಾಸನಸ್ಥಂ ಚ ರತ್ನಭೂಷಣ ಭೂಷಿತಂ ।
ಗೋಪಾನಾಂ ಚ ಸಮೂಹೇನ ಪಂಚಲಕ್ಷೇಣ ಶೋಭಿತಂ ॥ ೧೦ ॥

ತಂ ಸಂಭಾಷ್ಯ ಯಯುರ್ದೇವಾಸ್ತೃತೀಯಂ ದ್ವಾರಮುತ್ತಮಂ ।
ತತೋಽತಿಸುಂದರಂ ಚಿತ್ರಂ ಜ್ವಲಂತಂ ಮಣಿತೇಜಸಾ ॥ ೧೧ ॥

ದ್ವಾರೇ ನಿಯುಕ್ತಂ ದದೃಶುಃ ಸೂರ್ಯಭಾನುಂ ಚ ನಾರದ ।
ದ್ವಿಭುಜಂ ಮುರಲೀಹಸ್ತಂ ಕಿಶೋರಂ ಶ್ಯಾಮಸುಂದರಂ ॥ ೧೨ ॥

ಮಣಿಕುಂಡಲಯುಗ್ಮೇನ ಗಂಡಸ್ಥಲವಿರಾಜಿತಂ ।
ರತ್ನದಂಡಕರಂ ಶ್ರೇಷ್ಠಂ ಪ್ರೇಷ್ಯಂ ರಾಧೇಶಯೋಃ ಪರಂ ॥ ೧೩ ॥

---

೯. ಎಲೈ ನಾರದನೇ, ಆ ದ್ವಾರದಲ್ಲಿ ಕಿಶೋರವಯಸ್ಕನೂ, ಶ್ಯಾಮಲ ವರ್ಣದವನೂ, ಆದ ಚಂದ್ರಭಾನುವೆಂಬುವನು ಚಿನ್ನದ ಬೆತ್ತವನ್ನು ಹಿಡಿದು ಕಂಗೊಳಿಸುತ್ತಿದ್ದನು.

೧೦. ಅವನು ರತ್ನಭೂಷಣಗಳಿಂದ ಭೂಷಿತನಾಗಿ ರತ್ನಸಿಂಹಾಸನದಲ್ಲಿ ಕುಳಿತು ಐದುಲಕ್ಷ ಗೋಪರಿಂದ ಪರಿವೃತನಾಗಿದ್ದನು.

೧೧. ಅವನೊಡನೆ ಸಂಭಾಷಿಸಿ ದೇವತೆಗಳು ಮಣಿಗಳ ತೇಜಸ್ಸಿನಿಂದ ಉಜ್ವಲವಾಗಿ ಅದಕ್ಕಿಂತಲೂ ಮನೋಹರವಾದ ಮೂರನೆಯ ದ್ವಾರವನ್ನು ಮುಂದೆ ನೋಡಿದರು.

೧೨. ಎಲೈ ನಾರದನೇ, ಆ ದ್ವಾರದಲ್ಲಿ ದ್ವಿಭುಜನೂ, ಶ್ಯಾಮಸುಂದರನೂ ಆದ ಸೂರ್ಯಭಾನುವೆಂಬುವನು ಕೈಯ್ಯಲ್ಲಿ ಕೊಳಲನ್ನು ಧರಿಸಿ ನಿಂತಿದ್ದನು.

೧೩. ಅವನು ಧರಿಸಿದ್ದ ಮಣಿಕುಂಡಲಗಳು ಕಪೋಲಸ್ಥಳದಲ್ಲಿ ಪ್ರತಿಬಿಂಬಿತವಾಗಿದ್ದವು. ರಾಧಾಕೃಷ್ಣರ ಸೇವಕನಾದ ಅವನು ಒಂದು ಕೈಯ್ಯಲ್ಲಿ ರತ್ನದ ದಂಡವನ್ನು ಧರಿಸಿದ್ದನು.

ನವಲಕ್ಷೇಣ ಗೋಪಾನಾಂ ವೇಷ್ಟಿತಂ ಚ ನೃಪೇಂದ್ರವತ್ ।
ತಂ ಸಂಭಾಷ್ಯ ಯುಯುರ್ದೇವಾಶ್ಚತುರ್ಥಂ ದ್ವಾರಮುತ್ತಮಂ || ೧೪ ||

ತೇಭ್ಯೋ ವಿಲಕ್ಷಣಂ ರಮ್ಯಂ ಸುದೀಪ್ತಂ ಮಣಿತೇಜಸಾ ।
ಅತ್ಯದ್ಭುತವಿಚಿತ್ರೇಣ ಭೂಷಿತಂ ಸುಮನೋಹರಂ || ೧೫ ||

ದ್ವಾರೇ ನಿಯುಕ್ತಂ ದದೃಶುರ್ವಸುಭಾನುಂ ವ್ರಜೇಶ್ವರಂ ।
ಕಿಶೋರಂ ಸುಂದರವರಂ ಮಣಿದಂಡಕರಂ ಪರಂ || ೧೬ ||

ರತ್ನಸಿಂಹಾಸನಸ್ಥಂ ಚ ರತ್ನಭೂಷಣಭೂಷಿತಂ ।
ಪಕ್ವಬಿಂಬಾಧರೋಷ್ಠಂ ಚ ಸಸ್ಮಿತಂ ಸುಮನೋಹರಂ || ೧೭ ||

ತಂ ಸಂಭಾಷ್ಯ ಯುಯುರ್ದೇವಾಃ ಪಂಚಮಂ ದ್ವಾರಮೇವ ಚ ।
ವಜ್ರಭಿತ್ತಿಸ್ಥಿತೈಶ್ಚಿತ್ರ ವಿಚಿತ್ರೈರುಜ್ಜ್ವಲಿತಂ ಪರಂ || ೧೮ ||

---

೧೪. ಒಂಭತ್ತುಲಕ್ಷ ಗೋಪಾಲಕರಿಂದ ಪರಿವೃತನಾದ ಆ ದ್ವಾರಪಾಲಕನನ್ನು ಮಾತನಾಡಿಸಿ ದೇವತೆಗಳು ಮುಂದೆ ನಾಲ್ಕನೆಯ ದ್ವಾರಕ್ಕೆ ಹೋದರು.

೧೫. ಆ ದ್ವಾರವು ಎಲ್ಲಕ್ಕಿಂತಲೂ ವಿಲಕ್ಷಣವೂ, ಮಣಿಗಳ ತೇಜಸ್ಸಿನಿಂದ ಪ್ರದೀಪ್ತವೂ, ಅತ್ಯದ್ಭುತವಾದ ವಿಚಿತ್ರಚಿತ್ರಗಳಿಂದ ಭೂಷಿತವೂ ಮನೋಹರವೂ ಆಗಿದ್ದಿತು

೧೬. ಆ ದ್ವಾರದಲ್ಲಿ ಕಿಶೋರವಯಸ್ಕನೂ, ಸುಂದರನೂ ಆದ ವಸುಭಾನುವೆಂಬುವನು ಮಣಿದಂಡವನ್ನು ಧರಿಸಿ ನಿಂತಿದ್ದನು.

೧೭. ರತ್ನಭೂಷಣ ಭೂಷಿತನಾಗಿ ಸುಪಕ್ವವಾದ ಬಿಂಬಫಲದಂತೆ ಕೆಂಪಾದ ತುಟಿಯಲ್ಲಿ ಎಳನಗೆಯನ್ನು ಬೀರುತ್ತಿದ್ದ ಆ ವಸುಭಾನುವು ರತ್ನಸಿಂಹಾಸನದಲ್ಲಿ ಮಂಡಿಸಿದ್ದನು.

೧೮. ದೇವತೆಗಳು ಅವನ ಕುಶಲಪ್ರಶ್ನೆಯನ್ನು ಮಾಡಿದನಂತರ, ವಜ್ರದ ಗೋಡೆಗಳಲ್ಲಿರುವ ಚಿತ್ರಗಳಿಂದ ಮನೋಹರವಾದ ಐದನೆಯ ದ್ವಾರಕ್ಕೆ ಬಂದರು.

ದ್ವಾರಪಾಲಂ ಚ ದದೃಶುರ್ದೇವಭಾನುಂ ಚ ತತ್ರ ವೈ ।
ಚಾರುಸಿಂಹಾಸನಸ್ಥಂ ಚ ರತ್ನಭೂಷಣಭೂಷಿತಂ । ॥ ೧೯ ॥

ಮಯೂರಪುಚ್ಛಚೂಡಂ ಚ ರತ್ನಮಾಲಾವಿಭೂಷಿತಂ ।
ಕದಂಬಪುಷ್ಪಸಂಸಕ್ತ ಸದ್ರತ್ನಕುಂಡಲೋಜ್ವಲಂ ॥ ೨೦ ॥

ಚಂದನಾಗರುಕಸ್ತೂರೀ ಕುಂಕುಮದ್ರವಚರ್ಚಿತಂ ।
ನೃಪೇಂದ್ರವರತುಲ್ಯಂ ಚ ದಶಲಕ್ಷಪ್ರಜಾನ್ವಿತಂ ॥ ೨೧ ॥

ತಂ ವೇತ್ರಪಾಣಿಂ ಸಂಭಾಷ್ಯ ಯಯುರ್ದೇವಾ ಮುದಾನ್ವಿತಾಃ ।
ವಿಲಕ್ಷಣಂ ದ್ವಾರಷಟ್ಕಂ ಚಿತ್ರರಾಜವಿರಾಜಿತಂ ॥ ೨೨ ॥

ವಜ್ರಭಿತ್ತಿಯುಗ್ಮಯುಕ್ತೇ ಪುಷ್ಪಮಾಲ್ಯವಿಭೂಷಿತೇ ।
ದ್ವಾರೇ ನಿಯುಕ್ತಂ ದದೃಶುಃ ಶುಕಭಾನುಂ ವ್ರಜೇಶ್ವರಂ ॥ ೨೩ ॥

---

೧೯. ಅಲ್ಲಿ ರತ್ನಭೂಷಣಗಳಿಂದ ಭೂಷಿತನಾಗಿ ರತ್ನಸಿಂಹಾಸನದಲ್ಲಿ ಮಂಡಿಸಿರುವ ದೇವಭಾನುವೆಂಬ ದ್ವಾರಪಾಲಕನನ್ನು ನೋಡಿದರು.

೨೦. ಚೂಡಾಪಾಶದಲ್ಲಿ ನವಿಲುಗರಿಯನ್ನು ಅಲಂಕರಿಸಿಕೊಂಡು ಕಂಠದಲ್ಲಿ ರತ್ನಮಾಲೆಯನ್ನು ಧರಿಸಿದ್ದ ಆ ದೇವಭಾನುವಿನ ಕಿವಿಯಲ್ಲಿ ರತ್ನಕುಂಡಲಗಳೂ, ಅವರ ಮೇಲೆ ಕದಂಬ ಪುಷ್ಪದ ಗೊಂಚಲೂ ಶೋಭಿಸುತ್ತಿದ್ದವು

೨೧. ಚಂದನ, ಅಗುರು, ಕಸ್ತೂರಿ, ಮತ್ತು ಕುಂಕುಮಕೇಸರಿಗಳನ್ನು ಅಂಗಾಂಗಗಳಿಗೂ ಲೇಪಿಸಿಕೊಂಡು, ಶ್ರೇಷ್ಠರಾಜನಂತೆ ಹತ್ತುಲಕ್ಷ ಗೋವರೊಡನೆ ಪರಿವೃತನಾಗಿದ್ದನು.

೨೨. ವೇತ್ರಹಸ್ತನಾದ ಅವನನ್ನು ಸಂಭಾಷಿಸಿ, ದೇವತೆಗಳು ಚಿತ್ರವಿಚಿತ್ರ ವಾದ ಆರನೆಯ ಬಾಗಿಲಿಗೆ ಸಂತೋಷದಿಂದ ಹೋದರು.

೨೩ ಪುಷ್ಪಮಾಲೆಗಳಿಂದ ಅಲಂಕೃತವಾದ ಎರಡು ವಜ್ರದ ಗೋಡೆಗಳುಳ್ಳ ಆ ದ್ವಾರದಲ್ಲಿ ಶುಕಭಾನುವೆಂಬ ದ್ವಾರಪಾಲಕನಿದ್ದುದನ್ನು ನೋಡಿದರು.

ನಾನಾಲಂಕಾರಶೋಭಾಢ್ಯಂ ದಶಲಕ್ಷಪ್ರಜಾನ್ವಿತಂ ।
ಶ್ರೀಖಂಡಪಲ್ಲವಾಸಕ್ತಕಪೋಲಂ ಕುಂಡಲೋಜ್ವಲಂ　　|| ೨೪ ||

ತೂರ್ಣಂ ಸುರಾಸ್ತಂ ಸಂಭಾಷ್ಯ ಯಯುರ್ದ್ವಾರಂ ಚ ಸಪ್ತಮಂ ।
ನಾನಾಪ್ರಕಾರಚಿತ್ರಂ ಚ ಷಡ್ಭ್ಯಃಶ್ಚಾತಿವಿಲಕ್ಷಣಂ　　|| ೨೫ ||

ದ್ವಾರೇ ನಿಯುಕ್ತಂ ದದೃಶೂ ರತ್ನಭಾನುಂ ಹರೇಃ ಪ್ರಿಯಂ ।
ಚಂದನೋಕ್ಷಿತಸರ್ವಾಂಗಂ ಪುಷ್ಪಮಾಲಾವಿಭೂಷಿತಂ ।
ಭೂಷಿತಂ ಭೂಷಣೈ ರಮ್ಯೈರ್ಮಣಿರತ್ನಮನೋಹರೈಃ　　|| ೨೬ ||

ಗೋಪೈರ್ದ್ವಾದಶಲಕ್ಷೈಶ್ಚ ರಾಜೇಂದ್ರಮಿವ ರಾಜಿತಂ ।
ರತ್ನಸಿಂಹಾಸನಸ್ಥಂ ಚ ಸ್ಮೇರಾನನಸರೋರುಹಂ　　|| ೨೭ ||

---

೨೪. ಅವನು ನಾನಾಲಂಕಾರಗಳಿಂದ ಶೋಭಿತನಾಗಿ, ಕುಂಡಲಗಳಿಂದ ಉಜ್ವಲವಾದ ಕಪೋಲಗಳಲ್ಲಿ ಶ್ರೀಗಂಧದ ಚಿಗುರುಗಳನ್ನು ಅಲಂಕರಿಸಿಕೊಂಡು. ಹತ್ತುಲಕ್ಷ ಗೋಪರಿಂದ ಪರಿವೃತನಾಗಿದ್ದನು.

೨೫. ದೇವತೆಗಳು ಅವನನ್ನು ಸಂಭಾಷಿಸಿ, ನಾನಾವಿಧ ಚಿತ್ರಗಳಿಂದ ಶೋಭಿತವಾಗಿ, ಈ ಆರಕ್ಕಿಂತಲೂ ಅತಿ ವಿಲಕ್ಷಣವಾಗಿರುವ ಏಳನೆಯ ದ್ವಾರಕ್ಕೆ ಜಾಗ್ರತೆಯಾಗಿ ಬಂದರು.

೨೬. ಅಲ್ಲಿ ಸರ್ವಾಂಗಗಳಿಗೂ ಚಂದನವನ್ನು ಲೇಪಿಸಿಕೊಂಡು ಪುಷ್ಪಮಾಲೆಯನ್ನು ಧರಿಸಿ, ರಮ್ಯವಾದ ಮಣಿಗಳಿಂದ ಅಲಂಕೃತನಾಗಿ, ಶ್ರೀಹರಿಗೆ ಪ್ರೀತಿಪಾತ್ರನಾಗಿದ್ದ ರತ್ನಭಾನುವೆಂಬುವನಿದ್ದುದನ್ನು ನೋಡಿದರು.

೨೭. ಅವನು ರಾಜೇಂದ್ರನಂತೆ ಹನ್ನೆರಡುಲಕ್ಷ ಗೋಪರಿಂದ ಪರಿವೃತನಾಗಿ ರತ್ನಸಿಂಹಾಸನದಲ್ಲಿ ಕುಳಿತು ಮಂದಹಾಸವನ್ನು ಬೀರುತ್ತಿದ್ದನು.

ತಂ ವೇತ್ರಹಸ್ತಂ ಸಂಭಾಷ್ಯ ಜಗ್ಮುರ್ದೇವೇಶ್ವರಾ ಮುದಾ ।
ವಿಚಿತ್ರಮಷ್ಟಮಂ ದ್ವಾರಂ ಸಪ್ತಭ್ಯೋಽಪಿ ವಿಲಕ್ಷಣಂ ॥ ೨೮ ॥

ದೌವಾರಿಕಂ ತೇ ದದೃಶುಃ ಸುಪಾರ್ಶ್ವಂ ಸುಮನೋಹರಂ ।
ಸಸ್ಮಿತಂ ಸುಂದರವರಂ ಶ್ರೀಖಂಡತಿಲಕೋಜ್ವಲಂ ॥ ೨೯ ॥

ಬಂಧುಜೀವಾಧರೋಷ್ಠಂ ಚ ರತ್ನಕುಂಡಲಮಂಡಿತಂ ।
ಸರ್ವಾಲಂಕಾರಶೋಭಾಢ್ಯಂ ರತ್ನದಂಡಧರಂ ವರಂ ॥ ೩೦ ॥

ಗೋಪೈರ್ದ್ವಾದಶಲಕ್ಷೈಶ್ಚ ಕಿಶೋರೈಶ್ಚ ಸಮನ್ವಿತಂ ।
ತತಃ ಶೀಘ್ರಂ ಯಯುರ್ದೇವಾ ನವಮಂ ದ್ವಾರಮೀಪ್ಸಿತಂ ॥ ೩೧ ॥

---

೨೮. ವೇತ್ರಹಸ್ತನಾದ ಅವನನ್ನು ಕುಶಲಪ್ರಶ್ನೆ ಮಾಡಿ ದೇವತೆಗಳು ಆ ಏಳಕ್ಕಿಂತಲೂ ವಿಲಕ್ಷಣವೂ, ವಿಚಿತ್ರವೂ ಆದ ಎಂಟನೆಯ ದ್ವಾರವನ್ನು ಮುಂದೆ ಕಂಡರು.

೨೯. ಆ ದ್ವಾರದಲ್ಲಿ ಸುಂದರನೂ, ಮನೋಹರನೂ ಆದ ಸುಪಾರ್ಶ್ವನೆಂಬುವನು ಹಣೆಯಲ್ಲಿ ಚಂದನದ ತಿಲಕವನ್ನು ಧರಿಸಿ ಸ್ಮಿತಮುಖನಾಗಿದ್ದುದನ್ನು ನೋಡಿದರು.

೩೦ ದಾಸವಾಳದ ಹೂವಿನಂತೆ ಕೆಂಪಾದ ಅಧರೋಷ್ಠವುಳ್ಳಾತನು ರತ್ನ ಕುಂಡಲಗಳಿಂದ ಶೋಭಿತನಾಗಿ, ಸರ್ವಾಲಂಕಾರಭೂಷಿತನಾಗಿ ರತ್ನದಂಡವನ್ನು ಧರಿಸಿ ನಿಂತಿದ್ದನು.

೩೧. ಕಿಶೋರವಯಸ್ಕರಾದ ಹನ್ನೆರಡುಲಕ್ಷ ಗೋಪರು ಅವನ ಸುತ್ತಲೂ ನಿಂತಿದ್ದರು. ಅವನೊಡನೆ ಮಾತನಾಡಿದನಂತರ ದೇವತೆಗಳು ಜಾಗ್ರತೆಯಾಗಿ ಒಂಭತ್ತನೆಯ ದ್ವಾರಕ್ಕೆ ಬಂದರು.

ವಜ್ರಸದ್ರತ್ನರಚಿತಂ ಚತುರ್ವೇದಿಸಮನ್ವಿತಂ ।
ಅಪೂರ್ವಚಿತ್ರಯುಕ್ತಂ ಚ ಮಾಲಾಜಾಲೈರ್ವಿರಾಜಿತಂ ॥ ೩೨ ॥

ದ್ವಾರಪಾಲಂ ಚ ದದೃಶುಃ ಸುಬಲಂ ಲಲಿತಾಕೃತಿಂ ।
ನಾನಾಭೂಷಣಭೂಷಾಢ್ಯಂ ಭೂಷಣಾರ್ಹಂ ಮನೋಹರಂ ॥ ೩೩ ॥

ವೃಜೈರ್ದ್ವಾದಶಲಕ್ಷೈಶ್ಚ ಸಂಯುಕ್ತಂ ಸುಮನೋಹರಂ ।
ತಂ ದಂಡಹಸ್ತಂ ಸಂಭಾಷ್ಯ ಸುರಾ ದ್ವಾರಾಂತರಂ ಯಯುಃ ॥ ೩೪ ॥

ವಿಶಿಷ್ಟಂ ದಶಮದ್ವಾರಂ ದೃಷ್ಟ್ವಾ ತೇ ವಿಸ್ಮಿತಾಃ ಸುರಾಃ ।
ಸರ್ವಾನಿರ್ವಚನೀಯಂ ಚಾಪ್ಯದೃಷ್ಟಮಶ್ರುತಂ ಮುನೇ ॥ ೩೫ ॥

ದದೃಶುರ್ದ್ವಾರಪಾಲಂ ಚ ಸುದಾಮಾನಂ ಚ ಸುಂದರಂ ।
ಅನಿರ್ವಚನೀಯರೂಪಂ ಕೃಷ್ಣತುಲ್ಯಂ ಮನೋಹರಂ ॥ ೩೬ ॥

---

೩೨. ಆ ದ್ವಾರದಲ್ಲಿ ವಜ್ರ ಮತ್ತು ಶ್ರೇಷ್ಠರತ್ನಗಳಿಂದ ಖಚಿತವಾದ ನಾಲ್ಕು ಜಗಲಿಗಳೂ, ಅಪೂರ್ವ ಚಿತ್ರಗಳಿಂದ ವಿಚಿತ್ರವಾದ ಮಾಲಾಜಾಲಗಳೂ ಶೋಭಿಸುತ್ತಿದ್ದವು.

೩೩. ಅಲ್ಲಿ ಸುಂದರಾಕಾರನೂ, ನಾನಾಲಂಕಾರಭೂಷಿತನೂ, ಮನೋಹರನೂ ಆದ ಸುಬಲನೆಂಬ ದ್ವಾರಪಾಲಕನಿದ್ದುದನ್ನು ನೋಡಿದರು.

೩೪. ಹನ್ನೆರಡುಲಕ್ಷ ಗೋಪರಿಂದ ಪರಿವೃತನಾಗಿ ದಂಡಧಾರಿಯಾಗಿರುವ ಆ ದ್ವಾರಪಾಲಕನನ್ನು ಸಂಭಾಷಿಸಿ ದೇವತೆಗಳು ಮತ್ತೊಂದು ದ್ವಾರಕ್ಕೆ ತೆರಳಿದರು.

೩೫. ಎಲೈ ನಾರದಮುನಿಯೇ, ಹಿಂದೆಂದೂ ನೋಡಿ ಕೇಳದ, ಅನಿರ್ವಚನೀಯವೂ, ಅತ್ಯಂತ ಮನೋಹರವೂ ಆದ ಆ ಹತ್ತನೆಯ ದ್ವಾರವನ್ನು ನೋಡಿ ದೇವತೆಗಳೆಲ್ಲರೂ ಆಶ್ಚರ್ಯಗೊಂಡರು

೩೬. ಅಲ್ಲಿ ಶ್ರೀಕೃಷ್ಣನಂತೆ ಅನಿರ್ವಚನೀಯಸೌಂದರ್ಯಶಾಲಿಯೂ, ಮನೋಹರನೂ, ಆದ ಸುದಾಮನೆಂಬ ದ್ವಾರಪಾಲಕನನ್ನು ದೇವತೆಗಳು ಕಂಡರು.

ಗೋಪವಿಂಶತಿಲಕ್ಷಾಣಾಂ ಸಮೂಹೈಃ ಪರಿವಾರಿತಂ ।
ತಂ ದಂಡಹಸ್ತಂ ದೃಷ್ಟ್ವೈವ ಜಗ್ಮುರ್ದ್ವಾರಾಂತರಂ ಸುರಾಃ || ೩೭ ||

ದ್ವಾರಮೇಕಾದಶಾಖ್ಯಂ ಚ ಸುಚಿತ್ರಂ ಮಹದದ್ಭುತಂ ।
ದ್ವಾರಪಾಲಂ ಚ ತತ್ರಸ್ಥಂ ಶ್ರೀದಾಮಾನಂ ವ್ರಜೇಶ್ವರಂ ೩೮ ||

ರಾಧಿಕಾಪುತ್ರತುಲ್ಯಂ ಚ ಪೀತವಸ್ತ್ರೇಣ ಭೂಷಿತಂ ।
ಅಮೂಲ್ಯರತ್ನರಚಿತರಮ್ಯಸಿಂಹಾಸನಸ್ಥಿತಂ || ೩೯ ||

ಅಮೂಲ್ಯ ರತ್ನಭೂಷಾಭಿರ್ಭೂಷಿತಂ ಸುಮನೋಹರಂ ।
ಚಂದನಾಗರುಕಸ್ತೂರೀಕುಂಕುಮೇನ ವಿರಾಜಿತಂ || ೪೦ ||

ಗಂಡಸ್ಥಲಕಪೋಲಾರ್ಹಸದ್ರತ್ನಕುಂಡಲೋಜ್ವಲಂ ।
ಸದ್ರತ್ನಶ್ರೇಷ್ಠರಚಿತ ವಿಚಿತ್ರಮುಕುಟೋಜ್ವಲಂ || ೪೧ ||

---

೩೭. ಇಪ್ಪತ್ತುಲಕ್ಷ ಗೋಪಾಲಕರಿಂದ ಪರಿವೃತನಾಗಿ, ದಂಡಧರನಾಗಿ ನಿಂತಿರುವ ಆ ಸುದಾಮನನ್ನು ಸಂಭಾಷಿಸಿ ದೇವತೆಗಳೆಲ್ಲರೂ ಮುಂದಿನ ದ್ವಾರಕ್ಕೆ ಹೋದರು.

೩೮. ಚಿತ್ರವಿಚಿತ್ರವಾಗಿಯೂ, ಅದ್ಭುತಾಕಾರವಾಗಿಯೂ ಇದ್ದ ಆ ಹನ್ನೊಂದನೆಯ ದ್ವಾರದಲ್ಲಿ ಶ್ರೀದಾಮನೆಂಬ ಗೋಪಾಲಕನು ಬಾಗಿಲುಕಾಯುತ್ತ ನಿಂತಿದ್ದನು.

೩೯. ರಾಧಿಕಾಪುತ್ರನಿಗೆ ಸಮಾನನಾದ ಆ ಶ್ರೀದಾಮನು ಪೀತಾಂಬರವನ್ನುಟ್ಟು, ಅಮೂಲ್ಯ ರತ್ನಖಚಿತವಾಗಿ ಮನೋಹರವಾದ ಸಿಂಹಾಸನದಲ್ಲಿ ಕುಳಿತಿದ್ದನು.

೪೦-೪೩. ಅಮೂಲ್ಯ ರತ್ನಾಭರಣಗಳಿಂದ ಭೂಷಿತನಾಗಿ, ಚಂದನ, ಅಗುರು, ಕಸ್ತೂರಿ ಕುಂಕುಮಾದಿಗಳನ್ನು ಲೇಪಿಸಿಕೊಂಡು ಮನೋಹರನಾಗಿದ್ದ ಆ ಶ್ರೀದಾಮನು ಕಪೋಲಗಳಲ್ಲಿ ಪ್ರತಿಬಿಂಬಿತವಾಗಿರುವ, ಉಜ್ವಲವಾದ ರತ್ನ ಕುಂಡಲಗಳನ್ನು ಧರಿಸಿ, ಶ್ರೇಷ್ಠರತ್ನಗಳನ್ನು ಮೆಟ್ಟಿರುವ ಕಿರೀಟವನ್ನು ತಲೆಯ

ಪ್ರಫುಲ್ಲಮಾಲತೀಮಾಲಾಜಾಲೈಃ ಸರ್ವಾಂಗಭೂಷಿತಂ ।
ಕೋಟಿಗೋಪೈಃ ಪರಿವೃತಂ ರಾಜೇಂದ್ರಾಧಿಕಮುಜ್ವಲಂ ॥ ೪೨ ॥

ತಂ ಸಂಭಾಷ್ಯ ಯಯುರ್ದ್ವಾರಂ ದ್ವಾದಶಾಖ್ಯಂ ಸುರಾ ಮುದಾ ।
ಅಮೂಲ್ಯರತ್ನರಚಿತವೇದಿಕಾಭಿಃ ಸಮನ್ವಿತಂ ॥ ೪೩ ॥

ಸರ್ವೇಷಾಂ ದುರ್ಲಭಂ ಚಿತ್ರಮದೃಶ್ಯಮಶ್ರುತಂ ಮುನೇ ।
ವಜ್ರಭಿತ್ತಿಸ್ಥಿತಂ ಚಿತ್ರಂ ಸುಂದರಂ ಸುಮನೋಹರಂ ॥ ೪೪ ॥

ದಾರೇ ನಿಯುಕ್ತಾ ದದೃಶುರ್ದೇವಾ ಗೋಪಾಂಗನಾ ವರಾಃ ।
ರೂಪಯೌವನಸಂಪನ್ನಾ ರತ್ನಭೂಷಣಭೂಷಿತಾಃ ॥ ೪೫ ॥

ಪೀತವಸ್ತ್ರಪರೀಧಾನಾ ಕಬರೀಭಾರಭೂಷಿತಾಃ ।
ಸುಗಂಧಿಮಾಲತೀಮಾಲಾಜಾಲೈಃ ಸರ್ವಾಂಗಭೂಷಿತಾಃ ॥ ೪೬ ॥

---

ಮೇಲಿಟ್ಟು, ಚೆನ್ನಾಗಿ ಅರಳಿರುವ ಜಾಜಿಹೂವಿನ ಮಾಲೆಯನ್ನು ಮುಡಿದು ರಾಜೇಂದ್ರನಂತೆ ಕೋಟಿ ಗೋಪರಿಂದ ಪರಿವೃತನಾಗಿದ್ದನು.

೪೩. ದೇವತೆಗಳು ಅವನನ್ನು ಮಾತನಾಡಿಸಿದನಂತರ, ಅಮೂಲ್ಯ ರತ್ನಗಳಿಂದ ರಚಿತವಾದ ಜಗಲಿಗಳುಳ್ಳ ಹನ್ನೆರಡನೆಯ ದ್ವಾರಕ್ಕೆ ಸಂತೋಷದಿಂದ ಬಂದರು.

೪೪. ಎಲೈ ನಾರದನೇ, ಅದೃಷ್ಟವೂ, ಅಶ್ರುತವೂ, ಅತ್ಯಂತದುರ್ಲಭವೂ ಆದ ಆ ದ್ವಾರದಲ್ಲಿ ವಜ್ರದ ಗೋಡೆಗಳ ಮೇಲೆ ಮನೋಹರವಾದ ಅನೇಕ ಚಿತ್ರಗಳು ಚಿತ್ರಿತವಾಗಿದ್ದವು

೪೫. ದೇವತೆಗಳು, ರೂಪಯೌವನಸಂಪನ್ನೆಯರೂ, ರತ್ನಾಭರಣಭೂಷಿತರೂ, ಆದ ಗೋಪಾಂಗನೆಯರು ಆ ದ್ವಾರರಕ್ಷಣೆಯಲ್ಲಿ ನಿಯಮಿತರಾಗಿರುವುದನ್ನು ಕಂಡರು.

೪೬. ಆ ಗೋಪಿಕೆಯರು ಪಿತಾಂಬರವನ್ನುಟ್ಟು, ಸುವಾಸನೆಯಾದ ಮಾಲತೀ ಪುಷ್ಪದ ಮಾಲೆಯನ್ನು ಕೇಶಪಾಶದಲ್ಲಿ ಮುಡಿದು, ಸರ್ವಾಂಗಗಳನ್ನೂ ಅಲಂಕರಿಸಿ ಕೊಂಡಿದ್ದರು.

ರತ್ನಕಂಕಣಕೇಯೂರ ರತ್ನನೂಪುರ ಭೂಷಿತಾಃ ।
ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತಾಃ ॥ ೪೭ ॥

ಚಂದನಾಗರುಕಸ್ತೂರೀಕುಂಕುಮದ್ರವಚರ್ಚಿತಾಃ ।
ಪೀನಶ್ರೋಣೀಭರಾನಮ್ರಾ ನಿತಂಬಾಭಾರಪೀಡಿತಾಃ ॥ ೪೮ ॥

ಗೋಪೀನಾಂ ಶತಕೋಟೀನಾಂ ಶ್ರೇಷ್ಠಾಃ ಪ್ರೇಷ್ಠಾ ಹರೇರಪಿ ।
ಗೋಪೀಶ್ಚ ಕೋಟಿಶೋ ದೃಷ್ಟ್ವಾ ಸುರಾಸ್ತೇ ವಿಸ್ಮಯಂ ಯಯುಃ ॥ ೪೯ ॥

ಸಂಭಾಷ್ಯ ತಾ ಮುದಾ ಯುಕ್ತಾ ಯೆಯುರ್ದ್ವಾರಾಂತರಂ ಮುನೇ ।
ತತಶ್ಚ ಕ್ರಮಶೋ ವಿಪ್ರ ತ್ರಿಷು ದ್ವಾರೇಷು ತತ್ರ ವೈ ॥ ೫೦ ॥

ಗೋಪಾಂಗನಾನಾಂ ಶ್ರೇಷ್ಠಾಶ್ಚ ದದೃಶುಃ ಸುಮನೋಹರಾಃ ।
ವರಾಣಾಂ ಚ ವರಾ ರಮ್ಯಾ ಧನ್ಯಾ ಮಾನ್ಯಾಶ್ಚ ಶೋಭನಾಃ ॥ ೫೧ ॥

---

೪೭. ರತ್ನನಿರ್ಮಿತವಾದ ಕೈಬಳೆಗಳಿಂದಲೂ, ಬಾಹುಪುರಿಗಳಿಂದಲೂ, ಕಾಲ್ಗೊಲಸುಗಳಿಂದಲೂ, ಶೋಭಿಸುತ್ತಿದ್ದ ಆ ಗೋಪಿಕೆಯರ ಗಂಡಸ್ಥಳಗಳಲ್ಲಿ ಕರ್ಣಕುಂಡಲಗಳು ಪ್ರತಿಬಿಂಬಿಸಿದ್ದವು.

೪೮. ಚಂದನ, ಅಗುರು, ಕಸ್ತೂರಿ, ಮತ್ತು ಕುಂಕುಮಕೇಸರಿಗಳನ್ನು ಲೇಪಿಸಿಕೊಂಡಿದ್ದ ಆ ಗೋಪಿಕೆಯರು ಪುಷ್ಟವಾದ ನಿತಂಬಗಳ ಭಾರದಿಂದ ಸ್ವಲ್ಪ ಬಗ್ಗಿದ್ದರು.

೪೯. ನೂರುಕೋಟಿ ಶ್ರೇಷ್ಠರಾದ ಗೋಪಿಯರಿಂದ ಪರಿವೃತರಾದ ಶ್ರೀಹರಿಗೆ ಪ್ರಿಯರಾದ ಆ ಗೋಪಿಯರನ್ನು ಕಂಡು ದೇವತೆಗಳು ವಿಸ್ಮಯಗೊಂಡರು.

೫೦–೫೧. ನಾರದಮುನಿಯೇ, ದೇವತೆಗಳು ಆ ಗೋಪಿಯರ ಕುಶಲಪ್ರಶ್ನೆ ಮಾಡಿ ಸಂತೋಷದಿಂದ ಮುಂದಿನ ಬಾಗಿಲಿಗೆ ಹೋದರು. ಅಲ್ಲಿಂದ ಕ್ರಮವಾಗಿ ಮೂರು ದ್ವಾರಗಳಲ್ಲೂ ರೂಪ, ಯೌವನ, ಕುಲ, ಶೀಲಾದಿಗಳಿಂದ ಶೋಭಿತರಾಗಿ ಮನೋಹರರಾದ ಗೋಪಾಂಗನೆಯರಿದ್ದುದನ್ನು ಕಂಡರು.

ಸರ್ವಾಃ ಸೌಭಾಗ್ಯಯುಕ್ತಾಶ್ಚ ರಾಧಿಕಾಯಾಃ ಪ್ರಿಯಾಶ್ಚ ತಾಃ ।
ಭೂಷಿತಾಃ ಭೂಷಣೈ ರಮ್ಯೈಃ ಪ್ರೋದ್ಭಿನ್ನನವಯೌವನಾಃ ॥ ೫೨ ॥

ಏವಂ ದ್ವಾರತ್ರಯಂ ದೃಷ್ಟ್ವಾ ಸುಜ್ಞಾನಾದದ್ಭುತಾತ್ರಯಂ ।
ಅದೃಶ್ಯಮತಿರಮ್ಯಂ ಚಾಪ್ಯನಿರೂಪ್ಯಂ ವಿಚಕ್ಷಣೈಃ ॥ ೫೩ ॥

ತಾಸ್ತಾಃ ಸಂಭಾಷ್ಯ ದೇವಾಸ್ತೇ ವಿಸ್ಮಿತಾ ಯಯುರೀಶ್ವರಾಃ ।
ರಾಧಿಕಾಭ್ಯಂತರಂ ದ್ವಾರಂ ಷೋಡಶಾಖ್ಯಂ ಮನೋಹರಂ ॥ ೫೪ ॥

ಸರ್ವಾಸಾಂ ಚ ಪ್ರಧಾನಂ ಚ ಗೋಪ್ಯಂ ಗೋಪಾಂಗನಾಗಣೈಃ ।
ತ್ರಯಸ್ತ್ರಿಂಶದ್ವಯಸ್ಯಾನಾಂ ನಿಕರೈರ್ವೇಷ್ಟಿತಂ ಮುನೇ ॥ ೫೫ ॥

ತೇಷಾಮನಿರ್ವಚನೀಯೈರ್ನಾನಾಗುಣಸಮನ್ವಿತೈಃ ।
ರೂಪಯೌವನಸಂಪನ್ನೈ ರತ್ನಾಲಂಕಾರಭೂಷಿತೈಃ ॥ ೫೬ ॥

---

೫೨. ಸರ್ವಾಲಂಕಾರಭೂಷಿತರೂ, ಸಕಲಸೌಭಾಗ್ಯಯುತರೂ, ಆದ ಆ ನವ ಯುವತಿಯರು ರಾಧಾದೇವಿಗೆ ಅತ್ಯಂತ ಪ್ರಿಯರಾಗಿದ್ದರು

೫೩. ಈ ರೀತಿಯಾಗಿ ಅತ್ಯಾಶ್ಚರ್ಯಕರವೂ, ಅತಿಮನೋಹರವೂ, ಕುಶಲಿಗಳಾದ ಕವಿಗಳಿಂದ ವರ್ಣಿಸಲಸದಳವೂ, ಅದೃಷ್ಟಶ್ರುತವೂ ಆದ ಮೂರು ದ್ವಾರಗಳನ್ನು ದೇವತೆಗಳು ನೋಡಿದರು.

೫೪. ಅತ್ಯಾಶ್ಚರ್ಯಭರಿತರಾದ ದೇವತೆಗಳು ಆ ದ್ವಾರಗಳಲ್ಲಿದ್ದ ಗೋಪಿಕೆಯರ ಕುಶಲಪ್ರಶ್ನೆ ಮಾಡಿ, ರಾಧಾದೇವಿಯ ನಿವಾಸಮಂದಿರದ ಷೋಡಶದ್ವಾರಕ್ಕೆ ಬಂದರು.

೫೫ ಎಲ್ಲಕ್ಕೂ ಪ್ರಧಾನವಾದ ಆ ಮಹಾದ್ವಾರದಲ್ಲಿ ರಾಧಾದೇವಿಯ ಗೆಳತಿಯರಾದ ಮೂವತ್ತುಮೂರುಜನ ಗೋಪಿಯರು ರಕ್ಷಣೆಗಾಗಿ ನಿಂತಿದ್ದರು.

೫೬. ಅನಿರ್ವಚನೀಯವಾದ ರೂಪಗುಣಶೀಲಗಳಿಂದಲೂ, ನವಯೌವನದಿಂದಲೂ ಶೋಭಿಸುತ್ತಿದ್ದ ಆ ಗೋಪಿಯರು ರತ್ನಾಲಂಕಾರಭೂಷಿತರಾಗಿದ್ದರು.

ರತ್ನಕಂಕಣಕೇಯೂರ ರತ್ನನೂಪುರಭೂಷಿತೈಃ ।
ಸದ್ರತ್ನಕಿಂಕಿಣೀಜಾಲೈರ್ಮಧ್ಯದೇಶವಿಭೂಷಿತೈಃ ॥ ೫೭ ॥

ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತೈಃ ।
ಪ್ರಫುಲ್ಲಮಾಲತೀಮಾಲಾಜಾಲೈರ್ವಕ್ಷಃಸ್ಥಲೋಜ್ವಲೈಃ ॥ ೫೮ ॥

ಶರತ್ಪಾರ್ವಣಪದ್ಮಾನಾಂ ಪ್ರಭಾಂ ಮುಷ್ಣನ್ಮುಖೇಂದುಭಿಃ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೇನ ವೇಷ್ಟಿತೈಃ ॥ ೫೯ ॥

ಪಕ್ವಬಿಂಬಾಧರೋಷ್ಠೈಶ್ಚ ಸ್ಮೇರಾನನಸರೋರುಹೈಃ ।
ಪಕ್ವದಾಡಿಮಬೀಜಾಭಿಃ ಶೋಭಿತೈರ್ದಂತಪಂಕ್ತಿಭಿಃ ॥ ೬೦ ॥

ಚಾರುಚಂಪಕವರ್ಣಾಭಿರ್ಮಧ್ಯಸ್ಥಲಕೃಶೈರ್ಮನೇ ।
ರಾಜಮೌಕ್ತಿಕಯುಕ್ತಾಭಿರ್ನಾಸಿಕಾಭಿರ್ವಿರಾಜಿತೈಃ ॥ ೬೧ ॥

---

೫೭–೫೮. ರತ್ನದ ಬಳೆ, ಬಾಹುಪುರಿ ಮತ್ತು ಕಾಲ್ಗೊಲಸುಗಳಿಂದ ಭೂಷಿತರಾಗಿ, ಮಂಜುಳಧ್ವನಿಗೆಯ್ಯುವ ಸಣ್ಣಗಂಟೆಗಳುಳ್ಳ ಡಾಬನ್ನು ಸೊಂಟದಲ್ಲಿ ಧರಿಸಿ, ಕಪೋಲಸ್ಥಳದಲ್ಲಿ ಪ್ರತಿಬಿಂಬಿಸಿರುವ ರತ್ನಕುಂಡಲಗಳಿಂದಲೂ, ವಕ್ಷಃಸ್ಥಳದಲ್ಲಿ ತೂಗಾಡುತ್ತಿರುವ ಅರಳಿದ ಜಾಜೀಹೂವಿನ ಮಾಲೆಗಳಿಂದಲೂ, ಶೋಭಿಸುತ್ತಿದ್ದರು.

೫೯. ಶರತ್ಪೂರ್ಣಿಮೆಯ ಕಮಲದ ಕಾಂತಿಯನ್ನು ಅಪಹರಿಸುವ ಮುಖಚಂದ್ರಗಳಿಂದ ಶೋಭಿತರಾದ ಆ ಗೋಪಿಕೆಯರು. ಪಾರಿಜಾತಪುಷ್ಪದ ಮಾಲೆಗಳನ್ನು ಮುಡಿದಿದ್ದರು.

೬೦. ಚೆನ್ನಾಗಿ ಪಕ್ವವಾದ ಬಿಂಬಫಲದಂತಿರುವ ತುಟಿಯಿಂದ ಮುಗಳುನಗೆಯನ್ನು ಬೀರುತ್ತಿದ್ದ ಆ ಗೋಪಿಯರ ದಂತಪಂಕ್ತಿಗಳು ಪಕ್ವವಾದ ದಾಳಿಂಬೆ ಬೀಜದಂತೆ ಶುಭ್ರವಾಗಿದ್ದವು

೬೧. ಎಲೈ ಮುನಿಯೇ, ಸುಂದರವಾದ ಸಂಪಿಗೆಹೂವಿನಂತಿರುವ ಮೈಬಣ್ಣವುಳ್ಳ ಆ ಕೃಶಾಂಗಿಯರ ಮೂಗಿನ ತುದಿಯಲ್ಲಿ ಮನೋಹರವಾದ ಮುತ್ತಿನ ಬುಲಾಕುಗಳು ರಾಜಿಸುತ್ತಿದ್ದವು.

ಖಗೇಂದ್ರಚಾರುಚಂಚೂನಾಂ ಶೋಭಾಮುಷ್ಣಾಭಿರೇವ ಚ ।
ಗಜೇಂದ್ರಗಂಡಕಠಿನಸ್ತನಭಾರಭರಾನತೈಃ ॥ ೬೨ ॥

ಪೀನಶ್ರೋಣಿಭರಾರ್ತೈಶ್ಚ ಮುಕುಂದಪದಮಾನಸೈಃ ।
ನಿಮೇಷರಹಿತಾ ದೇವಾ ದ್ವಾರಂ ಚ ದದೃಶುಶ್ಚ ತಾಃ ॥ ೬೩ ॥

ಪ್ರವಾಲಮಣಿರತ್ನೈಶ್ಚ ವೇದಿಕಾಯುಗ್ಮಶೋಭಿತಂ ।
ಹರಿನ್ಮಣೀನಾಂ ಸ್ತಂಭಾನಾಂ ಸಮೂಹೈಃ ಸಂಯುತಂ ಸದಾ ॥ ೬೪ ॥

ಸಿಂದೂರಾಕಾರಮಣಿಭಿರ್ಮಧ್ಯಸ್ಥಲವಿರಾಜಿತೈಃ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೈರ್ವಿಭೂಷಿತಂ ॥ ೬೫ ॥

---

೬೨. ಪಕ್ಷಿರಾಜನಾದ ಗರುಡನ ಕೊಕ್ಕನ್ನು ಅನುಕರಿಸುವ ಮೂಗುಳ್ಳ ಆ ಗೋಪಿಯರು ಆನೆಯ ಕುಂಭಸ್ಥಳವಂತೆ ಕಠಿನವಾದ ಸ್ತನಗಳ ಭಾರದಿಂದ ಕೊಂಚ ಬಗ್ಗಿದ್ದರು

೬೩. ಅತಿದಪ್ಪವಾದ ನಿತಂಬಬಿಂಬಗಳಿಂದ ಶೋಭಿಸುತ್ತಿದ್ದ ಆ ಗೋಪಿಯರು ಮನಸ್ಸಿನಲ್ಲಿಯೇ ಮುಕುಂದನ ಪಾದಗಳನ್ನು ಸ್ಮರಿಸುತ್ತಿದ್ದರು. ದೇವತೆಗಳು ನೆಟ್ಟದೃಷ್ಟಿಯಿಂದ ಆ ಗೋಪಿಯರನ್ನೂ ಆ ದ್ವಾರದ ವೈಚಿತ್ರ್ಯವನ್ನೂ ನೋಡುತ್ತಾ ನಿಂತಿದ್ದರು.

೬೪ ಆ ಹದಿನಾರನೆಯ ದ್ವಾರದಲ್ಲಿ ಹವಳ, ಕೆಂಪು, ರತ್ನ ಮುಂತಾದವುಗಳಿಂದ ಖಚಿತವಾದ ಎರಡು ಜಗಲಿಗಳೂ, ಮರಕತರತ್ನಗಳಿಂದ ನಿರ್ಮಿತವಾದ ಕಂಭಗಳೂ ವಿರಾಜಿಸುತ್ತಿದ್ದವು.

೬೫. ದ್ವಾರದ ಮಧ್ಯಪ್ರದೇಶದಲ್ಲಿ ಸಿಂದೂರವರ್ಣದ ಮಣಿಯ ಹಾರಗಳೂ, ಪಾರಿಜಾತಪುಷ್ಪಗಳ ಮಾಲಾಜಾಲಗಳೂ ಶೋಭಿಸುತ್ತಿದ್ದವು.

ತತ್ಸಂಸ್ಪರ್ಶೈರ್ಗಂಧವಾಹೈಃ ಸರ್ವತ್ರ ಸುರಭೀಕೃತಂ ।
ದೃಷ್ಟ್ವಾ ತತ್ಪರಮಾಶ್ಚರ್ಯಂ ರಾಧಿಕಾಭ್ಯಂತರಂ ಸುರಾಃ ॥ ೬೬ ॥

ಶ್ರೀಕೃಷ್ಣಚರಣಾಂಭೋಜದರ್ಶನೈಕಮನೋರಥಾಃ ।
ತಾಂ ಸಂಭಾಷ್ಯ ಯಯುಃ ಶೀಘ್ರಂ ಪುಲಕಾಂಚಿತವಿಗ್ರಹಾಃ ॥ ೬೭ ॥

ಭಕ್ತ್ಯುದ್ರೇಕಾದಶ್ರುಪೂರ್ಣಾಃ ಕಿಂಚಿನ್ನಮ್ರಾಸ್ಯಕಂಧರಾಃ ।
ಆರಾತ್ತೇ ದದೃಶುರ್ದೇವಾ ರಾಧಿಕಾಭ್ಯಂತರಂ ವರಂ ॥ ೬೮ ॥

ಮಂದಿರಾಣಾಂ ಚ ಮಧ್ಯಸ್ಥಂ ಚತುಃಶಾಲಂ ಮನೋಹರಂ ।
ಅಮೂಲ್ಯರತ್ನಸಾರಾಣಾಂ ಸಾರೇಣ ರಚಿತಂ ಪರಂ ॥ ೬೯ ॥

ನಾನಾರತ್ನಮಣಿಸ್ತಂಭೈರ್ವಜ್ರಯುಕ್ತೈಶ್ಚ ಭೂಷಿತಂ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೈರ್ವಿರಾಜಿತಂ ॥ ೭೦ ॥

---

೬೬. ಆ ಪುಷ್ಪಗಳ ಸಂಸ್ಪರ್ಶದಿಂದ ಸುವಾಸಿತವಾದ ವಾಯುವು ಎಲ್ಲೆಲ್ಲೂ ವ್ಯಾಪಿಸಿಕೊಂಡಿದ್ದಿತು. ಈ ರೀತಿಯಾದ ರಾಧಾದೇವಿಯ ಅಂತಃಪುರವನ್ನು ನೋಡಿ ದೇವತೆಗಳೆಲ್ಲರೂ ಪರಮಾಶ್ಚರ್ಯಭರಿತರಾದರು.

೬೭. ಶ್ರೀಕೃಷ್ಣಪರಮಾತ್ಮನ ಚರಣಕಮಲದರ್ಶನವೇ ಮುಖ್ಯಗುರಿಯುಳ್ಳ ಆ ದೇವತೆಗಳೆಲ್ಲರೂ, ಆ ದ್ವಾರದಲ್ಲಿದ್ದ ಗೋಪಿಯರ ಕುಶಲಪ್ರಶ್ನೆ ಮಾಡಿ ರೋಮಾಂಚಿತಶರೀರರಾಗಿ ಮುಂದೆ ಹೋದರು.

೬೮. ಪರಮಭಕ್ತಿಯಿಂದ ತಲೆಬಾಗಿ, ಕಣ್ಣಿನಲ್ಲಿ ಆನಂದಾಶ್ರುಗಳನ್ನು ಸುರಿಸುತ್ತ, ದೇವತೆಗಳೆಲ್ಲರೂ ಬಹಳ ಹತ್ತಿರದಲ್ಲಿಯೇ ರಾಧಾದೇವಿಯ ಅಂತಃಪುರವನ್ನು ನೋಡಿದರು.

೬೯. ಅನೇಕಮಂದಿರಗಳ ಮಧ್ಯದಲ್ಲಿ, ಚತುಃಶಾಲೆಗಳಿಂದ ಮನೋಹರವಾಗಿದ್ದ ಆ ಅಂತಃಪುರವು ಅಮೂಲ್ಯವಾದ ಶ್ರೇಷ್ಠರತ್ನಗಳಿಂದ ವಿರಚಿತವಾಗಿದ್ದಿತು.

೭೦. ಅಲ್ಲಿದ್ದ ರತ್ನದ ಕಂಭಗಳಲ್ಲಿ ಶ್ರೇಷ್ಠವಾದ ವಜ್ರಗಳನ್ನು ಮೆಟ್ಟಿದ್ದುದಲ್ಲದೆ ಪಾರಿಜಾತಪುಷ್ಪಗಳ ಅಸಂಖ್ಯ ಮಾಲೆಗಳನ್ನು ಅಲಂಕರಿಸಿದ್ದರು.

ಮುಕ್ತಾಸಮೂಹೈರ್ಮಾಣಿಕ್ಯೈಃ ಶ್ವೇತಚಾಮರದರ್ಪಣೈಃ ।
ಅಮೂಲ್ಯರತ್ನಸಾರಾಣಾಂ ಕಲಶೈರ್ಭೂಷಿತಂ ಮುನೇ ॥ ೭೧ ॥

ಪಟ್ಟಸೂತ್ರಗ್ರಂಥಿಯುಕ್ತಶ್ರೀಖಂಡಪಲ್ಲವಾನ್ವಿತೈಃ ।
ಮಣಿಸ್ತಂಭಸಮೂಹೈಶ್ಚ ರಮ್ಯಪ್ರಾಂಗಣಭೂಷಿತಂ ॥ ೭೨ ॥

ಚಂದನಾಗರುಕಸ್ತೂರೀ ಕುಂಕುಮದ್ರವಸಂಯುತಂ ।
ಶುಕ್ಲಧಾನ್ಯ ಶುಕ್ಲಪುಷ್ಪ ಪ್ರವಾಲಫಲತಂಡುಲೈಃ ॥ ೭೩ ॥

ಪರ್ಣದೂರ್ವಾಕ್ಷತೈರ್ಲಾಜೈರ್ನಿರ್ಮಂಛನ ವಿಭೂಷಿತೈಃ ।
ಫಲಯುಕ್ತೈ ರತ್ನಕುಂಭೈಃ ಸಿಂದೂರಕುಂಕುಮಾನ್ವಿತೈಃ ॥ ೭೪ ॥

ಪಾರಿಜಾತಪ್ರಸೂನಾನಾಂ ಮಾಲಾಯುಕ್ತೈರ್ವಿರಾಜಿತಂ ।
ಪ್ರಸೂನಾಕ್ತೈರ್ಗಂಧವಾಹೈಃ ಸರ್ವತ್ರ ಸುರಭೀಕೃತಂ ॥ ೭೫ ॥

---

೭೧. ಮುತ್ತು ಮಾಣಿಕ್ಯಗಳಿಂದಲೂ, ಶ್ವೇತಚಾಮರ ಮತ್ತು ರತ್ನಗನ್ನಡಿಗಳಿಂದಲೂ, ಅಮೂಲ್ಯ ರತ್ನಕಲಶಗಳಿಂದಲೂ ಆ ಮಂದಿರವು ಶೋಭಿಸುತ್ತಿದ್ದಿತು.

೭೨. ಮಣಿಸ್ತಂಭಗಳಿಂದ ವಿರಾಜಿಸುತ್ತಿದ್ದ ಆ ಮಂದಿರದ ಅಂಗಣವಲ್ಲಿ ಗಂಟಿಕ್ಕಿರುವ ರೇಷ್ಮೆಯ ದಾರಗಳೂ, ಶ್ರೀಗಂಧವೃಕ್ಷದ ಚಿಗುರುಗಳೂ ಸಜ್ಜುಗೊಳಿಸಲ್ಪಟ್ಟಿದ್ದವು.

೭೩. ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮ ಕೇಸರಿಗಳೂ ಶುಕ್ಲಧಾನ್ಯ ಮತ್ತು ಶ್ವೇತಪುಷ್ಪಗಳೂ, ಚಿಗುರು ಮತ್ತು ಹಣ್ಣುಗಳೂ, ಮಂಗಳಾರ್ಥವಾದ ಅಕ್ಕಿಯ ಕಾಳುಗಳೂ ಅಲ್ಲಿ ಶೋಭಿಸುತ್ತಿದ್ದವು.

೭೪. ಮುತ್ತುಗದೆಲೆ, ಗರಿಕೆ, ಅರಳು ಮತ್ತು ಅರಿಸಿನಮಿಶ್ರಿತವಾದ ಅಕ್ಷತೆಗಳೂ, ಫಲಪೂರಿತವಾದ ರತ್ನಕುಂಭಗಳೂ, ಸಿಂದೂರ, ಕುಂಕುಮ ಮುಂತಾದ ಮಂಗಳದ್ರವ್ಯಗಳೂ ಅಲ್ಲಿದ್ದವು.

೭೫. ಅಲ್ಲಿದ್ದ ಪಾರಿಜಾತ ಪುಷ್ಪಮಾಲೆಗಳ ಸುವಾಸನೆಯನ್ನು ಎತ್ತಿಕೊಂಡು ವಾಯುವು ಎಲ್ಲೆಡೆಯಲ್ಲೂ ಬೀರುತ್ತಿದ್ದಿತು.

ಸರ್ವಾನಿರ್ವಚನೀಯಂ ಚ ಯದ್ದ್ರವ್ಯಮನಿರೂಪಿತಂ ।
ಬ್ರಹ್ಮಾಂಡೇ ದುರ್ಲಭಂ ಯದ್ಯದ್ವಸ್ತುಭಿಸ್ತೈರ್ವಿರಾಜಿತಂ ॥ ೭೬ ॥

ಪಾರಿಜಾತಪ್ರಸೂನಾನಾಂ ಮಾಲಾಜಾಲೈಃ ಸುಶೋಭಿತಂ ।
ರತ್ನಶಯ್ಯಾಸು ಲಲಿತಾಃ ಸೂಕ್ಷ್ಮವಸ್ತ್ರಪರಿಚ್ಛದಾಃ ॥ ೭೭ ॥

ಕೋಟಿಶೋ ರತ್ನಕುಂಭಾಶ್ಚ ರತ್ನಪಾತ್ರಾಣಿ ನಾರದ ।
ಅಮೂಲ್ಯಾನಿ ಚ ಚಾರೂಣಿ ತೈಸ್ತೈರೇವ ವಿಭೂಷಿತಂ ॥ ೭೮ ॥

ನಾನಾಪ್ರಕಾರವಾದ್ಯಾನಾಂ ಕಲನಾದೈರ್ನಿನಾದಿತಂ ।
ಸ್ವರಯಂತ್ರೈಶ್ಚ ವೀಣಾಭಿರ್ಗೋಪೀಸಂಗೀತಸುಶ್ರುತಂ ॥ ೭೯ ॥

ಮೋಹಿತಂ ವಾದ್ಯಶಬ್ದೈಶ್ಚ ಮೃದಂಗಾನಾಂ ಚ ನಾರದ ।
ಗೋಪಾನಾಂ ಕೃಷ್ಣತುಲ್ಯಾನಾಂ ಸಮೂಹೈಃ ಪರಿವಾರಿತಂ ॥ ೮೦ ॥

---

೭೬. ಯಾರಿಂದಲೂ ವರ್ಣಿಸಲಸಾಧ್ಯವಾದ, ಹಿಂದೆಂದೂ ನೋಡದೆ ಇರುವ, ಬ್ರಹ್ಮಾಂಡದಲ್ಲೆಲ್ಲ ದುರ್ಲಭವಾದ ವಿಚಿತ್ರವಸ್ತುಗಳೆಲ್ಲ ಅಲ್ಲಿ ವಿರಾಜಿಸುತ್ತಿದ್ದವು.

೭೭. ಸೂಕ್ಷ್ಮವಸ್ತ್ರಗಳನ್ನು ಹಾಸಿರುವ ರತ್ನಪರ್ಯಂಕಗಳಿಗೂ ಕೂಡ ಪಾರಿಜಾತ ಪುಷ್ಪಗಳ ದಿವ್ಯಮಾಲೆಗಳನ್ನಲಂಕರಿಸಿದ್ದರು.

೭೮. ಎಲೈ ನಾರದನೇ, ಅಮೂಲ್ಯವೂ, ಮನೋಹರವೂ ಆದ ಕೋಟ್ಯಂತರ ರತ್ನಕಲಶಗಳೂ, ರತ್ನದ ಪಾತ್ರೆಗಳೂ ಅಲ್ಲಿ ಶೋಭಿನುತ್ತಿದ್ದವು.

೭೯ ನಾನಾವಿಧ ವಾದ್ಯಗಳು ಅಲ್ಲಿ ಮನೋಹರವಾಗಿ ಧ್ವನಿಗೈಯುತ್ತಿದ್ದವು. ಗೋಪಿಯರು ವೀಣಾ ಮುಂತಾದ ವಾದ್ಯಗಳಿಗನುಗುಣವಾಗಿ, ಸುಶ್ರಾವ್ಯವಾಗಿ ಹಾಡುತ್ತಿದ್ದರು.

೮೦. ಎಲೈ ಮುನಿಯೇ, ಈ ರೀತಿಯಾಗಿ ಗೀತವಾದ್ಯಗಳಿಂದಲೂ, ಮೃದಂಗಾದಿಧ್ವನಿಗಳಿಂದಲೂ ಮೋಹಜನಕವಾದ ಆ ಮಂದಿರವನ್ನು, ಶ್ರೀಕೃಷ್ಣನಿಗೆ ಸಮಾನರಾದ ಅನೇಕ ಗೋಪರು ಆಕ್ರಮಿಸಿಕೊಂಡಿದ್ದರು.

ಪ್ರಭಯಾ ಜ್ವಲಿತಂ ಬ್ರಹ್ಮನ್ನಾಶ್ಚರ್ಯಮಹದದ್ಭುತಂ ।
ಸಪ್ತತಾಲಪ್ರಮಾಣಂ ತದ್ವ್ಯಾಪ್ತಮೂರ್ಧ್ವಂ ಸಮಂತತಃ ॥ ೮೬ ॥

ತೇಜೋಮಯಂ ಚ ಸರ್ವೇಷಾಂ ಮಹಾಶ್ರಮವಿವರ್ಜಿತಂ ।
ಸರ್ವವ್ಯಾಪಿ ಸರ್ವಬೀಜಂ ಚಕ್ಷುರೋಧಕರಂ ಪರಂ ॥ ೮೭ ॥

ದೃಷ್ಟ್ವಾ ತೇಜಃ ಸ್ವರೂಪಂ ಚ ತೇ ದೇವಾ ಧ್ಯಾನತತ್ಪರಾಃ
ಪ್ರಣೇಮುಃ ಪರಯಾ ಭಕ್ತ್ಯಾ ಭಕ್ತಿನಮ್ರಾತ್ಮಕಂಧರಾಃ ॥ ೮೮ ॥

ಪರಮಾನಂದ ಸಂಯೋಗಾದಶ್ರುಪೂರ್ಣವಿಲೋಚನಾಃ ।
ಪುಲಕಾಂಕಿತಸರ್ವಾಂಗಾ ವಾಂಛಾಪೂರ್ಣಮನೋರಥಾಃ ॥ ೮೯ ॥

ನತ್ವಾ ತೇಜಃಸ್ವರೂಪಂ ಚ ತಮೀಶಂ ತ್ರಿದಶೇಶ್ವರಾಃ ।
ತತ್ರೋತ್ಥಾಯ ಧ್ಯಾನಯುಕ್ತಾಃ ಪ್ರತಸ್ಥುಃ ತೇಜಸಃ ಪುರಃ ॥ ೯೦ ॥

---

೮೬. ಅತ್ಯದ್ಭುತವಾದ ದಿವ್ಯತೇಜಸ್ಸು ಏಳು ತಾಳೆಯ ಮರದಷ್ಟು ಎತ್ತರ ವ್ಯಾಪಿಸುಕೊಂಡಿದ್ದುದಲ್ಲದೆ ಸುತ್ತಲೂ ತನ್ನ ಕಾಂತಿಯನ್ನು ಬೀರುತ್ತಿದ್ದಿತು.

೮೭. ಸಕಲ ತೇಜಸ್ಸನ್ನೂ ಮಂಕುಗೊಳಿಸುವ ಪ್ರಶಾಂತವಾದ ಆ ದಿವ್ಯ ತೇಜಸ್ಸು ಸರ್ವವ್ಯಾಪಕವೂ, ಸರ್ವಕಾರಣವೂ ಆಗಿದ್ದುದಲ್ಲದೆ ಎಲ್ಲರ ಕಣ್ಣನ್ನೂ ಕುಕ್ಕುತ್ತಿತ್ತು

೮೮. ಇಂತು ತೇಜೋಮಯನಾದ ಪರಮಾತ್ಮನನ್ನು ನೋಡಿ ದೇವತೆಗಳೆಲ್ಲರೂ ಧ್ಯಾನಾಸಕ್ತರಾಗಿ, ಪರಮಭಕ್ತಿಯಿಂದ ತಲೆಬಾಗಿ ಪರಮಾತ್ಮನಿಗೆ ಸಾಷ್ಟಾಂಗವೆರಗಿದರು.

೮೯. ಪರಮಾತ್ಮನ ದರ್ಶನದಿಂದ ಪರಿಪೂರ್ಣಮನೋರಥರಾಗಿ, ಪರಮಾನಂದದಿಂದ ಶರೀರವೆಲ್ಲ ರೋಮಾಂಚಿತವಾಗಲು, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸಲಾರಂಭಿಸಿದರು.

೯೦. ದೇವತೆಗಳೆಲ್ಲರೂ ತೇಜಃಸ್ವರೂಪನಾದ ಸರ್ವೇಶ್ವರನನ್ನು ವಂದಿಸಿ, ಮೇಲಕ್ಕೆದ್ದು ಧ್ಯಾನಾಸಕ್ತರಾಗಿಯೇ ಆ ತೇಜಸ್ಸಿನ ಸಮೀಪಕ್ಕೆ ಹೋದರು.

ರಾಧಾಸಖೀನಾಂ ಗೋಪೀನಾಂ ವೃಂದೈರ್ವೃಂದೈರ್ವಿರಾಜಿತಂ।
ರಾಧಾಕೃಷ್ಣ ಗುಣೋದ್ರೇಕ ಪದಸಂಗೀತಸುಶ್ರುತಂ ॥ ೮೧ ॥

ಏವಮಭ್ಯಂತರಂ ದೃಷ್ಟ್ವಾ ಬಭೂವುರ್ವಿಸ್ಮಿತಾಃ ಸುರಾಃ।
ಶುಶ್ರುವುರ್ಮಧುರಂ ಗೀತಂ ದದೃಶುರ್ನೃತ್ಯಮುತ್ತಮಂ ॥ ೮೨ ॥

ತತ್ರ ತಸ್ಥುಃ ಸುರಾಃ ಸರ್ವೇ ಧ್ಯಾನೈಕತಾನಮಾನಸಾಃ।
ರತ್ನಸಿಂಹಾಸನಂ ರಮ್ಯಂ ದದೃಶುಸ್ತ್ರಿದಶೇಶ್ವರಾಃ ॥ ೮೩ ॥

ಧನುಃ ಶತಪ್ರಮಾಣಂ ಚ ಪರಿತೋ ವರ್ತುಲಾಕೃತಿಂ।
ಸದ್ರತ್ನ ಕ್ಷುದ್ರಕಲಶಸಮೂಹೈಶ್ಚ ಸಮನ್ವಿತಂ ॥ ೮೪ ॥

ಚಿತ್ರಪುತ್ತಲಿಕಾಪುಷ್ಪ ಚಿತ್ರಕಾನನಭೂಷಿತಂ।
ತತ್ರ ತೇಜಃ ಸಮೂಹಂ ಚ ಸೂರ್ಯಕೋಟಿಸಮಪ್ರಭಂ ॥ ೮೫ ॥

---

೮೧ ರಾಧೆಯ ಗೆಳತಿಯರಾದ ಅನೇಕ ಗೋಪಿಯರು ಗುಂಪು ಗುಂಪಾಗಿ ಕೂಡಿ ರಾಧಾಕೃಷ್ಣರ ಗುಣಗಾನಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು.

೮೨. ಈ ರೀತಿಯಾದ ರಾಧಾಮಂದಿರವನ್ನು ನೋಡಿ ದೇವತೆಗಳು ಅತ್ಯಾಶ್ಚರ್ಯಗೊಂಡರು. ಅಲ್ಲದೆ ಮಧುರವಾದ ಸಂಗೀತವನ್ನು ಕೇಳಿ, ಉತ್ತಮವಾದ ನೃತ್ಯವನ್ನು ನೋಡಿ ಆನಂದ ಭರಿತರಾದರು.

೮೩. ದೇವತೆಗಳೆಲ್ಲರೂ ಅಲ್ಲಿ ಧ್ಯಾನಪರವಶರಾಗಿ ನಿಂತುಕೊಂಡು ರಮ್ಯವಾದ ರತ್ನಸಿಂಹಾಸನವನ್ನು ನೋಡಿದರು.

೮೪. ನೂರುಧನುಸ್ಸಿನ ಪ್ರಮಾಣವುಳ್ಳದ್ದಾಗಿಯೂ, ವರ್ತುಲಾಕಾರವಾಗಿಯೂ ಇದ್ದ ಆ ಸಿಂಹಾಸನವು ಅನೇಕ ಸಣ್ಣ ರತ್ನಕಲಶಗಳ ಸಮೂಹದಿಂದ ಶೋಭಿಸುತ್ತಿದ್ದಿತು

೮೫. ಚಿತ್ರಪುತ್ಥಳಿಗಳಿಂದಲೂ, ಚಿತ್ರವಿಚಿತ್ರವಾದ ಪುಷ್ಪಗಳಿಂದಲೂ, ಭೂಷಿತವಾದ ಆ ರತ್ನಸಿಂಹಾಸನದಲ್ಲಿ ಕೋಟಿಸೂರ್ಯಪ್ರಭೆಗೆ ಸಮಾನವಾದ ದಿವ್ಯ ತೇಜಸ್ಸನ್ನು ಆ ದೇವತೆಗಳು ಕಂಡರು

ಸಗುಣಂ ನಿರ್ಗುಣಂ ಬ್ರಹ್ಮ ಜ್ಯೋತೀರೂಪಂ ಸನಾತನಂ ।
ಸಾಕಾರಂ ಚ ನಿರಾಕಾರಂ ತೇಜೋರೂಪಂ ನಮಾಮ್ಯಹಂ ॥ ೯೬ ॥

ತಮನಿರ್ವಚನೀಯಂ ಚ ವ್ಯಕ್ತಮವ್ಯಕ್ತಮೇಕಕಂ ।
ಸ್ವೇಚ್ಛಾಮಯಂ ಸರ್ವರೂಪಂ ತೇಜೋರೂಪಂ ನಮಾಮ್ಯಹಂ ॥ ೯೭ ॥

ಗುಣತ್ರಯವಿಭಾಗಾಯ ರೂಪತ್ರಯಧರಂ ಪರಂ ।
ಕಲಯಾ ತೇ ಸುರಾಃ ಸರ್ವೇ ಕಿಂ ಜಾನಂತಿ ಶ್ರುತೇಃ ಪರಂ ॥ ೯೮ ॥

ಸರ್ವಾಧಾರಂ ಸರ್ವರೂಪಂ ಸರ್ವಬೀಜಮಬೀಜಕಂ ।
ಸರ್ವಾಂತಃಕರಣಂ ತಚ್ಚ ತೇಜೋರೂಪಂ ನಮಾಮ್ಯಹಂ ॥ ೯೯ ॥

ಲಕ್ಷ್ಯಂ ಷಡ್ಗುಣರೂಪಂ ಚ ವರ್ಣನೀಯಂ ವಿಚಕ್ಷಣೈಃ ।
ಕಿಂ ವರ್ಣಯಾಮ್ಯಲಕ್ಷ್ಯಂ ಚ ತೇಜೋರೂಪಂ ನಮಾಮ್ಯಹಂ ॥ ೧೦೦ ॥

---

೯೬. ಸೃಷ್ಟ್ಯುನ್ಮುಖನಾದಾಗ ಸಗುಣನಾದರೂ ವಸ್ತುತಃ ನಿರ್ಗುಣನೂ, ಬ್ರಹ್ಮಜ್ಯೋತಿಃಸ್ವರೂಪನೂ, ಸನಾತನನೂ, ಭಕ್ತರಿಗೆ ಸಾಕಾರನಾದರೂ ವಸ್ತುತಃ ನಿರಾಕಾರನೂ ಆದ ತೇಜೋಮಯನಿಗೆ ನಮಸ್ಕರಿಸುವೆನು.

೯೭. ಅನಿರ್ವಚನೀಯನೂ, ವ್ಯಕ್ತಾವ್ಯಕ್ತನೂ, ಅದ್ವಿತೀಯನೂ, ಸ್ವೇಚ್ಛಾಮಯನೂ, ಸರ್ವವ್ಯಾಪಕನೂ ಆದ ಜ್ಯೋತಿರ್ಮಯನಿಗೆ ನಮಸ್ಕರಿಸುವೆನು.

೯೮. ಸತ್ವರಜಸ್ತಮೋ ಗುಣಗಳಿಗನುಸಾರವಾಗಿ, ಬ್ರಹ್ಮ, ವಿಷ್ಣು, ಶಂಕರ ರೆಂಬ ತ್ರಿಮೂರ್ತಿಗಳನ್ನು ಧರಿಸಿರುವ, ನಿಗಮಾತೀತನಾದ ನಿನ್ನ ಮಹಿಮೆಯನ್ನು ನಿನ್ನ ಕಲಾಂಶದಿಂದ ಅವತರಿಸಿರುವ ದೇವತೆಗಳೇನು ಬಲ್ಲರು?

೯೯. ಸರ್ವಾಧಾರನೂ, ಸರ್ವರೂಪನೂ, ಸರ್ವಬೀಜನೂ, ಸರ್ವಾಂತರ್ಯಾಮಿಯೂ ಕಾರಣರಹಿತನೂ ಆದ ತೇಜೋರೂಪನಿಗೆ ನಾನು ವಂದಿಸುತ್ತೇನೆ.

೧೦೦. ಪ್ರಾಣಿಗಳ ಉತ್ಪತ್ತಿವಿನಾಶಗಳನ್ನೂ, ಅಗತಿಗತಿಗಳನ್ನೂ, ವಿದ್ಯಾವಿದ್ಯೆಗಳನ್ನೂ ತಿಳಿದು ಷಡ್ಗುಣೈಶ್ವರ್ಯಪರಿಪೂರ್ಣನೆನಿಸಿರುವುದರಿಂದ ಕಣ್ಣಿಗೆ ಕಾಣಿಸುವವನೂ, ಕುಶಲಿಗಳಿಂದ ವರ್ಣನೀಯನೂ ಆದ ಪರಮಾತ್ಮನೇ ತೇಜೋಮಯನಾದುದರಿಂದ ವಸ್ತುತಃ ನಿರಾಕಾರನಾಗಿರುವನು. ಅಂಥ ಪರಬ್ರಹ್ಮನಿಗೆ ವಂದಿಸುವೆನು.

ಧ್ಯಾತ್ವೈವಂ ಜಗತಾಂ ಧಾತಾ ಬಭೂವ ಸಂಪುಟಾಂಜಲಿಃ ।
ದಕ್ಷಿಣೇ ಶಂಕರಂಕೃತ್ವಾ ವಾಮೇ ಧರ್ಮಂ ಚ ನಾರದ ॥ ೯೧ ॥

ಭಕ್ತ್ಯುದ್ರೇಕಾತ್ಪ್ರತುಷ್ಟಾವ ಧ್ಯಾನೈಕತಾನಮಾನಸಃ ।
ಪರಾತ್ಪರಂ ಗುಣಾತೀತಂ ಪರಮಾತ್ಮಾನಮೀಶ್ವರಂ ॥ ೯೨ ॥

॥ ಬ್ರಹ್ಮೋವಾಚ ॥

ವರಂ ವರೇಣ್ಯಂ ವರದಂ ವರದಾನಾಂ ಚ ಕಾರಣಂ ।
ಕಾರಣಂ ಸರ್ವಭೂತಾನಾಂ ತೇಜೋರೂಪಂ ನಮಾಮ್ಯಹಂ ॥ ೯೩ ॥

ಮಗಲಂ ಮಂಗಲಾನಾಂ ಚ ಮಂಗಲಂ ಮಂಗಲಪ್ರದಂ ।
ಸಮಸ್ತಮಂಗಲಾಧಾರಂ ತೇಜೋರೂಪಂ ನಮಾಮ್ಯಹಂ ॥ ೯೪ ॥

ಸ್ಥಿತಂ ಸರ್ವತ್ರ ನಿರ್ಲಿಪ್ತಮಾತ್ಮರೂಪಂ ಪರಾತ್ಪರಂ ।
ನಿರೀಹಮವಿತರ್ಕ್ಯಂ ಚ ತೇಜೋರೂಪಂ ನಮಾಮ್ಯಹಂ ॥ ೯೫ ॥

---

೯೧. ಎಲೈ ನಾರದನೇ, ಜಗತ್ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನು ಬಲಭಾಗದಲ್ಲಿ ಶಂಕರನನ್ನೂ, ಎಡಭಾಗದಲ್ಲಿ ಧರ್ಮಪುರುಷನನ್ನೂ ನಿಲ್ಲಿಸಿಕೊಂಡು, ಭಕ್ತಿಯಿಂದ ಕೈಮುಗಿದು ಆ ಪರಾತ್ಪರವಸ್ತುವನ್ನು ಧ್ಯಾನಿಸಲಾರಂಭಿಸಿದನು.

೯೨. ಪರಾತ್ಪರನೂ, ತ್ರಿಗುಣಾತೀತನೂ, ಸರ್ವೇಶ್ವರನೂ ಆದ ಪರಮಾತ್ಮನನ್ನು ಧ್ಯಾನೈಕತತ್ಪರನಾಗಿ ಭಕ್ತ್ಯುದ್ರೇಕದಿಂದ ಸ್ತುತಿಸಲು ಮೊದಲುಮಾಡಿದನು.

೯೩. ಬ್ರಹ್ಮ:—ಸರ್ವಶ್ರೇಷ್ಠನೂ, ವರಪ್ರದನೂ, ಸರ್ವಭೂತಗಳಿಗೆ ಆದಿ ಕಾರಣನೂ ಆದ ತೇಜೋಮಯನಿಗೆ ನಾನು ವಂದಿಸುವೆನು.

೯೪. ಮಂಗಳಸ್ವರೂಪನೂ, ಮಂಗಳದಾಯಕನೂ, ಮಂಗಳಗಳಿಗೆಲ್ಲ ಮಂಗಳರೂಪನೂ, ನಮಸ್ತ ಮಂಗಳಾಧಾರನೂ ಆದ ಮಂಗಳಮಯನಿಗೆ ನಾನು ನಮಸ್ಕರಿಸುವೆನು.

೯೫. ಸರ್ವವ್ಯಾಪಕನಾದರೂ ನಿರ್ಲಿಪ್ತನೂ, ನಿತ್ಯಾನಂದಸ್ವರೂಪನೂ, ಇಚ್ಛಾರಹಿತನೂ, ಊಹೆಗೆ ಸಿಲುಕದವನೂ ಆದ ನಿತ್ಯಶುದ್ಧನಿಗೆ ವಂದಿಸುವೆನು.

**ಅಶರೀರಂ ವಿಗ್ರಹವದಿಂದ್ರಿಯಂ ಯದತೀಂದ್ರಿಯಂ ।**
**ಯದಸಾಕ್ಷಿ ಸರ್ವಸಾಕ್ಷಿ ತೇಜೋರೂಪಂ ನಮಾಮ್ಯಹಂ　　॥ ೧೦೧ ॥**

**ಗಮನಾರ್ಹಮಪಾದಂ ಯದಚಕ್ಷುಃ ಸರ್ವದರ್ಶನಂ ।**
**ಹಸ್ತಾಸ್ಯಹೀನಂ ಯದ್ಭೋಕ್ತೃ ತೇಜೋರೂಪಂ ನಮಾಮ್ಯಹಂ　　॥ ೧೦೨ ॥**

**ವೇದೇ ನಿರೂಪಿತಂ ವಸ್ತು ಸಂತಃ ಶಕ್ತಾಶ್ಚ ವರ್ಣಿತುಂ ।**
**ವೇದೇಽನಿರೂಪಿತಂ ಯತ್ತತ್ತೇಜೋರೂಪಂ ನಮಾಮ್ಯಹಂ　　॥ ೧೦೩ ॥**

**ಸರ್ವೇಶಂ ಯದನೀಶಂ ಯತ್ಸರ್ವಾದಿ ಯದನಾದಿ ಯತ್ ।**
**ಸರ್ವಾತ್ಮಕಮನಾತ್ಮಂ ಯತ್ತೇಜೋರೂಪಂ ನಮಾಮ್ಯಹಂ　　॥ ೧೦೪ ॥**

---

೧೦೧. ಯಾರು ಶರೀರರಹಿತನಾದರೂ ಭಕ್ತಾನುಗ್ರಹಕ್ಕಾಗಿ ವಿಗ್ರಹಧಾರಿಯಾಗಿರುವನೋ, ಯಾರು ಅತೀಂದ್ರಿಯನಾದರೂ ಇಂದ್ರಿಯಗೋಚರನಾಗಿರುವನೋ, ಯಾರು ಸಾಕ್ಷಿರಹಿತನಾದರೂ ಸರ್ವಸಾಕ್ಷಿಯೆನಿಸಿರುವನೋ ಅಂಥ ಜ್ಯೋತಿರ್ಮಯನಿಗೆ ನಮಸ್ಕರಿಸುವೆನು.

೧೦೨. ಪಾದರಹಿತನಾದರೂ ಸಂಚರಿಸುವವನೂ, ದೃಷ್ಟಿಯಿಲ್ಲದಿದ್ದರೂ ಸಕಲದರ್ಶಕನೂ, ಕೈಬಾಯಿಗಳಿಲ್ಲದಿದ್ದರೂ, ಭೋಕ್ತೃವೆನಿಸಿರುವವನೂ ಆದ ಜ್ಯೋತಿರ್ಮಯನಿಗೆ ಸಾಷ್ಟಾಂಗವೆರಗುವೆನು.

೧೦೩ ವೇದನಿರೂಪಿತವಾದ ವಸ್ತುವನ್ನು ಜ್ಞಾನಿಗಳು ವರ್ಣಿಸಬಲ್ಲರು. ವೇದಗಳಿಂದಲೂ ಅನಿರೂಪಿತನಾಗಿರುವುದರಿಂದ ವರ್ಣನಾತೀತನಾದ ತೇಜಃಸ್ವರೂಪನಿಗೆ ನಾನು ವಂದಿಸುವೆನು.

೧೦೪. ಸರ್ವೇಶ್ವರನಾದರೂ ಯಾರು ಸ್ವಯಂ ಅನೀಶ್ವರನೋ, ಸರ್ವಕ್ಕೂ ಆದಿಯಾದರೂ ಯಾರು ಅನಾದಿಯೋ, ಸರ್ವಾತ್ಮಕನಾದರೂ ಯಾರು ನಿರ್ಲಿಪ್ತನೋ ಅಂಥ ಜ್ಯೋತಿರ್ಮಯನಿಗೆ ನಾನು ವಂದಿಸುವೆನು.

**ಅಹಂ ವಿಧಾತಾ ಜಗತೋ ವೇದಾನಾಂ ಜನಕಃ ಸ್ವಯಂ ।**
**ಪಾತಾ ಧರ್ಮೋ ಹರೋ ಹರ್ತಾ ಸ್ತೋತುಂ ಶಕ್ತಾ ನ ಕೇಽಪಿ ಯತ್ ॥೧೦೫॥**

**ಸೇವಯಾ ತವ ಧರ್ಮೋಽಯಂ ರಕ್ಷಿತಾರಂ ಚ ರಕ್ಷತಿ ।**
**ತವಾಜ್ಞಯಾ ಚ ಸಂಹರ್ತಾ ತ್ವಯಾ ಕಾಲೇ ನಿರೂಪಿತೇ ॥ ೧೦೬ ॥**

**ನಿಷೇಕಲಿಪಿಕರ್ತಾಹಂ ತ್ವತ್ಪಾದಾಂಭೋಜಸೇವಯಾ ।**
**ಕರ್ಮಿಣಾಂ ಫಲದಾತಾ ಚ ತ್ವಂ ಭಕ್ತಾನಾಂ ಚ ನಃ ಪ್ರಭುಃ ॥ ೧೦೭ ॥**

**ಬ್ರಹ್ಮಾಂಡೇ ಬಿಂಬಸದೃಶೇ ಭೃತ್ವಾ ವಿಷಯಿಣೋ ವಯಂ ।**
**ಏವಂ ಕತಿ ವಿಧಾಃ ಸಂತಿ ತೇಷ್ವನಂತೇಷು ಸೇವಕಾಃ ॥ ೧೦೮ ॥**

**ಯಥಾ ನ ಸಂಖ್ಯಾ ರೇಣೂನಾಂ ತಥಾ ತೇಷಾಮಣೀಯಸಾಂ ।**
**ಸರ್ವೇಷಾಂ ಜನಕಶ್ಚೇತೋ ಯಸ್ತಂ ಸ್ತೋತುಂ ಚ ಕೇ ಕ್ಷಮಾಃ ॥ ೧೦೯ ॥**

---

೧೦೫ ಜಗತ್ಸೃಷ್ಟಿಕರ್ತನೂ, ವೇದಜನಕನೂ ಆದ ನಾನೂ, ಪಾಲಕನಾದ ಧರ್ಮಪುರುಷನೂ, ಸಂಹಾರಕನಾದ ಹರನೂ, ಆ ಬ್ರಹ್ಮವನ್ನು ಸ್ತುತಿಸಲಾರರು.

೧೦೬. ಧರ್ಮಪುರುಷನು ನಿನ್ನ ಸೇವೆಯ ಮಹಿಮೆಯಿಂದ ಜಗದ್ರಕ್ಷಣೆ ಮಾಡುವನು. ನಿನ್ನ ಆಜ್ಞೆಯಂತೆಯೇ ಜಗತ್ಸಂಹಾರಕನು ನಿಯಮಿತವಾದ ಕಾಲದಲ್ಲಿ ಸಂಹರಿಸುತ್ತಾನೆ.

೧೦೭. ನಾನು ಕೂಡ ನಿನ್ನ ಪಾದಕಮಲಗಳ ಸೇವಾಮಹಿಮೆಯಿಂದ ಪ್ರಜೆಗಳಿಗೆ ಜನ್ಮಕೊಟ್ಟು ಲಲಾಟಲಿಪಿಯನ್ನು ಬರೆಯುವೆನು. ಕರ್ಮಾನುಗುಣವಾದ ಫಲವನ್ನು ಕೊಡುವ ನೀನು ಭಕ್ತರಾದ ನಮ್ಮೆಲ್ಲರಿಗೂ ಪ್ರಭುವೆನಿಸಿರುವೆ.

೧೦೮. ನಿನ್ನ ಪ್ರತಿಬಿಂಬದಂತಿರುವ ಈ ಬ್ರಹ್ಮಾಂಡದಲ್ಲಿ ನಾವೆಲ್ಲರೂ ಅವತರಿಸಿ ವಿಷಯಲೋಲುಪರಾಗಿರುವೆವು ಈ ರೀತಿಯಾದ ಅಸಂಖ್ಯಬ್ರಹ್ಮಾಂಡ ಗಳೂ, ಅಲ್ಲಿ ಅಗಣಿತ ಸೇವಕರೂ ನಿನಗಿದ್ದಾರೆ.

೧೦೯. ಸೂಕ್ಷ್ಮವಾದ ಧೂಳಿಕಣಗಳನ್ನು ಹೇಗೆ ಎಣಿಸಲಾಗುವುದಿಲ್ಲವೋ ಹಾಗೆಯೇ ಬ್ರಹ್ಮಾಂಡಗಳನ್ನೂ ಎಣಿಸಲಾಗುವುದಿಲ್ಲ ಎಲ್ಲಕ್ಕೂ ಜನಕನೂ, ಸರ್ವೇಶ್ವರನೂ ಆದ ನಿನ್ನನ್ನು ಯಾರು ತಾನೆ ವರ್ಣಿಸಲು ಸಮರ್ಥರು ?

ಏಕೈಕಲೋಮವಿವರೇ ಬ್ರಹ್ಮಾಂಡಮೇಕಮೇಕಕಂ ।
ಯಸ್ಯೈವ ಮಹತೋ ವಿಷ್ಣೋಃ ಷೋಡಶಾಂಶಸ್ತ್ವವೈವ ಸಃ ॥ ೧೧೦ ॥

ಧ್ಯಾಯಂತೇ ಯೋಗಿನಃ ಸರ್ವೇ ತವೈತದ್ರೂಪಮೀಪ್ಸಿತಂ ।
ತ್ವದ್ಭಕ್ತದಾಸ್ಯನಿರತಾಃ ಸೇವಂತೇ ಚರಣಾಂಬುಜಂ ॥ ೧೧೧ ॥

ಕಿಶೋರಂ ಸುಂದರತರಂ ಯದ್ರೂಪಂ ಕಮನೀಯಕಂ ।
ಮಂತ್ರಧ್ಯಾನಾನುರೂಪಂ ಚ ದರ್ಶಯಾಸ್ಮಾಕಮೀಶ್ವರ ॥ ೧೧೨ ॥

ನವೀನಜಲದಶ್ಯಾಮಂ ಪೀತಾಂಬರಧರಂ ವರಂ ।
ದ್ವಿಭುಜಂ ಮುರಲೀಹಸ್ತಂ ಸಸ್ಮಿತಂ ಸುಮನೋಹರಂ ॥ ೧೧೩ ॥

---

೧೧೦ ಯಾವ ಮಹ ವಿರಾಟ್ಪುರುಷನ ಒಂದೊಂದು ರೋಮಕೂಪಗಳಲ್ಲೂ ಒಂದೊಂದು ಬ್ರಹ್ಮಾಂಡವಿರುವುದೋ, ಆ ಮಹಾವಿಷ್ಣುವೂ ಕೂಡ ನಿನ್ನ ಷೋಡಶಾಂಶದಿಂದ ಅವತರಿಸಿರುವನು.

೧೧೧. ಯೋಗಿಗಳೆಲ್ಲರೂ ತಮಗೆ ಅಭೀಪ್ಸಿತವಾದ ನಿನ್ನ ದಿವ್ಯರೂಪವನ್ನು ಧ್ಯಾನಿಸುವರು. ನಿನ್ನ ಭಕ್ತರ ಸೇವೆಯಲ್ಲಿ ನಿರತರಾಗಿ ನಿನ್ನ ಚರಣಕಮಲಗಳನ್ನು ಸೇವಿಸುವರು

೧೧೨ ಎಲೈ ಸರ್ವೇಶ್ವರನೇ, ಸುಂದರವೂ, ಅತಿಮನೋಹರವೂ, ಮಂತ್ರಧ್ಯಾನಗಳಿಗೆ ಅನುಗುಣವೂ ಆದ ನಿನ್ನ ಗೋಪಕಿಶೋರರೂಪವನ್ನು ನಮಗೆ ತೋರಿಸು.

೧೧೩. ನವಮೇಘಶ್ಯಾಮಲವೂ, ಪೀತಾಂಬರಧಾರಿಯೂ ಆಗಿ ಭುಜದ್ವಯಗಳಿಂದ ಶೋಭಿಸುತ್ತ, ಕೈಯಲ್ಲಿ ಕೊಳಲನ್ನು ಹಿಡಿದು ಸ್ಮಿತವದನದಿಂದ ಮನೋಹರವಾಗಿರುವ ನಿನ್ನ ದಿವ್ಯರೂಪವನ್ನು ತೋರು.

**ಮಯೂರಪಿಚ್ಛಚೂಡಂ ಚ ಮಾಲತೀಜಾಲಮಂಡಿತಂ ।**
**ಚಂದನಾಗರುಕಸ್ತೂರೀಕುಂಕುಮದ್ರವಚರ್ಚಿತಂ ॥ ೧೧೪ ॥**

**ಅಮೂಲ್ಯರತ್ನಸಾರಾಣಾಂ ಸಾರಭೂಷಣಭೂಷಿತಂ ।**
**ಅಮೂಲ್ಯರತ್ನಖಚಿತಕಿರೀಟಮುಕುಟೋಜ್ಜ್ವಲಂ ॥ ೧೧೫ ॥**

**ಶರತ್ಪ್ರಫುಲ್ಲಪದ್ಮಾನಾಂ ಪ್ರಭಾಮೋಷ್ಯಾಸ್ಯಚಂದ್ರಕಂ ।**
**ಪಕ್ವಬಿಂಬಸಮಾನೇನ ಹ್ಯಧರೋಷ್ಠೇನ ರಾಜಿತಂ ॥ ೧೧೬ ॥**

**ಪಕ್ವದಾಡಿಮಬೀಜಾಭದಂತಪಂಕ್ತಿಮನೋಹರಂ ।**
**ಕೇಲೀಕದಂಬಮೂಲೇ ಚ ಸ್ಥಿತಂ ರಾಸರಸೋನ್ಮುಖಂ ॥ ೧೧೭ ॥**

**ಗೋಪೀವಕ್ತ್ರಸ್ಮಿತತನುಂ ರಾಧಾವಕ್ಷಃಸ್ಥಲಸ್ಥಿತಂ ।**
**ಏವಂ ವಾಂಛಿತರೂಪಂ ತೇ ದ್ರಷ್ಟುಂ ಕೋ ವಾ ನ ಚೋತ್ಸುಕಃ ॥ ೧೧೮ ॥**

---

೧೧೪. ನವಿಲುಗರಿಯ ಶಿಖಂಡವನ್ನು ರಚಿಸಿಕೊಂಡು ಜಾಜೀಹೂಮಾಲೆಯನ್ನು ಮುಡಿದು, ಚಂದನ, ಅಗುರು, ಕಸ್ತೂರಿ, ಕುಂಕುಮಕೇಸರಿಗಳನ್ನು ಸರ್ವಾಂಗಗಳಿಗೂ ಲೇಪಿಸಿಕೊಂಡಿರುವ ದಿವ್ಯಮೂರ್ತಿಯನ್ನು ತೋರಿಸು.

೧೧೫. ಅಮೂಲ್ಯರತ್ನಗಳಿಂದ ರಚಿತವಾದ ಭೂಷಣಗಳನ್ನು ಅಲಂಕರಿಸಿಕೊಂಡು, ತಲೆಯಲ್ಲಿ ರತ್ನಖಚಿತವಾದ ಕಿರೀಟವನ್ನು ಧರಿಸಿರುವ ನಿನ್ನ ದಿವ್ಯವಿಗ್ರಹವನ್ನು ತೋರು.

೧೧೬. ಶರದೃತುವಿನ ಅರಳಿದ ತಾವರೆಯ ಕಾಂತಿಯನ್ನು ಅಲ್ಲಗಳೆಯುವ ಮುಖಮಂಡಲದಿಂದಲೂ, ಚೆನ್ನಾಗಿ ಮಾಗಿದ ತೊಂಡೆಹಣ್ಣಿನಂತೆ ಕೆಂಪಾದ ಕೆಳತುಟಿಯಿಂದಲೂ ಶೋಭಿಸುವ ನಿನ್ನ ದಿವ್ಯ ಸುಂದರವಿಗ್ರಹವನ್ನು ತೋರು.

೧೧೭. ಸುಪಕ್ವವಾದ ದಾಳಿಂಬೆ ಬೀಜದಂತೆ ಶುಭ್ರವಾದ ದಂತಪಂಕ್ತಿಗಳಿಂದ ಮನೋಹರವಾಗಿ, ಕ್ರೀಡಾರ್ಥವಾಗಿ ಕದಂಬವೃಕ್ಷದ ಕೆಳಗೆ ಕುಳಿತು ರಾಸಕ್ರೀಡಾಸಕ್ತವಾಗಿರುವ ನಿನ್ನ ಮಂಗಳರೂಪವನ್ನು ತೋರು

೧೧೮. ಗೋಪಿಯರಿಗೆ ಆಹ್ಲಾದವನ್ನುಂಟುಮಾಡುವ ದಿವ್ಯಶರೀರದ ವಕ್ಷಃಸ್ಥಳದಲ್ಲಿ ರಾಧಾದೇವಿಯನ್ನು ಧರಿಸಿ ಮನೋಹರವಾಗಿರುವ ನಿನ್ನ ದಿವ್ಯರೂಪವನ್ನು ನೋಡಲು ಯಾರಿಗೆ ತಾನೆ ಬಯಕೆಯುಂಟಾಗುವುದಿಲ್ಲ.

ಇತ್ಯೇವಮುಕ್ತ್ವಾ ವಿಶ್ವಸೃಟ್ ಪ್ರಣನಾಮ ಪುನಃ ಪುನಃ ।
ಏವಂ ಸ್ತೋತ್ರೇಣ ತುಷ್ಟಾವ ಧರ್ಮೋಽಪಿ ಶಂಕರಃ ಸ್ವಯಂ ॥ ೧೧೯ ॥

ನನಾಮ ಭೂಯೋ ಭೂಯಶ್ಚ ಸಾಶ್ರುಪೂರ್ಣವಿಲೋಚನಃ ।
ತಿಷ್ಠಂತೋಽಪಿ ಪುನಃ ಸ್ತೋತ್ರಂ ಪ್ರಚಕ್ರುಸ್ತ್ರಿದಶೇಶ್ವರಾಃ ॥ ೧೨೦ ॥

ವ್ಯಾಪ್ತಾಸ್ತತ್ರಾಶ್ರಮೇ ಸರ್ವೇ ಶ್ರೀಕೃಷ್ಣತೇಜಸಾ ಮುನೇ ।
ಸ್ತವರಾಜಮಿಮಂ ನಿತ್ಯಂ ಬ್ರಹ್ಮೇಶಧರ್ಮಭಿಃ ಕೃತಂ ॥ ೧೨೧ ॥

ಪೂಜಾಕಾಲೇ ಹರೇರೇವಂ ಭಕ್ತಿಯುಕ್ತಶ್ಚ ಯಃ ಪಠೇತ್ ।
ಸುದುರ್ಲಭಾಂ ದೃಢಾಂ ಭಕ್ತಿಂ ನಿಶ್ಚಲಾಂ ಲಭತೇ ಹರೇಃ ॥ ೧೨೨ ॥

ಸುರಾಸುರಮುನೀಂದ್ರಾಣಾಂ ದುರ್ಲಭಂ ದಾಸ್ಯಮೇವ ಚ ।
ಅಣಿಮಾದಿಕಸಿದ್ಧಿಂ ಚ ಸಾಲೋಕ್ಯಾದಿಚತುಷ್ಟಯಂ ॥ ೧೨೩ ॥

---

೧೧೯. ಹೀಗೆ ಹೇಳಿ ಚತುರ್ಮುಖಬ್ರಹ್ಮನು ಮತ್ತೆಮತ್ತೆ ನಮಸ್ಕರಿಸಿದನು ಇದೇ ರೀತಿಯಾಗಿ ಧರ್ಮಪುರುಷನೂ ಶಂಕರನೂ ಕೂಡ ಆ ಪರಮಾತ್ಮನನ್ನು ಸ್ತುತಿಸಿದರು.

೧೨೦-೧೨೨ ಆನಂದಾಶ್ರುಪರಿಪೂರ್ಣರಾಗಿ ಮತ್ತೆಮತ್ತೆ ನಮಸ್ಕರಿಸಿದರು. ದೇವತೆಗಳೆಲ್ಲರೂ ಪುನಃ ಎದ್ದುನಿಂತು ಸ್ತುತಿಸಲಾರಂಭಿಸಿದರು. ಎಲೈ ನಾರದ ಮುನಿಯೇ, ಶ್ರೀಕೃಷ್ಣಪರಮಾತ್ಮನ ತೇಜಸ್ಸಿನಿಂದ ಆ ಆಶ್ರಮದಲ್ಲಿದ್ದವರೆಲ್ಲರೂ ವ್ಯಾಪ್ತರಾದರು. ಬ್ರಹ್ಮ, ಈಶ್ವರ ಮತ್ತು ಧರ್ಮಪುರುಷನು ಹೇಳಿದ ಈ ದಿವ್ಯ ಸ್ತೋತ್ರವನ್ನು ಯಾರು ನಿತ್ಯವೂ ಪೂಜಾಕಾಲದಲ್ಲಿ ಭಕ್ತಿಪೂರ್ವಕವಾಗಿ ಪಠಿಸು ವರೋ, ಅವರಿಗೆ ಸರ್ವದುರ್ಲಭವಾದ ಶ್ರೀಹರಿಯ ದೃಢಭಕ್ತಿಯು ಲಭಿಸುವುದು.

೧೨೩. ಸುರಾಸುರ ಮುನೀಂದ್ರರಿಗೂ ದುರ್ಲಭವಾದ ಶ್ರೀಹರಿಯ ದಾಸ್ಯ ವನ್ನೂ, ಅಣಿಮಾದಿ ಅಷ್ಟಸಿದ್ಧಿಗಳನ್ನೂ, ಸಾಲೋಕ್ಯಾದಿ ಮೋಕ್ಷಚತುಷ್ಟಯ ಗಳನ್ನೂ ಪಡೆಯುವರು.

ಇಹೈವ ವಿಷ್ಣುತುಲ್ಯಶ್ಚ ವಿಖ್ಯಾತಃ ಪೂಜಿತೋ ಧ್ರುವಂ ।
ವಾಕ್ಸಿದ್ಧಿರ್ಮಂತ್ರಸಿದ್ಧಿಶ್ಚ ಭವೇತ್ತಸ್ಯ ಸುನಿಶ್ಚಿತಂ ॥ ೧೨೪ ॥

ಸರ್ವಸೌಭಾಗ್ಯಸಂಯುಕ್ತಂ ಯಶಸಾ ಪೂರಿತಂ ಜಗತ್ ।
ಪುತ್ರಶ್ಚ ವಿದ್ಯಾ ಕವಿತಾ ನಿಶ್ಚಲಾ ಕಮಲಾ ತಥಾ ॥ ೧೨೫ ॥

ಪತ್ನೀ ಪತಿವ್ರತಾ ಸಾಧ್ವೀ ಸುಶೀಲಾ ಸುಸ್ಥಿರಾಃ ಪ್ರಜಾಃ ।
ಕೀರ್ತಿಶ್ಚ ಚಿರಕಾಲೀನಾ ತ್ವಂತೇ ಕೃಷ್ಣಾಂತಿಕೇ ಗತಿಃ ॥ ೧೨೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಗೋಲೋಕವರ್ಣನೇ ಶ್ರೀಕೃಷ್ಣಸ್ತೋತ್ರರಾಜಪಠನಂ
ನಾಮ ಪಂಚಮೋಽಧ್ಯಾಯಃ

---

೧೨೪. ಈ ಸ್ತೋತ್ರಪಠನಮಾಡುವವರಿಗೆ ವಾಕ್ಸಿದ್ಧಿಯೂ ಮಂತ್ರಸಿದ್ಧಿಯೂ ಉಂಟಾಗುವುದಲ್ಲದೆ, ಈ ಲೋಕದಲ್ಲಿಯೇ ವಿಷ್ಣುವಿಗೆ ಸದೃಶನೆಂದು ಪ್ರಖ್ಯಾತನಾಗಿ ಪೂಜೆ ಹೊಂದುವನು.

೧೨೫. ಸಕಲ ಸೌಭಾಗ್ಯಗಳೂ, ಜಗದ್ವಿಖ್ಯಾತವಾದ ಕೀರ್ತಿಯೂ ಲಭಿಸುವುದಲ್ಲದೆ ಸತ್ಪುತ್ರನೂ, ಸದ್ವಿದ್ಯೆಯೂ, ಕವಿತಾಶಕ್ತಿಯೂ, ನಿಶ್ಚಲವಾದ ಸಂಪತ್ತೂ ಆತನಿಗೆ ದೊರೆಯುವುದು.

೧೨೬. ಪತಿವ್ರತೆಯೂ, ಸುಶೀಲೆಯೂ ಆದ ಪತ್ನಿಯೂ, ದೀರ್ಘಾಯುಷ್ಯವುಳ್ಳ ಪುತ್ರರೂ, ಶಾಶ್ವತವಾದ ಕೀರ್ತಿಯೂ ಲಭಿಸುವುದಲ್ಲದೆ ಕೊನೆಯಲ್ಲಿ ಶ್ರೀಕೃಷ್ಣನ ಸಾನ್ನಿಧ್ಯವು ದೊರೆಯುವುದು.

ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ಗೋಲೋಕ
ವರ್ಣನ ಮತ್ತು ಶ್ರೀಕೃಷ್ಣಸ್ತೋತ್ರರಾಜಪಠನ ರೂಪವಾದ
ಐದನೆಯ ಅಧ್ಯಾಯವು ಮುಗಿದುದು.



## ಐದನೆಯ ಅಧ್ಯಾಯದ ಸಾರಾಂಶ

ಅನಂತರ ದೇವತೆಗಳು ರಾಧಾಮಂದಿರದ ಪ್ರಧಾನದ್ವಾರಕ್ಕೆ ಬಂದು, ದ್ವಾರ ಪಾಲಕನಾದ ವೀರಭಾನುವಿನ ಸಮ್ಮತಿ ಪಡೆದು, ಕ್ರಮವಾಗಿ ಹದಿನಾರು ಬಾಗಿಲುಗಳನ್ನು ದಾಟಿಹೋದರು. ಆ ದ್ವಾರಗಳೆಲ್ಲವೂ ಒಂದಕ್ಕಿಂತ ಒಂದು ವರ್ಣಿಸಲಸದಳವಾಗಿದ್ದವು. ಹನ್ನೊಂದು ದ್ವಾರಗಳಲ್ಲಿ ಕ್ರಮವಾಗಿ ವೀರಭಾನು, ಸುಪಾರ್ಶ್ವ, ಸುಬಲ, ಸುದಾಮ, ಮತ್ತು ಶ್ರೀದಾಮ ನೆಂಬ ದ್ವಾರಪಾಲಕರೂ, ಮುಂದಿನ ನಾಲ್ಕು ದ್ವಾರಗಳಲ್ಲಿ ಗೋಪಕನ್ನಿಕೆಯರೂ, ಹದಿನಾರನೆಯ ದ್ವಾರದಲ್ಲಿ ರಾಧಾದೇವಿಗೆ ಪ್ರೀತಿಪಾತ್ರರಾದ ಮೂವತ್ತು ಸಖಿಯರೂ ದ್ವಾರರಕ್ಷಣೆಯಲ್ಲಿ ನಿರತರಾಗಿದ್ದರು. ದೇವತೆಗಳು ಅವರೆಲ್ಲರ ಕುಶಲಪ್ರಶ್ನೆ ಮಾಡಿ ಎಲ್ಲ ದ್ವಾರಗಳ ಮನೋಹರತೆಯನ್ನೂ ನೋಡಿ ಅತ್ಯಾಶ್ಚರ್ಯಗೊಂಡರು. ಅನಂತರ ಸಕಲ ವೈಭವಗಳಿಂದ ಪರಿಪೂರ್ಣವಾದ ರಾಧಾಮಂದಿರದ ಮಧ್ಯಾಂಗಣಕ್ಕೆ ಹೋಗಿ ಅಲ್ಲಿ ರತ್ನಸಿಂಹಾಸನದಲ್ಲಿ ಮಂಡಿಸಿರುವ ನಿರಾಕಾರನೂ, ನಿರ್ಗುಣನೂ, ಅನಾದಿಯೂ, ಸರ್ವಾಂತರ್ಯಾಮಿಯೂ, ತೇಜೋಮಯನೂ ಆದ ಪರಬ್ರಹ್ಮನನ್ನು ಮನಸ್ತೃಪ್ತಿಯಾಗುವಂತೆ ಸ್ತುತಿಸಿ, ಭಕ್ತಪರಾಧೀನನಾದ ಪರಮಾತ್ಮನ ಸಾಕಾರಸ್ವರೂಪವನ್ನು ಮನದಣಿಯುವಂತೆ ನೋಡಿ ಆನಂದಿಸಿದರು. ಬ್ರಹ್ಮ, ಈಶ್ವರ, ಧರ್ಮಪುರುಷ ಮುಂತಾದ ಸಕಲ ದೇವತೆಗಳೂ ನಿಗಮಾತೀತನಾದ ಶ್ರೀಕೃಷ್ಣಪರಮಾತ್ಮನನ್ನು ಭವ್ಯವಾಣಿಗಳಿಂದ ಸ್ತೋತ್ರಮಾಡಿದರು. ಆ ದಿವ್ಯಸ್ತೋತ್ರವನ್ನು ಭಕ್ತಿಯಿಂದ ಪೂಜಾಕಾಲದಲ್ಲಿ ಪಠಿಸುವವರು ತಮ್ಮ ಇಷ್ಟಸಿದ್ಧಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ.



— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

॥ ಷಷ್ಠೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

**ಧ್ಯಾತ್ವಾ ಸ್ತುತ್ವಾ ಚ ತಿಷ್ಠಂತೋ ದೇವಾಸ್ತೇ ತೇಜಸಃ ಪುರಃ ।**
**ದದೃಶುಸ್ತೇಜಸೋ ಮಧ್ಯೇ ಶರೀರಂ ಕಮನೀಯಕಂ ॥ ೧ ॥**

**ಸಜಲಾಂಭೋದವರ್ಣಾಭಂ ಸಸ್ಮಿತಂ ಸುಮನೋಹರಂ ।**
**ಪರಮಾಹ್ಲಾದಕಂ ರೂಪಂ ತ್ರೈಲೋಕ್ಯಚಿತ್ತಮೋಹನಂ ॥ ೨ ॥**

**ಗಂಡಸ್ಥಲಕಪೋಲಾಭ್ಯಾಂ ಜ್ವಲನ್ಮಕರಕುಂಡಲಂ ।**
**ಸದ್ರತ್ನನೂಪುರಾಭ್ಯಾಂ ಚ ಚರಣಾಂಭೋಜರಾಜಿತಂ ॥ ೩ ॥**

---

### ಆರನೆಯ ಅಧ್ಯಾಯವು

೧. ಶ್ರೀನಾರಾಯಣ :—ಈ ರೀತಿಯಾಗಿ ದೇವತೆಗಳು ಆ ದಿವ್ಯ ತೇಜಸ್ಸನ್ನು ಧ್ಯಾನಿಸಿ ಸ್ತುತಿಸಿದ ನಂತರ ಆ ತೇಜಸ್ಸಿನ ಮಧ್ಯದಲ್ಲಿ ಮನೋಹರವಾದ ಶರೀರವನ್ನು ಕಂಡರು.

೨. ನೀರುತುಂಬಿದ ಮೇಘದಂತೆ ನೀಲವರ್ಣವುಳ್ಳ ಆ ವಿಗ್ರಹವು ಸ್ಮಿತಮುಖದಿಂದ ಕೂಡಿ ತ್ರಿಲೋಕ ಮೋಹಕವಾಗಿದ್ದಿತು.

೩. ಆ ಸುಂದರವಿಗ್ರಹದ ಎರಡು ಕಿವಿಗಳಲ್ಲೂ ಪ್ರಜ್ವಲಿಸುತ್ತಿದ್ದ ಮಕರ ಕುಂಡಲಗಳು ಕಪೋಲಗಳಲ್ಲಿ ಪ್ರತಿಬಿಂಬಿತವಾಗಿದ್ದವು ಪಾದದ್ವಯಗಳಲ್ಲಿ ರತ್ನ ನಿರ್ಮಿತವಾದ ಕಾಲಂದುಗೆಗಳು ಶೋಭಿಸುತ್ತಿದ್ದವು.

ವಹ್ನಿಶುದ್ಧಹರಿದ್ರಾಭಾಮೂಲ್ಯವಸ್ತ್ರವಿರಾಜಿತಂ ।
ಮಣಿರತ್ನೇಂದ್ರಸಾರಾಣಾಂ ಸ್ವೇಚ್ಛಾ ಕೌತುಕನಿರ್ಮಿತೈಃ ॥ ೪ ॥

ಭೂಷಿತಂ ಭೂಷಣೈ ರಮ್ಯೈಸ್ತದ್ರೂಪೇಣೈವಭೂಷಿತೈಃ ।
ವಿನೋದಮುರಲೀಯುಕ್ತಬಿಂಬಾಧರಮನೋಹರಂ ॥ ೫ ॥

ಪ್ರಸನ್ನಾಕ್ಷೇಣ ಪಶ್ಯಂತಂ ಭಕ್ತಾನುಗ್ರಹಕಾತರಂ ।
ಸದ್ರತ್ನಘುಟಿಕಾಯುಕ್ತ ಕವಚೋರಃಸ್ಥಲೋಜ್ವಲಂ ॥ ೬ ॥

ಕೌಸ್ತುಭಾಸಕ್ತಸದ್ರತ್ನಪ್ರದೀಪ್ತತೇಜಸೋಜ್ವಲಂ ।
ತತ್ರ ತೇಜಸಿ ಚಾರ್ವಂಗೀಂ ದದೃಶೂ ರಾಧಿಕಾಭಿಧಾಂ ॥ ೭ ॥

ಪಶ್ಯಂತಂ ಸಸ್ಮಿತಂ ಕಾಂತಂ ಪಶ್ಯಂತೀ ವಕ್ರಚಕ್ಷುಷಾ ।
ಮುಕ್ತಾಪಂಕ್ತಿವಿನಿಂದ್ಯೈಕದಂತಪಂಕ್ತಿವಿರಾಜಿತಂ ॥ ೮ ॥

---

೪–೫. ದಿವ್ಯರೂಪಧಾರಿಯಾದ ಆ ಪರಮಾತ್ಮನು ಅಗ್ನಿಯಂತೆ ಪರಿಶುದ್ಧವಾದ ಪೀತಾಂಬರವನ್ನು ಧರಿಸಿ,ಶ್ರೇಷ್ಠವಾದ ಮಣಿಗಳನ್ನು ಮೆಟ್ಟಿರುವ ರತ್ನಾಭರಣಗಳನ್ನು ತೊಟ್ಟು, ಬಿಂಬಫಲಕ್ಕೆ ಸದೃಶವಾದ ಅಧರಪ್ರದೇಶದಲ್ಲಿ ವಿನೋದಾರ್ಥವಾಗಿ ಕೊಳಲನ್ನು ಧರಿಸಿದ್ದನು

೬. ವಕ್ಷಃಸ್ಥಲದಲ್ಲಿ ರತ್ನಮಣಿಗಳಿಂದ ಗ್ರಥಿತವಾದ ಕವಚವನ್ನು ಧರಿಸಿ, ಭಕ್ತಾನುಗ್ರಹಪರನಾಗಿ, ಪ್ರಸನ್ನದೃಷ್ಟಿಯಿಂದ ನೋಡುತ್ತಿದ್ದನು.

೭. ಪರಮಾತ್ಮನ ಉರಃಸ್ಥಲದಲ್ಲಿ ಉಜ್ಜ್ವಲವಾಗಿದ್ದ ಕೌಸ್ತುಭಮಣಿಯ ದಿವ್ಯ ತೇಜಸ್ಸಿನಲ್ಲಿ ಪ್ರತಿಬಿಂಬಿತಳಾಗಿದ್ದ ತ್ರಿಲೋಕಸುಂದರಿಯಾದ ರಾಧಾದೇವಿಯನ್ನು ದೇವತೆಗಳು ನೋಡಿದರು

೮. ಮುತ್ತಿನ ಸಾಲುಗಳನ್ನು ಅಲ್ಲಗಳೆಯುತ್ತಿರುವ ದಂತಪಂಕ್ತಿಗಳಿಂದ ಶೋಭಿಸುತ್ತಿರುವ ಸ್ಮಿತಮುಖನಾದ ಪರಮಾತ್ಮನನ್ನು ಚಂಚಲಕಟಾಕ್ಷದಿಂದ ಆ ರಾಧಾದೇವಿಯು ನೋಡುತ್ತಿದ್ದಳು.

ಈಷದ್ಧಾಸ್ಯಪ್ರಸನ್ನಾಸ್ಯಾಂ ಶರತ್ಪಂಕಜಲೋಚನಾಂ ।
ಶರತ್ಪಾರ್ವಣಚಂದ್ರಾಭಾವಿನಿಂದಾಸ್ಯ ಮನೋಹರಾಂ ॥ ೯ ॥

ಬಂಧುಜೀವಪ್ರಭಾಮುಷ್ಟಾಧರೌಷ್ಠ ರುಚಿರಾನನಾಂ ।
ರಣನ್ಮಂಜೀರಯುಗ್ಮೇನ ಪಾದಾಂಬುಜವಿರಾಜಿತಾಂ ॥ ೧೦ ॥

ಮಣೀಂದ್ರಾಣಾಂ ಪ್ರಭಾಮೋಷನಖರಾಜಿವಿರಾಜಿತಾಂ ।
ಕುಂಕುಮಾಭಾಸಮಾಚ್ಛಾದ್ಯಪದಾಧೋರಾಗಭೂಷಿತಾಂ ॥ ೧೧ ॥

ಅಮೂಲ್ಯರತ್ನಸಾರಾಣಾಂ ರಶನಾಶ್ರೇಣಿಭೂಷಿತಾಂ ।
ಹುತಾಶನವಿಶುದ್ಧಾಂಶುಕಾಮೂಲ್ಯಜ್ವಲಿತೋಜ್ವಲಾಂ ॥ ೧೨ ॥

ಮಹಾಮಣೀಂದ್ರಸಾರಾಣಾಂ ಕಿಂಕಿಣೀಮಧ್ಯಸಂಯುತಾಂ ।
ಸದ್ರತ್ನಹಾರಕೇಯೂರಕರಕಂಕಣ ಭೂಷಿತಾಂ ॥ ೧೩ ॥

---

೯. ಶರತ್ಪೂರ್ಣಿಮಾ ಚಂದ್ರನನ್ನು ತಿರಸ್ಕರಿಸುವ ಮುಖಮಂಡಲದಿಂದಲೂ, ಶರದೃತುವಿನ ತಾವರೆಯ ಕಾಂತಿಯನ್ನು ಹೋಲುವ ಕಣ್ಣುಗಳಿಂದಲೂ ಶೋಭಿಸುತ್ತಿದ್ದ ಆ ರಾಧಾದೇವಿಯು ಮಂದಹಾಸದಿಂದ ಪ್ರಸನ್ನಮುಖಿಯಾಗಿದ್ದಳು.

೧೦. ಆಕೆಯ ಕೆಳತುಟಿಯು ಕೆಂಪುದಾಸವಾಳಪುಷ್ಪದ ಕಾಂತಿಯನ್ನು ಮೀರುತ್ತಿದ್ದಿತು. ಚರಣಕಮಲಗಳಲ್ಲಿ ಕ್ವಣಕ್ವಣ ಶಬ್ದಗೈಯ್ಯುತ್ತಿರುವ ನೂಪುರಗಳು ಶೋಭಿಸುತ್ತಿದ್ದವು.

೧೧. ಆಕೆಯ ಉಗುರುಗಳು ಶ್ರೇಷ್ಠಮಣಿಗಳ ಕಾಂತಿಗಿಂತಲೂ ಹೊಳಪಾಗಿದ್ದವು. ಕಾಲಿನ ಉಗುರುಗಳಿಗೂ, ಅಂಗಾಲುಗಳಿಗೂ, ಕುಂಕುಮದಂತೆ ಕೆಂಪಾದ ರಾಗಗಳನ್ನು ರಂಜಿಸಿಕೊಂಡಿದ್ದಳು.

೧೨. ಕಟಿಪ್ರದೇಶದಲ್ಲಿ ಅಮೂಲ್ಯರತ್ನಗಳಿಂದ ನಿರ್ಮಿತವಾದ ಡಾಬನ್ನು ಧರಿಸಿ, ಅಗ್ನಿಯಂತೆ ಪರಿಶುದ್ಧವಾದ ಅಮೂಲ್ಯವಸ್ತ್ರವನ್ನುಟ್ಟು ಮನೋಹರಳಾಗಿದ್ದಳು.

೧೩. ಅತ್ಯುತ್ತಮ ಮಣಿಗಳಿಂದ ನಿರ್ಮಿತವಾದ, ಸಣ್ಣ ಸಣ್ಣ ಗಂಟೆಗಳುಳ್ಳ ರತ್ನಹಾರಗಳಿಂದಲೂ, ಬಾಹುಪುರಿಗಳಿಂದಲೂ, ಕೈ ಬಳೆಗಳಿಂದಲೂ, ಶೋಭಿಸುತ್ತಿದ್ದಳು.

ರತ್ನೇಂದ್ರ ಸಾರರಚಿತಕಪೋಲೋಜ್ಜ್ವಲಕುಂಡಲಾಂ ।
ಕರ್ಣೋಪರಿ ಮಣೀಂದ್ರಾಣಾಂ ಕರ್ಣಭೂಷಣಭೂಷಿತಾಂ ॥ ೧೪ ॥

ಖಗೇಂದ್ರ ಚಂಚುನಾಸಾಗ್ರಗಜೇಂದ್ರಮೌಕ್ತಿಕಾನ್ವಿತಾಂ ।
ಮಾಲತೀಮಾಲಯಾ ವಕ್ರಕಬರೀಭಾರಶೋಭಿತಾಂ ॥ ೧೫ ॥

ಮಾಲಯಾ ಕೌಸ್ತುಭೇಂದ್ರಾಣಾಂ ವಕ್ಷಃಸ್ಥಲಸುಶೋಭಿತಾಂ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೋಜ್ಜ್ವಲಾಂಬರಾಂ ॥ ೧೬ ॥

ರತ್ನಾಂಗುಲೀಯನಿಕರೈಃ ಕರಾಂಗುಲಿವಿಭೂಷಿತಾಂ ।
ದಿವ್ಯಶಂಖವಿಕಾರೈಶ್ಚ ಚಿತ್ರರಾಗವಿಭೂಷಿತೈಃ ॥ ೧೭ ॥

ಸೂಕ್ಷ್ಮಸೂತ್ರಾಕೃತೈ ರಮ್ಯೈರ್ಭೂಷಿತಾಂ ಶಂಖಭೂಷಣೈಃ ।
ಸದ್ರತ್ನಸಾರಘುಟಿಕಾ ರಾಜಿಸೂತ್ರಸುಶೋಭಿತಾಂ ॥ ೧೮ ॥

---

೧೪. ಅತ್ಯುಜ್ವಲವಾಗಿದ್ದ ರತ್ನಕುಂಡಲಗಳು ಕಪೋಲಗಳಲ್ಲಿ ಪ್ರತಿಬಿಂಬಿತವಾಗಿದ್ದವು. ಶ್ರೇಷ್ಠಮಣಿಗಳಿಂದ ನಿರ್ಮಿತವಾದ ಕರ್ಣಾಭರಣಗಳು ಕಿವಿಯ ಮೇಲೆ ಶೋಭಿಸುತ್ತಿದ್ದವು.

೧೫. ಗರುಡನ ಕೊಕ್ಕಿನಂತೆ ಮನೋಹರವಾದ ಮೂಗಿನ ತುದಿಯಲ್ಲಿ ಆನೆಯ ಕುಂಭಸ್ಥಳದ ಮುತ್ತಿನ ಮೂಗುತಿಯನ್ನು ಧರಿಸಿ, ಕೇಶಪಾಶದಲ್ಲಿ ಜಾಜೀ ಹೂಮಾಲೆಯನ್ನು ಮುಡಿದಿದ್ದಳು.

೧೬. ವಕ್ಷಃಸ್ಥಳದಲ್ಲಿ ಕೌಸ್ತುಭರತ್ನದ ಮಾಲೆಯನ್ನು ಧರಿಸಿ, ಪಾರಿಜಾತ ಪುಷ್ಪಗಳ ಮಾಲಾಜಾಲಗಳಿಂದಲೂ, ಶುಭ್ರವಾದ ಬಟ್ಟೆಗಳಿಂದಲೂ ಶೋಭಿಸುತ್ತಿದ್ದಳು.

೧೭-೧೮. ಕೈಬೆರಳುಗಳಲ್ಲಿ ರತ್ನದ ಉಂಗುರಗಳನ್ನು ಧರಿಸಿ, ವಿಚಿತ್ರ ವರ್ಣಗಳಿಂದ ರಂಜಿತವಾಗಿ ದಾರದಂತೆ ಅತಿಸೂಕ್ಷ್ಮವಾದ, ಮನೋಹರವಾದ ಶಂಖಾಭರಣಗಳನ್ನು ತೊಟ್ಟು, ಕಂಠದಲ್ಲಿರುವ ಶ್ರೇಷ್ಠರತ್ನಮಾಲೆಯಿಂದ ಮನೋಹರಳಾಗಿದ್ದಳು.

ಪ್ರತಪ್ತಸ್ವರ್ಣವರ್ಣಾಭಾಮಾಚ್ಛಾದ್ಯ ಚಾರುವಿಗ್ರಹಾಂ ।
ನಿತಂಬಶ್ರೋಣಿಲಲಿತಾಂ ಪೀನಸ್ತನನತಾಂಬರಾಂ ॥ ೧೯ ॥

ಭೂಷಿತಾಂ ಭೂಷಣೈಃ ಸರ್ವೈಃ ಸೌಂದರ್ಯೇಣ ವಿಭೂಷಿತೈಃ ।
ವಿಸ್ಮಿತಾಸ್ತ್ರಿದಶಾಸ್ಸರ್ವೇ ದೃಷ್ಟ್ವಾ ತಾಮೀಶ್ವರೀಂ ಪರಾಂ ।
ತುಷ್ಟುವುಸ್ತೇ ಸುರಾಸ್ಸರ್ವೇ ಪೂರ್ಣಸರ್ವಮನೋರಥಾಃ ॥ ೨೦ ॥

॥ ಬ್ರಹ್ಮೋವಾಚ ॥

ತವ ಚರಣಸರೋಜೇ ಮನ್ಮನಶ್ಚಂಚರೀಕೋ
ಭ್ರಮತು ಸತತಮೀಶ ಪ್ರೇಮಭಕ್ತ್ಯಾ ಸರೋಜೇ ॥
ಭುವನವಿಭವಭೋಗಾತ್ತಾಪಶಾಂತ್ಯೌಷಧಾಯ
ಸುದೃಢಸುಪರಿಪಕ್ವಾಂ ದೇಹಿ ಭಕ್ತಿಂ ಚ ದಾಸ್ಯಂ ॥ ೨೧ ॥

---

೧೯. ವರ್ತುಳಾಕಾರವಾದ ನಿತಂಬಬಿಂಬದಿಂದಲೂ, ಅತ್ಯುನ್ನತವಾದ ಸ್ತನದ್ವಯಗಳಿಂದಲೂ, ಶೋಭಿತಳಾಗಿ ಪುಟಕ್ಕೆ ಹಾಕಿದ ಚಿನ್ನದಂತೆ ಗೌರವರ್ಣವಾದ ಶರೀರವನ್ನು ದಿವ್ಯವಸ್ತ್ರದಿಂದ ಮರೆಮಾಡಿಕೊಂಡಿದ್ದಳು.

೨೦. ಈ ರೀತಿಯಾಗಿ ತನ್ನ ಸ್ವಾಭಾವಿಕಸೌಂದರ್ಯವನ್ನು ದಿವ್ಯಾಭರಣಗಳಿಂದ ಮತ್ತಷ್ಟು ಹೆಚ್ಚಿಸಿಕೊಂಡು ಮನೋಹರಳಾಗಿದ್ದ ಆ ದೇವಿಯನ್ನು ದೇವತೆಗಳೆಲ್ಲರೂ ನೋಡಿ ಅತ್ಯಾಶ್ಚರ್ಯಗೊಂಡರು ಆ ದೇವಿಯನ್ನು ನೋಡಿ ಪರಿಪೂರ್ಣಮನೋರಥರಾದ ದೇವತೆಗಳೆಲ್ಲರೂ ಪರಮಾತ್ಮನನ್ನು ಸ್ತುತಿಸಲುಪಕ್ರಮಿಸಿದರು.

೨೧. ಬ್ರಹ್ಮ :—ಎಲೈ ಪರಮಾತ್ಮನೇ, ನನ್ನ ಮನಸ್ಸೆಂಬ ದುಂಬಿಯು ನಿನ್ನ ಚರಣಗಳೆಂಬ ತಾವರೆಯಲ್ಲಿ, ಪ್ರೇಮವೆಂಬ ಮಕರಂದಪಾನಮಾಡಲು ಭಕ್ತಿಯಿಂದ ಭ್ರಮಣಮಾಡಲಿ. ಪ್ರಪಂಚದ ಸುಖದುಃಖಗಳನ್ನುಪಭೋಗಿಸಿ ತಪ್ತವಾಗಿರುವ ನನ್ನ ಜೀವಶಾಂತಿಗಾಗಿ, ಸುಪಕ್ವವೂ ದೃಢವೂ ಆದ ನಿನ್ನ ಭಕ್ತಿ ಮತ್ತು ದಾಸ್ಯರೂಪ ಔಷಧವನ್ನು ಕೊಡು.

॥ ಶಂಕರ ಉವಾಚ ॥

ಭವಜಲನಿಧಿಮಗ್ನಶ್ಚಿತ್ತಮೀನೋ ಮದೀಯೋ
ಭ್ರಮತಿ ಸತತಮಸ್ಮಿನ್ಘೋರಸಂಸಾರಕೂಪೇ ।
ವಿಷಯಮತಿವಿನಿಂದ್ಯಂ ಸೃಷ್ಟಿಸಂಹಾರರೂಪ-
ಮಪನಯ ತವ ಭಕ್ತಿಂ ದೇಹಿ ಪಾದಾರವಿಂದೇ ॥ ೨೨ ॥

॥ ಧರ್ಮ ಉವಾಚ ॥

ತವ ನಿಜಜನಸಾರ್ಧಂ ಸಂಗಮೋ ಮೇ ಮದೀಶ ।
ಭವತು ವಿಷಯಬಂಧಚ್ಛೇದನೇ ತೀಕ್ಷ್ಣಖಡ್ಗಃ ।
ತವ ಚರಣಸರೋಜೇ ಸ್ಥಾನದಾನೈಕಹೇತು-
ರ್ಜನುಷಿ ಜನುಷಿ ಭಕ್ತಿಂ ದೇಹಿ ಪಾದಾರವಿಂದೇ ॥ ೨೩ ॥

ಇತ್ಯೇವಂ ಸ್ತವನಂ ಕೃತ್ವಾ ಪರಿಪೂರ್ಣೈಕಮಾನಸಾಃ ।
ತಾಮುಪೂರಸ್ಯ ಪುರತಸ್ತಿಷ್ಠಂತೋ ರಾಧಿಕಾಪತೇಃ ॥ ೨೪ ॥

---

೨೨. ಶಂಕರ :—ನನ್ನ ಮನಸ್ಸೆಂಬ ಮೀನು ಈ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿ, ಘೋರವಾದ ಸಂಸಾರವೆಂಬ ಮಡುವಿನಲ್ಲಿ ಅಲೆದಾಡುತ್ತಿದೆ. ಆದುದರಿಂದ ನಿಂದನೀಯವೂ ಜನನಮರಣಾತ್ಮಕವೂ ಆದ ಈ ಸಂಸಾರವನ್ನು ದೂರಮಾಡಿ ನಿನ್ನ ಪಾದಾರವಿಂದಗಳಲ್ಲಿ ನನಗೆ ಭಕ್ತಿಯನ್ನು ದಯಪಾಲಿಸು.

೨೩. ಧರ್ಮ :—ಎಲೈ ನನ್ನೊಡೆಯನೇ, ನನಗೆ ನಿನ್ನ ಭಕ್ತರೊಡನೆ ಸಂಗಮವುಂಟಾಗಿ ಸಂಸಾರಬಂಧನವನ್ನು ಕತ್ತರಿಸಲು ಅದೇ ಹರಿತವಾದ ಕತ್ತಿಯಂತಾಗಲಿ. ನಿನ್ನ ಚರಣಕಮಲಗಳಲ್ಲಿ ಶಾಶ್ವತಸ್ಥಾನವನ್ನು ಕೊಡುವುದಕ್ಕೆ ಮುಖ್ಯಕಾರಣವಾದ ನಿನ್ನ ಪಾದಕಮಲಗಳ ಭಕ್ತಿಯನ್ನು ಪ್ರತಿಜನ್ಮದಲ್ಲಿಯೂ ನನಗೆ ಅನುಗ್ರಹಿಸು.

೨೪. ಈ ರೀತಿಯಾಗಿ ಸ್ತುತಿಸಿ ಪರಿಪೂರ್ಣ ಮನೋರಥರಾಗಿ, ತಮ್ಮ ಇಷ್ಟಾರ್ಥವನ್ನು ಪೂರ್ಣಗೊಳಿಸಬಲ್ಲ ರಾಧಾಪತಿಯ ಮುಂದೆ ನಿಂತುಕೊಂಡರು.

**ಮಹತ್‍ಕ್ಷುದ್ರಂ ಚ ಯತ್ಕರ್ಮ ಸರ್ವಂ ಕಾಲಕೃತಂ ಸುರಾಃ ।**
**ಸ್ವೇ ಸ್ವೇ ಕಾಲೇ ಚ ತರವಃ ಫಲಿತಾಃ ಪುಷ್ಪಿಣಃ ಸದಾ　　॥ ೨೯ ॥**

**ಪರಿಪಕ್ವಫಲಾಃ ಕಾಲೇ ಕಾಲೇ ಪಕ್ವಫಲಾನ್ವಿತಾಃ ।**
**ಸುಖಂ ದುಃಖಂ ವಿಪತ್ಸಂಪಚ್ಛೋಕಚಿಂತಾಶುಭಾಶುಭಂ　　॥ ೩೦ ॥**

**ಸ್ವಕರ್ಮಫಲನಿಷ್ಠಂ ಚ ಸರ್ವಕಾಲೇಷ್ವುಪಸ್ಥಿತಂ ।**
**ನ ಹಿ ಕಸ್ಯ ಪ್ರಿಯಃ ಕೋ ವಾ ವಿಪ್ರಿಯೋ ವಾ ಜಗತ್ತ್ರಯೇ　　॥ ೩೧ ॥**

**ಕಾಲೇ ಕಾರ್ಯವಶಾತ್ಸರ್ವೇ ಭವಂತ್ಯೇವಾಪ್ರಿಯಾಃ ಪ್ರಿಯಾಃ ।**
**ರಾಜಾನೋ ಮನವಃ ಪೃಥ್ವ್ಯಾಂ ದೃಷ್ಟಾ ಯುಷ್ಮಾಭಿರತ್ರ ವೈ　　॥ ೩೨ ॥**

**ಸ್ವಕರ್ಮಫಲಪಾಕೇನ ಸರ್ವೇ ಕಾಲವಶಂಗತಾಃ ।**
**ಯುಷ್ಮಾಕಮಧುನಾ ಚೈವ ಗೋಲೋಕೇ ಯತ್‍ಕ್ಷಣಂ ಗತಂ　　॥ ೩೩ ॥**

---

೨೯. ದೇವತೆಗಳೇ, ಕರ್ಮವು ಕಾಲಾನುಗುಣವಾಗಿ ಮಹತ್ ಮತ್ತು ಕ್ಷುದ್ರವೆನಿಸುವುದು. ಮರಗಿಡಗಳೂ ಕೂಡ ಕಾಲಾನುಗುಣವಾಗಿ ಹೂಹಣ್ಣುಗಳಿಂದ ತುಂಬಿರುವುವು.

೩೦. ಸುಖದುಃಖಗಳೂ, ಸಂಪದ್ವಿಪತ್ತುಗಳೂ, ಶೋಕಚಿಂತೆಗಳೂ, ಶುಭಾಶುಭಗಳೂ, ಕಾಲಕಾಲಕ್ಕೆ ತಕ್ಕಂತೆ ಫಲಿಸುವುವು.

೩೧. ಸರ್ವಕಾಲದಲ್ಲಿಯೂ ಕರ್ಮಾನುಗುಣವಾಗಿಯೇ ಫಲವು ದೊರಕುವುದು. ಮೂರುಲೋಕದಲ್ಲಿ ಯಾರಿಗೆ ಯಾರೂ ಪ್ರಿಯನಾಗಲೀ ಅಪ್ರಿಯನಾಗಲೀ ಇರುವುದಿಲ್ಲ.

೩೨. ಆಯಾ ಕಾಲದಲ್ಲಿ ಕಾರ್ಯಾನುಗುಣವಾಗಿ ಎಲ್ಲರೂ ಪ್ರಿಯರೂ, ಅಪ್ರಿಯರೂ ಆಗುವರು. ಇದುವರೆಗೆ ನೀವು ಅನೇಕ ರಾಜರನ್ನೂ, ಮನುಗಳನ್ನೂ ಭೂಮಂಡಲದಲ್ಲಿ ನೋಡಿದುದಾಯಿತು.

೩೩-೩೪. ತಮ್ಮ ಕರ್ಮಪಾಕಾನುಗುಣವಾಗಿ ಎಲ್ಲರೂ ಕಾಲಾಧೀನರಾದರು. ನೀವು ಈಗ ಗೋಲೋಕದಲ್ಲಿ ಕಳೆದಿರುವ ಒಂದು ಕ್ಷಣಕಾಲದೊಳಗೆ ಪೃಥ್ವಿಯಲ್ಲಿ

ಸುರಾಣಾಂ ಸ್ತವನಂ ಶ್ರುತ್ವಾ ತಾನುವಾಚ ಕೃಪಾನಿಧಿಃ ।
ಹಿತಂ ತಥ್ಯಂ ಚ ವಚನಂ ಸ್ಮೇರಾನನಸರೋರುಹಃ ॥ ೨೫ ॥

॥ ಶ್ರೀಕೃಷ್ಣ ಉವಾಚ ॥

ತಿಷ್ಠತಾಗಚ್ಛತ ಸುರಾ ಮದೀಯಾ ನಾತ್ರ ಸಂಶಯಃ ।
ಶಿವಾಶ್ರಯಾಣಾಂ ಕುಶಲಂ ಪ್ರಷ್ಟುಂ ಯುಕ್ತಂ ನ ಸಾಂಪ್ರತಂ ॥ ೨೬ ॥

ನಿಶ್ಚಿಂತಾ ಭವತಾತ್ರೈವ ಕಾ ಚಿಂತಾ ವೋ ಮಯಿ ಸ್ಥಿತೇ ।
ಸ್ಥಿತೋಽಹಂ ಸರ್ವಜೀವೇಷು ಪ್ರತ್ಯಕ್ಷೋಽಹಂ ಸ್ತವೇನ ವೈ ॥ ೨೭ ॥

ಯುಷ್ಮಾಕಂ ಯದಭಿಪ್ರಾಯಂ ಸರ್ವಂ ಜಾನಾಮಿ ನಿಶ್ಚಿತಂ ।
ಶುಭಾಶುಭಂ ಚ ಯತ್ಕರ್ಮ ಕಾಲೇ ಖಲು ಭವಿಷ್ಯತಿ ॥ ೨೮ ॥

---

೨೫. ದೇವತೆಗಳ ಸ್ತೋತ್ರವನ್ನು ಕೇಳಿ ಸ್ಮಿತಮುಖನಾದ ಪರಮಾತ್ಮನು ದಯಾರ್ದ್ರನಾಗಿ ಅವರನ್ನು ಕುರಿತು ಹಿತವೂ, ಸತ್ಯವೂ, ಆದ ಕೆಲವು ನುಡಿಗಳನ್ನಾಡಿದನು.

೨೬. ಶ್ರೀಕೃಷ್ಣ :—ಎಲೈ ದೇವತೆಗಳೇ, ಬನ್ನಿರಿ, ನೀವೆಲ್ಲರೂ ನನ್ನವರು. ಇದರಲ್ಲಿ ಸಂಶಯವಿಲ್ಲ. ಮಂಗಳಾಲಯನನ್ನು ಆಶ್ರಯಿಸಿರುವ ನಿಮ್ಮ ಕ್ಷೇಮಲಾಭವನ್ನು ಹೊಸದಾಗಿ ಕೇಳಬೇಕಾದುದನುಚಿತ.

೨೭. ನೀವೆಲ್ಲರೂ ನಿಶ್ಚಿಂತರಾಗಿ ಇಲ್ಲಿಯೇ ಇರಿ. ನಾನಿರುವಾಗ ನಿಮಗೆ ಯೋಚನೆಯೇನು? ಎಲ್ಲ ಜೀವಿಗಳಲ್ಲೂ ನಾನಿದ್ದೇನೆ. ಭಕ್ತಿಯಿಂದ ಸ್ತುತಿಸಿದವರಿಗೆ ಪ್ರತ್ಯಕ್ಷನಾಗುತ್ತೇನೆ.

೨೮. ನಿಮ್ಮ ಇಷ್ಟಾರ್ಥವೇನು? ನೀವೇತಕ್ಕೆ ಬಂದಿರುವಿರಿ? ಎಂಬುದನ್ನು ನಾನು ಬಲ್ಲೆ. ಶುಭಾಶುಭಕರ್ಮಗಳು ಕಾಲಾನುಗುಣವಾಗಿ ಫಲಿಸುವುವು.

ಪೃಥಿವ್ಯಾಂ ತತ್ಕ್ಷಣೇನೈವ ಸಪ್ತಮನ್ವಂತರಂ ಗತಂ ।
ಇಂದ್ರಾಃ ಸಪ್ತಗತಾಸ್ತತ್ರ ದೇವೇಂದ್ರಶ್ಚಾಷ್ಟಮೋಽಧುನಾ ॥ ೩೪ ॥

ಕಾಲಚಕ್ರಂ ಭ್ರಮತ್ಯೇವ ಮದೀಯಂ ಚ ದಿವಾನಿಶಂ ।
ಇಂದ್ರಾಶ್ಚ ಮಾನವಾ ಭೂಪಾಃ ಸರ್ವೇ ಕಾಲವಶಂಗತಾಃ ॥ ೩೫ ॥

ಕೀರ್ತಿಃ ಪೃಥ್ವ್ಯಾಂ ಪುಣ್ಯಮದ್ಯ ಕಥಾಮಾತ್ರಾವಶೇಷಿತಂ ।
ಅಧುನಾಽಪಿ ಚ ರಾಜಾನೋ ದುಷ್ಟಾಶ್ಚ ಹರಿನಿಂದಕಾಃ ॥ ೩೬ ॥

ಬಭೂವುರ್ಬಹವೋ ಭೂಮೌ ಮಹಾಬಲಪರಾಕ್ರಮಾಃ
ಸರ್ವೇ ಯಾಸ್ಯಂತಿ ರಾಜಾನಃ ಕಾಲಾಂತರವಶಂ ಧ್ರುವಂ ॥ ೩೭ ॥

ಉಪಸ್ಥಿತೋಽಪಿ ಕಾಲೋಽಯಂ ವಾತೋ ವಾತಿ ನಿರಂತರಂ ।
ವಹ್ನಿರ್ದಹತಿ ಸೂರ್ಯಶ್ಚ ತಪತ್ಯೇವ ಮಮಾಜ್ಞಯಾ ॥ ೩೮ ॥

---

ಏಳು ಮನ್ವಂತರಗಳು ಕಳೆದುಹೋಗಿವೆ. ಏಳು ಜನ ಇಂದ್ರರ ರಾಜ್ಯಭಾರ ಮುಗಿದು ಈಗ ಎಂಟನೆಯ ಇಂದ್ರನಿದ್ದಾನೆ.

೩೫. ನನ್ನ ಕಾಲವೆಂಬ ಚಕ್ರವು ಹಗಲೂ ರಾತ್ರಿ ಸುತ್ತುತ್ತಿದೆ. ಇಂದ್ರರು, ಮಾನವರು ಮತ್ತು ರಾಜಾಧಿರಾಜರೆಲ್ಲರೂ ಆ ಕಾಲಚಕ್ರಕ್ಕೆ ಸಿಲುಕಿದ್ದಾರೆ

೩೬. ಈಗ ಭೂಮಂಡಲದಲ್ಲಿ ಕೀರ್ತಿಯಾಗಲೀ, ಪುಣ್ಯವಾಗಲೀ, ನಾಮಾವಶೇಷವಾಗಿದೆ. ಈಗ ಭೂಮಂಡಲದಲ್ಲಿರುವ ರಾಜರೆಲ್ಲರೂ ದುಷ್ಟರೂ, ಹರಿದೂಷಕರೂ ಆಗಿರುವರು.

೩೭. ಭೂಮಿಯಲ್ಲಿದ್ದ ಮಹಾಬಲಪರಾಕ್ರಮಿಗಳಾದ ಅನೇಕ ರಾಜರುಗಳು ಅಳಿದುಹೋದರು. ಎಲ್ಲ ರಾಜರೂ ನಿಶ್ಚಯವಾಗಿ ಕಾಲಾಧೀನರಾಗುವರು.

೩೮. ಈಗ ನನ್ನ ಆಜ್ಞೆಯಂತೆ ಉಗ್ರವಾದ ಕಾಲವು ಸನ್ನಿಹಿತವಾಗುತ್ತದೆ. ಮಹಾಮಾರುತವು ಎಡಬಿಡದೆ ಬೀಸುತ್ತಿದೆ. ಅಗ್ನಿಸೂರ್ಯರು ನನ್ನ ಅಪ್ಪಣೆಯಂತೆ ಪ್ರಚಂಡರಾಗಿ ದಹಿಸುತ್ತಿದ್ದಾರೆ.

**ವ್ಯಾಧಯಃ ಸಂತಿ ದೇಹೇಷು ಮೃತ್ಯುಶ್ಚರತಿ ಜಂತುಷು |**
**ವರ್ಷಂತ್ಯೇತೇ ಜಲಧರಾಃ ಸರ್ವೇ ದೇವಾ ಮಮಾಜ್ಞಯಾ || ೩೯ ||**

**ಬ್ರಾಹ್ಮಣ್ಯನಿಷ್ಠಾ ವಿಪ್ರಾಶ್ಚ ತಪೋನಿಷ್ಠಾಸ್ತಪೋಧನಾಃ |**
**ಬ್ರಹ್ಮರ್ಷಯೋ ಬ್ರಹ್ಮನಿಷ್ಠಾ ಯೋಗನಿಷ್ಠಾಶ್ಚ ಯೋಗಿನಃ || ೪೦ ||**

**ತೇ ಸರ್ವೇ ಮದ್ಭಯಾದ್ಭೀತಾಃ ಸ್ವಕರ್ಮಧರ್ಮತತ್ಪರಾಃ |**
**ಮದ್ಭಕ್ತಾಶ್ಚೈವ ನಿಶ್ಶಂಕಾಃ ಕರ್ಮನಿರ್ಮೂಲಕಾರಕಾಃ || ೪೧ ||**

**ದೇವಾಃ ಕಾಲಸ್ಯ ಕಾಲೋಽಹಂ ವಿಧಾತಾ ಧಾತುರೇವ ಚ**
**ಸಂಹಾರಕರ್ತುಃ ಸಂಹರ್ತಾ ಪಾತುಃ ಪಾತಾ ಪರಾತ್ಪರಃ || ೪೨ ||**

---

೩೯. ದೇಹಗಳಲ್ಲೆಲ್ಲ ವ್ಯಾಧಿಯು ವ್ಯಾಪಿಸಿಕೊಂಡಿದೆ. ಮೃತ್ಯುದೇವತೆಯು ಪ್ರಾಣಿಗಳಿಗೆ ಸನ್ನಿಹಿತವಾಗಿಯೇ ಇದೆ. ಮೇಘಗಳು ನನ್ನ ಆಜ್ಞಾನುವರ್ತಿಗಳಾಗಿ ಮಳೆಗರೆಯುತ್ತಿವೆ. ದೇವತೆಗಳೆಲ್ಲರೂ ನನ್ನ ಅಭಿಮತದಂತೆ ನಡೆಯುತ್ತಿದ್ದಾರೆ

೪೦. ಬ್ರಾಹ್ಮಣರು ತಮಗೆ ವಿಹಿತವಾದ ಕರ್ಮದಲ್ಲಿ ನಿಷ್ಠರಾಗಿದ್ದಾರೆ. ತಪೋಧನರು ತಪೋನಿಷ್ಠರಾಗಿಯೂ, ಬ್ರಹ್ಮರ್ಷಿಗಳು ಬ್ರಹ್ಮನಿಷ್ಠರಾಗಿಯೂ, ಯೋಗಿಗಳು ಯೋಗನಿಷ್ಠರಾಗಿಯೂ ಇದ್ದಾರೆ.

೪೧. ಅವರೆಲ್ಲರೂ ನನ್ನ ಭಯದಿಂದ ತಮ್ಮ ತಮ್ಮ ಧರ್ಮಕರ್ಮಗಳಲ್ಲಿ ನಿರತರಾಗಿದ್ದಾರೆ ನನ್ನ ಭಕ್ತರಾದವರೋ ಕರ್ಮಬಂಧನದಿಂದ ಮುಕ್ತರಾಗಿ ನಿಃಶಂಕರಾಗಿದ್ದಾರೆ.

೪೨. ಎಲೈ ದೇವತೆಗಳೇ, ನಾನು ಕಾಲಕ್ಕೂ ಕಾಲ (ಅಂತಕ) ನಾಗಿದ್ದೇನೆ ವಿಧಾತೃ (ಬ್ರಹ್ಮ) ವಿಗೆ ವಿಧಾತನಾಗಿಯೂ, ಸಂಹಾರಕರ್ತನಿಗೆ (ಶಿವ) ಸಂಹಾರಕ ನಾಗಿಯೂ, ಪಾಲಕನಿಗೆ (ವಿಷ್ಣು) ಪಾಲಕನಾಗಿಯೂ ಪರಾತ್ಪರನೆನಿಸಿದ್ದೇನೆ.

ಮಮಾಜ್ಞಯಾಽಯಂ ಸಂಹರ್ತಾ ನಾಮ್ನಾ ತೇನ ಹರಃ ಸ್ಮೃತಃ ।
ತ್ವಂ ವಿಶ್ವಸೃಟ್ ಸೃಷ್ಟಿಹೇತೋಃ ಪಾತಾ ಧರ್ಮಸ್ಯ ರಕ್ಷಣಾತ್ ॥ ೪೩ ॥

ಬ್ರಹ್ಮಾದಿತೃಣಪರ್ಯಂತಂ ಸರ್ವೇಷಾಮಹಮೀಶ್ವರಃ ।
ಸ್ವಕರ್ಮಫಲದಾತಾಹಂ ಕರ್ಮನಿರ್ಮೂಲಕಾರಕಃ ॥ ೪೪ ॥

ಅಹಂ ಯಾನ್ಸಂಹರಿಷ್ಯಾಮಿ ಕಸ್ತೇಷಾಮಪಿ ರಕ್ಷಿತಾ ।
ಯಾನಹಂ ಪಾಲಯಿಷ್ಯಾಮಿ ತೇಷಾಂ ಹಂತಾ ನ ಕೋಽಪಿ ವಾ ॥ ೪೫ ॥

ಸರ್ವೇಷಾಮಪಿ ಸಂಹರ್ತಾ ಸ್ರಷ್ಟಾ ಪಾತಾಽಹಮೇವ ಚ ।
ನಾಹಂ ಶಕ್ತಶ್ಚ ಭಕ್ತಾನಾಂ ಸಂಹಾರೇ ನಿತ್ಯದೇಹಿನಾಂ ॥ ೪೬ ॥

---

೪೩. ನನ್ನ ಅಪ್ಪಣೆಯಿಂದಲೇ ಶಿವನು ಜಗತ್ಸಂಹಾರಕನಾಗಿದ್ದಾನೆ. ಆದುದರಿಂದಲೇ ಹರನೆಂದು ಹೆಸರುಗೊಂಡಿದ್ದಾನೆ. ನೀನು ವಿಶ್ವವನ್ನು ಸೃಜಿಸುವುದರಿಂದಲೇ ವಿಧಾತನೆನಿಸಿಕೊಂಡಿರುವೆ ವಿಷ್ಣುವು ಪಾಲಕನಾದುದರಿಂದ ಪಾತೃವೆಂದು, ಹೆಸರುವಾಸಿಯಾಗಿದ್ದಾನೆ.

೪೪. ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲಕ್ಕೂ ನಾನೇ ಒಡೆಯನು. ಅವರವರ ಕರ್ಮಫಲದಾತೃವೂ, ಕರ್ಮನಿರ್ಮೂಲಕಾರಕನೂ ನಾನೇ ಆಗಿರುವೆನು.

೪೫. ನಾನು ಯಾರನ್ನು ಸಂಹರಿಸುವೆನೋ ಅವರನ್ನು ರಕ್ಷಿಸುವವರಾರೂ ಇಲ್ಲ. ಅಂತೆಯೇ ನಾನು ಯಾರನ್ನು ರಕ್ಷಿಸುವೆನೋ ಅವರನ್ನು ಸಂಹರಿಸುವವರಾರೂ ಇಲ್ಲ

೪೬ ಎಲ್ಲರನ್ನೂ ಸಂಹಾರಮಾಡುವವನೂ, ಸೃಷ್ಟಿಮಾಡುವವನೂ, ರಕ್ಷಣೆ ಮಾಡುವವನೂ ನಾನೇ ಆಗಿರುವೆನು. ಆದರೆ ನಿತ್ಯದೇಹಿಗಳಾದ ಭಕ್ತರನ್ನು ನಾನು ಸಂಹರಿಸಲಾರೆನು.

ಭಕ್ತಾ ಮಮಾನುಗಾಃ ನಿತ್ಯಂ ಮತ್ಪಾದಾರ್ಚನ ತತ್ಪರಾಃ ।
ಅಹಂ ಭಕ್ತಾಂತಿಕೇ ಶಶ್ವತ್ತೇಷಾಂ ರಕ್ಷಣ ಹೇತವೇ ॥ ೪೭ ॥

ಸರ್ವೇ ನಶ್ಯಂತಿ ಬ್ರಹ್ಮಾಂಡೇ ಪ್ರಭವಂತಿ ಪುನಃ ಪುನಃ ।
ನ ಮೇ ಭಕ್ತಾಃ ಪ್ರಣಶ್ಯಂತಿ ನಿಃ ಶಂಕಾಶ್ಚ ನಿರಾಪದಃ ॥ ೪೮ ॥

ಅತೋ ವಿಪಶ್ಚಿತಃ ಸರ್ವೇ ದಾಸ್ಯಂ ವಾಂಛಂತಿ ನೋ ವರಂ ।
ಯೇ ಮಾಂ ದಾಸ್ಯಂ ಪ್ರಯಾಚಂತೇ ಧನ್ಯಾಸ್ತೇನ್ಯೇಚ ವಂಚಿತಾಃ ॥ ೪೯ ॥

ಜನ್ಮಮೃತ್ಯುಜರಾವ್ಯಾಧಿಭಯಂ ಚ ಯಮಯಾತನಾ ।
ಅನ್ಯೇಷಾಂ ಕರ್ಮಿಣಾಮಸ್ತಿ ನ ಭಕ್ತಾನಾಂ ಚ ಕರ್ಹಿಚಿತ್ ॥ ೫೦ ॥

ಭಕ್ತಾ ನ ಲಿಪ್ತಾಃ ಪಾಪೇಷು ಪುಣ್ಯೇಷು ಸರ್ವಕರ್ಮಿಣಃ ।
ಅಹಂ ದುನೋಮಿ ತೇಷಾಂ ಚ ಕರ್ಮಭೋಗಾನ್ಸುನಿಶ್ಚಿತಂ ॥ ೫೧ ॥

---

೪೭. ನನ್ನ ಪಾದಸೇವೆಯಲ್ಲಿ ನಿರತರಾದ ಭಕ್ತರು ನಿತ್ಯವೂ ನನ್ನನ್ನು ಅನುಸರಿಸುತ್ತಿರುವರು. ನಾನು ಯಾವಾಗಲೂ ಭಕ್ತರ ರಕ್ಷಣೆಗಾಗಿ ಅವರ ಸಮೀಪದಲ್ಲಿಯೇ ಇರುವೆನು.

೪೮. ಬ್ರಹ್ಮಾಂಡದಲ್ಲಿ ಎಲ್ಲರೂ ನಾಶವಾಗಿ ಮತ್ತೆ ಮತ್ತೆ ಹುಟ್ಟುವರು. ಆದರೆ ನಿರಾಪದರೂ, ನಿಶ್ಶಂಕರೂ ಆದ ನನ್ನ ಭಕ್ತರಿಗೆ ಜನನಮರಣಗಳಿಲ್ಲ.

೪೯. ಆದುದರಿಂದಲೇ ಜ್ಞಾನಿಗಳೆಲ್ಲರೂ ನನ್ನ ಸೇವೆಯನ್ನು ಬಯಸುವರೇ ಹೊರತು ಇತರ ವರವನ್ನು ಬೇಡುವುದಿಲ್ಲ. ಯಾರು ನನ್ನ ದಾಸ್ಯವನ್ನು ಬಯಸುವರೋ ಅವರೇ ಧನ್ಯರು. ಇತರರೆಲ್ಲರೂ ವಂಚಿತರು.

೫೦. ಜನ್ಮಜರಾಮರಣಗಳೂ, ವ್ಯಾಧಿಭಯಗಳೂ, ಯಮಯಾತನೆಯೂ, ಕರ್ಮಿಗಳಿಗೆಲ್ಲ ಉಂಟು. ಆದರೆ ನನ್ನ ಭಕ್ತರಿಗೆ ಮಾತ್ರ ಇವು ಯಾವುವೂ ಇಲ್ಲ.

೫೧. ಇತರ ಕರ್ಮಿಗಳಂತೆ ನನ್ನ ಭಕ್ತರು ಪುಣ್ಯಪಾಪ ಕರ್ಮಗಳಲ್ಲಿ ಲಿಪ್ತರಾಗುವುದಿಲ್ಲ. ನಾನು ಅವರ ಕರ್ಮಭೋಗಗಳನ್ನು ನಿಶ್ಚಯವಾಗಿಯೂ ದೂರಮಾಡುವೆನು.

ಅಹಂ ಪ್ರಾಣಶ್ಚ ಭಕ್ತಾನಾಂ ಭಕ್ತಾಃ ಪ್ರಾಣಾ ಮಮಾಪಿ ಚ ।
ಧ್ಯಾಯಂತೇ ತೇ ಚ ಮಾಂ ನಿತ್ಯಂ ತಾನ್ಸ್ಮರಾಮಿ ದಿವಾ ನಿಶಂ ॥ ೫೨ ॥

ಚಕ್ರಂ ಸುದರ್ಶನಂ ನಾಮ ಷೋಡಶಾರಂ ಸುತೀಕ್ಷ್ಣಕಂ ।
ಯತ್ತೇಜಃ ಷೋಡಶಾಂಶೋಽಪಿ ನಾಸ್ತಿ ಸರ್ವೇಷು ಜೀವಿಷು ॥ ೫೩ ॥

ಭಕ್ತಾಂತಿಕೇ ತು ಶಚ್ಚಕ್ರಂ ದತ್ವಾ ರಕ್ಷಾರ್ಥಮೀಪ್ಸಿತಂ ।
ನ ಸ್ವಾಸ್ಥ್ಯಂ ನ ಚ ಪ್ರೀತಿರ್ಮೇ ಯಾಮಿ ತೇಷಾಂ ಚ ಸನ್ನಿಧಿಂ ॥ ೫೪ ॥

ನ ಮೇ ಸ್ವಾಸ್ಥ್ಯಂ ಚ ವೈಕುಂಠೇ ಗೋಲೋಕೇ ರಾಧಿಕಾಂತಿಕೇ ।
ಯತ್ರ ತಿಷ್ಠಂತಿ ಭಕ್ತಾಸ್ತೇ ತತ್ರ ತಿಷ್ಠಾಮ್ಯಹರ್ನಿಶಂ ॥ ೫೫ ॥

ಪ್ರಾಣೇಭ್ಯಃ ಪ್ರೇಯಸೀ ರಾಧಾ ಸ್ಥಿತೋರಸಿ ದಿವಾನಿಶಂ ।
ಯೂಯಂ ಪ್ರಾಣಾಧಿಕಾ ಲಕ್ಷ್ಮೀರ್ನ ಮೇ ಭಕ್ತಾತ್ಪರಪ್ರಿಯಾ ॥ ೫೬ ॥

---

೫೨. ನಾನು ಭಕ್ತರಿಗೆ ಪ್ರಾಣಸ್ವರೂಪನಾಗಿರುವಂತೆ ನನಗೂ ಭಕ್ತರೆಂದರೆ ಪ್ರಾಣ. ಅವರು ನಿತ್ಯವೂ ನನ್ನನ್ನು ಧ್ಯಾನಿಸುವಂತೆ ನಾನೂ ಅವರನ್ನು ಹಗಲೂ ರಾತ್ರಿ ಸ್ಮರಿಸುತ್ತೇನೆ.

೫೩. ಹದಿನಾರು ಅರ (ಹಾರೆಕಾಲು) ಗಳುಳ್ಳ, ಅತ್ಯಂತ ತೀಕ್ಷ್ಣವಾದ ಸುದರ್ಶನವೆಂಬ ಚಕ್ರವು ನನ್ನಲ್ಲಿವೆ. ಅದರ ತೇಜಸ್ಸಿನ ಹದಿದಾರನೆಯ ಒಂದು ಭಾಗದಷ್ಟು ತೇಜಸ್ಸೂ ಯಾವ ಜೀವಿಗಳಲ್ಲಿಯೂ ಇಲ್ಲ.

೫೪. ಭಕ್ತರ ರಕ್ಷಣೆಗಾಗಿ ಆ ಚಕ್ರವನ್ನು ನಾನು ಅವರಿಗೆ ಅನುಗ್ರಹಿಸಿದ್ದರೂ ನನಗೆ ಮನಃಶಾಂತಿಯಿಲ್ಲದೆ ನಾನೂ ಅವರ ರಕ್ಷಣೆಗಾಗಿ ಅವರೊಡನೆಯೇ ಇರುವೆನು.

೫೫. ವೈಕುಂಠವಲ್ಲಾಗಲೀ ನಾನು ನಿಶ್ಚಿಂತನಾಗಿರಲಾರೆನು. ಆಮದರಿಂದ ನನ್ನ ಭಕ್ತರೆಲ್ಲಿರುವರೋ ಅಲ್ಲಿ ಅವರೊಡನೆಯೇ ಹಗಲೂ ರಾತ್ರಿ ಇರುವೆನು.

೫೬. ಪ್ರಾಣಗಳಿಗಿಂತಲೂ ಪ್ರಿಯಳಾದ ರಾಧೆಯು ನನ್ನ ವಕ್ಷಃಸ್ಥಲದಲ್ಲಿ ಹಗಲೂ ರಾತ್ರಿ ನೆಲೆಸಿರುವಳು. ಲಕ್ಷ್ಮೀದೇವಿಯೂ, ನೀವೂ ನನ್ನ ಪ್ರಾಣಕ್ಕಿಂತ ಹೆಚ್ಚಾಗಿರುವಿರಿ. ಆದರೂ ನನಗೆ ಭಕ್ತರಿಗಿಂತ ಮತ್ತಾರೂ ಪ್ರಿಯರಲ್ಲ

**ಇತ್ಯುಕ್ತ್ವಾ ಜಗತಾಂ ನಾಥೋ ಗೋಪಾನಾಹೂಯ ಗೋಪಿಕಾಃ ।**
**ಉವಾಚ ಮಧುರಂ ವಾಕ್ಯಂ ಸತ್ಯಂ ಯತ್ಸಮಯೋಚಿತಂ ॥ ೬೨ ॥**

**ಗೋಪಾ ಗೋಪ್ಯಶ್ಚ ಶೃಣುತ ಯಾತ ನಂದವ್ರಜಂ ಪರಂ ।**
**ವೃಷಭಾನುಗೃಹೇ ಕ್ಷಿಪ್ರಂ ಗಚ್ಛ ತ್ವಮಪಿ ರಾಧಿಕೇ ॥ ೬೩ ॥**

**ವೃಷಭಾನುಪ್ರಿಯಾ ಸಾಧ್ವೀ ನಂದಗೋಪ ಕಲಾವತೀ ।**
**ಸುಬಲಸ್ಯ ಸುತಾ ಸಾ ಚ ಕಮಲಾಂಶಸಮುದ್ಭವಾ ॥ ೬೪ ॥**

**ಪಿತೃಣಾಂ ಮಾನಸೀ ಕನ್ಯಾ ಧನ್ಯಾ ಮಾನ್ಯಾ ಚ ಯೋಷಿತಾಂ ।**
**ಪುರಾ ದುರ್ವಾಸಸಃ ಶಾಪಾಜ್ಜನ್ಮ ತಸ್ಯಾ ವ್ರಜೇ ಗೃಹೇ ॥ ೬೫ ॥**

---

೬೨. ಜಗದೊಡೆಯನಾದ ಪರಮಾತ್ಮನು ದೇವತೆಗಳಿಗೆ ಇಂತು ನುಡಿದು, ಗೋಪಿಗೋಪಿಯರನ್ನು ಕರೆದು ಮಧುರವೂ, ಸತ್ಯವೂ ಸಮಯೋಚಿತವೂ ಆದ ಕೆಲವು ನುಡಿಗಳನ್ನು ಹೇಳಿದನು.

೬೩. ಎಲೈ ಗೋಪ ಗೋಪಿಯರೇ ಕೇಳಿರಿ. ನೀವೆಲ್ಲರೂ ನಂದಗೋಕುಲಕ್ಕೆ ಹೋಗಿರಿ. ಎಲೌ ರಾಧೆಯೇ, ನೀನೂ ಕೂಡ ವೃಷಭಾನುವಿನ ಮಂದಿರಕ್ಕೆ ಹೋಗು.

೬೪. ನಂದಗೋಪನಾದ ವೃಷಭಾನುವಿಗೆ ಪ್ರಿಯಳೂ, ಸಾಧ್ವೀಶಿರೋಮಣಿಯೂ ಆದ ಕಲಾವತಿಯು, ಲಕ್ಷ್ಮಿಯ ಅಂಶದಿಂದ ಸುಬಲನ ಮಗಳಾಗಿ ಅವತರಿಸಿದ್ದಾಳೆ.

೬೫. ಪಿತೃದೇವತೆಗಳ ಮಾನಸಕನ್ಯೆಯೂ, ಸ್ತ್ರೀಯರಲ್ಲಿ ಧನ್ಯಳೂ, ಮಾನ್ಯಳೂ ಆದ ಆಕೆಯೂ ಪೂರ್ವದಲ್ಲಿ ದೂರ್ವಾಸಮಹರ್ಷಿಗಳ ಶಾಪಕ್ಕೊಳಗಾಗಿ ಗೋಪಮಂದಿರದಲ್ಲಿ ಜನ್ಮವೆತ್ತಿರುವಳು.

ಭಕ್ತದತ್ತಂ ಚ ಯದ್ದ್ರವ್ಯಂ ಭಕ್ತ್ಯಾಶ್ನಾಮಿ ಸುರೇಶ್ವರಾಃ ।
ಅಭಕ್ತದತ್ತಂ ನಾಶ್ನಾಮಿ ಧ್ರುವಂ ಭುಂಕ್ತೇ ಬಲಿಂ ಸ್ವಯಂ ॥ ೫೭ ॥

ಸ್ತ್ರೀಪುತ್ರಸ್ವಜನಾಂ ಸ್ತ್ಯಕ್ತ್ವಾ ಧ್ಯಾಯಂತೇ ಮಾಮಹರ್ನಿಶಂ ।
ಯುಷ್ಮಾನ್ವಿಹಾಯ ತಾನ್ನಿತ್ಯಂ ಸ್ಮರಾಮ್ಯಹಮಹರ್ನಿಶಂ ॥ ೫೮ ॥

ದುಷ್ಟಾ ಯದಾ ಮೇ ಭಕ್ತಾನಾಂ ಬ್ರಾಹ್ಮಣಾನಾಂ ಗವಾಮಪಿ ।
ಕ್ರತೂನಾಂ ದೇವತಾನಾಂ ಚ ಹಿಂಸಾಂ ಕುರ್ವಂತಿ ನಿಶ್ಚಿತಂ ॥ ೫೯ ॥

ತಥಾಚಿರಂ ತೇ ನಶ್ಯಂತಿ ಯಥಾ ವಹ್ನೌ ತೃಣಾನಿ ಚ ।
ನ ಕೋಽಪಿ ರಕ್ಷಿತಾ ತೇಷಾಂ ಮಯಿಹಂತರ್ಯುಪಸ್ಥಿತೇ ॥ ೬೦ ॥

ಯಾಸ್ಯಾಮಿ ಪೃಥಿವೀಂ ದೇವಾ ಯಾತ ಯೂಯಂ ಸ್ವಮಾಲಯಂ ।
ಯೂಯಂ ಚೈವಾಂಶರೂಪೇಣ ಶೀಘ್ರಂ ಗಚ್ಛತ ಭೂತಲಂ ॥ ೬೧ ॥

---

೫೭. ಎಲೈ ದೇವತೆಗಳೇ ಭಕ್ತರು ಭಕ್ತಿಯಿಂದ ನನಗೆ ಏನನ್ನರ್ಪಿಸಿದರೂ ಅದನ್ನು ಭುಜಿಸುತ್ತೇನೆ. ಭಕ್ತನಲ್ಲದವನು ಅರ್ಪಿಸಿದ್ದನ್ನು ನಾನು ತಿನ್ನುವುದಿಲ್ಲ. ಅವನರ್ಪಿಸಿದ ಬಲಿಯನ್ನು ಅವನೇ ಊಟಮಾಡಬೇಕು.

೫೮. ಯಾರು ತಮ್ಮ ಹೆಂಗಸು ಮಕ್ಕಳನ್ನೂ, ಸ್ವಜನರನ್ನೂ ಮರೆತು ನನ್ನನ್ನು ಹಗಲೂರಾತ್ರಿ ಧ್ಯಾನಿಸುವರೋ ಅಂಥವರನ್ನು ನಾನೂಕೂಡ ಹಗಲೂರಾತ್ರಿ ಸ್ಮರಿಸಿಕೊಳ್ಳುವೆನು ನಿಮ್ಮನ್ನೂ ದೂರಮಾಡುವೆನು

೫೯-೬೦. ಯಾವ ದುಷ್ಟರು ನನ್ನ ಭಕ್ತರಿಗೂ, ಬ್ರಾಹ್ಮಣರಿಗೂ, ಗೋವುಗಳಿಗೂ, ಯಜ್ಞಯಾಗಗಳಿಗೂ ಮತ್ತು ದೇವತೆಗಳಿಗೂ ಹಿಂಸೆಕೊಡುವರೋ ಅವರು ಬಹಳ ಜಾಗ್ರತೆಯಾಗಿ ಬೆಂಕಿಯಲ್ಲಿ ಹುಲ್ಲು ನಾಶವಾಗುವಂತೆ ನಾಶವಾಗುವರು. ಸಂಹಾರಕನಾಗಿ ನಾನು ನಿಂತಿರುವಾಗ ಆ ದುಷ್ಟರನ್ನು ಯಾರೂ ರಕ್ಷಿಸಲಾರರು.

೬೧. ಆದುದರಿಂದ ಎಲೈ ದೇವತೆಗಳೇ ನಾನು ಭೂಮಂಡಲದಲ್ಲಿ ಅವತರಿಸುವೆನು. ನೀವೆಲ್ಲರೂ ನಿಮ್ಮ ನಿಮ್ಮ ಮಂದಿರಕ್ಕೆ ತೆರಳಿರಿ. ನೀವೂ ಕೂಡ ನಿಮ್ಮ ಅಂಶದಿಂದ ಭೂಮಂಡಲಕ್ಕೆ ಬನ್ನಿರಿ.

**ತಸ್ಯಾ ಗೃಹೇ ಜನ್ಮ ಲಭ ಶೀಘ್ರಂ ನಂದವ್ರಜಂ ವ್ರಜ ।**
**ತ್ವಾಮಹಂ ಬಾಲರೂಪೇಣ ಗೃಹೀಷ್ಯಾಮಿ ಕಮಲಾನನೇ ॥ ೬೬ ॥**

**ತ್ವಂ ಮೇ ಪ್ರಾಣಾಧಿಕಾ ರಾಧೇ ತವ ಪ್ರಾಣಾಧಿಕೋಽಪ್ಯಹಂ ।**
**ನ ಕಿಂಚಿದಾವಯೋರ್ಭಿನ್ನಮೇಕಾಂಗಂ ಸರ್ವದೈವ ಹಿ ॥ ೬೭ ॥**

**ಶ್ರುತ್ವೈವಂ ರಾಧಿಕಾ ತತ್ರ ರುರೋದ ಪ್ರೇಮವಿಹ್ವಲಾ ।**
**ಪಪೌ ಚಕ್ಷುಶ್ಚಕೋರಾಭ್ಯಾಂ ಮುಖಚಂದ್ರಂ ಹರೇರ್ಮುನೇ ॥ ೬೮ ॥**

**ಜನುರ್ಲೇಭಿರೇ ಗೋಪಾಶ್ಚ ಗೋಪ್ಯಶ್ಚ ಪೃಥಿವೀತಲೇ ।**
**ಗೋಪಾನಾಮುತ್ತಮಾನಾಂ ಚ ಮಂದಿರೇ ಮಂದಿರೇ ಶುಭೇ ॥ ೬೯ ॥**

**ಏತಸ್ಮಿನ್ನಂತರೇ ಸರ್ವೇ ದದೃಶೂ ರಥಮುತ್ತಮಂ ।**
**ಮಣಿರತ್ನೇಂದ್ರಸಾರೇಣ ಹೀರಕೇಣ ವಿಭೂಷಿತಂ ॥ ೭೦ ॥**

---

೬೬. ನಂದಗೋಕುಲಕ್ಕೆ ಹೋಗಿ ಆ ಕಲಾವತಿಯ ಗೃಹದಲ್ಲಿ ನೀನು ಜನ್ಮವೆತ್ತು. ಎಲೌ ಕಮಲಮುಖಿಯೇ. ನಾನು ಗೋಪಕಿಶೋರ ರೂಪದಿಂದ ಬಂದು ನಿನ್ನನ್ನು ಪರಿಗ್ರಹಿಸುವೆನು.

೬೭. ಎಲೌ ರಾಧೆಯೇ, ನಾನು ನಿನಗೆ ಪ್ರಾಣಕ್ಕಿಂತಲೂ ಪ್ರೀತಿಪಾತ್ರನಾಗಿರುವಂತೆ, ನೀನೂ ನನಗೆ ಪ್ರಾಣಕ್ಕಿಂತಲೂ ಪ್ರಿಯಳಾಗಿರುವೆ. ನಮ್ಮಿಬ್ಬರಿಗೆ ಸ್ವಲ್ಪವೂ ಭೇದವಿಲ್ಲ. ನಾವು ಸರ್ವದಾ ಏಕಶರೀರಿಗಳು.

೬೮. ಎಲೈ ನಾರದನೇ, ಈ ಮಾತುಗಳನ್ನು ಕೇಳಿ ಪ್ರೇಮಾಂಧಳಾದ ರಾಧೆಯು ಶ್ರೀಹರಿಯನ್ನು ಅಗಲಲಾರದೆ ಗೋಳಿಡುತ್ತ, ಕಣ್ಣುಗಳೆಂಬ ಚಕೋರಗಳಿಂದ ಶ್ರೀಹರಿಯ ಮುಖಚಂದ್ರದ ಚಂದ್ರಿಕೆಯನ್ನು ಪಾನಮಾಡಿದಳು.

೬೯. ಅನಂತರ ಗೋಲೋಕದಲ್ಲಿದ್ದ ಗೋಪಗೋಪಿಯರೆಲ್ಲರೂ ನಂದಗೋಕುಲದಲ್ಲಿದ್ದ ಉತ್ತಮವಾದ ಗೋಪಾಲಕರ ಮಂದಿರದಲ್ಲಿ ಜನ್ಮವೆತ್ತಿದರು.

೭೦. ದೇವತೆಗಳಿಗೂ ಪರಮಾತ್ಮನಿಗೂ ಈ ರೀತಿ ಸಂವಾದವಾಗುತ್ತಿದ್ದಾಗಲೇ ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿ ವಜ್ರವೈಡೂರ್ಯಗಳಿಂದ ಖಚಿತವಾದ ದಿವ್ಯ ರಥವೊಂದನ್ನು ಆ ದೇವತೆಗಳು ಕಂಡರು.

ಶ್ವೇತಚಾಮರಲಕ್ಷೇಣ ಶೋಭಿತಂ ದರ್ಪಣಾಯುತೈಃ ।
ಸೂಕ್ಷ್ಮಕಾಷಾಯವಸ್ತ್ರೇಣ ವಹ್ನಿಶುದ್ಧೇನ ಭೂಷಿತಂ ॥ ೭೧ ॥

ಸದ್ರತ್ನಕಲಶಾನಾಂ ಚ ಸಹಸ್ರೇಣ ಸುಶೋಭಿತಂ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೈರ್ವಿರಾಜಿತಂ । ॥ ೭೨ ॥

ಪಾರ್ಷದಪ್ರವರೈರ್ಯುಕ್ತಂ ಶತಕುಂಭಮಯಂ ಶುಭಂ ।
ತೇಜಃಸ್ವರೂಪಮತುಲಂ ಶತಸೂರ್ಯಸಮಪ್ರಭಂ ॥ ೭೩ ॥

ತತ್ರಸ್ಥಂ ಪುರುಷಂ ಶ್ಯಾಮಂ ಸುಂದರಂ ಕಮನೀಯಕಂ ।
ಶಂಖಚಕ್ರಗದಾಪದ್ಮಧರಂ ಪೀತಾಂಬರಂ ವರಂ ॥ ೭೪ ॥

ಕಿರೀಟಿನಂ ಕುಂಡಲಿನಂ ವನಮಾಲಾವಿಭೂಷಿತಂ ।
ಚಂದನಾಗುರುಕಸ್ತೂರೀಕುಂಕುಮದ್ರವಚರ್ಚಿತಂ ॥ ೭೫ ॥

---

೭೧. ಲಕ್ಷಶ್ವೇತಚಾಮರಗಳಿಂದಲೂ, ಹತ್ತುಸಾವಿರ ರತ್ನಗನ್ನಡಿಗಳಿಂದಲೂ ಸುಸಜ್ಜಿತವಾಗಿದ್ದ ಆ ರಥವು ಅಗ್ನಿಯಂತೆ ಪರಿಶುದ್ಧವಾದ ಸೂಕ್ಷ್ಮಕಾಷಾಯ ವಸ್ತ್ರದಿಂದ ಆವೃತವಾಗಿದ್ದಿತು.

೭೨. ಸಾವಿರಾರು ರತ್ನಕಲಶಗಳಿಂದಲೂ, ಪಾರಿಜಾತಪುಷ್ಪಗಳ ಮಾಲಾಜಾಲಗಳಿಂದಲೂ ಆ ದಿವ್ಯರಥವು ಅಲಂಕೃತವಾಗಿದ್ದಿತು.

೭೩. ಸುವರ್ಣದಿಂದ ನಿರ್ಮಿತವಾಗಿ ನೂರುಸೂರ್ಯರ ತೇಜಸ್ಸಿನಿಂದ ಬೆಳಗುತ್ತಿದ್ದ ಆ ರಥದಲ್ಲಿ ಅನೇಕ ಪಾರ್ಷದರು ಕುಳಿತಿದ್ದರು

೭೪ ಆ ರಥದ ಮಧ್ಯದಲ್ಲಿ ಶ್ಯಾಮಸುಂದರನಾದ ಪರಮಪುರುಷನು ಶಂಖಚಕ್ರಗದಾಪದ್ಮಧಾರಿಯಾಗಿ, ಪೀತಾಂಬರವನ್ನು ಧರಿಸಿ ಕುಳಿತಿದ್ದನು.

೭೫. ಕಿರೀಟಕುಂಡಲಗಳನ್ನು ಧರಿಸಿ ತುಲಸೀವನಮಾಲೆಯಿಂದ ವಿಭೂಷಿತನಾದ ಆ ಪರಮಾತ್ಮನು ಅಂಗಾಂಗಗಳಿಗೂ ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮದ್ರವಗಳನ್ನು ಲೇಪನಮಾಡಿಕೊಂಡಿದ್ದನು.

ಚತುರ್ಭುಜಂ ಸ್ಮೇರವಕ್ತ್ರಂ ಭಕ್ತಾನುಗ್ರಹಕಾತರಂ ।
ಮಣಿರತ್ನೇಂದ್ರಸಾರಾಣಾಂ ಸಾರಭೂಷಣಭೂಷಿತಂ || ೨೬ ||

ದೇವೀಂ ತದ್ವಾಮತೋ ರಮ್ಯಾಂ ಶುಕ್ಲವರ್ಣಾಂ ಮನೋಹರಾಂ ।
ರತ್ನಾಲಂಕಾರಶೋಭಾಢ್ಯಾಂ ಶೋಭಿತಾಂ ಪೀತವಾಸಸಾ || ೨೭ ||

ಶರತ್ಪಾರ್ವಣಚಂದ್ರಾಸ್ಯಾಂ ಶರತ್ಪಂಕಜಲೋಚನಾಂ ।
ಪಕ್ವಬಿಂಬಾಧರೋಷ್ಠೀಂ ಚ ಸ್ಮೇರಯುಕ್ತಾಂ ಮನೋಹರಾಂ || ೨೮ ||

ವೇಣುವೀಣಾಗ್ರಂಥಹಸ್ತಾಂ ಭಕ್ತಾನುಗ್ರಹಕಾತರಾಂ ।
ವಿದ್ಯಾಧಿಷ್ಠಾತೃದೇವೀಂ ಚ ಜ್ಞಾನರೂಪಾಂ ಸರಸ್ವತೀಂ || ೨೯ ||

---

೨೬. ಚತುರ್ಭುಜನೂ, ಸ್ಮಿತಮುಖನೂ, ಭಕ್ತಾನುಗ್ರಹಪರನೂ ಆದ ಆ ಪರಮಾತ್ಮನು, ಮಣಿರತ್ನನಿರ್ಮಿತವಾದ ಉತ್ತಮ ಭೂಷಣಗಳಿಂದ ಭೂಷಿತನಾಗಿದ್ದನು.

೨೭. ಆ ಪರಮಪುರುಷನ ಎಡಭಾಗದಲ್ಲಿ ಶುಕ್ಲವರ್ಣಳೂ, ಮನೋಹರಳೂ ಆದ ದೇವಿಯು ಪೀತಾಂಬರವನ್ನುಟ್ಟು ರತ್ನಾಲಂಕಾರಭೂಷಿತಳಾಗಿ ಕುಳಿತಿದ್ದಳು

೨೮. ಶರತ್ಪೂರ್ಣಿಮಾಚಂದ್ರನಂತಿರುವ ಮುಖದಿಂದಲೂ, ಶರದೃತುವಿನ ತಾವರೆಯಂತೆ ವಿಶಾಲವಾದ ನೇತ್ರಯುಗ್ಮದಿಂದಲೂ ಪಕ್ವವಾದ ಬಿಂಬಫಲದಂತೆ ಕೆಂಪಾದ ಕೆಳದುಟಿಯಿಂದಲೂ ಶೋಭಿತಳಾದ ಆ ದೇವಿಯು ಮುಗುಳುನಗೆಯಿಂದ ಮನೋಹರಳಾಗಿದ್ದಳು.

೨೯. ಕೊಳಲು, ವೀಣೆ ಮತ್ತು ಪುಸ್ತಕಗಳನ್ನು ಕೈಯ್ಯಲ್ಲಿ ಧರಿಸಿ, ಭಕ್ತಾನುಗ್ರಹ ಕಾತರಳಾಗಿದ್ದ ಆ ದೇವಿಯೇ ವಿದ್ಯಾಧಿಷ್ಠಾತೃದೇವತೆಯೂ, ಜ್ಞಾನಸ್ವರೂಪಳೂ ಆದ ಸರಸ್ವತಿಯು.

ಅಪರಾಂ ದಕ್ಷಿಣೇ ರಮ್ಯಾಂ ಶತಚ್ಚಂದ್ರಸಮಪ್ರಭಾಂ ।
ಪ್ರತಪ್ತಸ್ವರ್ಣವರ್ಣಾಭಾಂ ಸಸ್ಮಿತಾಂ ಸುಮನೋಹರಾಂ ॥ ೮೦ ॥

ಸದ್ರತ್ನಕುಂಡಲಾಭ್ಯಾಂ ಚ ಸುಕಪೋಲವಿರಾಜಿತಾಂ ।
ಅಮೂಲ್ಯರತ್ನಖಚಿತಾಮೂಲ್ಯವಸ್ತ್ರೇಣ ಭೂಷಿತಾಂ ॥ ೮೧ ॥

ಅಮೂಲ್ಯರತ್ನಕೇಯೂರ ಕರಕಂಕಣಶೋಭಿತಾಂ ।
ಸದ್ರತ್ನಸಾರಮಂಜೀರಕಲಶಬ್ದಸಮನ್ವಿತಾಂ ॥ ೮೨ ॥

ಮಣೀಂದ್ರಕಿಂಕಿಣೀಯುಕ್ತಮಧ್ಯದೇಶಸಮನ್ವಿತಾಂ ।
ಪಾರಿಜಾತಪ್ರಸೂನಾನಾಂ ಮಹಾವಕ್ಷಃಸ್ಥಲೋಜ್ಜ್ವಲಾಂ ॥ ೮೩ ॥

ಪ್ರಫುಲ್ಲಮಾಲತೀಮಾಲಾ ಸಂಯುಕ್ತಕಬರೀಯುತಾಂ ।
ಶರಚ್ಚಂದ್ರಪ್ರಭಾಮುಷ್ಣನ್ಮುಖಚಾರುವಿಭೂಷಿತಾಂ ॥ ೮೪ ॥

---

೮೦. ಆ ಪರಮಾತ್ಮನ ಬಲಭಾಗದಲ್ಲಿ ನೂರು ಚಂದ್ರರಂತೆ ಕಾಂತಿಮತಿಯಾದ ಪುಟಕ್ಕೆ ಹಾಕಿದ ಚಿನ್ನದಂತೆ ಮೈಬಣ್ಣವುಳ್ಳ ಸ್ಮಿತವದನೆಯಾದ ಮತ್ತೊಬ್ಬ ದೇವಿಯು ಕುಳಿತಿದ್ದಳು.

೮೧. ಕಿವಿಯಲ್ಲಿದ್ದ ರತ್ನಕುಂಡಲಗಳಿಂದ ಆಕೆಯ ಕಪೋಲಗಳು ಶೋಭಿಸುತ್ತಿದ್ದವು. ರತ್ನಖಚಿತವಾದ ಅಮೂಲ್ಯ ವಸ್ತ್ರವನ್ನುಟ್ಟು ಆಕೆಯು ಶೋಭಿಸುತ್ತಿದ್ದಳು.

೮೨. ಅಮೂಲ್ಯವಾದ ರತ್ನಕಂಕಣಗಳಿಂದಲೂ, ಬಾಹುಪುರಿಗಳಿಂದಲೂ ಶೋಭಿತಳಾದ ಆ ದೇವಿಯ, ರತ್ನನಿರ್ಮಿತವಾದ ಕಾಲ್ಗೊಲಸುಗಳು ಕೊಣ ಕೊಣ ಧ್ವನಿಗೈಯ್ಯುತ್ತಿದ್ದವು.

೮೩. ಆಕೆಯ ಸೊಂಟದಲ್ಲಿ ರತ್ನದ ಸಣ್ಣಗಂಟೆಗಳಿಂದ ಮಂಜುಳಸ್ವರಗೈಯ್ಯುತ್ತಿದ್ದ ಡಾಬು ಶೋಭಿಸುತ್ತಿದ್ದಿತು ಆಕೆಯ ವಕ್ಷಃಸ್ಥಳದಲ್ಲಿ ಪಾರಿಜಾತ ಪುಷ್ಪಗಳ ಮಾಲೆಯು ಮನೋಹರವಾಗಿದ್ದಿತು.

೮೪. ಕೇಶಪಾಶದಲ್ಲಿ ಚೆನ್ನಾಗಿ ಅರಳಿದ ಜಾಜೀಹೂಮಾಲೆಯನ್ನು ಮುಡಿದಿರುವ ಆಕೆಯ ಮುಖವು ಶರತ್ಪೂರ್ಣಿಮಾ ಚಂದ್ರನ ಕಾಂತಿಯನ್ನು ಅಪಹರಿಸುತ್ತಿದ್ದಿತು.

ಕಸ್ತೂರೀಬಿಂದುಸಂಯುಕ್ತಸಿಂದೂರತಿಲಕಾನ್ವಿತಾಂ ।
ಸುಚಾರುಕಜ್ಜಲಾಸಕ್ತಶರತ್ಪಂಕಜಲೋಚನಾಂ ॥ ೮೫ ॥

ಸಹಸ್ರದಲಸಂಸಕ್ತ ಲೀಲಾಕಮಲಸಂಯುತಾಂ ।
ನಾರಾಯಣಂ ಚ ಪಶ್ಯಂತಂ ಪಂಶಂತೀಂ ವಕ್ರಚಕ್ಷುಷಾ ॥ ೮೬ ॥

ಅವರುಹ್ಯ ರಥಾತ್ತೂರ್ಣಂ ಸಸ್ತ್ರೀಕೇಃ ಸಹ ಪಾರ್ಷದಃ ।
ಜಗಾಮ ಚ ಸಭಾಂ ರಮ್ಯಾಂ ಗೋಪಗೋಪೀಸಮನ್ವಿತಾಂ ॥ ೮೭ ॥

ದೇವಾ ಗೋಪ್ಯಶ್ಚ ಗೋಪಾಶ್ಚ ತಸ್ಥುಃ ಪ್ರಾಂಜಲಯೋ ಮುದಾ ।
ಸಾಮವೇದೋಕ್ತಸ್ತೋತ್ರೇಣ ಕೃತೇನ ಚ ಸುರರ್ಷಿಭಿಃ ॥ ೮೮ ॥

ಗತ್ವಾ ನಾರಾಯಣೋ ದೇವೋ ವಿಲೀನಃ ಕೃಷ್ಣವಿಗ್ರಹೇ ।
ದೃಷ್ಟ್ವಾ ಚ ಪರಮಾಶ್ಚರ್ಯಂ ತೇ ಸರ್ವೇ ವಿಸ್ಮಯಂ ಯಯುಃ ॥ ೮೯ ॥

---

೮೫. ಹಣೆಯಲ್ಲಿ ಕಸ್ತೂರಿ ಕುಂಕುಮ ಮತ್ತು ಸಿಂದೂರದ ಬೊಟ್ಟುಗಳನ್ನಿಟ್ಟು ಶರದೃತುವಿನ ಕಮಲದಂತೆ ವಿಶಾಲವಾದ ನೇತ್ರಗಳಲ್ಲಿ ಕಾಡಿಗೆಯನ್ನು ಧರಿಸಿದ್ದಳು.

೮೬ ಕೈಯ್ಯಲ್ಲಿ ಸಹಸ್ರದಳವುಳ್ಳ ಲೀಲಾಕಮಲವನ್ನು ಧರಿಸಿ, ತನ್ನನ್ನೇ ನೋಡುತ್ತಿದ್ದ ನಾರಾಯಣನನ್ನು ವಕ್ರ ಕಟಾಕ್ಷದಿಂದ ನೋಡುತ್ತಿದ್ದಳು. ಆಕೆಯೇ ಕಮಲಾಲಯಳಾದ ಲಕ್ಷ್ಮೀದೇವಿಯು.

೮೭. ಆ ಶ್ರೀಮನ್ನಾರಾಯಣನು ಲಕ್ಷ್ಮೀ ಸರಸ್ವತಿಯರೊಡನೆಯೂ ಪಾರ್ಷದರೊಡನೆಯೂ ರಥದಿಂದ ಜಾಗ್ರತೆಯಾಗಿಳಿದು, ಗೋಪಗೋಪಿಯರು ತುಂಬಿರುವ ಆ ಸಭೆಯ ಮಧ್ಯಕ್ಕೆ ಹೋದನು

೮೮. ದೇವತೆಗಳೂ ಗೋಪಗೋಪಿಯರೂ ಅಂಜಲಿಬದ್ಧರಾಗಿ ನಿಂತು ಸಾಮವೇದೋಕ್ತವಾದ ಸ್ತೋತ್ರದಿಂದ ಹೊಗಳಲಾರಂಭಿಸಿದರು.

೮೯. ಶ್ರೀಮನ್ನಾರಾಯಣನು ಸಭಾಮಧ್ಯಕ್ಕೆ ಹೋಗಿ ಶ್ರೀಕೃಷ್ಣಪರಮಾತ್ಮನ ಶರೀರದಲ್ಲಿ ಐಕ್ಯನಾದನು ಈ ಆಶ್ಚರ್ಯವನ್ನು ನೋಡಿ ಅಲ್ಲಿದ್ದವರೆಲ್ಲರೂ ವಿಸ್ಮಯಗೊಂಡರು.

ಏತಸ್ಮಿನ್ನಂತರೇ ತತ್ರ ಶಾತಕುಂಭಮಯಾದ್ರಥಾತ್ ।
ಅವರುಹ್ಯ ಸ್ವಯಂ ವಿಷ್ಣುಃ ಪಾತಾ ಚ ಜಗತಾಂಪತಿಃ ॥ ೯೦ ॥

ಆಜಗಾಮ ಚತುರ್ಬಾಹುರ್ವನಮಾಲಾವಿಭೂಷಿತಃ ।
ಪೀತಾಂಬರಧರಃ ಶ್ರೀಮಾನ್ ಸಸ್ಮಿತಃ ಸುಮನೋಹರಃ ॥ ೯೧ ॥

ಸರ್ವಾಲಂಕಾರಶೋಭಾಢ್ಯಃ ಸೂರ್ಯಕೋಟಿಸಮಪ್ರಭಃ ।
ಉತ್ತಸ್ಥುಸ್ತೇ ಚ ತಂ ದೃಷ್ಟ್ವಾ ತುಷ್ಟುವುಃ ಪ್ರಣತಾ ಮುನೇ ॥ ೯೨ ॥

ಸ ಚಾಪಿ ಲೀನಸ್ತತ್ರೈವ ರಾಧಿಕೇಶಸ್ಯ ವಿಗ್ರಹೇ ।
ತೇ ದೃಷ್ಟ್ವಾ ಮಹದಾಶ್ಚರ್ಯಂ ವಿಸ್ಮಯಂ ಪರಮಂ ಯಯುಃ ॥ ೯೩ ॥

ಸಂವಿಲೀನೇ ಹರೇರಂಗೇ ಶ್ವೇತದ್ವೀಪನಿವಾಸಿನಿ ।
ಏತಸ್ಮಿನ್ನಂತರೇ ತೂರ್ಣಮಾಜಗಾಮ ತ್ವರಾನ್ವಿತಃ ॥ ೯೪ ॥

---

೯೦. ಈ ಮಧ್ಯದಲ್ಲಿ ಸುವರ್ಣವಿಕಾರವಾದ ರಥವೊಂದರಿಂದ ಜಗತ್ಪರಿಪಾಲಕನಾದ ವಿಷ್ಣುವು ಇಳಿದು ಬಂದನು.

೯೧. ಚತುರ್ಭುಜನಾದ ಆ ವಿಷ್ಣುವು ವನಮಾಲೆಯನ್ನು ಧರಿಸಿ ಪೀತಾಂಬರವನ್ನುಟ್ಟು ಸ್ಮಿತಮುಖದಿಂದ ಮನೋಹರನಾಗಿದ್ದನು.

೯೨. ಸಕಲಾಲಂಕಾರಗಳಿಂದ ಶೋಭಿತನಾಗಿ, ಕೋಟಿಸೂರ್ಯರಂತೆ ತೇಜಸ್ವಿಯಾದ ಆ ವಿಷ್ಣುವನ್ನು ನೋಡಿ, ದೇವತೆಗಳೆಲ್ಲರೂ ಎದ್ದು ಸಾಷ್ಟಾಂಗವೆರಗಿ, ಸ್ತುತಿಸಲಾರಂಭಿಸಿದರು.

೯೩. ಆ ವಿಷ್ಣುವೂ ಕೂಡ ರಾಧಾಪತಿಯಾದ ಶ್ರೀಕೃಷ್ಣನ ವಿಗ್ರಹದಲ್ಲಿಯೇ ಅಂತರ್ಧಾನಹೊಂದಿದನು. ದೇವತೆಗಳೆಲ್ಲರೂ ಇದನ್ನು ಕಂಡು ಪರಮಾಶ್ಚರ್ಯಗೊಂಡರು.

೯೪-೯೫. ಶ್ವೇತದ್ವೀಪನಿವಾಸಿಯಾದ ವಿಷ್ಣುವು ಈ ರೀತಿಯಾಗಿ ಶ್ರೀಕೃಷ್ಣನ ಶರೀರದಲ್ಲಿ ಐಕ್ಯನಾಗಲು ಇತ್ತ, ಶುದ್ಧಸ್ಫಟಿಕದಂತೆ ತೇಜಸ್ವಿಯೂ, ಶತಸೂರ್ಯರ

ಶುದ್ಧಸ್ಫಟಿಕಸಂಕಾಶೋ ನಾಮ್ನಾ ಸಂಕರ್ಷಣಃ ಸ್ಮೃತಃ ।
ಸಹಸ್ರಶೀರ್ಷಾ ಪುರುಷಃ ಶತಸೂರ್ಯಸಮಪ್ರಭಃ ॥ ೯೫ ॥

ಆಗತಂ ತುಷ್ಟುವುಃ ಸರ್ವೇ ದೃಷ್ಟ್ವಾ ತ್ವಂ ವಿಷ್ಣುವಿಗ್ರಹಂ ।
ಸ ಚಾಗತ್ಯ ನತಸ್ಕಂಧಸ್ತುಷ್ಟಾವ ರಾಧಿಕೇಶ್ವರಂ ॥ ೯೬ ॥

ಸಹಸ್ರಮೂರ್ಧ್ನಾ ಭಕ್ತ್ಯಾ ಚ ಪ್ರಣನಾಮ ಚ ನಾರದ ।
ಆವಾಂ ಚ ಧರ್ಮಪುತ್ರೌ ದ್ವೌ ನರನಾರಾಯಣಾಭಿಧೌ ॥ ೯೭ ॥

ಲೀನೋಹಂ ಕೃಷ್ಣಪಾದಾಬ್ಜೇ ಬಭೂವ ಫಾಲ್ಗುನೋ ನರಃ ।
ಬ್ರಹ್ಮೇಶಶೇಷಧರ್ಮಾಶ್ಚ ತಸ್ಥುರೇಕತ್ರ ತತ್ರ ವೈ ॥ ೯೮ ॥

ಏತಸ್ಮಿನ್ನಂತರೇ ದೇವಾ ದದೃಶೂ ರಥಮುತ್ತಮಂ ।
ಸ್ವರ್ಣಸಾರವಿಕಾರಂ ಚ ನಾನಾರತ್ನಪರಿಚ್ಛದಂ ॥ ೯೯ ॥

---

ಪ್ರಭಾಯುತನೂ, ಸಹಸ್ರಶೀರ್ಷನೂ ಆದ ಸಂಕರ್ಷಣನು ಅಲ್ಲಿಗೆ ಜಾಗ್ರತೆಯಾಗಿ ಬಂದನು.

೯೬. ಆ ಸಂಕರ್ಷಣನನ್ನು ನೋಡಿ ದೇವತೆಗಳೆಲ್ಲರೂ ಸ್ತುತಿಸಲಾರಂಭಿಸಿದರು. ಆತನು ಶ್ರೀಕೃಷ್ಣನ ಮುಂದೆ ತಲೆಬಾಗಿ ನಿಂತು ಸ್ತುತಿಸಲಾರಂಭಿಸಿದನು.

೯೭-೯೮. ಎಲೈ ನಾರದನೇ, ಆ ಆದಿಶೇಷನು ಭಕ್ತಿಪೂರ್ವಕವಾಗಿ ತನ್ನ ಸಾವಿರತಲೆಗಳನ್ನೂ ಬಾಗಿಸಿ ನಮಸ್ಕರಿಸಿದನು. ಧರ್ಮಪುತ್ರರಾದ ನರನಾರಾಯಣರೆಂಬ ನಮ್ಮಿಬ್ಬರಲ್ಲಿ ನಾರಾಯಣನಾದ ನಾನು ಶ್ರೀಕೃಷ್ಣನ ಪಾದಕಮಲಗಳಲ್ಲಿ ಐಕ್ಯಹೊಂದಿದನು. ನರನು ಅರ್ಜುನನಾಗಿ ಅವತರಿಸಿದನು. ಬ್ರಹ್ಮ, ಈಶ್ವರ, ಆದಿಶೇಷ ಮತ್ತು ಧರ್ಮಪುರುಷರು ಅಲ್ಲಿಯೇ ಇದ್ದರು.

೯೯. ಈ ಮಧ್ಯದಲ್ಲಿ ಸುವರ್ಣದಿಂದ ರಚಿತವಾದ ನಾನಾರತ್ನಗಳಿಂದ ಶೋಭಿತವಾದ ದಿವ್ಯರಥವೊಂದನ್ನು ದೇವತೆಗಳು ಅಲ್ಲಿ ನೋಡಿದರು.

ಮಣೀಂದ್ರಸಾರಸಂಯುಕ್ತಂ ವಹ್ನಿಶುದ್ಧಾಂಶುಕಾನ್ವಿತಂ ।
ಶ್ವೇತಚಾಮರಸಂಯುಕ್ತಂ ಭೂಷಿತಂ ದರ್ಪಣಾನ್ವಿತೈಃ ॥ ೧೦೦ ॥

ಸದ್ರತ್ನಸಾರಕಲಶಸಮೂಹೇನ ವಿರಾಜಿತಂ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೈಃ ಸುಶೋಭಿತಂ ॥ ೧೦೧ ॥

ಸಹಸ್ರಚಕ್ರಸಂಯುಕ್ತಂ ಮನೋಯಾಯಿ ಮನೋಹರಂ ।
ಗ್ರೀಷ್ಮಮಧ್ಯಾಹ್ನಮಾರ್ತಂಡಪ್ರಭಾಮೋಷಕರಂ ವರಂ ॥ ೧೦೨ ॥

ಮುಕ್ತಾಮಾಣಿಕ್ಯವಜ್ರಾಣಾಂ ಸಮೂಹೇನ ಸಮುಜ್ಜ್ವಲಂ ।
ಚಿತ್ರಪುತ್ತಲಿಕಾಪುಷ್ಪಸರಃಕಾನನಚಿತ್ರಿತಂ ॥ ೧೦೩ ॥

ದೇವಾನಾಂ ದಾನವಾನಾಂ ಚ ರಥಾನಾಂ ಪ್ರವರಂ ಮುನೇ ।
ಯತ್ನೇನಶಂಕರಪ್ರೀತ್ಯಾ ನಿರ್ಮಿತಂ ವಿಶ್ವಕರ್ಮಣಾ ॥ ೧೦೪ ॥

---

೧೦೦. ಶ್ರೇಷ್ಠವಾದ ಮಣಿಗಳಿಂದಲೂ, ಅಗ್ನಿಯಂತೆ ಪರಿಶುದ್ಧವಾದ ದಿವ್ಯವಸ್ತ್ರಗಳಿಂದಲೂ ಶೋಭಿತವಾದ ಆ ರಥದಲ್ಲಿ ಅನೇಕ ಶ್ವೇತಚಾಮರಗಳೂ, ರತ್ನಗನ್ನಡಿಗಳೂ ಸುಸಜ್ಜಿತವಾಗಿದ್ದವು.

೧೦೧. ಶ್ರೇಷ್ಠವಾದ ರತ್ನಕಲಶಗಳ ಸಮೂಹದಿಂದಲೂ ಪಾರಿಜಾತಪುಷ್ಪಗಳ ಸಾವಿರಾರು ಮಾಲೆಗಳಿಂದಲೂ ಆ ರಥವು ಶೋಭಿಸುತ್ತಿದ್ದಿತು.

೧೦೨. ಸಹಸ್ರ ಚಕ್ರಗಳಿಂದ ಕೂಡಿ ಮನೋವೇಗದಲ್ಲಿ ಹೋಗಬಲ್ಲ ಆ ರಥವು ಗ್ರೀಷ್ಮರ್ತುವಿನ ಮಧ್ಯಾಹ್ನದ ಸೂರ್ಯನ ಪ್ರಚಂಡ ತೇಜಸ್ಸನ್ನೂ ಅಲ್ಲಗಳೆಯುತ್ತಿತ್ತು.

೧೦೩. ಮುತ್ತು, ಮಾಣಿಕ್ಯ ಮತ್ತು ವಜ್ರಗಳ ಸಮೂಹದಿಂದ ಉಜ್ವಲವಾಗಿದ್ದ ಆ ರಥದಲ್ಲಿ ಚಿತ್ರಾರ್ಪಿತವಾದ ಬೊಂಬೆಗಳೂ, ಸರೋವರಗಳೂ, ಪುಷ್ಪೋದ್ಯಾನಗಳೂ ಮನೋಹರವಾಗಿದ್ದವು.

೧೦೪. ಶಂಕರನ ಪ್ರೀತಿಗಾಗಿ ಅತಿಪ್ರಯತ್ನದಿಂದ ವಿಶ್ವಕರ್ಮನು ನಿರ್ಮಾಣ ಮಾಡಿದ್ದ ಆ ರಥವು ದೇವದಾನವರೆಲ್ಲರ ರಥಗಳಿಗಿಂತಲೂ ಅತ್ಯುತ್ತಮವಾಗಿದ್ದಿತು.

ಪಂಚಾಶದ್ಯೋಜನೋರ್ಧ್ವಂ ಚ ಚತುರ್ಯೋಜನವಿಸ್ತೃತಂ ।
ರತಿತುಲ್ಯವಧೂಯುಕ್ತೈಃ ಶೋಭಿತಂ ರತಿಮಂದಿರೈಃ ॥ ೧೦೫ ॥

ತತ್ರಸ್ಥಾಂ ದದೃಶುರ್ದೇವೀಂ ರತ್ನಾಲಂಕಾರಭೂಷಿತಾಂ ।
ಪ್ರದಗ್ಧ ಸ್ವರ್ಣಸಾರಾಣಾಂ ಪ್ರಭಾಮೋಷಕರದ್ಯುತಿಂ ॥ ೧೦೬ ॥

ತೇಜಃಸ್ವರೂಪಾಮತುಲಾಂ ಮೂಲಪ್ರಕೃತಿಮೀಶ್ವರೀಂ ।
ಸಹಸ್ರಭುಜಸಂಯುಕ್ತಾಂ ನಾನಾವಿಧಸಮನ್ವಿತಾಂ ॥ ೧೦೭ ॥

ಈಷದ್ಧಾಸ್ಯಪ್ರಸನ್ನಾಸ್ಯಾಂ ಭಕ್ತಾನುಗ್ರಹಕಾತರಾಂ ।
ಗಂಡಸ್ಥಲಕಪೋಲಸ್ಥ ಸದ್ರತ್ನಕುಂಡಲೋಜ್ಜ್ವಲಾಂ ॥ ೧೦೮ ॥

ರತ್ನೇಂದ್ರಸಾರರಚಿತಕ್ವಣನ್ಮಂಜೀರರಂಜಿತಾಂ ।
ಮಣೀಂದ್ರಮೇಖಲಾಯುಕ್ತ ಮಧ್ಯದೇಶಸುಶೋಭಿತಾಂ ॥ ೧೦೯ ॥

---

೧೦೫. ಐವತ್ತು ಯೋಜನ ಎತ್ತರವಾಗಿಯೂ, ನಾಲ್ಕು ಯೋಜನ ವಿಸ್ತಾರವಾಗಿಯೂ ಇದ್ದ ಆ ರಥದಲ್ಲಿ ರತಿಕೇಳಿಸಾಮಗ್ರಿಗಳಿಂದ ಪೂರ್ಣವಾದ ಅನೇಕ ರತಿಗೃಹಗಳಿದ್ದವು.

೧೦೬. ಆ ರಥದಲ್ಲಿ ರತ್ನಾಲಂಕಾರ ಭೂಷಿತಳಾಗಿ, ಪುಟಕ್ಕೆ ಹಾಕಿದ ಚಿನ್ನದ ಕಾಂತಿಯನ್ನು ಮೀರುವ ದೇಹಕಾಂತಿಯಿಂದ ಶೋಭಿತಳಾದ ದುರ್ಗಾದೇವಿಯನ್ನು ಕಂಡರು.

೧೦೭. ತೇಜೋಮಯಳಾದ ಆ ಮೂಲ ಪ್ರಕೃತಿಯು ತನ್ನ ಸಹಸ್ರಬಾಹುಗಳಲ್ಲಿ ನಾನಾವಿಧ ಆಯುಧಗಳನ್ನು ಧರಿಸಿದ್ದಳು.

೧೦೮. ಮಂದಹಾಸದಿಂದ ಪ್ರಸನ್ನವದನೆಯೂ ಭಕ್ತಾನುಗ್ರಹಕಾತರಳೂ ಆದ ಆ ದೇವಿಯ ಗಂಡಸ್ಥಲದಲ್ಲಿ ರತ್ನಕುಂಡಲಗಳು ಪ್ರತಿಬಿಂಬಿತವಾಗಿ ಶೋಭಿಸುತ್ತಿದ್ದವು

೧೦೯. ಶ್ರೇಷ್ಠ ರತ್ನಗಳಿಂದ ರಚಿತವಾದ ಮಂಜೀರದ ಮಂಜುಳ ಧ್ವನಿಯಿಂದಲೂ, ಮಧ್ಯದೇಶದಲ್ಲಿರುವ ಡಾಬಿನ ಕಿಂಕಿಣೀನಾದದಿಂದಲೂ, ಆ ದೇವಿಯು ಎಲ್ಲರನ್ನೂ ಆಕರ್ಷಿಸುತ್ತಿದ್ದಳು.

ಸದ್ರತ್ನಸಾರಕೇಯೂರ ಕರಕಂಕಣಭೂಷಿತಾಂ ।
ಮಂದಾರಪುಷ್ಪಮಾಲಾಭಿರುರಃಸ್ಥಲಸಮುಜ್ಜ್ವಲಾಂ ॥ ೧೧೦ ॥

ನಿತಂಬಕಠಿನಶ್ರೋಣೀಂ ಪೀನೋನ್ನತಕುಚಾನತಾಂ ।
ಶರತ್ಸುಧಾಕರಾಭಾಸವಿನಿಂದಾಸ್ಯಮನೋಹರಾಂ ॥ ೧೧೧ ॥

ಕಜ್ಜಲೋಜ್ಜ್ವಲರೇಖಾಕ್ತ ಶರತ್ಪಂಕಜಲೋಚನಾಂ ।
ಚಂದನಾಗುರುಕಸ್ತೂರೀ ಚಿತ್ರಪತ್ರವಿಭೂಷಿತಾಂ ॥ ೧೧೨ ॥

ಮುಕ್ತಾಪಂಕ್ತಿಪ್ರಭಾಮುಷ್ಟದಂತರಾಜಿವಿರಾಜಿತಾಂ ।
ಪ್ರಫುಲ್ಲಮಾಲತೀಮಾಲಸಂಸಕ್ತಕಬರೀಂ ವರಾಂ ॥ ೧೧೩ ॥

---

೧೧೦. ರತ್ನಸಾರ ನಿರ್ಮಿತವಾದ ಬಾಹುಪುರಿ ಮತ್ತು ಕಂಕಣಗಳಿಂದ ಶೋಭಿತಳಾದ ಆ ದೇವಿಯ ವಕ್ಷಃಸ್ಥಳದಲ್ಲಿ ಪಾರಿಜಾತಪುಷ್ಪಮಾಲೆಗಳು ಕಂಗೊಳಿಸುತ್ತಿದ್ದವು.

೧೧೧. ಅತಿವಿಶಾಲವಾದ ನಿತಂಬಬಿಂಬದ ಮತ್ತು ಅತ್ಯುನ್ನತವಾದ ಸ್ತನಗಳ ಭಾರದಿಂದ ಆನತಳಾದ ಆ ದೇವಿಯ ಮುಖವು ಶರಚ್ಚಂದ್ರನ ಕಾಂತಿಯನ್ನು ಅಲ್ಲಗಳೆಯುವಂತಿತ್ತು.

೧೧೨. ಶರದೃತುವಿನ ಕಮಲದಂತೆ ವಿಶಾಲವಾದ ನೇತ್ರಗಳಲ್ಲಿ ಕಾಡಿಗೆಯನ್ನು ಧರಿಸಿ, ಕಪೋಲಗಳಲ್ಲಿ ಚಂದನ, ಅಗುರು ಮತ್ತು ಕಸ್ತೂರಿಗಳ ಚಿತ್ರವಿಚಿತ್ರವಾದ ಮಕರಿಕಾದಿ ಪತ್ರಗಳನ್ನು ರಚಿಸಿಕೊಂಡಿದ್ದಳು.

೧೧೩. ಮುತ್ತಿನ ಸಾಲುಗಳ ಕಾಂತಿಯನ್ನು ಮೀರುವ ದಂತಪಂಕ್ತಿಗಳಿಂದ ಶೋಭಿತಳಾದ ಆ ದೇವಿಯು ಕೇಶಪಾಶದಲ್ಲಿ ಅರಳಿ ಸುವಾಸನೆಯನ್ನು ಬೀರುವ ಮಾಲತೀಪುಷ್ಪದ ಮಾಲೆಯನ್ನು ಮುಡಿದಿದ್ದಳು.

ಪಕ್ಷೀಂದ್ರಚಂಚುನಾಸಾಗ್ರಗಜೇಂದ್ರಮೌಕ್ತಿಕಾನ್ವಿತಾಂ ।
ವಹ್ನಿಶುದ್ಧಾಂಶುಕೇನಾತಿಜ್ವಲಿತೇನ ಸಮುಜ್ವಲಾಂ ॥ ೧೧೪ ॥

ಸಿಂಹಪೃಷ್ಠ ಸಮಾರೂಢಾಂ ಸುತಾಭ್ಯಾಂ ಸಹಿತಾಂ ಮುದಾ ।
ಅವರುಹ್ಯ ರಥಾತ್ತೂರ್ಣಂ ಶ್ರೀಕೃಷ್ಣಂ ಪ್ರಣನಾಮ ಚ ॥ ೧೧೫ ॥

ಸುತಾಭ್ಯಾಂ ಸಹಿತಾ ದೇವೀ ಸಮುವಾಸ ವರಾನನಾ ।
ಗಣೇಶಃ ಕಾರ್ತಿಕೇಯಶ್ಚ ನತ್ವಾ ಕೃಷ್ಣಂ ಪರಾತ್ಪರಂ ॥ ೧೧೬ ॥

ನನಾಮ ಶಂಕರಂ ಧರ್ಮಮನಂತಂ ಕಮಲೋದ್ಭವಂ ।
ಉತ್ತಸ್ಥುರಾರಾತ್ತೇ ದೇವಾ ದೃಷ್ಟ್ವಾತೌ ತ್ರಿದಶೇಶ್ವರೌ ॥ ೧೧೭ ॥

ಆಶಿಷಂ ಚ ದದುರ್ದೇವಾ ವಾಸಯಾಮಾಸುರಂತಿಕೇ ।
ತಾಭ್ಯಾಂಸಹ ಸದಾಲಾಪಂ ಚಕ್ರುರ್ದೇವಾ ಮುದಾನ್ವಿತಾಃ ॥ ೧೧೮ ॥

---

೧೧೪. ಗರುಡನ ಕೊಕ್ಕಿನಂತೆ ಮನೋಹರವಾದ ಮೂಗಿನ ತುದಿಯಲ್ಲಿ ಆನೆಯ ಕುಂಭಸ್ಥಳದ ಮುತ್ತನ್ನು ಧರಿಸಿದ್ದಳು. ಅಗ್ನಿಯಂತೆ ಪರಿಶುದ್ಧವಾದ ದಿವ್ಯಾಂಬರವನ್ನುಟ್ಟಿದ್ದಳು.

೧೧೫. ಸಿಂಹವಾಹಿನಿಯಾದ ಆ ದೇವಿಯು ತನ್ನ ಮಕ್ಕಳಾದ ಷಣ್ಮುಖ ಮತ್ತು ಗಣೇಶರೊಡಗೂಡಿ ರಥದಿಂದಿಳಿದು ಬಂದು ಶ್ರೀಕೃಷ್ಣನಿಗೆ ಸಾಷ್ಟಾಂಗ ವೆರಗಿದಳು

೧೧೬—೧೧೭. ಅನಂತರ ಆ ಸುಂದರಿಯು ತನ್ನ ಇಬ್ಬರು ಮಕ್ಕಳೊಡನೆ ಪೀಠದಲ್ಲಿ ಮಂಡಿಸಿದಳು. ಗಣೇಶ ಮತ್ತು ಷಣ್ಮುಖನೂ ಕೂಡ ಶ್ರೀಕೃಷ್ಣಪರಮಾತ್ಮನಿಗೆ ವಂದಿಸಿದನಂತರ ಶಂಕರನಿಗೂ, ಧರ್ಮ, ಅನಂತ ಮತ್ತು ಬ್ರಹ್ಮನಿಗೂ ವಂದಿಸಿದರು. ದೇವಾದಿದೇವರಾದ ಅವರಿಬ್ಬರನ್ನು ನೋಡಿ ದೇವತೆಗಳೆಲ್ಲರೂ ಪ್ರತ್ಯುತ್ಥಾನ ಮಾಡಿದರು.

೧೧೮. ದೇವತೆಗಳೆಲ್ಲರೂ ಗಣೇಶ ಷಣ್ಮುಖರಿಗೆ ಆಶೀರ್ವಾದಮಾಡಿ ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡು, ಸಂತೋಷದಿಂದ ಅವರೊಡನೆ ಸಂಭಾಷಣೆಮಾಡಿದರು.

ತಸ್ಥುರ್ದೇವಾಃ ಸಭಾಮಧ್ಯೇ ದೇವಸ್ಯ ಪುರತೋ ಹರೇಃ ।
ಗೋಪಾ ಗೋಪ್ಯಶ್ಚ ಬಹುಶೋ ಬಭೂವುರ್ವಿಸ್ಮಯಾಕುಲಾಃ ॥ ೧೧೯ ॥

ಉವಾಚ ಕಮಲಾಂ ಕೃಷ್ಣಃ ಸ್ಮೇರಾನನಸರೋರುಹಃ ।
ತ್ವಂ ಗಚ್ಛ ಭೀಷ್ಮಕಗೃಹಂ ನಾನಾರತ್ನಸಮನ್ವಿತಂ ॥ ೧೨೦ ॥

ವೈದರ್ಭ್ಯಾ ಉದರೇ ಜನ್ಮ ಲಭ ದೇವಿ ಸನಾತನಿ ।
ತವ ಪಾಣಿಂ ಗ್ರಹೀಷ್ಯಾಮಿ ಗತ್ವಾಹಂ ಕುಂಡಿನಂ ಸತಿ ॥ ೧೨೧ ॥

ತಾ ದೇವ್ಯಃ ಪಾರ್ವತೀಂ ದೃಷ್ಟ್ವಾ ಸಮುತ್ಥಾಯ ತ್ವರಾನ್ವಿತಾಃ ।
ರತ್ನಸಿಂಹಾಸನೇ ರಮ್ಯೇ ವಾಸಯಾಮಾಸುರೀಶ್ವರೀಂ ॥ ೧೨೨ ॥

ವಿಪ್ರೇಂದ್ರ ಪಾರ್ವತೀಲಕ್ಷ್ಮೀ ವಾಗಧಿಷ್ಠಾತೃದೇವತಾಃ ।
ತಸ್ಥುರೇಕಾಸನೇ ತತ್ರ ಸಂಭಾಷ್ಯ ಚ ಯಥೋಚಿತಂ ॥ ೧೨೩ ॥

---

೧೧೯. ಆ ಸಭೆಯಲ್ಲಿದ್ದ ಕೃಷ್ಣಪರಮಾತ್ಮನ ಮುಂದೆ ದೇವತೆಗಳೂ, ಗೋಪ ಗೋಪಿಯರೂ ಅತ್ಯಾಶ್ಚರ್ಯದಿಂದ ಚಕಿತರಾಗಿ ನಿಂತುಕೊಂಡಿದ್ದರು.

೧೨೦. ಆಗ ಶ್ರೀಕೃಷ್ಣಪರಮಾತ್ಮನು ನಗುಮುಖದಿಂದ ಲಕ್ಷ್ಮೀದೇವಿಯನ್ನು ಕುರಿತು 'ನೀನು ನಾನಾರತ್ನಗಳಿಂದ ಸಮೃದ್ಧನಾದ ಭೀಷ್ಮಕರಾಜನ ಪುತ್ರಿಯಾಗಿ ಅವತರಿಸು' ಎಂದನು.

೧೨೧. 'ಎಲೌ ಸನಾತನಿಯೇ, ವಿದರ್ಭರಾಜನಾದ ಆ ಭೀಷ್ಮಕನ ಪತ್ನಿಯಲ್ಲಿ ನೀನು ಜನ್ಮವೆತ್ತು, ನಾನು ಕುಂಡಿನಪುರಕ್ಕೆ ಬಂದು ನಿನ್ನ ಪಾಣಿಗ್ರಹಣ ಮಾಡುವೆನು' ಎಂದನು.

೧೨೨. ಇತ್ತ ಆ ಸಭೆಯಲ್ಲಿದ್ದ ದೇವಿಯರೆಲ್ಲರೂ ಪಾರ್ವತಿಯನ್ನು ನೋಡಿ ಸಂಭ್ರಮದಿಂದ ಪ್ರತ್ಯುತ್ಥಾನಮಾಡಿ, ರಮ್ಯವಾದ ರತ್ನಸಿಂಹಾಸನದಲ್ಲಿ ಆಕೆಯನ್ನು ಕುಳ್ಳಿರಿಸಿದರು.

೧೨೩. ಎಲೈ ಬ್ರಾಹ್ಮಣೋತ್ತಮನೇ, ಪಾರ್ವತಿ, ಲಕ್ಷ್ಮಿ, ಮತ್ತು ಸರಸ್ವತಿಯರು, ಪರಸ್ಪರವಾಗಿ ಸಂಭಾಷಣೆಮಾಡುತ್ತ ಒಂದೇ ಪೀಠದಲ್ಲಿ ಕುಳಿತುಕೊಂಡಿದ್ದರು.

ತಾಶ್ಚ ಸಂಭಾಷಯಾಮಾಸುಃ ಸಂಪ್ರೀತ್ಯಾ ಗೋಪಕನ್ಯಕಾಃ ।
ಊಚುರ್ಗೋಪಾಲಿಕಾಃ ಕಾಶ್ಚಿನ್ಮುದಾ ತಾಸಾಂಚ ಸನ್ನಿಧೌ ॥ ೧೨೪ ॥

ಶ್ರೀಕೃಷ್ಣಃ ಪಾರ್ವತೀಂ ತತ್ರ ಸಮುವಾಚ ಜಗತ್ಪತಿಃ ।
ದೇವಿ ತ್ವಮಂಶರೂಪೇಣ ವ್ರಜ ನಂದವ್ರಜೇ ಶುಭೇ ॥ ೧೨೫ ॥

ಉದರೇ ಚ ಯಶೋದಾಯಾಃ ಕಲ್ಯಾಣೀ ನಂದರೇತಸಾ ।
ಲಭ ಜನ್ಮ ಮಹಾಮಾಯೇ ಸೃಷ್ಟಿಸಂಹಾರಕಾರಿಣಿ ॥ ೧೨೬ ॥

ಗ್ರಾಮೇ ಗ್ರಾಮೇ ಚ ಪೂಜಾಂ ತೇ ಕಾರಯಿಷ್ಯಾಮಿ ಭೂತಲೇ ।
ಕೃತ್ಸ್ನೇ ಮಹೀತಲೇ ಭಕ್ತ್ಯಾ ನಗರೇಷು ವನೇಷು ಚ ॥ ೧೨೭ ॥

ತತ್ರಾಧಿಷ್ಠಾತೃದೇವೀಂ ತ್ವಾಂ ಪೂಜಯಿಷ್ಯಂತಿ ಮಾನವಾಃ ।
ದ್ರವ್ಯೈರ್ನಾನಾವಿಧೈರ್ದಿವ್ಯೈರ್ಬಲಿಭಿಶ್ಚ ಮುದಾನ್ವಿತಾಃ ॥ ೧೨೮ ॥

---

೧೨೪ ಅಲ್ಲಿದ್ದ ಗೋಪಕನ್ನಿಕೆಯರೂ, ಗೋಪಿಯರೂ, ಆಕೆಯನ್ನು ಪ್ರೀತಿಯಿಂದ ಮಾತನಾಡಿಸಿದರು.

೧೨೫. ಅನಂತರ ಜಗದೊಡೆಯನಾದ ಶ್ರೀಕೃಷ್ಣನು ಪಾರ್ವತಿಯನ್ನು ಕುರಿತು 'ಎಲೌ ದೇವಿಯೇ, ನೀನು ನಿನ್ನದೊಂದಂಶದಿಂದ ನಂದಗೋಕುಲದಲ್ಲಿ ಅವತರಿಸು' ಎಂದು ಹೇಳಿದನು.

೧೨೬. ಸೃಷ್ಟಿಸಂಹಾರಕಾರಕಳಾದ ಎಲೌ ,ಮಹಾಮಾಯೆಯೇ ನೀನು ಯಶೋದೆಯ ಗರ್ಭದಲ್ಲಿ ನಂದನರೇತಸ್ಸಿನಿಂದ ಅವತರಿಸುವವಳಾಗು.

೧೨೭. ನಿಖಿಲ ಭೂಮಂಡಲದಲ್ಲಿಯೂ, ಪ್ರತಿ ಗ್ರಾಮಗಳಲ್ಲೂ, ನಗರಗಳಲ್ಲೂ, ವನದಲ್ಲೂ ನಿನಗೆ ಭಕ್ತಿಯಿಂದ ಪೂಜೆಗೈಯ್ಯುವಂತೆ ಮಾಡುವೆನು.

೧೨೮. ಆಯಾಯ ಸ್ಥಳಾಭಿಮಾನದೇವತೆಯಾದ ನಿನ್ನನ್ನು ಆಯಾಸ್ಥಳದ ಜನರು ನಾನಾವಿಧವಾದ ಪೂಜಾದ್ರವ್ಯಗಳಿಂದಲೂ, ಬಲಿಗಳಿಂದಲೂ, ಪರಮ ಸಂತೋಷದಿಂದ ಪೂಜಿಸುವರು.

ತ್ವದ್ಭೂಮಿಸ್ಪರ್ಶಮಾತ್ರೇಣ ಸೂತಿಕಾಮಂದಿರೇ ಶಿವೇ।
ಪಿತಾ ಮಾಂ ತತ್ರ ಸಂಸ್ಥಾಪ್ಯ ತ್ವಮಾದಾಯ ಗಮಿಷ್ಯತಿ ॥ ೧೨೯ ॥

ಕಂಸದರ್ಶನಮಾತ್ರೇಣ ಗಮಿಷ್ಯಸಿ ಶಿವಾಂತಿಕಂ।
ಭಾರಾವತರಣಂ ಕೃತ್ವಾ ಗಮಿಷ್ಯಾಮಿ ಸ್ವಮಾಶ್ರಯಂ ॥ ೧೩೦ ॥

ಇತ್ಯುಕ್ತ್ವಾ ಶ್ರೀಹರಿಸ್ತೂರ್ಣಮುವಾಚ ಚ ಷಡಾನನಂ।
ಅಂಶರೂಪೇಣ ವತ್ಸ ತ್ವಂ ಗಮಿಷ್ಯಸಿ ಮಹೀತಲಂ ॥ ೧೩೧ ॥

ಜಾಂಬವತ್ಯಾಶ್ಚ ಗರ್ಭೇ ಚ ಲಭ ಜನ್ಮ ಸುರೇಶ್ವರ।
ಅಂಶೇನ ದೇವತಾಃ ಸರ್ವಾ ಗಚ್ಛಂತು ಧರಣೀತಲಂ ॥ ೧೩೨ ॥

ಭಾರಹಾರಂ ಕರಿಷ್ಯಾಮಿ ವಸುಧಾಯಾಶ್ಚ ನಿಶ್ಚಿತಂ।
ಇತ್ಯುಕ್ತ್ವಾ ರಾಧಿಕಾನಾಥಸ್ತಸ್ಥೌ ಸಿಂಹಾಸನೇ ವರೇ ॥ ೧೩೩ ॥

---

೧೨೯. ಎಲೌ ಪಾರ್ವತಿಯೇ ನೀನು ನಂದಗೋಪನ ಸೂತಿಕಾಗೃಹದಲ್ಲಿ ಭೂಮಿಸ್ಪರ್ಶಮಾಡಿದ ಮಾತ್ರದಿಂದಲೇ ನನ್ನ ತಂದೆಯು ನನ್ನನ್ನು ಅಲ್ಲಿಗೆ ಕರೆದೊಯ್ದು ನಿನ್ನನ್ನು ಅಲ್ಲಿಂದ ಎತ್ತಿಕೊಂಡು ಹೋಗುವನು

೧೩೦. ನೀನು ಕಂಸನನ್ನು ನೋಡಿದ ಮಾತ್ರದಿಂದಲೇ ಶಿವನ ಸಮೀಪಕ್ಕೆ ಹೋಗುವೆ. ನಾನೂ ಕೂಡ ಭೂಭಾರವನ್ನಿಳುಹಿ ನನ್ನ ಆಶ್ರಮಕ್ಕೆ ಹಿಂತಿರುಗಿ ಬರುವೆನು.

೧೩೧. ಶ್ರೀಹರಿಯು ಪಾರ್ವತಿಗೆ ಹೀಗೆ ಹೇಳಿದ ನಂತರ ಷಣ್ಮುಖನನ್ನು ಕುರಿತು : ಎಲೈ ವತ್ಸನೇ ನೀನೂ ನಿನ್ನದೊಂದಂಶದಿಂದ ಭೂಮಂಡಲಕ್ಕೆ ಹೋಗು.

೧೩೨. ಎಲೈ ಸುರೇಶ್ವರನೇ ಜಾಂಬವತಿಯ ಗರ್ಭದಲ್ಲಿ ನೀನು ಜನ್ಮಹೊಂದು ದೇವತೆಗಳೆಲ್ಲರೂ ತಮ್ಮ ತಮ್ಮ ಅಂಶದಿಂದ ಭೂಲೋಕದಲ್ಲಿ ಅವತರಿಸಲಿ" ಎಂದು ಹೇಳಿದನು.

೧೩೩. ನಾನು ನಿಶ್ಚಯವಾಗಿಯೂ ಭೂಭಾರವನ್ನು ಹರಣಮಾಡುವೆನು. ರಾಧಾಪತಿಯಾದ ಶ್ರೀಕೃಷ್ಣನು ಹೀಗೆ ಹೇಳಿ ಸುಮ್ಮನೆ ಸಿಂಹಾಸನದಲ್ಲಿ ಕುಳಿತನು.

ತಸ್ಥುರ್ದೇವಾಶ್ಚ ದೇವ್ಯಶ್ಚ ಗೋಪಾ ಗೋಪ್ಯಶ್ಚ ನಾರದ ।
ಏತಸ್ಮಿನ್ನಂತರೇ ಬ್ರಹ್ಮಾ ಸಮುತ್ತಸ್ಥೌ ಹರೇಃ ಪುರಃ ॥ ೧೩೪ ॥

ಪುಟಾಂಜಲಿರ್ಜಗತ್ಕಾಂತಮುವಾಚ ವಿನಯಾನ್ವಿತಃ ।

॥ ಬ್ರಹ್ಮೋವಾಚ ॥

ಅವಧಾನಂ ಕುರು ವಿಭೋ ಕಿಂಕರಸ್ಯ ನಿವೇದನಂ ॥ ೧೩೫ ॥

ಆಜ್ಞಾಂ ಕುರು ಮಹಾಭಾಗ ಕಸ್ಯ ಕುತ್ರ ಸ್ಥಲಂ ಭುವಿ ।
ಭರ್ತಾ ಪಾತೋದ್ಧಾರಕರ್ತಾ ಸೇವಕಾನಾಂ ಪ್ರಭುಃ ಸದಾ ॥ ೧೩೬ ॥

ಸ ಭೃತ್ಯಃ ಸರ್ವದಾ ಭಕ್ತ ಈಶ್ವರಾಜ್ಞಾಂ ಕರೋತಿ ಯಃ ।
ಕೇ ದೇವಾಃ ಕೇನ ರೂಪೇಣ ದೇವ್ಯಶ್ಚ ಕಲಯಾ ಕಯಾ ॥ ೧೩೭ ॥

---

೧೩೪. ಎಲೈ ನಾರದನೇ, ಇತ್ತ ದೇವತೆಗಳೂ ದೇವಿಯರೂ ಗೋಪಗೋಪಿಯರೂ ಸುಮ್ಮನೆ ಕುಳಿತರು. ಈ ಮಧ್ಯದಲ್ಲಿ ಬ್ರಹ್ಮದೇವನು ಶ್ರೀಹರಿಯ ಮುಂದೆ ಎದ್ದು ನಿಂತು, ಕೈಮುಗಿದುಕೊಂಡು, ವಿನಯದಿಂದ ಜಗದೊಡೆಯನಿಗಿಂತೆಂದನು.

೧೩೫. ಬ್ರಹ್ಮ :—ಎಲೈ ಪ್ರಭುವೇ, ಸೇವಕನಾದ ನನ್ನ ವಿಜ್ಞಾಪನೆಯನ್ನು ದಯವಿಟ್ಟು ಸಾವಧಾನದಿಂದ ಕೇಳು.

೧೩೬. ಎಲೈ ಮಹಾಭಾಗನೇ ಭೂಲೋಕದಲ್ಲಿ ಯಾರು ಎಲ್ಲಿ ಅವತರಿಸಬೇಕೆಂಬುದನ್ನು ಅಪ್ಪಣೆಮಾಡು. ಸೇವಕರಿಗೆ ಸರ್ವದಾ ಪ್ರಭುವೇ ರಕ್ಷಕ ಮತ್ತು ಉದ್ಧಾರಕನಲ್ಲವೇ ?

೧೩೭. ಯಾರು ಈಶ್ವರನ ಆಜ್ಞೆಯನ್ನು ಪಾಲಿಸುವನೋ ಅವನೇ ನಿಜವಾದ ಭಕ್ತನು ಮತ್ತು ಸೇವಕನು. ಯಾವ ದೇವತೆಗಳು ಯಾವ ರೂಪದಿಂದವತರಿಸಬೇಕು ?

ಕುತ್ರ ಕಸ್ಯಾಭಿಧೇಯಂ ಚ ವಿಷಯಂ ಚ ಮಹೀತಲೇ ।
ಬ್ರಹ್ಮಣೋ ವಚನಂ ಶ್ರುತ್ವಾ ಪ್ರತ್ಯುವಾಚ ಜಗತ್ಪತಿಃ ॥ ೧೩೮ ॥

ಯತ್ರ ಯಸ್ಯಾವಕಾಶಂ ಚ ಕಥಯಾಮಿ ವಿಧಾನತಃ ।

॥ ಶ್ರೀಕೃಷ್ಣ ಉವಾಚ ॥

ಕಾಮದೇವೋ ರೌಕ್ಮಿಣೇಯೋ ರತಿರ್ಮಾಯಾವತೀ ಸತೀ ॥ ೧೩೯ ॥

ಶಂಬರಸ್ಯ ಗೃಹೇ ಯಾ ಚ ಛಾಯಾರೂಪೇಣ ಸಂಸ್ಥಿತಾ ।
ತ್ವಂ ತಸ್ಯ ಪುತ್ರೋ ಭವಿತಾ ನಾಮ್ನಾಽನಿರುದ್ಧ ಏವ ಚ ॥ ೧೪೦ ॥

ಭಾರತೀ ಶೋಣಿತಪುರೇ ಬಾಣಪುತ್ರೀ ಭವಿಷ್ಯತಿ ।
ಅನಂತೋ ದೇವಕೀಗರ್ಭಾದ್ರೌಹಿಣೇಯೋ ಜಗತ್ಪತಿಃ ॥ ೧೪೧ ॥

ಮಾಯಯಾ ಗರ್ಭಸಂಕರ್ಷಾನ್ನಾಮ್ನಾ ಸಂಕರ್ಷಣಃ ಪ್ರಭುಃ ।
ಕಾಲಿಂದೀ ಸೂರ್ಯತನಯಾ ಗಂಗಾಂಶೇನ ಮಹೀತಲೇ ॥ ೧೪೨ ॥

---

೧೩೮. ಯಾರಿಗೆ ಭೂಮಂಡಲದಲ್ಲಿ ಯಾವ ಯಾವ ಭಾಗಗಳು ನಿಯಮಿತವಾಗಿವೆ. ಅವುಗಳ ಹೆಸರೇನು ? ಎಂದು ಬ್ರಹ್ಮನಾಡಿದಮಾತನ್ನು ಕೇಳಿ ಜಗದೊಡೆಯನು ಪ್ರತ್ಯುತ್ತರ ಹೇಳಿದನು.

೧೩೯. ಯಾರಿಗೆ ಎಲ್ಲೆಲ್ಲಿ ಅವಕಾಶವಿರುವುದೆಂಬುದನ್ನು ಕ್ರಮವಾಗಿ ಹೇಳುವೆನು ಕೇಳು.

ಶ್ರೀಕೃಷ್ಣ :—ಮನ್ಮಥನು ರುಕ್ಮಿಣೀಪುತ್ರನಾದ ಪ್ರದ್ಯುಮ್ನನಾಗಿಯೂ, ರತೀದೇವಿಯು ಮಾಯಾವತೀದೇವಿಯಾಗಿಯೂ ಅವತರಿಸಲಿ.

೧೪೦. ಯಾವ ಮಾಯಾವತೀ ದೇವಿಯು ಶಂಬರಾಸುರನ ಮನೆಯಲ್ಲಿ ಛಾಯಾರೂಪದಿಂದಿರಲಿ. ನೀನು ( ಬ್ರಹ್ಮ ) ಪ್ರದ್ಯುಮ್ನನ ಮಗನಾಗಿ ಅನಿರುದ್ಧನೆಂಬ ಹೆಸರಿನಿಂದ ವಿಖ್ಯಾತನಾಗುವೆ.

೧೪೧-೧೪೨. ಸರಸ್ವತೀದೇವಿಯು ಶೋಣಿತಪುರದಲ್ಲಿ ಬಾಣಾಸುರನ ಪುತ್ರಿಯಾಗಿ ಅವತರಿಸುವಳು. ಜಗದಾಧಾರನಾದ ಆದಿಶೇಷನು ವಸುದೇವನಿಂದ ದೇವಕಿಯ ಗರ್ಭದಲ್ಲಿ ಸೇರಿ ಬಳಿಕ ಮಾಯೆಯಿಂದ ರೋಹಿಣೀ ಗರ್ಭಕ್ಕೆ ಸಂಕ್ರಮಿಸಿ

ಅರ್ಧಾಂಶೇನೈವ ತುಲಸೀ ಲಕ್ಷ್ಮಣಾ ರಾಜಕನ್ಯಕಾ ।
ಸಾವಿತ್ರೀ ವೇದಮಾತಾ ಚ ನಾಮ್ನಾ ನಗ್ನಜಿತೀ ಸತೀ ॥ ೧೪೩ ॥

ವಸುಂಧರಾಸತ್ಯಭಾಮಾ ಶೈಬ್ಯಾ ದೇವೀ ಸರಸ್ವತೀ ।
ರೋಹಿಣೀ ಮಿತ್ರವಿಂದಾ ಚ ಭವಿತಾ ರಾಜಕನ್ಯಕಾ ॥ ೧೪೪ ॥

ಸೂರ್ಯಪತ್ನೀ ರತ್ನಮಾಲಾ ಕಲಯಾ ಚ ಜಗತ್ಪ್ರಭೋಃ ।
ಸ್ವಾಹಾಂಶೇನ ಸುಶೀಲಾ ಚ ರುಕ್ಮಿಣ್ಯಾದ್ಯಾಃ ಸ್ತ್ರಿಯೋ ನವ ॥ ೧೪೫ ॥

ದುರ್ಗಾಂಶಾದ್ಧಾರ್ಜಾಂಬವತೀ ಮಹೀಷೀಣಾಂ ದಶ ಸ್ಮೃತಾಃ ।
ಅರ್ಧಾಂಶೇನ ಶೈಲಪುತ್ರೀ ಯಾತು ಜಾಂಬವತೋ ಗೃಹಂ ॥ ೧೪೬ ॥

---

ಮಾಯಾಶಕ್ತಿಯಿಂದ ಅನ್ಯಗರ್ಭಕ್ಕೆ ಸಂಕ್ರಮಿಸಿದಕಾರಣ ಸಂಕರ್ಷಣನೆನಿಸುವನು. ಸೂರ್ಯಪುತ್ರಿಯಾದ ಕಾಳಿಂದಿಯು ಗಂಗೆಯ ಅಂಶದಿಂದ ಭೂಮಿಯಲ್ಲಿ ಯಮುನೆ ಯೆನಿಸಿಕೊಳ್ಳುವಳು

೧೪೩. ತುಳಸೀದೇವಿಯೂ ಕೂಡ ತನ್ನ ಅರ್ಧಾಂಶದಿಂದ ಲಕ್ಷ್ಮಣೆಯೆಂಬ ರಾಜಪುತ್ರಿಯಾಗಿ ಅವತರಿಸುವಳು

೧೪೪. ವಸುಂಧರೆಯು ಸತ್ಯಭಾಮೆಯೆಂತಲೂ, ಸರಸ್ವತೀದೇವಿಯು ಶೈಬ್ಯೆ ಯೆಂತಲೂ, ರೋಹಿಣಿಯು ಮಿತ್ರವಿಂದೆಯೆಂತಲೂ ಪ್ರಥಿತರಾದ ರಾಜಕನ್ನಿಕೆಯ ರಾಗಿ ಅವತರಿಸುವರು.

೧೪೫. ಸೂರ್ಯಪತ್ನಿಯು ತನ್ನ ಕಲೆಯಿಂದ ರತ್ನಮಾಲೆಯೆಂಬ ಹೆಸರಿ ನಿಂದವತರಿಸಿ ಜಗದೊಡೆಯನ ಪತ್ನಿಯಾಗುವಳು. ಸ್ವಾಹಾದೇವಿಯ ಅಂಶದಿಂದ ಸುಶೀಲೆಯೂ, ರುಕ್ಮಿಣಿಯೇ ಮುಂತಾದ ಒಂಬತ್ತುಸ್ತ್ರೀಯರೂ ಅವತರಿಸುವರು.

೧೪೬. ದುರ್ಗಾದೇವಿಯ ಅರ್ಧಾಂಶದಿಂದ ಅವತರಿಸಿರುವ ಜಾಂಬವತಿಯು ತನ್ನ ಪಟ್ಟಮಹಿಷಿಯರಲ್ಲಿ ಹತ್ತನೆಯವಳಾಗುವಳು ಆದುದರಿಂದ ಶೈಲಪುತ್ರಿಯು ತನ್ನ ಅರ್ಧಾಂಶದಿಂದ ಜಾಂಬವಂತನ ಮನೆಯಲ್ಲಿ ಅವತರಿಸುವಳು.

ಕೈಲಾಸೇ ಶಂಕರಾಜ್ಞಾ ಚ ಬಭೂವ ಪಾರ್ವತೀಂ ಪುರಾ ।
ಕೈಲಾಸಗಾಮಿನಂ ವಿಷ್ಣುಂ ಶ್ವೇತದ್ವೀಪನಿವಾಸಿನಂ ।
ಆಲಿಂಗನಂ ದೇಹಿ ಕಾಂತೇ ನಾಸ್ತಿ ದೋಷೋ ಮಮಾಜ್ಞಯಾ ॥ ೧೪೭ ॥

॥ ಬ್ರಹ್ಮೋವಾಚ ॥

ಕಥಂ ಶಿವಾಜ್ಞಾ ತಾಂ ದೇವೀಂ ಬಭೂವ ರಾಧಿಕಾಪತೇ ।
ವಿಷ್ಣೋಃ ಸಂಭಾಷಣೇ ಪೂರ್ವಂ ಶ್ವೇತದ್ವೀಪನಿವಾಸಿನಃ ॥ ೧೪೮ ॥

॥ ಶ್ರೀ ಭಗವಾನುವಾಚ ॥

ಪುರಾ ಗಣೇಶಂ ದ್ರಷ್ಟುಂ ಚ ಪ್ರಜಗ್ಮುಃ ಸರ್ವದೇವತಾಃ ।
ಶ್ವೇತದ್ವೀಪಾತ್ಸ್ವಯಂ ವಿಷ್ಣುರ್ಜಗಾಮ ಶಂಕರಾಲಯೇ ॥ ೧೪೯ ॥

ದೃಷ್ಟ್ವಾ ಗಣೇಶಂ ಮುದಿತಃ ಸಮುವಾಸ ಸುಖಾಸನೇ ।
ಸುಖೇನ ದದೃಶುಃ ಸರ್ವೇ ತ್ರೈಲೋಕ್ಯಮೋಹನಂ ವಪುಃ ॥ ೧೫೦ ॥

---

೧೪೭. ಪೂರ್ವದಲ್ಲಿ ಕೈಲಾಸಪರ್ವತದಲ್ಲಿದ್ದಾಗ ಶಂಕರನು ಪಾರ್ವತಿಯನ್ನು ಕುರಿತು ಇಂತು ಆಜ್ಞೆಗೈದನು. ಶ್ವೇತದ್ವೀಪನಿವಾಸಿಯಾದ ವಿಷ್ಣುವು ಕೈಲಾಸಕ್ಕೆ ಬಂದಿದ್ದಾಗ, ಪಾರ್ವತಿಯು ಅವನಲ್ಲಿ ಮೋಹಗೊಂಡಿದ್ದನ್ನು ಕಂಡು 'ಎಲೌ ಕಾಂತೆಯೇ ನನ್ನ ಅನುಜ್ಞೆಯಂತೆ ನೀನು ವಿಷ್ಣುವನ್ನು ಆಲಿಂಗಿಸಿಕೋ, ದೋಷವಿಲ್ಲ' ಎಂದನು.

೧೪೮. ಬ್ರಹ್ಮ :— ಎಲೈ ರಾಧಾಪತಿಯೇ, ಶ್ವೇತದ್ವೀಪನಿವಾಸಿಯಾದ ವಿಷ್ಣುವಿನೊಡನೆ ಪಾರ್ವತಿಯು ಸಂಭಾಷಣೆಮಾಡುವುದಕ್ಕಾದರೂ ಶಿವನು ಹೇಗೆ ಅವಕಾಶಕೊಟ್ಟನು.

೧೪೯. ಶ್ರೀಭಗವಾನ್ :— ಪೂರ್ವದಲ್ಲಿ ಗಣಪತಿಯನ್ನು ನೋಡಲು ದೇವತೆಗಳೆಲ್ಲರೂ ಕೈಲಾಸಕ್ಕೆ ಹೋದರು ಆಗ ಶ್ವೇತದ್ವೀಪದಿಂದ ವಿಷ್ಣುವೂ ಕೂಡ ಶಂಕರನ ಮಂದಿರಕ್ಕೆ ಹೋದನು.

೧೫೦. ಅಲ್ಲಿ ಗಣಪತಿಯನ್ನು ನೋಡಿ ಸಂತೋಷಗೊಂಡು ಸುಖವಾಗಿ ಆಸನದಲ್ಲಿ ಮಂಡಿಸಿದ್ದನು. ತ್ರಿಲೋಕಮೋಹಕವಾದ ವಿಷ್ಣುವಿನ ಶರೀರವನ್ನು ನೋಡಿ ಎಲ್ಲರೂ ಚಕಿತರಾದರು.

ಕಿರೀಟಿನಂ ಕುಂಡಲಿನಂ ಪೀತಾಂಬರಧರಂ ವರಂ ।
ಸುಂದರಂ ಶ್ಯಾಮರೂಪಂ ಚ ನವಯೌವನಸಂಯುತಂ ॥ ೧೫೧ ॥

ಚಂದನಾಗರುಕಸ್ತೂರೀಕುಂಕುಮದ್ರವಸಂಯುತಂ ।
ರತ್ನಾಲಂಕಾರಶೋಭಾಢ್ಯಂ ಸ್ಮೇರಾನನಸರೋರುಹಂ ॥ ೧೫೨ ॥

ರತ್ನಸಿಂಹಾಸನಸ್ಥಂ ಚ ಪಾರ್ಷದೈಃ ಪರಿವೇಷ್ಟಿತಂ ।
ವಂದಿತಂ ಚ ಸುರೈಃ ಸರ್ವೈಃ ಶಿವೇನ ಪೂಜಿತಂ ಸ್ತುತಂ ॥ ೧೫೩ ॥

ತಂ ದೃಷ್ಟ್ವಾ ಪಾರ್ವತೀ ವಿಷ್ಣುಂ ಪ್ರಸನ್ನವದನೇಕ್ಷಣಾ ।
ಮುಖಮಾಚ್ಛಾದಿತಂ ಚಕ್ರೇ ವಾಸಸಾ ವ್ರೀಡಯಾ ಸತೀ ॥ ೧೫೪ ॥

ಅತೀವ ಸುಂದರಂ ರೂಪಂ ದರ್ಶಂ ದರ್ಶಂ ಪುನಃ ಪುನಃ ।
ದದರ್ಶ ಮುಖಮಾಚ್ಛಾದ್ಯ ನಿಮೇಷರಹಿತಾ ಸತೀ ॥ ೧೫೫ ॥

---

೧೫೧. ಶ್ಯಾಮಸುಂದರನೂ ನವಯೌವನಸಂಪನ್ನನೂ ಆದ ಆ ವಿಷ್ಣುವು ಕಿರೀಟಕುಂಡಲಗಳನ್ನು ಧರಿಸಿ ಪೀತಾಂಬರವನ್ನುಟ್ಟಿದ್ದನು.

೧೫೨. ಚಂದನ, ಅಗುರು, ಕಸ್ತೂರಿ, ಮತ್ತು ಕುಂಕುಮಾದಿ ಸುಗಂಧದ್ರವ್ಯಗಳನ್ನು ಅಂಗಾಂಗಗಳಿಗೂ ಲೇಪಿಸಿಕೊಂಡು, ರತ್ನಾಲಂಕಾರಗಳನ್ನು ಧರಿಸಿ ಸ್ಮಿತವದನನಾಗಿ ಕುಳಿತಿದ್ದನು

೧೫೩. ಪಾರ್ಷದರಿಂದ ಪರಿವೃತನಾಗಿ ರತ್ನಸಿಂಹಾಸನದಲ್ಲಿ ಕುಳಿತು, ದೇವತೆಗಳಿಂದ ವಂದಿತನಾಗಿ ಶಿವನಿಂದ ಪೂಜೆಗೊಂಡಿದ್ದನು.

೧೫೪. ವಿಷ್ಣುವಿನ ಆ ದಿವ್ಯ ಸುಂದರಾಕಾರವನ್ನು ನೋಡಿ ಪಾರ್ವತಿಯು ಮೋಹದಿಂದ ಲಜ್ಜಿತಳಾಗಿ ಸೆರಗಿನಿಂದ ಮುಖವನ್ನು ಮರೆಮಾಡಿಕೊಂಡಳು.

೧೫೫. ಹಾಗೆ ಮುಖವನ್ನು ಮರೆಮಾಡಿಕೊಂಡಿರುವಂತೆಯೇ ವಿಷ್ಣುವಿನ ಸುಂದರರೂಪವನ್ನು ಮತ್ತೆ ಮತ್ತೆ ಮನದಣಿಯುವಂತೆ ನೋಡಿದಳು.

ಪರಮಾದ್ಭುತವೇಷಂ ಚ ಸಸ್ಮಿತಾ ವಕ್ರಚಕ್ಷುಷಾ ।
ಸುಖಸಾಗರಸಂಮಗ್ನಾ ಬಭೂವ ಪುಲಕಾಂಚಿತಾ ॥ ೧೫೬ ॥

ಕ್ಷಣಂ ದದರ್ಶ ಪಂಚಾಸ್ಯಂ ಶುಭ್ರವರ್ಣಂ ತ್ರಿಲೋಚನಂ ।
ತ್ರಿಶೂಲಪರಿಘಧರಂ ಕಂದರ್ಪಕೋಟಿಸುಂದರಂ ॥ ೧೫೭ ॥

ಕ್ಷಣಂ ದದರ್ಶ ಶ್ಯಾಮಂ ತಮೇಕಾಸ್ಯಂ ಚ ದ್ವಿಲೋಚನಂ ।
ಚತುರ್ಭುಜಂ ಪೀತವಸ್ತ್ರಂ ವನಮಾಲಾವಿಭೂಷಿತಂ ॥ ೧೫೮ ॥

ಏಕಂ ಬ್ರಹ್ಮ ಮೂರ್ತಿಭೇದಮಭೇದಂ ವಾ ನಿರೂಪಿತಂ ।
ದೃಷ್ಟ್ವಾ ಬಭೂವ ಸಾ ಮಾಯಾ ಸಕಾಮಾ ವಿಷ್ಣುಮಾಯಯಾ ॥ ೧೫೯ ॥

---

೧೫೬. ಮಂದಹಾಸದಿಂದ ಕೂಡಿ, ಕಡೆಗಣ್ಣಿನಿಂದ ಅವನ ಅತ್ಯದ್ಭುತರೂಪವನ್ನು ನೋಡಿ ಸುಖಸಾಗರದಲ್ಲಿ ಮುಳುಗಿ ರೋಮಾಂಚಿತಶರೀರಳಾದಳು.

೧೫೭. ಒಮ್ಮೆ ಪಂಚಮುಖನೂ, ಗೌರವರ್ಣನೂ, ತ್ರಿಲೋಚನನೂ, ತ್ರಿಶೂಲ, ಪರಿಘಾದಿ ಆಯುಧಧರನೂ, ಕೋಟಿಮನ್ಮಥಲಾವಣ್ಯಮಯನೂ ಆದ ಶಿವನನ್ನು ನೋಡಿದನು

೧೫೮. ಮರುಕ್ಷಣದಲ್ಲಿ ಏಕಮುಖನೂ, ದ್ವಿಲೋಚನನೂ, ಶ್ಯಾಮಸುಂದರನೂ, ಚತುರ್ಭುಜನೂ, ಪೀತಾಂಬರಧರನೂ, ವನಮಾಲಾವಿಭೂಷಿತನೂ ಆದ ವಿಷ್ಣುವನ್ನು ನೋಡಿದಳು.

೧೫೯. ಮೂರ್ತಿಭೇದದಿಂದ ಆಪಾತತಃ ಭಿನ್ನವಾಗಿ ತೋರಿದರೂ ಸ್ವಲ್ಪ ಯೋಚಿಸಿದರೆ ಅದ್ವೈತಬ್ರಹ್ಮವಾದ ಆ ಸ್ವರೂಪವನ್ನು ನೋಡಿ, ವಿಷ್ಣುಮಾಯೆಗೊಳಗಾದ ಪಾರ್ವತಿಯು ವಿಷ್ಣುವಿನಲ್ಲಿ ಮೋಹಗೊಂಡಳು.

ಮದಂಶಾಶ್ಚ ತ್ರಯೋ ದೇವಾ ಬ್ರಹ್ಮವಿಷ್ಣು ಮಹೇಶ್ವರಾಃ ।
ತಾಭ್ಯಾಮತೌತ್ಕರ್ಷಪಾತಾಚ್ಚ ಶ್ರೇಷ್ಠಃ ಸತ್ವಗುಣಾತ್ಮಕಃ ॥ ೧೬೦ ॥

ದೃಷ್ಟ್ವಾ ತಂ ಪಾರ್ವತೀ ಭಕ್ತ್ಯಾ ಪುಲಕಾಂಚಿತವಿಗ್ರಹಾ ।
ಮನಸಾ ಪೂಜಯಾಮಾಸ ಪರಮಾತ್ಮಾನಮೀಶ್ವರಂ ॥ ೧೬೧ ॥

ದುರ್ಗಾಂತರಾಭಿಪ್ರಾಯಂ ಚ ಬುಬುಧೇ ಶಂಕರಸ್ಸ್ವಯಂ ।
ಸರ್ವಾಂತರಾತ್ಮಾ ಭಗವಾನಂತರ್ಯಾಮೀ ಜಗತ್ಪತಿಃ ॥ ೧೬೨ ॥

ದುರ್ಗಾಂ ನಿರ್ಜನಮಾಹೂಯ ತಾಮುವಾಚ ಹರಃ ಸ್ವಯಂ ।
ಬೋಧಯಾಮಾಸ ವಿವಿಧಂ ಹಿತಂ ತಥ್ಯಮಖಂಡಿತಂ ॥ ೧೬೩ ॥

॥ ಶ್ರೀ ಶಂಕರ ಉವಾಚ ॥

ನಿವೇದನಂ ಮದೀಯಂ ಚ ನಿಬೋಧ ಶೈಲಕನ್ಯಕೇ ।
ಶೃಂಗಾರಂ ದೇಹಿ ಭದ್ರಂ ತೇ ಹರಯೇ ಪರಮಾತ್ಮನೇ ॥ ೧೬೪ ॥

---

೧೬೦. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳೂ ನನ್ನ ಅಂಶ ಸಂಭವರು. ಆ ಮೂವರಲ್ಲಿ ವಿಷ್ಣುವಿನಲ್ಲಿಯೇ ಸತ್ವಗುಣವು ಪ್ರಚುರವಾಗಿರುವುದರಿಂದ ಅವನೇ ಶ್ರೇಷ್ಠನೆನಿಸುವನು.

೧೬೧. ಈ ಪ್ರಕಾರವಾದ ವಿಷ್ಣುವನ್ನು ಪಾರ್ವತಿಯು ಭಕ್ತಿಪೂರ್ವಕವಾಗಿ ನೋಡಿ ರೋಮಾಂಚಿತ ಶರೀರಳಾಗಿ, ಸರ್ವೇಶ್ವರನಾದ ಆ ಪರಮಾತ್ಮನನ್ನು ಮನಸ್ಸಿನಲ್ಲಿಯೇ ಪೂಜಿಸಿದಳು.

೧೬೨. ಸರ್ವಾಂತರ್ಯಾಮಿಯೂ, ಜಗತ್ಪತಿಯೂ ಆದ ಶಂಕರನು ದುರ್ಗಾದೇವಿಯ ಅಂತರಂಗವನ್ನು ಚೆನ್ನಾಗಿ ಅರಿತನು.

೧೬೩. ಆಗ ಶಂಕರನು ದುರ್ಗಾದೇವಿಯನ್ನು ಏಕಾಂತಪ್ರದೇಶಕ್ಕೆ ಕರೆದು, ಆಕೆಗೆ ಹಿತವೂ, ಸತ್ಯವೂ ಆದ ಕೆಲವು ನುಡಿಗಳನ್ನುಪದೇಶಿಸಿದನು

೧೬೪. ಶ್ರೀಶಂಕರ ;—ಎಲೌ ಶೈಲರಾಜಪುತ್ರಿಯೇ, ನಾನು ಹೇಳುವ ಹಿತ ನುಡಿಯನ್ನು ಅವಧರಿಸು ಪರಮಾತ್ಮನಾದ ಶ್ರೀಹರಿಗೆ ಶೃಂಗಾರ ರಸಾನುಭವವನ್ನು ಮಾಡಿಸು ನಿನಗೆ ಶುಭವಾಗುವುದು.

ಅಹಂ ಬ್ರಹ್ಮಾ ಚ ವಿಷ್ಣುಶ್ಚ ಬ್ರಹ್ಮೈಕಂ ಚ ಸನಾತನಂ ।
ವೇದಕೋ ಭೇದರಹಿತೋ ವಿಷಯೋ ಮೂರ್ತಿಭೇದಕಃ ॥ ೧೬೫ ॥

ಏಕಾ ಪ್ರಕೃತಿಃ ಸರ್ವೇಷಾಂ ಮಾತಾ ತ್ವಂ ಸರ್ವರೂಪಿಣೀ ।
ಸ್ವಯಂಭುರಸಿ ವಾಣೀ ತ್ವಂ ಲಕ್ಷ್ಮೀ ನಾರಾಯಣೋರಸಿ ॥ ೧೬೬ ॥

ಮಮ ವಕ್ಷಸಿ ದುರ್ಗಾ ತ್ವಂ ನಿಬೋಧಾಽಽಧ್ಯಾತ್ಮಕಂ ಸತಿ ।
ಶಿವಸ್ಯ ವಚನಂ ಶ್ರುತ್ವಾ ತಮುವಾಚ ಸುರೇಶ್ವರೀ ॥ ೧೬೭ ॥

॥ ಪಾರ್ವತ್ಯುವಾಚ ॥

ದೀನಬಂಧೋ ಕೃಪಾಸಿಂಧೋ ತವ ಮಾಮುಕೃಪಾ ಕಥಂ ।
ಸುಚಿರಂ ತಪಸಾ ಲಬ್ಧೋ ನಾಥ ಸ್ತ್ವಂ ಜಗತಾಂ ಮಯಾ ॥ ೧೬೮ ॥

---

೧೬೫. ನಾನು, ಬ್ರಹ್ಮ ಮತ್ತು ವಿಷ್ಣು ಈ ಮೂವರೂ ಅನಾದಿಯಾದ ಅಖಂಡ ಬ್ರಹ್ಮರು. ವೇದದಲ್ಲಿ ಅದ್ವೈತವೆಂದು ಪ್ರತಿಪಾದಿತರಾಗಿರುವ ನಾವೇ ವಿಷಯ ಭೇದದಿಂದ ಭಿನ್ನಮೂರ್ತಿಗಳನ್ನು ಧರಿಸಿರುವೆವು.

೧೬೬. ಅಖಂಡ ಪ್ರಕೃತಿಯೆನಿಸಿರುವ ನೀನೆ: ಎಲ್ಲರಿಗೂ ಮಾತೃರೂಪಳಾಗಿ ಇರುವುದಲ್ಲದೆ, ಸರ್ವಸ್ವರೂಪಿಣಿಯಾಗಿರುವೆ. ಬ್ರಹ್ಮನ ವಕ್ಷಃಸ್ಥಳದಲ್ಲಿ ಸರಸ್ವತೀ ಸ್ವರೂಪದಿಂದಿರುವ ನೀನೇ ನಾರಾಯಣನ ವಕ್ಷಃಸ್ಥಳದಲ್ಲಿ ಲಕ್ಷ್ಮಿಯೆನಿಸಿರುವೆ.

೧೬೭. ನನ್ನ ವಕ್ಷಃಸ್ಥಳದಲ್ಲಿ ದುರ್ಗಾರೂಪಿಣಿಯಾಗಿರುವ ಎಲೌ ಸತೀ ದೇವಿಯೇ, ನೀನು ನಿನ್ನ ಅಧ್ಯಾತ್ಮರೂಪವನ್ನು ಸ್ಮರಿಸಿಕೊ. ಇಂತಾಡಿದ ಶಿವನ ನುಡಿಗಳನ್ನು ಕೇಳಿ ಸುರೇಶ್ವರಿಯಾದ ಪಾರ್ವತಿಯು ಅವನಿಗಿಂತೆಂದಳು.

೧೬೮. ಪಾರ್ವತಿ,—ಎಲೈ ಅನಾಥಬಂಧುವೆನಿಸಿರುವ ದಯಾಸಮುದ್ರನೇ, ನನ್ನಲ್ಲೇಕೆ ಇಷ್ಟು ನಿರ್ದಯನಾದೆ. ಜಗನ್ನಾಥನಾದ ನಿನ್ನನ್ನು ವರಿಸಲು ಬಹಳ ಕಾಲ ತಪಸ್ಸು ಮಾಡಿ ಶ್ರಮಿಸಿದೆ.

ಮಾದೃಶೀಂ ಕಿಂಕರೀಂ ನಾಥ ನ ಪರಿತ್ಯಕ್ತುಮರ್ಹಸಿ ।
ಅಯೋಗ್ಯಮೀದೃಶಂ ವಾಕ್ಯಂ ಮಾ ಮಾ ವದ ಮಹೇಶ್ವರ　　॥ ೧೬೯ ॥

ತವ ವಾಕ್ಯಂ ಮಹಾದೇವ ಕರಿಷ್ಯಾಮ್ಯೇವ ಪಾಲನಂ ।
ದೇಹಾಂತರೇ ಜನ್ಮ ಲಬ್ಧ್ವಾ ಭಜಿಷ್ಯಾಮಿ ಹರಿಂ ಹರ　　॥ ೧೭೦ ॥

ಇತ್ಯೇವಂ ವಚನಂ ಶ್ರುತ್ವಾ ವಿರರಾಮ ಮಹೇಶ್ವರಃ ।
ಉಚ್ಚೈರ್ಜಹಾಸಾಭಯದಃ ಪಾರ್ವತ್ಯೈ ಚಾಭಯಂ ದದೌ　　॥ ೧೭೧ ॥

ತತ್ಪ್ರತಿಜ್ಞಾಪಾಲನಾಯ ಪಾರ್ವತೀ ಜಾಂಬವದ್ಗೃಹೇ ।
ಲಭಿಷ್ಯತಿ ಜನುರ್ಧಾತರ್ನಾಮ್ನಾ ಜಾಂಬವತೀ ಸತೀ　　॥ ೧೭೨ ॥

---

೧೬೯. ನಿನ್ನ ಚರಣ ಸೇವಕಿಯಾದ ನನ್ನನ್ನು ಪರಿತ್ಯಾಗಮಾಡುವುದುಚಿತವೇ. ಎಲೈ ಮಹೇಶ್ವರನೇ ನಿನ್ನಂಥವರು ಆಡಬಾರದಂಥ ಈ ನುಡಿಗಳನ್ನು ಇನ್ನಾಡಬೇಡ.

೧೭೦ ಮಹಾದೇವನೇ, ಆದರೆ ನಾನು ನಿನ್ನ ಆಜ್ಞೋಲ್ಲಘನೆ ಮಾಡಲಾರೆನು. ಜನ್ಮಾಂತರವೆತ್ತಿ ಶ್ರೀಹರಿಯನ್ನು ವರಿಸಿ ನಿನ್ನ ಅಪ್ಪಣೆಯನ್ನು ಪರಿಪಾಲಿಸುವೆನು.

೧೭೧. ಪಾರ್ವತಿಯಾಡಿದ ನುಡಿಗಳನ್ನು ಕೇಳಿ ಮಹೇಶ್ವರನು ಸುಮ್ಮನಾದನು. ಜಗತ್ತಿಗೆಲ್ಲ ಅಭಯದಾಯಕನಾದ ಶಿವನು ಗಟ್ಟಿಯಾಗಿ ನಕ್ಕು ಪಾರ್ವತಿಗೆ ಒಳಿತಾಗಲೆಂದು ಹರಸಿ ಅಭಯದಾನಮಾಡಿದನು.

೧೭೨. ಎಲೈ ಬ್ರಹ್ಮನೇ, ಆ ಪ್ರತಿಜ್ಞೆಯನ್ನು ಪರಿಪಾಲಿಸುವುದಕ್ಕೋಸ್ಕರ ಪಾರ್ವತಿಯು ಜಾಂಬವಂತನ (ಕರಡಿ) ಮನೆಯಲ್ಲಿ ಜನ್ಮವೆತ್ತಿ ಜಾಂಬವತಿಯೆಂಬ ಹೆಸರಿನಿಂದ ವಿಖ್ಯಾತಳಾಗುವಳು.

॥ ಬ್ರಹ್ಮೋವಾಚ ॥

ಭೂವನೌ ಕತಿ ವಿಧೇ ಭೂಪೇ ಸಂಸ್ಥಿತೇ ಪಾರ್ವತೀ ಕಥಂ ।
ಲಲಾಭ ಭಾರತೇ ಜನ್ಮ ನಿಂದಿತೇ ಬಾಲ್ಲುಕೇ ಗೃಹೇ ॥ ೧೭೩ ॥

॥ ಶ್ರೀಕೃಷ್ಣ ಉವಾಚ ॥

ರಾಮಾವತಾರೇ ತ್ರೇತಾಯಾಂ ದೇವಾಂಶಾಶ್ಚ ಯಯುರ್ಮಹೀಂ ।
ಹಿಮಾಲಯಾಂಶೋ ಭಲ್ಲೂಕೋ ಜಾಂಬವಾನ್ನಾಮ ಕಿಂಕರಃ ॥ ೧೭೪ ॥

ರಾಮಸ್ಯ ವರದಾನೇನ ಚಿರಂಜೀವೀ ಶ್ರಿಯಾಯುತಂ ।
ಕೋಟಿಸಿಂಹಬಲಾಧಾನಂ ವಿಧತ್ತೇ ಚ ಮಹಾಬಲಃ ॥ ೧೭೫ ॥

ಪಿತುರಂಶಗೃಹೇ ದುರ್ಗಾ ಜಗಾಮಾಂಶೇನ ಭೂತಲಂ ।
ಪೂರ್ವಂ ಪೂರ್ವಸ್ಯ ವೃತ್ತಾಂತಂ ಕಥಿತಂ ಶೃಣು ಮನ್ಮುಖಾತ್ ॥ ೧೭೬ ॥

---

೧೭೩ ಬ್ರಹ್ಮ:—ಭೂಮಂಡಲದಲ್ಲಿ ಅನೇಕವಿಧ ರಾಜಾಧಿರಾಜರಿರುವಾಗ ಪಾರ್ವತಿಯು, ಅವರೆಲ್ಲರ ಮನೆಯನ್ನು ಬಿಟ್ಟು ತಿರ್ಯಗ್ಜಂತುವಾದ ಕರಡಿಯ ಮಂದಿರದಲ್ಲಿ ಜನ್ಮವೆತ್ತಲು ಕಾರಣವೇನು ?

೧೭೪. ಶ್ರೀಕೃಷ್ಣ :—ತ್ರೇತಾಯುಗದ ರಾಮಾವತಾರ ಸಂದರ್ಭದಲ್ಲಿ ದೇವತೆಗಳೆಲ್ಲರೂ ತಮ್ಮ ತಮ್ಮ ಅಂಶದಿಂದ ಭೂಮಂಡಲದಲ್ಲಿ ಅವತರಿಸಿದರು. ಜಾಂಬವಂತನೆಂಬ ಕರಡಿಯು ಹಿಮವಂತನ ಅಂಶದಿಂದ ಜನ್ಮವೆತ್ತಿದನು.

೧೭೫. ಆ ಜಾಂಬವನು ಶ್ರೀರಾಮನ ಅನುಗ್ರಹಕ್ಕೆ ಪಾತ್ರನಾಗಿ, ಚಿರಂಜೀವಿಯೂ, ಸಕಲೈಶ್ವರ್ಯ ಪರಿಪೂರ್ಣನೂ, ಆದನು. ಶ್ರೀರಾಮನು ಅವನಿಗೆ ಕೋಟಿ ಸಿಂಹಗಳ ಬಲವನ್ನು ದಯಪಾಲಿಸಿದನು.

೧೭೬ ತನ್ನ ತಂದೆಯಾದ ಹಿಮವಂತನ ಅಂಶಸಂಭೂತನಾದುದರಿಂದ ಜಾಂಬವಂತನ ಮನೆಯಲ್ಲಿ ಪಾರ್ವತಿಯು ತನ್ನ ಅಂಶದಿಂದ ಅವತರಿಸಿದಳು. ಈ ರೀತಿಯಾಗಿ ಪೂರ್ವವೃತ್ತಾಂತವನ್ನು ನಿನಗೆ ತಿಳಿಸಿದುದಾಯಿತು.

ಸರ್ವೇಷಾಂ ಚ ಸುರಾಣಾಂ ವೈ ವಂಶಾ ಗಚ್ಛಂತು ಭೂತಲಂ ।
ನೃಪಪುತ್ರಾ ಮತ್ಸಹಾಯಾ ಭವಿಷ್ಯಂತಿ ರಣೇ ವಿಧೇ ॥ ೧೭೭ ॥

ಕಮಲಾಕಲಯಾ ಸರ್ವಾ ಭವಂತು ನೃಪಕನ್ಯಕಾಃ ॥
ಮನ್ಮಹಿಷ್ಯೋ ಭವಿಷ್ಯಂತಿ ಸಹಸ್ರಾಣಾಂ ಚ ಷೋಡಶ ॥ ೧೭೮ ॥

ಧರ್ಮೋಽಯಮಂಶರೂಪೇಣ ಪಾಂಡುಪುತ್ರೋ ಯುಧಿಷ್ಠಿರಃ ।
ವಾಯೋರಂಶಾದ್ಭೀಮಸೇನಃ ಸ ವಜ್ರೀ ಹ್ಯರ್ಜುನಸ್ಸ್ವಯಂ ॥ ೧೭೯ ॥

ನಕುಲಃ ಸಹದೇವಶ್ಚ ಸ್ವರ್ವೈದ್ಯಾಂಶ ಸಮುದ್ಭವೌ ।
ಸೂರ್ಯಾಂಶಃ ಕರ್ಣವೀರಶ್ಚ ವಿದುರಃ ಸ ಯಮಃ ಸ್ವಯಂ ॥ ೧೮೦ ॥

ದುರ್ಯೋಧನಃ ಕಲೇರಂಶಃ ಸಮುದ್ರಾಂಶಶ್ಚ ಶಂತನುಃ ।
ಅಶ್ವತ್ಥಾಮಾ ಶಂಕರಾಂಶೋ ದ್ರೋಣೋ ವಹ್ನ್ಯಂಶಸಂಭವಃ ॥ ೧೮೧ ॥

---

೧೭೭ ಒಟ್ಟಿನಲ್ಲಿ ದೇವತೆಗಳ ಅಂಶದವರೆಲ್ಲರೂ ಭೂಮಿಯಲ್ಲಿ ಅವತರಿಸಲಿ. ಎಲೈ ಬ್ರಹ್ಮನೇ, ಮುಂದೆ ಯುದ್ಧವಾಗುವ ಸಂದರ್ಭದಲ್ಲಿ ರಾಜಪುತ್ರರೆಲ್ಲರೂ ನನಗೆ ಸಹಾಯಕರಾಗುವರು.

೧೭೮. ದೇವತಾಸ್ತ್ರೀಯರೆಲ್ಲರೂ, ಲಕ್ಷ್ಮಿಯ ಕಲೆಯಿಂದ ಹದಿನಾರು ಸಹಸ್ರ ರಾಜಕನ್ಯೆಯರಾಗಿ ಜನಿಸಲಿ. ಆ ಕನ್ಯೆಯರೆಲ್ಲರೂ ನನಗೆ ರಾಣಿಯರಾಗಲಿ.

೧೭೯. ಧರ್ಮಪುರುಷನು ತನ್ನದೊಂದಂಶದಿಂದ ಪಾಂಡುಪುತ್ರನಾಗಿ ಯುಧಿಷ್ಠಿರ ನೆನಸಿಕೊಳ್ಳುವನು. ವಾಯುದೇವನು ತನ್ನ ಅಂಶದಿಂದ ಭೀಮಸೇನನಾಗಿಯೂ, ದೇವೇಂದ್ರನು ತನ್ನ ಅಂಶದಿಂದ ಅರ್ಜುನನಾಗಿಯೂ ಜನಿಸುವರು.

೧೮೦. ನಕುಲ ಸಹದೇವರು ಅಶ್ವಿನೀದೇವತೆಗಳ ಅಂಶದಿಂದ ಜನಿಸುವರು. ಕರ್ಣನು ಸೂರ್ಯನ ಅಂಶದಿಂದ ಹುಟ್ಟಿ ವೀರನಾಗುವನು. ಯಮನು ತನ್ನ ಅಂಶದಿಂದ ವಿದುರನಾಗಿ ಹುಟ್ಟುವನು.

೧೮೧ ಕಲಿಪುರುಷನ ಅಂಶದಿಂದ ದುರ್ಯೋಧನನೂ, ಸಮುದ್ರರಾಜನ ಅಂಶದಿಂದ ಶಂತನುವೂ, ಶಂಕರನ ಅಂಶದಿಂದ ಅಶ್ವತ್ಥಾಮನೂ, ಅಗ್ನಿಯ ಅಂಶದಿಂದ ದ್ರೋಣಾಚಾರ್ಯನೂ ಜನಿಸುವನು.

ಹುತಾಶನಾಂಶೋ ಭಗವಾನ್ಧೃಷ್ಟದ್ಯುಮ್ನೋ ಮಹಾಬಲಃ ।
ಚಂದ್ರಾಂಶೋಽಪ್ಯಭಿಮನ್ಯುಶ್ಚ ಭೀಷ್ಮಶ್ಚೈವ ವಸೂದ್ಭವಃ ॥ ೧೮೨ ॥

ವಸುದೇವಃ ಕಶ್ಯಪಾಂಶೋಽಪ್ಯದಿತ್ಯಂಶಾ ಚ ದೇವಕೀ ।
ವಸ್ವಂಶೋ ನಂದಗೋಪಶ್ಚ ಯಶೋದಾ ವಸುಕಾಮಿನೀ ॥ ೧೮೩ ॥

ದ್ರೌಪದೀ ಕಮಲಾಂಶಾ ಚ ಯಜ್ಞಕುಂಡಸಮುದ್ಭವಾ ।
ಸುಭದ್ರಾ ಶತರೂಪಾಂಶಾ ದೇವಕೀಗರ್ಭಸಂಭವಾ ॥ ೧೮೪ ॥

ದೇವಾ ಗಚ್ಛಂತು ಪೃಥಿವೀಮಂಶೇನ ಭಾರಹಾರಕಾಃ ।
ಕಲಯಾ ದೇವಪತ್ನ್ಯಶ್ಚ ಗಚ್ಛಂತು ಪೃಥಿವೀತಲಂ ॥ ೧೮೫ ॥

ಇತ್ಯೇವಮುಕ್ತ್ವಾ ಭಗವಾನ್ವಿರರಾಮ ಚ ನಾರದ ।
ಸರ್ವಂ ವಿವರಣಂ ಶ್ರುತ್ವಾ ತತ್ರೋವಾಸ ಪ್ರಜಾಪತಿಃ ॥ ೧೮೬ ॥

---

೧೮೨. ಮಹಾಬಲ ಪರಾಕ್ರಮಿಯಾಗುವ ಧೃಷ್ಟದ್ಯುಮ್ನನೂ ಅಗ್ನಿದೇವನ ಅಂಶದಿಂದಲೇ ಜನಿಸುವನು. ಚಂದ್ರನ ಅಂಶದಿಂದ ಅಭಿಮನ್ಯುವೂ, ಅಷ್ಟವಸುಗಳ ಅಂಶದಿಂದ ಭೀಷ್ಮನೂ ಜನಿಸುವರು.

೧೮೩. ವಸುದೇವನು ಕಶ್ಯಪನ ಅಂಶದಿಂದಲೂ, ದೇವಕಿಯು ಅದಿತಿಯ ಅಂಶದಿಂದಲೂ ಜನಿಸುವರು. ವಸುವಿನ ಅಂಶದಿಂದ ನಂದಗೋಪನೂ, ವಸುಪತ್ನಿಯ ಅಂಶದಿಂದ ಯಶೋದೆಯೂ ಜನಿಸುವರು.

೧೮೪. ದ್ರೌಪದಿಯು ಲಕ್ಷ್ಮೀದೇವಿಯ ಅಂಶದಿಂದ ಯಜ್ಞಕುಂಡದಲ್ಲಿ ಜನಿಸುವಳು. ದೇವಕಿಯ ಗರ್ಭದಲ್ಲಿ ಶತರೂಪೆಯ ಅಂಶದಿಂದ ಸುಭದ್ರೆಯು ಜನಿಸುವಳು.

೧೮೫. ದೇವತೆಗಳೆಲ್ಲರೂ ಭೂಭಾರಹರಣಕ್ಕಾಗಿ ತಮ್ಮೊಡೊಂದಂಶದಿಂದ ಭೂಮಿಯಲ್ಲಿ ಅವತರಿಸಲಿ. ದೇವಪತ್ನಿಯರೂ ಕೂಡ ತಮ್ಮ ಕಲೆಯಿಂದ ಭೂಮಂಡಲಕ್ಕೆ ಹೋಗಲಿ.

೧೮೬. ಎಲೈ ನಾರದನೇ, ಭಗವಂತನು ಹೀಗೆ ಹೇಳಿ ಸುಮ್ಮನಾಗಲು, ಆ ವಿವರಣೆಯನ್ನೆಲ್ಲ ಕೇಳಿ ಬ್ರಹ್ಮನು ಚಕಿತನಾಗಿ ಅಲ್ಲಿಯೇ ಕುಳಿತನು.

ಕೃಷ್ಣಸ್ಯ ವಾಮೇ ವಾಗ್ದೇವೀ ದಕ್ಷಿಣೇ ಕಮಲಾಲಯಾ ।
ಪುರತೋ ದೇವತಾಃ ಸರ್ವಾಃ ಪಾರ್ವತೀ ಚಾಪಿ ನಾರದ ॥ ೧೮೭ ॥

ಗೋಪ್ಯೋ ಗೋಪಾಶ್ಚ ಪರಿತೋ ರಾಧಾ ವಕ್ಷಃಸ್ಥಲಸ್ಥಿತಾ ।
ಏತಸ್ಮಿನ್ನಂತರೇ ಸಾ ಚ ತಮುವಾಚ ವ್ರಜೇಶ್ವರೀ ॥ ೧೮೮ ॥

॥ ರಾಧಿಕೋವಾಚ ॥

ಶೃಣು ನಾಥ ಪ್ರವಕ್ಷ್ಯಾಮಿ ಕಿಂಕರೀ ವಚನಂ ಪ್ರಭೋ ।
ಪ್ರಾಣಾ ದಹಂತಿ ಸತತಮಾಂದೋಲಯತಿ ಮೇ ಮನಃ ॥ ೧೮೯ ॥

ಚಕ್ಷುರ್ನಿಮೀಲನಂ ಕರ್ತುಮಶಕ್ತಾ ತವ ದರ್ಶನೇ ।
ತ್ವಯಾ ವಿನಾ ಕಥಂ ನಾಥ ಯಾಸ್ಯಾಮಿ ಧರಣೀತಲಂ ॥ ೧೯೦ ॥

ಕಿಯತ್ಕಾಲಾಂತರೇಣೈವ ಮೇಲನಂ ಮೇ ತ್ವಯಾ ಸಹ ।
ಪ್ರಾಣೇಶ್ವರ ಬ್ರೂಹಿ ಸತ್ಯಂ ಭವಿಷ್ಯತ್ಯೇವ ಗೋಕುಲೇ ॥ ೧೯೧ ॥

---

೧೮೭. ಶ್ರೀಕೃಷ್ಣನ ಎಡಭಾಗದಲ್ಲಿ ಸರಸ್ವತಿಯೂ, ಬಲಪಾರ್ಶ್ವದಲ್ಲಿ ಲಕ್ಷ್ಮೀದೇವಿಯೂ, ಮುಂಭಾಗದಲ್ಲಿ ಸಕಲದೇವತೆಗಳೂ ಮತ್ತು ಪಾರ್ವತಿಯೂ ಕುಳಿತರು.

೧೮೮. ಗೋಪಗೋಪಿಯರು ಸುತ್ತಲೂ ಕುಳಿತಿದ್ದರು. ವ್ರಜೇಶ್ವರಿಯಾದ ರಾಧಾದೇವಿಯು ಶ್ರೀಕೃಷ್ಣನನ್ನು ಕುರಿತಿಂತೆಂದಳು.

೧೮೯ ರಾಧಿಕಾ:—ಎಲೈ ನಾಥನೇ, ಸೇವಕಿಯಾದ ನನ್ನ ನುಡಿಗಳನ್ನಾಲಿಸು. ನಿನ್ನ ವಿರಹವನ್ನು ಕಲ್ಪಿಸಿಕೊಂಡು ನನ್ನ ಪ್ರಾಣಗಳು ದಹಿಸಿಹೋಗುತ್ತಿವೆ. ನನ್ನ ಮನಸ್ಸು ಬಹಳ ಚಂಚಲವಾಗಿದೆ.

೧೯೦. ನಿನ್ನ ದರ್ಶನವನ್ನು ಬಿಟ್ಟು ಕಣ್ಣುಮುಚ್ಚಿಕೊಳ್ಳಲೂ ಅಶಕ್ತಳಾಗಿರುವ ನಾನು, ನಿನ್ನನ್ನು ಬಿಟ್ಟು ಒಬ್ಬಳೇ ಹೇಗೆ ಭೂಮಂಡಲಕ್ಕೆ ಹೋಗಲಿ

೧೯೧. ಎಷ್ಟುಕಾಲ ಕಳೆದನಂತರ ನಮ್ಮಿಬ್ಬರಿಗೂ ಪುನಃ ಸಂಗಮವಾಗುವುದು. ಎಲೈ ಪ್ರಾಣನಾಥನೇ, ನೀನು ಗೋಕುಲದಲ್ಲಿ ಸತ್ಯವಾಗಿಯೂ ಅವತರಿಸುವೆಯೋ ಎಂಬುದನ್ನು ಹೇಳು.

ನಿಮೇಷಂ ಚ ಯುಗಶತಂ ಭವಿತಾ ಮೇ ತ್ವಯಾ ವಿನಾ ।
ಕಂ ದ್ರಕ್ಷ್ಯಾಮಿ ಕ್ವ ಯಾಸ್ಯಾಮಿ ಕೋವಾ ಮಾಂ ಪಾಲಯಿಷ್ಯತಿ ॥ ೧೯೨ ॥

ಮಾತರಂ ಪಿತರಂ ಬಂಧುಂ ಭ್ರಾತರಂ ಭಗಿನೀಂ ಸುತಂ ॥
ತ್ವಯಾ ವಿನಾಹಂ ಪ್ರಾಣೇಶ ಚಿಂತಯಾಮಿ ನ ಕಂಚನ ॥ ೧೯೩ ॥

ಕರೋಷಿ ಮಾಯಯಾ ಛನ್ನಾಂ ಮಾಂ ಚೇನ್ಮಾಯೇಶ ಭೂತಲೇ ।
ವಿಸ್ಮೃತಾಂ ವಿಭವಂ ದತ್ವಾ ಸತ್ಯಂ ಮೇ ಶಪಥಂ ಕುರು ॥ ೧೯೪ ॥

ಅನುಕ್ಷಣಂ ಮಮ ಮನೋ ಮಧುಪೋ ಮಧುಸೂದನ ।
ಕರೋತು ಭ್ರಮಣಂ ನಿತ್ಯಂ ಸಮಾಧ್ವೀಕೇ ಪದಾಂಬುಜೇ ॥ ೧೯೫ ॥

ಯತ್ರ ಯತ್ರ ಚ ಯಸ್ಯಾಂ ವಾ ಯೋನೌ ಜನ್ಮ ಭವತ್ವಿದಂ ।
ತ್ವಂ ಸ್ವಸ್ಯ ಸ್ಮರಣಂ ದಾಸ್ಯಂ ಮಹ್ಯಂ ದಾಸ್ಯಸಿ ವಾಂಛಿತಂ ॥ ೧೯೬ ॥

---

೧೯೨. ನಿನ್ನನ್ನಗಲಿದ ನನಗೆ ಒಂದು ನಿಮಿಷವೂ ನೂರಾರು ಯುಗದಂತೆ ದೀರ್ಘವಾಗಿ ತೋರುವುದು. ಯಾರನ್ನು ನೋಡಲಿ ಎಲ್ಲಿಗೆ ಹೋಗಲಿ. ನನ್ನನ್ನು ಕಾಪಾಡುವವರಾರು.

೧೯೩. ಎಲೈ ಪ್ರಾಣನಾಥನೇ, ನಿನ್ನನ್ನುಳಿದ ನನಗೆ ತಾಯಿತಂದೆಗಳಾಗಲೀ, ಬಂಧುಬಳಗವಾಗಲೀ, ಸಹೋದರ ಸಹೋದರಿಯರಾಗಲೀ, ಮಕ್ಕಳಾಗಲೀ, ಆಪ್ತರಾಗುವುದಿಲ್ಲ.

೧೯೪. ಎಲೈ ಮಾಯಾಪತಿಯೇ, ಭೂಮಂಡಲದಲ್ಲಿ ನನಗೆ ಯಥೇಚ್ಛವಾದ ವೈಭವವನ್ನು ಕೊಟ್ಟು ಮಾಯೆಯಿಂದ ಆವೃತಳನ್ನಾಗಿ ಮಾಡಬೇಡ. ನನ್ನ ಈ ಬೇಡಿಕೆಯನ್ನು ಸಫಲಗೊಳಿಸು.

೧೯೫. ಎಲೈ ಮಧುಸೂದನನೇ, ನನ್ನ ಮನಸ್ಸೆಂಬ ಭ್ರಮರವು ಅನವರತವೂ ನಿನ್ನ ಮಕರಂದಪರಿಪೂರ್ಣವಾದ ಪಾದಕಮಲಗಳಲ್ಲಿ ಭ್ರಮಣಮಾಡುತ್ತಿರಲಿ

೧೯೬. ಯಾವ ದೇಶದಲ್ಲಾಗಲೀ, ಯಾವ ಯೋನಿಯಲ್ಲಾಗಲೀ ನನಗೆ ಜನ್ಮವುಂಟಾದರೂ ನನ್ನ ಇಷ್ಟಾರ್ಥವಾದ ನಿನ್ನ ಸ್ಮರಣೆಯನ್ನೂ, ದಾಸ್ಯವನ್ನು ನೀನು ಅನುಗ್ರಹಿಸು.

ಕೃಷ್ಣಸ್ತ್ವಂ ರಾಧಿಕಾಹಂ ಚ ಪ್ರೇಮಸೌಭಾಗ್ಯಮಾವಯೋಃ ।
ನ ವಿಸ್ಮರಾಮಿ ಭೂಮೌ ಚ ದೇಹಿ ಮಹ್ಯಂ ವರಂ ಪರಂ ॥ ೧೯೭ ॥

ಯಥಾ ತನ್ವಾ ಸಹ ಪ್ರಾಣಾಃ ಶರೀರಂ ಛಾಯಯಾ ಸಹ ।
ತಥಾವಯೋರ್ಜನ್ಮ ಯಾತು ದೇಹಿ ಮಹ್ಯಂ ವರಂ ವಿಭೋ ॥ ೧೯೮ ॥

ಚಕ್ಷುರ್ನಿಮೇಷವಿಚ್ಛೇದೋ ಭವಿತಾ ನಾವಯೋರ್ಭುವಿ ।
ತತ್ರಾಗತ್ಯಾಪಿ ಕುತ್ರಾಪಿ ದೇಹಿ ಮಹ್ಯಂ ವರಂಪ್ರಭೋ ॥ ೧೯೯ ॥

ಮಮ ಪ್ರಾಣೈಸ್ತವ ತನುಃ ಕೇನ ವಾ ಕರುಣಾ ಹರೇ ।
ಆತ್ಮನಾ ಮುರಳೀ ಪಾದೌ ಮನಸಾ ವಾ ವಿನಿರ್ಮಿತಾ ॥ ೨೦೦ ॥

ಸ್ತ್ರಿಯಃ ಕತಿ ವಿಧಾಃ ಸಂತಿ ಪುರುಷಾ ವಾ ಪುರುಷೋತ್ತಮ ।
ನಾಸ್ತಿ ಕುತ್ರಾಪಿ ಕಾಂತೋ ವಾ ಕಾಂತ್ಯಾ ಶಕ್ತ್ಯಾ ಚ ಮಾದೃಶೀ ॥ ೨೦೧ ॥

---

೧೯೭. ರಾಧಾಕೃಷ್ಣರ ಪ್ರೇಮಸೌಭಾಗ್ಯವೆಂಬುದು ಜಗತ್ತಿಗೇ ಆದರ್ಶವಾಗಿರುವುದು. ಭೂಮಿಯಲ್ಲಿದ್ದರೂ ನಾನು ನಿನ್ನನ್ನು ಮರೆಯದಂತೆ ವರವನ್ನು ಅನುಗ್ರಹಿಸು.

೧೯೮. ಶರೀರದೊಡನೆ ಪ್ರಾಣವೂ, ದೇಹವು ಹೋದಕಡೆ ನೆರಳೂ ಎಡಬಿಡದಿರುವಂತೆ ನಮ್ಮಿಬ್ಬರ ಜನ್ಮವೂ ಎಡಬಿಡದೆ ಜತೆಯಲ್ಲಿಯೇ ಇರಲಿ. ಈ ವರವನ್ನು ನನಗೆ ಅನುಗ್ರಹಿಸು.

೧೯೯. ಭೂಲೋಕದಲ್ಲಿ ನಾವು ಎಲ್ಲಿ ಜನ್ಮವೆತ್ತಿದರೂ ಕೂಡ ರೆಪ್ಪೆಹೊಡೆಯುವಷ್ಟು ಕಾಲವೂ ನಮಗೆ ವಿರಹವುಂಟಾಗದಂತೆ ನನಗೆ ವರಪ್ರದಾನ ಮಾಡು.

೨೦೦. ಎಲೈ ಹರಿಯೇ, ನಿನ್ನ ಶರೀರದಲ್ಲಿ ನನ್ನ ಪ್ರಾಣವಿರುವುದನ್ನು ಯಾರು ತಾನೆ ನಿವಾರಿಸಬಲ್ಲರು? ನಿನ್ನ ಕೊಳಲಿನಲ್ಲೇ ನನ್ನ ಆತ್ಮವೂ, ನಿನ್ನ ಪಾದಗಳಲ್ಲೇ ನನ್ನ ಮನಸ್ಸೂ ನೆಲೆಗೊಂಡಿವೆ.

೨೦೧. ಎಲೈ ಪುರುಷೋತ್ತಮನೇ, ಸ್ತ್ರೀಪುರುಷರು ಅನೇಕ ವಿಧವಾಗಿದ್ದಾರೆ. ಆದರೆ ನನ್ನಂಥಾ ಶಕ್ತಿರೂಪಿಣಿಯಾದ ಕಾಂತೆಯೊಡಗೂಡಿದ ಕಾಂತನು ನಿನ್ನನ್ನು ಬಿಟ್ಟು ಬೇರಾರೂ ಇಲ್ಲ.

ತವ ದೇಹಾರ್ಧಭಾಗೇನ ಕೇನ ವಾಹಂ ವಿನಿರ್ಮಿತಾ ।
ಅಯಮೇವಾವಯೋರ್ಭೇದೋ ನಾಸ್ತ್ಯತಸ್ತ್ವಯಿ ಮೇ ಮನಃ ॥ ೨೦೨ ॥

ಮಮಾತ್ಮಾ ಮಾನಸಂ ಪ್ರಾಣಾಸ್ತ್ವಯಿ ಸಂಸ್ಥಾಪಿತಾ ಯಥಾ ।
ತವಾತ್ಮಮಾನಸಪ್ರಾಣಾ ಮಯಿ ವಾ ಸಂಸ್ಥಿತಾಸ್ತಥಾ ॥ ೨೦೩ ॥

ಅತೋ ನಿಮೇಷವಿರಹಾದಾತ್ಮನೋರ್ವಿಕ್ಲವಂ ಮನಃ ।
ಪ್ರದಗ್ಧಂ ಸಂತತಂ ಪ್ರಾಣಾ ದಹಂತಿ ವಿರಹಶ್ರುತೌ ॥ ೨೦೪ ॥

ಇತ್ಯೇವಮುಕ್ತ್ವಾ ಸಾ ದೇವೀ ತತ್ರೈವ ಸುರಸಂಸದಿ ।
ಭೂಯೋ ಭೂಯೋ ರುರೋದೋಚ್ಚೈರ್ಧೃತ್ವಾ ತಚ್ಚರಣಾಂಬುಜಂ ॥

ಕ್ರೋಡೇ ಕೃತ್ವಾ ತು ತಾಂ ಕೃಷ್ಣೋ ಮುಖಂ ಸಂಮೃಜ್ಯ ವಾಸಸಾ ।
ಬೋಧಯಾಮಾಸ ವಿವಿಧಂ ಸತ್ಯಂ ತಥ್ಯಂ ಹಿತಂ ವಚಃ ॥ ೨೦೬ ॥

---

೨೦೨ ನಿನ್ನ ದೇಹದ ಅರ್ಧಭಾಗದಿಂದ ನನ್ನನ್ನು ಸೃಜಿಸಿದವನು ನೀನಲ್ಲವೆ ಮತ್ತಾರು? ನಮ್ಮಿಬ್ಬರ ಶರೀರವು ಮಾತ್ರ ಭಿನ್ನವಾಗಿರುವುದೇ ಹೊರತು ಆತ್ಮವು ಭಿನ್ನವಲ್ಲ. ನಿನ್ನನ್ನುಳಿದು ನನ್ನ ಮನಸ್ಸು ಬೇರೆಯಿಲ್ಲ.

೨೦೩. ನನ್ನ ಆತ್ಮ ಮನಸ್ಸು ಮತ್ತು ಪ್ರಾಣಗಳು ನಿನ್ನಲ್ಲಿ ಹೇಗೆ ಇವೆಯೋ ಹಾಗೆಯೇ, ನಿನ್ನ ಆತ್ಮ ಮನಸ್ಸು ಮತ್ತು ಪ್ರಾಣಗಳು ನನ್ನಲ್ಲಿ ಐಕ್ಯವಾಗಿವೆ.

೨೦೪. ಆದುದರಿಂದಲೇ ಒಂದು ನಿಮಿಷ ವಿರಹವುಂಟಾದರೂ ನನ್ನ ಮನಸ್ಸು ಚಂಚಲವಾಗುವುದು. ವಿರಹ ಶಬ್ದವನ್ನು ಕೇಳಿದ ಮಾತ್ರದಿಂದಲೇ ನನ್ನ ಮನಸ್ಸೂ ಪ್ರಾಣಗಳೂ ದಹಿಸಿಹೋಗುತ್ತಿವೆ.

೨೦೫. ಈ ರೀತಿಯಾಗಿ ಆ ರಾಧಾದೇವಿಯು ದೇವತೆಗಳ ಸಭೆಯಲ್ಲಿ ನುಡಿದು ಶ್ರೀಕೃಷ್ಣನ ಪಾದಕಮಲಗಳನ್ನು ಹಿಡಿದು ಮತ್ತೆ ಮತ್ತೆ ಗಟ್ಟಿಯಾಗಿ ಅಳಲಾರಂಭಿಸಿದಳು.

೨೦೬. ಆಗ ಶ್ರೀಕೃಷ್ಣನು ಆಕೆಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬಟ್ಟೆಯಿಂದ ಕಣ್ಣೀರನ್ನು ಒರೆಸಿ, ಸತ್ಯವಾದ ಅನೇಕ ಹಿತನುಡಿಗಳನ್ನಾಡಿ ಸಮಾಧಾನಪಡಿಸಿದನು.

|| ಶ್ರೀಕೃಷ್ಣ ಉವಾಚ ||

ಆಧ್ಯಾತ್ಮಿಕಂ ಪರಂ ಯೋಗಂ ಶೋಕಚ್ಛೇದನಕಾರಕಂ |
ಶೃಣು ದೇವಿ ಪ್ರವಕ್ಷ್ಯಾಮಿ ಯೋಗೀಂದ್ರಾಣಾಂ ಚದುರ್ಲಭಂ || ೨೦೭ ||

ಆಧಾರಾಧೇಯಯೋಃ ಸರ್ವಂ ಬ್ರಹ್ಮಾಂಡಂ ಪಶ್ಯ ಸುಂದರಿ |
ಆಧಾರವ್ಯತಿರೇಕೇಣ ನಾಸ್ತ್ಯಾಧೇಯಸ್ಯ ಸಂಭವಃ || ೨೦೮ ||

ಫಲಾಧಾರಂ ಚ ಪುಷ್ಪಂ ಚ ಪುಷ್ಪಾಧಾರಂ ಚ ಪಲ್ಲವಂ |
ಸ್ಕಂಧಶ್ಚ ಪಲ್ಲವಾಧಾರಃ ಸ್ಕಂಧಾಧಾರಸ್ತರುಃ ಸ್ವಯಂ || ೨೦೯ ||

ವೃಕ್ಷಾಧಾರೋಽಪ್ಯಂಕುರಶ್ಚ ಜೀವಶಕ್ತಿಸಮನ್ವಿತಃ |
ಅಷ್ಟಿರೇಕಾಂಕುರಾಧಾರಶ್ಚಾಷ್ಟ್ಯಾಧಾರೋ ವಸುಂಧರಾ || ೨೧೦ ||

ಶೇಷೋ ವಸುಂಧರಾಧಾರಃ ಶೇಷಾಧಾರೋಽಹಿ ಕಚ್ಛಪಃ |
ವಾಯುಶ್ಚ ಕಚ್ಛಪಾಧಾರೋ ವಾಯ್ವಾಧಾರೋಽಹಮೇವ ಚ || ೨೧೧ ||

---

೨೦೭ ಶ್ರೀಕೃಷ್ಣ :—ಎಲೌ ದೇವಿಯೇ ನಿನ್ನ ದುಃಖನಾಶಕ್ಕೆ ಕಾರಣವೂ, ಯೋಗೀಂದ್ರರಿಗೆ ದುರ್ಲಭವೂ ಆದ ಆಧ್ಯಾತ್ಮಿಕಯೋಗವನ್ನು ಪದೇಶಿಸುವೆನು ಕೇಳು.

೨೦೮ ಎಲೌ ಸುಂದರಿಯೇ, ಸಮಸ್ತವಾದ ಆಧೇಯವಸ್ತುಗಳಿಗೂ ಬ್ರಹ್ಮಾಂಡವು, ಆಧಾರವಾಗಿದೆ. ಆಧಾರವಿಲ್ಲದಿದ್ದರೆ ಆಧೇಯವಿರುವಂತೆಯೇ ಇಲ್ಲ.

೨೦೯. ಹಣ್ಣಿಗೆ ಹೂವು ಆಧಾರ ಹೂವಿಗೆ ಚಿಗುರು ಆಧಾರ. ಕೊಂಬೆಯು ಚಿಗುರಿಗೆ ಆಧಾರ. ಕೊಂಬೆಗೆ ಮರವೇ ಆಧಾರ.

೨೧೦. ಅಂಥ ಮರಕ್ಕೆ ಜೀವಶಕ್ತಿಸಹಿತವಾದ ಮೊಳಕೆಯೇ ಆಧಾರ ಆ ಬೀಜಕ್ಕೆ ವಸುಂಧರೆಯೇ ಆಧಾರ.

೨೧೧. ಆ ವಸುಂಧರೆಗೆ ಆದಿಶೇಷನೂ, ಆದಿಶೇಷನಿಗೆ ಆದಿಕೂರ್ಮನೂ ಆದಿಕೂರ್ಮನಿಗೆ ವಾಯುವೂ, ವಾಯುವಿಗೆ ನಾನೂ ಕ್ರಮವಾಗಿ ಆಧಾರ, ವೆನಿಸಿರುವೆವು.

ಮಮಾಧಾರಸ್ವರೂಪಾ ತ್ವಂ ತ್ವಯಿ ತಿಷ್ಠಾಮಿ ಸಾಂಪ್ರತಂ ।
ತ್ವಂ ಚ ಶಕ್ತಿಸಮೂಹಾ ಚ ಮೂಲಪ್ರಕೃತಿರೀಶ್ವರೀ ॥ ೨೧೨ ॥

ತ್ವಂ ಶರೀರಸ್ವರೂಪಾsಸಿ ತ್ರಿಗುಣಾಧಾರರೂಪಿಣೀ ।
ತವಾತ್ಮಾಹಂ ನಿರೀಹಶ್ಚ ಚೇಷ್ಟಾವಾಂಶ್ಚ ತ್ವಯಾ ಸಹ ॥ ೨೧೩ ॥

ಪುರುಷಾದ್ವೀರ್ಯಮುತ್ಪನ್ನಂ ವೀರ್ಯಾತ್ಸಂತತಿರೇವ ಚ ।
ತಯೋರಾಧಾರರೂಪಾ ಚ ಕಾಮಿನೀ ಪ್ರಕೃತೇಃ ಕಲಾ ॥ ೨೧೪ ॥

ವಿನಾ ದೇಹೇನ ಕ್ವಾತ್ಮಾ ಚ ಕ್ವ ಶರೀರಂ ವಿನಾತ್ಮನಾ ।
ಪ್ರಾಧಾನ್ಯಂ ಚ ತಯೋರ್ದೇವಿ ವಿನಾ ತ್ವಾದ್ಯಾಂ ಕುತೋ ಭವಃ ॥ ೨೧೫ ॥

---

೨೧೨. ನೀನು ನನಗೆ ಆಧಾರಸ್ವರೂಪಳಾದುದರಿಂದ ಈಗ ನಿನ್ನಲ್ಲಿಯೇ ನಾನಿರುವೆನು. ಶಕ್ತಿಸಮೂಹದಿಂದ ಸಮನ್ವಿತಳಾದ ನೀನೇ ಮೂಲಪ್ರಕೃತಿಯೆನಿಸಿರುವೆ

೨೧೩. ಸತ್ವ, ರಜಸ್ಸು ಮತ್ತು ತಮಸ್ಸೆಂಬ ಗುಣತ್ರಯಗಳಿಗೆ ಆಧಾರರೂಪಿಣಿಯಾದ ನೀನೇ ನನ್ನ ಶರೀರಳಾಗಿರುವೆ. ನಿರೀಹನಾದ ನಾನೇ ನಿನ್ನ ಆತ್ಮನಾಗಿರುವೆನು. ನಿನ್ನೊಡಗೂಡಿದರೆ ನಾನು ಚಲನವಲನಾದಿಗಳನ್ನು ಪಡೆಯುವೆನು

೨೧೪. ಪುರುಷನಿಂದ ವೀರ್ಯವೂ, ವೀರ್ಯದಿಂದ ಸಂತತಿಯೂ, ಉತ್ಪನ್ನವಾಗುವುದು. ಪ್ರಕೃತಿಯ ಕಲೆಯಿಂದ ಜನಿಸಿದ ಸ್ತ್ರೀಯು ವೀರ್ಯ ಮತ್ತು ಸಂತತಿಗೆ ಆಧಾರಳಾಗಿರುವಳು.

೨೧೫. ದೇಹವಿಲ್ಲದ ಆತ್ಮವಾಗಲೀ, ಆತ್ಮವಿಲ್ಲದ ದೇಹವಾಗಲೀ ಶೋಭಿಸಲಾರದು. ಎಲೌ ದೇವಿಯೇ ದೇಹಾತ್ಮಗಳೆರಡಕ್ಕೂ ಸಮಪ್ರಧಾನ್ಯವುಂಟು ಇಂದು ನೀನಿಲ್ಲದಿದ್ದರೆ ಸಂಸಾರವೆಲ್ಲಿತ್ತು ?

ನ ಕುತ್ರಾಪ್ಯಾವಯೋರ್ಭೇದೋ ರಾಧೇ ಸಂಸಾರಬೀಜಯೋಃ ।
ಯತ್ರಾತ್ಮಾ ತತ್ರ ದೇಹಂ ಚ ನ ಭೇದೋ ವಿನಯೇನ ಕಿಂ    ॥ ೨೧೬ ॥

ಯಥಾ ಕ್ಷೀರೇ ಚ ಧಾವಲ್ಯಂ ದಾಹಿಕಾ ಚ ಹುತಾಶನೇ ।
ಭೂಮೌ ಗಂಧೋ ಜಲೇ ಶೈತ್ಯಂ ತಥಾ ತ್ವಯಿ ಮಯಿ ಸ್ಥಿತೇ    ॥ ೨೧೭ ॥

ಧಾವಲ್ಯದುಗ್ಧಯೋರೈಕ್ಯಂ ದಾಹಿಕಾನಲಯೋರ್ಯಥಾ ।
ಭೂಗಂಧಜಲಶೈತ್ಯಾನಾಂ ನಾಸ್ತಿ ಭೇದಸ್ತಥಾಽಽವಯೋಃ    ॥ ೨೧೮ ॥

ಮಯಾ ವಿನಾ ತ್ವಂ ನಿರ್ಜೀವಾ ಚಾದೃಶ್ಯೋಽಹಂ ತ್ವಯಾ ವಿನಾ ।
ತ್ವಯಾ ವಿನಾ ಭವಂ ಕರ್ತುಂ ನಾಲಂ ಸುಂದರಿ ನಿಶ್ಚಿತಂ    ॥ ೨೧೯ ॥

ವಿನಾ ಮೃದಾ ಘಟಂ ಕರ್ತುಂ ಯಥಾ ನಾಲಂ ಕುಲಾಲಕಃ ।
ವಿನಾ ಸ್ವರ್ಣಂ ಸ್ವರ್ಣಕಾರೋಽಲಂಕಾರಂ ಕರ್ತುಮಕ್ಷಮಃ    ॥ ೨೨೦ ॥

---

೨೧೬. ಎಲೌ ರಾಧೆಯೇ, ಸಂಸಾರಬೀಜಸ್ವರೂಪರಾದ ನಮ್ಮಿಬ್ಬರಿಗೆ ಎಲ್ಲಿಯೂ ಭೇದವಿಲ್ಲ. ಆತ್ಮವೆಲ್ಲಿರುವುದೋ ದೇಹವೂ ಅಲ್ಲಿಯೇ ಇರುವುದು. ಇದು ಸುಳ್ಳಲ್ಲ. ಇದಕ್ಕಾಗಿ ವ್ಯಥೆಪಡಬೇಡ.

೨೧೭ ಹಾಲಿನಲ್ಲಿ ಬಿಳುಪೂ, ಅಗ್ನಿಯಲ್ಲಿ ದಾಹಶಕ್ತಿಯೂ, ಭೂಮಿಯಲ್ಲಿ ಗಂಧವೂ, ನೀರಿನಲ್ಲಿ ಶೈತ್ಯವೂ ಸಮವಾಯಸಂಬಂಧದಿಂದಿರುವಂತೆ ನಮ್ಮಿಬ್ಬರಲ್ಲಿ ದೇಹಾತ್ಮಗಳು ಅಭಿನ್ನವಾಗಿರುವುವು.

೨೧೮. ಹಾಲು ಮತ್ತು ಅದರ ಬಿಳುಪಿಗೂ, ಅಗ್ನಿ ಮತು ಅದರ ದಾಹ ಶಕ್ತಿಗೂ, ಭೂಮಿ ಮತ್ತು ಗಂಧಕ್ಕೂ, ನೀರು ಮತ್ತು ಶೈತ್ಯಕ್ಕೂ ಭೇದವಿಲ್ಲದಿರುವಂತೆ ನಮ್ಮಿಬ್ಬರಿಗೂ ಭೇದವಿಲ್ಲ.

೨೧೯. ನಾನಿಲ್ಲದಿದ್ದರೆ ನೀನು ನಿರ್ಜೀವಳು. ನೀನಿಲ್ಲದಿದ್ದರೆ ನಾನು ಅದೃಶ್ಯ ನೆನಿಸುವೆನು. ನೀನಿಲ್ಲದಿದ್ದರೆ ನಾನು ಸಂಸಾರವನ್ನು ಸೃಜಿಸಲಾರೆನೆಂಬುದು ನಿಶ್ಚಯವಾಗಿರುವುದು.

೨೨೦. ಕುಂಬಾರನು ಮಣ್ಣಿಲ್ಲದೆ ಹೇಗೆ ಗಡಿಗೆಯನ್ನು ಮಾಡಲಸಮರ್ಥ ನಾಗುವನೋ, ಅಕ್ಕಸಾಲೆಯು ಚಿನ್ನವಿಲ್ಲದೆ ಒಡವೆಯನ್ನು ಮಾಡಲು ಹೇಗೆ ಅಶಕ್ತ ನಾಗುವನೋ ಹಾಗೆ ನೀನಿಲ್ಲದೆ ನಾನೊಬ್ಬನೇ ಜಗತ್ತನ್ನು ಸೃಜಿಸಲಶಕ್ತನಾಗುವೆನು.

ಸ್ವಯಮಾತ್ಮಾ ಯಥಾ ನಿತ್ಯಸ್ತಥಾ ತ್ವಂ ಪ್ರಕೃತಿಃ ಸ್ವಯಂ ।
ಸರ್ವಶಕ್ತಿಸಮಾಯುಕ್ತಾ ಸರ್ವಾಧಾರಾ ಸನಾತನೀ ॥ ೨೨೦ ॥

ಮಮ ಪ್ರಾಣಸಮಾ ಲಕ್ಷ್ಮೀರ್ವಾಣೀ ಚ ಸರ್ವಮಂಗಲಾ ।
ಬ್ರಹ್ಮೇಶಾನಂತಧರ್ಮಾಶ್ಚ ತ್ವಂ ಮೇ ಪ್ರಾಣಾಧಿಕಾ ಪ್ರಿಯಾ ॥ ೨೨೨ ॥

ಸಮೀಪಸ್ಥಾ ಇಮೇ ಸರ್ವೇ ಸುರಾ ದೇವ್ಯಶ್ಚ ರಾಧಿಕೇ ।
ಏಭ್ಯೋಽಪ್ಯಭ್ಯಧಿಕಾ ನೋ ಚೇತ್ಕಥಂ ವಕ್ಷಃಸ್ಥಲಸ್ಥಿತಾ ॥ ೨೨೩ ॥

ತ್ಯಜಾಶ್ರುಮೋಕ್ಷಣಂ ರಾಧೇ ಭ್ರಾಂತಿಂ ಚ ನಿಷ್ಫಲಾಂ ಸತಿ ।
ವಿಹಾಯ ಶಂಕಾಂ ನಿಃಶಂಕಂ ವೃಷಭಾನುಗೃಹಂ ವ್ರಜ ॥ ೨೨೪ ॥

---

೨೨೧. ಆತ್ಮನು ಹೇಗೆ ನಿತ್ಯನೋ ಹಾಗೆ ಪ್ರಕೃತಿರೂಪಿಣಿಯಾದ ನೀನೂ ನಿತ್ಯಳು. ಸರ್ವಶಕ್ತಿಸಮನ್ವಿತಳೂ ಸರ್ವಾಧಾರಳೂ ಆದ ಅನಾದಿ ಪ್ರಕೃತಿಯೇ ನೀನಾಗಿರುವೆ.

೨೨೨. ಲಕ್ಷ್ಮೀ, ಸರಸ್ವತಿ, ಮತ್ತು ಪಾರ್ವತೀದೇವಿಯರೂ ಬ್ರಹ್ಮ, ಈಶ್ವರ, ಅನಂತ ಮತ್ತು ಧರ್ಮಪುರುಷರೂ ನನ್ನ ಪ್ರಾಣಕ್ಕೆ ಸದೃಶರು. ನೀನಾದರೋ ನನ್ನ ಪ್ರಾಣಕ್ಕಿಂತಲೂ ಅಧಿಕಪ್ರಿಯಳಾಗಿರುವೆ.

೨೨೩. ಎಲೌ ರಾಧಾದೇವಿಯೇ, ಎಲ್ಲ ದೇವತೆಗಳೂ ದೇವಿಯರೂ ನನ್ನ ಸುತ್ತಲೂ ಕುಳಿತಿರುವಾಗ ಇವರೆಲ್ಲರಿಗಿಂತಲೂ ನೀನು ನನಗೆ ಹೆಚ್ಚು ಪ್ರೀತಿಪಾತ್ರಳಾಗದಿದ್ದರೆ ನನ್ನ ವಕ್ಷಃಸ್ಥಳದಲ್ಲೇಕೆ ಕುಳಿತುಕೊಳ್ಳುತ್ತಿದ್ದೆ.

೨೨೪. ಆದುದರಿಂದ ಎಲೌ ಪತಿವ್ರತೆಯೇ, ಕಣ್ಣೀರು ಸುರಿಸುವುದನ್ನು ಬಿಟ್ಟು ನಿರರ್ಥಕವಾದ ಭ್ರಾಂತಿಯನ್ನು ದೂರಮಾಡು. ಭಯವನ್ನು ತ್ಯಜಿಸಿ ನಿಃಶಂಕಳಾಗಿ ವೃಷಭಾನುವಿನ ಮಂದಿರಕ್ಕೆ ಹೋಗುವವಳಾಗು.

**ಕಲಾವತ್ಯಾಶ್ಚ ಜಠರೇ ಮಾಸಾನಾಂ ನವ ಸುಂದರಿ |**
**ವಾಯುನಾ ಪೂರಯಿತ್ವಾ ಚ ಗರ್ಭಂ ರೋಧಯ ಮಾಯಯಾ || ೨೨೫ ||**

**ದಶಮೇ ಸಮನುಪ್ರಾಪ್ತೇ ತ್ವಮಾವಿರ್ಭವ ಭೂತಲೇ |**
**ಸ್ವಾತ್ಮರೂಪಂ ಪರಿತ್ಯಜ್ಯ ಶಿಶುರೂಪಂ ವಿಧಾಯ ಚ || ೨೨೬ ||**

**ವಾಯುನಿಃಸಾರಣೇ ಕಾಲೇ ಕಲಾವತ್ಯಾಃ ಸಮೀಪತಃ |**
**ಭೂಮೌ ವಿವಸನೀಭೂಯ ಪತಿತ್ವಾ ರೋದಿಷಿ ಧ್ರುವಂ || ೨೨೭ ||**

**ಅಯೋನಿಸಂಭವಾ ತ್ವಂ ಚ ಭವಿತಾ ಗೋಕುಲೇ ಸತಿ |**
**ಅಯೋನಿಸಂಭವೋಽಹಂ ಚ ನಾವಯೋರ್ಗರ್ಭಸಂಸ್ಥಿತಿಃ || ೨೨೮ ||**

**ಭೂಮಿಸಂಸ್ಪೃಷ್ಟಮಾತ್ರಂ ಮಾಂ ಗೋಕುಲೇ ಪ್ರಾಪಯಿಷ್ಯತಿ |**
**ತವ ಹೇತೋರ್ಗಮಿಷ್ಯಾಮಿ ಕೃತ್ವಾ ಕಂಸಭಯಂ ಛಲಂ || ೨೨೯ ||**

---

೨೨೫. ಎಲೌ ಸುಂದರಿಯೇ, ವೃಷಭಾನುವಿನ ಪತ್ನಿಯಾದ ಕಲಾವತಿಯ ಹೊಟ್ಟೆಯಲ್ಲಿ ಒಂಭತ್ತು ತಿಂಗಳುಕಾಲ ನಿನ್ನ ಮಾಯಾಮಹಿಮೆಯಿಂದ ವಾಯು ರೂಪದಿಂದ ತುಂಬಿಕೊಂಡಿರು.

೨೨೬. ಹತ್ತನೆಯ ತಿಂಗಳಲ್ಲಿ, ನಿನ್ನ ನಿಜಸ್ವರೂಪವನ್ನು ತೋರಿ ಶಿಶುರೂಪ ವನ್ನು ಧರಿಸಿ ಆಕೆಯ ಗರ್ಭದಿಂದ ಭೂತಲದಲ್ಲಿ ಆವಿರ್ಭವಿಸು.

೨೨೭ ಕಲಾವತಿಯ ಗರ್ಭದಿಂದ ವಾಯುವು ಹೊರಕ್ಕೆ ಬರುವಾಗ ನೀನು ದಿಗಂಬರಳಾಗಿ, ಶಿಶುರೂಪದಿಂದ ಭೂಮಿಯ ಮೇಲೆ ಗೋಳಾಡಲು ಪ್ರಾರಂಭಿಸು.

೨೨೮ ಎಲೌ ಸತಿಯೇ, ನೀನು ಗೋಕುಲದಲ್ಲಿ ಅಯೋನಿಜೆಯಾಗಿ ಆವಿರ್ಭವಿಸುವೆ. ನಾನೂ ಕೂಡ ಅಯೋನಿಜನಾಗುವೆನು ನಾವಿಬ್ಬರೂ ಎಂದೆಂದಿಗೂ ಗರ್ಭವಾಸ ಮಾಡುವಂತಿಲ್ಲ.

೨೨೯. ನಾನು ಭೂಸ್ಪರ್ಶಮಾಡಿದ ಮಾತ್ರದಿಂದಲೇ ವಸುದೇವನು ನನ್ನನ್ನು ಗೋಕುಲಕ್ಕೆ ಕರೆದೊಯ್ಯುವನು. ನಿನ್ನ ಸಲುವಾಗಿ ನಾನು ಕಂಸಭಯವನ್ನು ನೆಪ ಮಾಡಿಕೊಂಡು ಗೋಕುಲಕ್ಕೆ ಬರುವೆನು

**ಯಶೋದಾಮಂದಿರೇ ಮಾಂ ಚ ಸಾನಂದಂ ನಂದನಂದನಂ ।**
**ನಿತ್ಯಂ ದ್ರಕ್ಷ್ಯಸಿ ಕಲ್ಯಾಣಿ ಮಮಾಶ್ಲೇಷಣಪೂರ್ವಕಂ ॥ ೨೩೦ ॥**

**ಸ್ಮೃತಿಸ್ತೇ ಭವಿತಾ ಕಾಲೇ ವರೇಣ ಮಮ ರಾಧಿಕೇ ।**
**ಸ್ವಚ್ಛಂದಂ ವಿಹರಿಷ್ಯಾಮಿ ನಿತ್ಯಂ ವೃಂದಾವನೇ ವನೇ ॥ ೨೩೧ ॥**

**ತ್ರಿಃಸಪ್ತಶತಕೋಟೀಭಿರ್ಗೋಪೀಭಿರ್ಗೋಕುಲಂ ವ್ರಜ ।**
**ತ್ರಯಸ್ತ್ರಿಂಶದ್ವಯಸ್ಯಾಭಿಃ ಸುಶೀಲಾದಿಭಿರೇವ ಚ ॥ ೨೩೨ ॥**

**ಸಂಸ್ಥಾಪ್ಯ ಸಂಖ್ಯಾರಹಿತಾ ಗೋಪೀರ್ಗೋಕುಲ ಏವ ಚ ।**
**ತಾ ಆಶ್ವಾಸ್ಯ ಪ್ರಬೋಧೈಶ್ಚ ಮಿತಯಾ ಚ ಸುಧಾಗಿರಾ ॥ ೨೩೩ ॥**

---

೨೩೦. ಎಲೌ ಕಲ್ಯಾಣಿಯೇ, ಯಶೋದೆಯ ಮಂದಿರದಲ್ಲಿ ನಂದನಂದನನಾಗಿ ನೆಲಸುವ ನನ್ನನ್ನು ನೀನು ಆನಂದದಿಂದ ಆಲಂಗಿಸಿಕೊಂಡು ಕೃತಕೃತ್ಯಳಾಗುವೆ.

೨೩೧. ಎಲೌ ರಾಧೆಯೇ, ನನ್ನ ವರದಿಂದ ನಿನಗೆ ಕಾಲಾನುಗುಣವಾಗಿ ಜನ್ಮಾಂತರದ ಸ್ಮರಣೆಯುಂಟಾಗುವುದು. ನಾನು ನಿನ್ನೊಡನೆ ಪ್ರತಿದಿನವೂ ವೃಂದಾವನದಲ್ಲಿ ಸ್ವೇಚ್ಛೆಯಾಗಿ ವಿಹಾರಮಾಡುವೆನು.

೨೩೨. ಮುನ್ನೂರ ಮುವತ್ತು ಕೋಟಿ ಗೋಪಿಯರೊಡನೆಯೂ, ಸುಶೀಲೆಯೇ ಮುಂತಾದ ಮೂವತ್ತುಮೂರು ಆಪ್ತಗೆಳತಿಯರೊಡನೆಯೂ ನೀನು ಗೋಲೋಕಕ್ಕೆ ಹೋಗುವವಳಾಗು.

೨೩೩. ಆ ಅಸಂಖ್ಯ ಗೋಪಿಯರನ್ನೂ ಗೋಕುಲದಲ್ಲಿಯೇ ನೆಲೆಗೊಳ್ಳುವಂತೆ ಮಾಡಿ ಅವರನ್ನು ಹಿತನುಡಿಗಳಿಂದಲೂ, ಕಾಲಾನುಗುಣವಾದ ಉಪದೇಶಗಳಿಂದಲೂ ಸಮಾಧಾನಗೊಳಿಸು.

ಅಹಂ ಗೋಪಾಲಸುಹೃದಃ ಸಂಸ್ಥಾಪ್ಯಾತ್ರೈವ ರಾಧಿಕೇ ।
ವಸುದೇವಾಶ್ರಮಂ ಪಶ್ಚಾದ್ಯಾಸ್ಯಾಮಿ ಮಥುರಾಂ ಪುರೀಂ ॥ ೨೩೪ ॥

ವ್ರಜಂ ವ್ರಜಸ್ತು ಕ್ರೀಡಾರ್ಥಂ ಮಮಸಂಗೇ ಪ್ರಿಯಾಸ್ತ್ರಿಯಾಃ ।
ಬಲ್ಲವಾನಾಂ ಗೃಹೇ ಜನ್ಮ ಲಭಂತಾಂ ಗೋಪಕೋಟಯಃ ॥ ೨೩೫ ॥

ಇತ್ಯೇವಮುಕ್ತ್ವಾ ಶ್ರೀಕೃಷ್ಣೋ ವಿರರಾಮ ಚ ನಾರದ ।
ಊಷುರ್ದೇವಾಶ್ಚ ದೇವ್ಯಶ್ಚ ಗೋಪಾ ಗೋಪ್ಯಶ್ಚ ತತ್ರ ವೈ ॥ ೨೩೬ ॥

ಬ್ರಹ್ಮೇಶಶೇಷಧರ್ಮಾಶ್ಚ ಶ್ರೀಕೃಷ್ಣಂ ತಂ ಪರಾತ್ಪರಂ ।
ಶಿವಾ ಪದ್ಮಾ ಸರಸ್ವತ್ಯಸ್ತುಷ್ಟುವುಃ ಪರಯಾ ಮುದಾ ॥ ೨೩೭ ॥

ಭಕ್ತ್ಯಾ ಗೋಪಾಶ್ಚ ಗೋಪ್ಯಶ್ಚ ವಿರಹಜ್ವರಕಾತರಾಃ ।
ತತ್ರ ಸಂಸ್ತೂಯ ಶ್ರೀಕೃಷ್ಣಂ ಪ್ರಣೇಮುಃ ಪ್ರೇಮವಿಹ್ವಲಾಃ ॥ ೨೩೮ ॥

---

೨೩೪. ಎಲೌ ರಾಧೆಯೇ ನಾನೂ ಕೂಡ ಗೋಪಾಲಕರ ಗೆಳೆಯನಾಗಿ ಅಲ್ಲಿಯೇ ಕೆಲವು ದಿನಗಳಿದ್ದು ಅನಂತರ ವಸುದೇವನ ನಿವಾಸಸ್ಥಾನವಾದ ಮಥುರಾ ನಗರಿಗೆ ಬರುವೆನು.

೨೩೫. ನನ್ನ ಸಂಗವನ್ನು ಬಯಸುವ ಪ್ರಿಯೆಯರೆಲ್ಲರೂ, ನನ್ನೊಡನೆ ಕ್ರೀಡಿಸಲು ನಂದಗೋಕುಲಕ್ಕೆ ತೆರಳಲಿ. ಈ ಅಗಣಿತ ಗೋಪರೂ ಕೂಡ ಗೋಪಾಲಕರ ಮಂದಿರದಲ್ಲಿ ಜನ್ಮವೆತ್ತಲಿ.

೨೩೬. ಎಲೈ ನಾರದನೇ, ಶ್ರೀಕೃಷ್ಣನು ಹೀಗೆ ನುಡಿದು ಸುಮ್ಮನಾದನು. ದೇವದೇವಿಯರೂ, ಗೋಪಿಯರೂ ಅಲ್ಲಿಯೇ ಸುಮ್ಮನೆ ಕುಳಿತಿದ್ದರು.

೨೩೭. ಅನಂತರ ಪರಾತ್ಪರನಾದ ಶ್ರೀಕೃಷ್ಣಪರಮಾತ್ಮನನ್ನು ಬ್ರಹ್ಮ, ಈಶ್ವರ, ಶೇಷ ಮತ್ತು ಧರ್ಮಪುರುಷರೂ, ಪಾರ್ವತೀ, ಲಕ್ಷ್ಮಿ ಮತ್ತು ಸರಸ್ವತಿಯರೂ ಭಕ್ತಿಪೂರ್ವಕವಾಗಿ ಸ್ತುತಿಸಿದರು.

೨೩೮, ಗೋಪಗೋಪಿಯರೂ ಕೂಡ ವಿರಹಾನಲ ಸಂತಪ್ತರಾಗಿ ಶ್ರೀಕೃಷ್ಣ ಪರಮಾತ್ಮನನ್ನು ಭಕ್ತಿಪ್ರೇಮಪುರಸ್ಸರವಾಗಿ ಸ್ತುತಿಸಿ, ನಮಸ್ಕರಿಸಿದರು

ಪ್ರಾಣಾಧಿಕಂ ಪ್ರಿಯಂ ಕಾಂತಂ ರಾಧಾಪೂರ್ಣಮನೋರಥಂ ।
ಪರಿತುಷ್ಟ್ವಾಽಭವದ್ಭಕ್ತ್ಯಾ ವಿರಹಜ್ವರಕಾತರಾಂ ॥ ೨೩೯ ॥

ಸಾಶ್ರುಪೂರ್ಣಾತಿದೀನಾಂ ಚ ದೃಷ್ಟ್ವಾ ರಾಧಾಂ ಭಯಾಕುಲಾಂ ।
ಪ್ರಬೋಧವಚನಂ ಶ್ರುತ್ಯಮುವಾಚ ತಾಂ ಹರಿಃ ಸ್ವಯಂ ॥ ೨೪೦ ॥

॥ ಶ್ರೀ ಕೃಷ್ಣ ಉವಾಚ ॥

ಪ್ರಾಣಾಧಿಕೇ ಮಹಾದೇವಿ ಸ್ಥಿರಾ ಭವ ಭಯಂ ತ್ಯಜ ।
ಯಥಾ ತ್ವಂ ಚ ತಥಾಽಹಂ ಚ ಕಾ ಚಿಂತಾ ತೇ ಮಯಿ ಸ್ಥಿತೇ ॥ ೨೪೧ ॥

ಕಿಂ ತು ತೇ ಕಥಯಿಷ್ಯಾಮಿ ಕಿಂಚಿದೇವಾಸ್ತ್ಯಮಂಗಲಂ ।
ವರ್ಷಾಣಾಂ ಶತಕಂ ಪೂರ್ಣಂ ತ್ವದ್ವಿಚ್ಛೇದೋ ಮಯಾ ಸಹ ॥ ೨೪೨ ॥

ಶ್ರೀದಾಮಶಾಪಜನ್ಯೇನ ಕರ್ಮಭೋಗೇನ ಸುಂದರಿ ।
ಭವಿಷ್ಯತ್ಯೇವ ಮಮ ಚ ಮಥುರಾಗಮನಂ ತತಃ ॥ ೨೪೩ ॥

---

೨೩೯. ರಾಧಾದೇವಿಯೂ ಕೂಡ ತನ್ನ ಪ್ರಾಣಕ್ಕಿಂತಲೂ ಪ್ರೀತಿಪಾತ್ರನಾದ ಕಾಂತನನ್ನು ತನ್ನ ಮನೋರಥ ಪರಿಪೂರ್ಣತೆಗಾಗಿ ಭಕ್ತಿಯಿಂದ ಸ್ತುತಿಸಿ, ವಿರಹ ಕಾತರಳಾದಳು.

೨೪೦. ಅಶ್ರುಪರಿಪೂರ್ಣಳೂ, ಅತಿದೀನಳೂ, ಭಯಾಕುಲಳೂ, ಆದ ರಾಧೆಯನ್ನು ಕುರಿತು ಸ್ವಯಂ ಶ್ರೀಹರಿಯು ವೇದವಿಹಿತವಾದ ಕೆಲವು ಹಿತನುಡಿಗಳನ್ನಾಡಿದನು.

೨೪೧. ಶ್ರೀಕೃಷ್ಣ :—ಪ್ರಾಣಪ್ರಿಯಳಾದ ಎಲೌ ದೇವಿಯೇ, ನೀನು ಭಯವನ್ನು ಬಿಟ್ಟು ನಿಶ್ಚಿಂತಳಾಗು. ನಾನು ಹೇಗೋ ನೀನೂ ಹಾಗೆಯೇ, ನಾನಿರುವಾಗ ನಿನಗೇತರ ಚಿಂತೆ.

೨೪೨ ಆದರೆ ನಿನಗೆ ಸ್ವಲ್ಪ ಖೇದಕರವಾದ ವಿಷಯವೊಂದನ್ನು ತಿಳಿಸುವೆನು. ನೂರುವರ್ಷ ಪೂರ್ಣವಾಗಿ ನನ್ನಿಂದ ನಿನಗೆ ಅಗಲಿಕೆಯುಂಟಾಗುವುದು.

೨೪೩ ಎಲೌ ಸುಂದರಿಯೇ ಶ್ರೀದಾಮನ ಶಾಪದಿಂದುಂಟಾದ ನಮ್ಮ ದುಷ್ಕರ್ಮದ ಫಲವನ್ನು ಭೋಗಿಸಿದ ನಂತರ ನಾನು ಮಥುರೆಯಲ್ಲಿ ಬಂದು ನಿನ್ನೊಡಗೂಡುವೆನು.

ತತ್ರ ಭಾರಾವತರಣಂ ಪಿತ್ರೋರ್ಬಂಧನಮೋಚನಂ ।
ಮಾಲಾಕಾರತಂತುವಾಯಕುಬ್ಜಿಕಾನಾಂ ಚ ಮೋಕ್ಷಣಂ ॥ ೨೪೪ ॥

ಘಾತಯಿತ್ವಾ ಚ ಯವನಂ ಮುಚುಕುಂದಸ್ಯ ಮೋಕ್ಷಣಂ ।
ದ್ವಾರಕಾಯಾಶ್ಚ ನಿರ್ಮಾಣಂ ರಾಜಸೂಯಸ್ಯ ದರ್ಶನಂ ॥ ೨೪೫ ॥

ಉದ್ವಾಹಂ ರಾಜಕನ್ಯಾನಾಂ ಸಹಸ್ರಾಣಾಂ ಚ ಷೋಡಶ ।
ದಶಾಧಿಕಶತಸ್ಯಾಪಿ ಶತ್ರೂಣಾಂ ದಮನಂ ತಥಾ ॥ ೨೪೬ ॥

ಮಿತ್ರೋಪಕರಣಂ ಚೈವ ವಾರಾಣಸ್ಯಾಶ್ಚ ದಾಹನಂ ।
ಹರಸ್ಯ ಜೃಂಭಣಂ ತತ್ರ ಬಾಣಸ್ಯ ಭುಜಕೃಂತನಂ ॥ ೨೪೭ ॥

ಪಾರಿಜಾತಸ್ಯ ಹರಣಂ ಯದ್ಯತ್ಕರ್ಮಾಣಿ ತಾನಿ ಚ ।
ಗಮನಂ ತೀರ್ಥಯಾತ್ರಾಯಾಂ ಮುನಿಸಂಘಪ್ರದರ್ಶನಂ ॥ ೨೪೮ ॥

---

೨೪೪. ಭೂಮಿಯಲ್ಲಿ ವಸುದೇವಪುತ್ರನಾಗಿ ಅವತರಿಸಿ ಭೂಭಾರವನ್ನಿಳುಹುವುದು. ತಾಯಿ ತಂದೆಗಳ ಬಂಧನವನ್ನು ಬಯಲುಮಾಡುವುದು. ಹೂವಾಡಿಗ ನೆಯ್ಗೆಯವ ಮತ್ತು ಕುಬ್ಜೆ ಮುಂತಾದವರ ಬಂಧನಗಳನ್ನು ದೂರಮಾಡುವುದು. ನನ್ನ ಕರ್ತವ್ಯವಾಗಿದೆ

೨೪೫. ಹಾಗೆಯೇ, ಕಾಲಯವನನನ್ನು ಸಂಹರಿಸಿ ಮುಚುಕುಂದನಿಗೆ ಮೋಕ್ಷ ಕೊಡುವುದು, ದ್ವಾರಕಾನಗರಿಯನ್ನು ನಿರ್ಮಿಸುವುದು, ಧರ್ಮರಾಯನ ರಾಜಸೂಯಯಾಗವನ್ನು ನೋಡುವುದು ನನ್ನ ಕರ್ತವ್ಯವಾಗಿದೆ.

೨೪೬. ಹದಿನಾರುಸಾವಿರ ರಾಜಕನ್ಯೆಯರನ್ನು ವಿವಾಹಮಾಡಿಕೊಳ್ಳುವುದೂ ನೂರಹತ್ತು ಜನ ಶತ್ರುಗಳನ್ನು ಸಂಹಾರಮಾಡುವುದೂ ನನ್ನ ಕರ್ತವ್ಯ.

೨೪೭. ನನ್ನ ಆಪ್ತರಿಗೆಲ್ಲ ಉಪಕಾರಮಾಡಿ, ವಾರಾಣಸಿಯನ್ನು ದಹಿಸಿ, ಹರನೊಡನೆ ಕಾದಾಡಿ, ಬಾಣಾಸುರನ ಭುಜಗಳನ್ನು ಕತ್ತರಿಸುವುದೂ ನನ್ನ ಕರ್ತವ್ಯವಾಗಿದೆ.

೨೪೮. ಹಾಗೆಯೇ ಪಾರಿಜಾತವೃಕ್ಷವನ್ನು ದೇವಲೋಕದಿಂದ ಅಪಹರಿಸಿ ತರುವುದು. ಸಮಯಾನುಗುಣವಾದ ಕಾರ್ಯಗಳನ್ನು ಮಾಡುವುದು, ತೀರ್ಥಯಾತ್ರೆಗಾಗಿ ಮುನಿಸಮೂಹವನ್ನು ಸಂದರ್ಶಿಸುವುದು ನನ್ನ ಕರ್ತವ್ಯವಾಗಿದೆ.

ಸಂಭಾಷಣಂ ಚ ಬಂಧೂನಾಂ ಯಜ್ಞಸಂಪಾದನಂ ಪಿತುಃ ।
ಶುಭಕ್ಷಣೇ ಪುನಸ್ತತ್ರ ತ್ವಯಾ ಸಾರ್ಧಂ ಪ್ರದರ್ಶನಂ ।
ಕರಿಷ್ಯಾಮಿ ಚ ತತ್ರೈವ ಗೋಪಿಕಾನಾಂ ಚ ದರ್ಶನಂ ॥ ೨೪೯ ॥

ತುಭ್ಯಮಾಧ್ಯಾತ್ಮಿಕಂ ದತ್ವಾ ಪುನಃ ಸತ್ಯಂ ತ್ವಯಾ ಸಹ ।
ದಿವಾನಿಶಮವಿಚ್ಛೇದೋ ಮಯಾ ಸಾರ್ಧಮತಃ ಪರಂ ॥ ೨೫೦ ॥

ಭವಿಷ್ಯತಿ ತ್ವಯಾ ಸಾರ್ಧಂ ಪುನರಾಗಮನಂ ವ್ರಜೇ ।
ಕಾಂತೇ ವಿಚ್ಛೇದಸಮಯೇ ವರ್ಷಾಣಾಂ ಶತಕೇ ಸತಿ ॥ ೨೫೧ ॥

ನಿತ್ಯಂ ಸಂಮೀಲನಂ ಸ್ವಪ್ನೇ ಭವಿಷ್ಯತಿ ತ್ವಯಾ ಸಹ ।
ಮಮ ನಾರಾಯಣಾಂಶೋ ಯಸ್ತಸ್ಯ ಯಾನಂ ಚ ದ್ವಾರಕಾಂ ॥ ೨೫೨ ॥

ಶತವರ್ಷಾಂತರೇ ಸಾಧ್ಯಮೇತದೇವ ಸುನಿಶ್ಚಿತಂ ।
ಭವಿಷ್ಯತಿ ಪುನಸ್ತತ್ರ ವನೇ ರಾಸಸ್ತ್ವಯಾ ಸಹ ॥ ೨೫೩ ॥

---

೨೪೯ ಅನಂತರ ಬಂಧು ಬಳಗಗಳ ಕ್ಷೇಮಲಾಭವನ್ನು ವಿಚಾರಿಸಿ, ಪಿತೃದೇವತೆಗಳಿಗೆ ಯಜ್ಞಗಳನ್ನು ನಡೆಸಿ ಶುಭ ಕ್ಷಣದಲ್ಲಿ ನಿನ್ನೊಡನೆ ನಾನು ಒಂದು ಸೇರುವೆನು. ಹಾಗೆಯೇ ಅಲ್ಲಿ ಎಲ್ಲ ಗೋಪಿಯರಿಗೂ ನನ್ನ ದರ್ಶನವನ್ನು ಕೊಡುವೆನು.

೨೫೦. ಅಲ್ಲಿಂದ ಮುಂದೆ ನಿನಗೆ ಅಧ್ಯಾತ್ಮ ತತ್ವವನ್ನು ಉಪದೇಶಿಸಿ, ನಿನ್ನೊಡನೆ ಹಗಲೂ ರಾತ್ರಿ ವಿರಹವಿಲ್ಲದಂತೆ ನಿತ್ಯವಾಗಿಯೂ ಸೇರುವೆನು

೨೫೧. ಎಲೌ ಕಾಂತೆಯೇ, ನೂರು ವರ್ಷಗಳ ವಿರಹಕಾಲವು ಕಳೆದ ಮೇಲೆ ನಿನ್ನೊಡನೆ ಗೋಕುಲದಲ್ಲಿ ನನಗೆ ಸಂಗಮವಾಗುವುದು.

೨೫೨. ಅದುವರೆಗೆ ಪ್ರತಿನಿತ್ಯವೂ ಸ್ವಪ್ನದಲ್ಲಿ ನಿನ್ನ ಸಮಾಗಮವಾಗುವುದು. ನನ್ನ ಅಂಶಜನಾದ ನಾರಾಯಣನ ವಾಹನವೇ ದ್ವಾರಕಾಪಟ್ಟಣವಾಗಿರುವುದು

೨೫೩. ನೂರುವರ್ಷಗಳನಂತರ ನಮ್ಮಿಬ್ಬರ ಸಮಾಗಮವು ಖಂಡಿತ. ಅನಂತರ ನಿನ್ನೊಡನೆ ಬೃಂದಾವನದಲ್ಲಿ ರಾಸಕ್ರೀಡಾದಿಗಳನ್ನು ಮಾಡುವೆನು.

ಪುನಃ ಪಿತ್ರೋಶ್ಚ ಗೋಪೀನಾಂ ಶೋಕಸಂಮಾರ್ಜನಂ ಪರಂ ।
ಕೃತ್ವಾ ಭಾರಾವತರಣಂ ಪುನರಾಗಮನಂ ಮಮ ॥ ೨೫೪ ॥

ತ್ವಯಾ ಸಹಾಪಿ ಗೋಲೋಕಂ ಗೋಪೈರ್ಗೋಪೀಭಿರೇವ ಚ ।
ಮಮ ನಾರಾಯಣಾಂಶಸ್ಯ ವಾಣ್ಯಾ ಚ ಪದ್ಮಯಾ ಸಹ ॥ ೨೫೫ ॥

ವೈಕುಂಠಗಮನಂ ರಾಧೇ ನಿತ್ಯಸ್ಯ ಪರಮಾತ್ಮನಃ ।
ಶ್ವೇತದ್ವೀಪಂ ಧರ್ಮಗೇಹಮಂಶಾನಾಂ ಚ ಭವಿಷ್ಯತಿ ॥ ೨೫೬ ॥

ದೇವಾನಾಂ ಚೈವ ದೇವೀನಾಮಂಶಾ ಯಾಸ್ಯಂತಿ ಸ್ವಕ್ಷಯಂ ।
ಪುನಃ ಸಂಸ್ಥಿತಿರತ್ರೈವ ಗೋಲೋಕೇ ಮೇ ತ್ವಯಾ ಸಹ ॥ ೨೫೭ ॥

ಇತ್ಯೇವಂ ಕಥಿತಂ ಸರ್ವಂ ಭವಿಷ್ಯಂ ಚ ಶುಭಾಶುಭಂ ।
ಮಯಾ ನಿರೂಪಿತಂ ಯತ್ತತ್ಕಾಂತೇ ಕೇನ ನಿವಾರ್ಯತೇ ॥ ೨೫೮ ॥

---

೨೫೪. ಅಲ್ಲಿ ತಂದೆ ತಾಯಿಯರ ಮತ್ತು ಇತರ ಗೋಪಿಯರ ಶೋಕವನ್ನು ಪರಿಹರಿಸಿ ಭೂಭಾರವನ್ನಿಳುಹಿ ಹಿಂತಿರುಗಿ ಬರುವೆನು.

೨೫೫. ನಿನ್ನೊಡನೆಯೂ ಗೋಪಗೋಪಿಯರೊಡನೆಯೂ ನಾನು ಹಿಂತಿರುಗುವೆನು. ಅಂತೆಯೇ ನನ್ನ ಅಂಶಜನಾದ ನಾರಾಯಣನು ಲಕ್ಷ್ಮಿ ಮತ್ತು ಸರಸ್ವತಿಯರೊಡನೆ ಹಿಂದಕ್ಕೆ ಬರುವನು.

೨೫೬. ಎಲೌ ರಾಧೆಯೇ, ನಿತ್ಯನಾದ ಪರಮಾತ್ಮನು ವೈಕುಂಠಕ್ಕೂ, ಅಂಶಸಂಭವರಾದ ವಿಷ್ಣ್ವಾದಿ ದೇವತೆಗಳು ಶ್ವೇತದ್ವೀಪಾದಿಗಳಿಗೂ ಹಿಂತಿರುಗುವರು

೨೫೭. ದೇವದೇವಿಯರ ಅಂಶಜರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗುವರು ಅನಂತರ ನೀನು ನನ್ನೊಡನೆ ಗೋಲೋಕದಲ್ಲಿಯೇ ನೆಲೆಸುವೆ.

೨೫೮. ಮುಂದಾಗುವ ಶುಭಾಶುಭ ರೂಪವಾದ ಭವಿಷ್ಯವನ್ನು ಹೇಳಿರುವೆನು. ನಾನು ಇದುವರೆಗೂ ಹೇಳಿದುದನ್ನು ಯಾರೂ ಬದಲಾಯಿಸಲಾರರು.

ಇತ್ಯೇವಮುಕ್ತ್ವಾ ಶ್ರೀಕೃಷ್ಣಃ ಕೃತ್ವಾ ರಾಧಾಂ ಸ್ವವಕ್ಷಸಿ ।
ತಸ್ಥೌ ತಸ್ಥುಃ ಸುರಾಃ ಸರ್ವೇ ಸುರಪತ್ನ್ಯಶ್ಚ ವಿಸ್ಮಿತಾಃ ॥ ೨೫೯ ॥

ಉವಾಚ ಶ್ರೀಹರಿರ್ದೇವಾನ್ದೇವೀಂ ಚ ಸಮಯೋಚಿತಂ ।
ದೇವಾ ಗಚ್ಛತ ಕಾರ್ಯಾರ್ಥಂ ಸ್ವಾಲಯಂ ವಿಷಯೋಚಿತಂ ॥ ೨೬೦ ॥

ಗಚ್ಛ ಪಾರ್ವತಿ ಕೈಲಾಸಂ ಸುತಾಭ್ಯಾಂ ಸ್ವಾಮಿನಾ ಸಹ ।
ಮಯಾ ನಿಯೋಜಿತಂ ಕರ್ಮ ಸರ್ವಂ ಕಾಲೇ ಭವಿಷ್ಯತಿ ॥ ೨೬೧ ॥

ಭವಿತಾ ಕಲಯಾ ಜನ್ಮ ಸರ್ವೇಷಾಂ ಚ ವ್ರಜೇಶ್ವರಿ ।
ಕ್ಷುದ್ರಾಣಾಂ ಚೈವ ಮಹತಾಂ ದೇವಂ ಲಂಬೋದರಂ ವಿನಾ ॥ ೨೬೨ ॥

ಪ್ರಣಮ್ಯ ಶ್ರೀಹರಿಂ ದೇವಾಃ ಸ್ವಾಲಯಂ ಪ್ರಯಯುರ್ಮುದಾ ।
ಲಕ್ಷ್ಮೀಂ ಸರಸ್ವತೀಂ ಭಕ್ತ್ಯಾ ಪ್ರಣಮ್ಯ ಪುರುಷೋತ್ತಮಂ ॥ ೨೬೩ ॥

---

೨೫೯. ಶ್ರೀಕೃಷ್ಣನು ಈ ರೀತಿಯಾಗಿ ನುಡಿದು ರಾಧಾದೇವಿಯನ್ನು ತನ್ನ ವಕ್ಷಃಸ್ಥಳದಲ್ಲಿ ಅಪ್ಪಿಕೊಂಡು ಕುಳಿತುಕೊಂಡನು. ಆಗ ದೇವತೆಗಳು ಅವರ ಪತ್ನಿಯರೂ ವಿಸ್ಮಿತರಾಗಿ ಕುಳಿತರು.

೨೬೦ ಅನಂತರ ಶ್ರೀಹರಿಯು ದೇವದೇವಿಯರನ್ನು ಕುರಿತು ಸಮಯೋಚಿತವಾಗಿ ಕೆಲವು ಮಾತುಗಳನ್ನು ಹೇಳಿದನು. ಎಲೈ ದೇವತೆಗಳೇ, ನೀವೆಲ್ಲರೂ ನಿಮ್ಮ ಕಾರ್ಯಕ್ಕಾಗಿ ನಿಮಗಭಿಮತವಾದ ಪ್ರದೇಶಕ್ಕೆ ಹೋಗಿರಿ.

೨೬೧. ಎಲೌ ಪಾರ್ವತಿಯೇ, ನೀನು ನಿನ್ನ ಪತಿಪುತ್ರರೊಡನೆ ಕೈಲಾಸಕ್ಕೆ ಹೋಗು. ನಾನು ನಿಯಮಿಸಿರುವಂತೆ ಕಾಲಾನುಗುಣವಾಗಿ ಆಯಾಯ ಕರ್ಮವು ಫಲಿಸುವುದು.

೨೬೨. ಎಲೌ ರಾಧೆಯೇ, ಗಣೇಶನೊಬ್ಬನನ್ನುಳಿದು ಇತರ ಮಹಾ ದೇವತೆಗಳೂ ಮತ್ತು ಕ್ಷುದ್ರದೇವತೆಗಳೂ ತಮ್ಮ ತಮ್ಮ ಕಲೆಯಿಂದ ಭೂಲೋಕದಲ್ಲಿ ಜನ್ಮವೆತ್ತುವರು ಎಂದು ಶ್ರೀಕೃಷ್ಣನು ಹೇಳಿದನು.

೨೬೩. ಆಗ ದೇವತೆಗಳೆಲ್ಲರೂ ಶ್ರೀಹರಿಗೆ ನಮಿಸಿ ತಮ್ಮ ಮಂದಿರಕ್ಕೆ ಹಿಂದಿರುಗಿದರು. ಅಂತೆಯೇ ಲಕ್ಷ್ಮಿ ಸರಸ್ವತಿಯರಿಗೂ ಪುರುಷೋತ್ತಮನಿಗೂ ವಂದಿಸಿ ತೆರಳಿದರು.

**ಹರಿಣಾ ಯೋಜಿತಂ ಕರ್ಮ ಕರ್ತುಂ ವ್ಯಗ್ರಾ ಮಹೀಂ ಯಯುಃ ।**
**ಭರ್ತ್ರಾ ನಿರೂಪಿತಂ ಸ್ಥಾನಂ ದೇವಾನಾಮಪಿ ದುರ್ಲಭಂ ॥ ೨೬೪ ॥**

**ಉವಾಚ ರಾಧಿಕಾಂ ಕೃಷ್ಣೋ ವೃಷಭಾನುಗೃಹಂ ವ್ರಜ ।**
**ಗೋಪಗೋಪೀಸಮೂಹೈಶ್ಚ ಸಹ ಪೂರ್ವನಿರೂಪಿತೈಃ ॥ ೨೬೫ ॥**

**ಅಹಂ ಯಾಸ್ಯಾಮಿ ಮಧುರಾಂ ವಸುದೇವಾಲಯಂ ಪ್ರಿಯೇ ।**
**ಪಶ್ಚಾತ್ಕಂಸಭಯವ್ಯಾಜಾದ್ಗೋಕುಲಂ ತವ ಸನ್ನಿಧಿಂ ॥ ೨೬೬ ॥**

**ರಾಧಾ ಪ್ರಣಮ್ಯ ಶ್ರೀಕೃಷ್ಣಂ ರಕ್ತಪಂಕಜಲೋಚನಾ ।**
**ಭೃಶಂ ರುರೋದ ಪುರತಃ ಪ್ರೇಮವಿಚ್ಛೇದಕಾತರಾ ॥ ೨೬೭ ॥**

**ಸ್ಥಾಯಂ ಸ್ಥಾಯಂ ಕ್ವಚಿದ್ಯಾಂತೀ ಗತ್ವಾ ಗತ್ವಾ ಪುನಃ ಪುನಃ ।**
**ಪುನಃ ಪುನಃ ಸಮಾಗತ್ಯ ದರ್ಶಂದರ್ಶಂ ಹರೇರ್ಮುಖಂ ॥ ೨೬೮ ॥**

---

೨೬೪. ಅನಂತರ ಶ್ರೀಹರಿಯು ತಮಗೆ ನಿಯಮಿಸಿದ ಕರ್ಮಗಳನ್ನು ಮಾಡಲು ತತ್ಪರರಾಗಿ, ಅವನು ನಿರೂಪಿಸಿದ ಸ್ಥಾನಗಳಿಗೆ ದೇವತೆಗಳು ಹೊರಟರು.

೨೬೫. ಅನಂತರ ಶ್ರೀಕೃಷ್ಣನು ರಾಧೆಯನ್ನು ಕುರಿತು ನೀನು ಗೋಪ ಗೋಪಿಯರ ಸಮೂಹದಿಂದ ಕೂಡಿ ನಾನು ಹಿಂದೆ ನಿರೂಪಿಸಿದಂತೆ ವೃಷಭಾನು ವೆಂಬ ಗೋಪನ ಮಂದಿರಕ್ಕೆ ಹೋಗು ಎಂದು ಹೇಳಿದನು.

೨೬೬. ಎಲೌ ಪ್ರಿಯಳೇ, ನಾನೂ ಕೂಡ ವಸುದೇವನ ಮಂದಿರದಲ್ಲಿ ಅವತರಿಸಿ ಕಂಸಭಯವೆಂಬ ನೆಪದಿಂದ ಗೋಕುಲಕ್ಕೆ ಹೋಗಿ ಅಲ್ಲಿಂದ ಮಧುರಾ ಪಟ್ಟಣದಲ್ಲಿ ನಿನ್ನೊಡನೆ ಸೇರುವೆನು ಎಂದನು.

೨೬೭. ಆಗ ರಾಧಾದೇವಿಯು ತಾವರೆಯಂತಿರುವ ಕಣ್ಣುಗಳನ್ನು ದುಃಖ ದಿಂದ ಕೆಂಪಗೆ ಮಾಡಿಕೊಂಡು ಶ್ರೀಕೃಷ್ಣನಿಗೆ ಸಾಷ್ಟಾಂಗವೆರಗಿ ಅವನ ಪ್ರೇಮವು ದೂರವಾಗುವುದೆಂಬ ವ್ಯಥೆಯಿಂದ ಗಟ್ಟಿಯಾಗಿ ಅಳಲಾರಂಭಿಸಿದಳು.

೨೬೮ ಅನಂತರ ಅಲ್ಲಿಂದ ಹೊರಟರೂ ಅಲ್ಲಲ್ಲೇ ನಿಂತುಕೊಳ್ಳುತ್ತ, ಮತ್ತೆಮತ್ತೆ ಹಿಂತಿರುಗಿ ಬಂದು ಶ್ರೀಹರಿಯ ಮುಖವನ್ನು ನೋಡುತ್ತ ಬಹಳ ಕಷ್ಟದಿಂದ ಹೊರಟಳು.

ಪಪೌ ಚಕ್ಷುಶ್ಚಕೋರಾಭ್ಯಾಂ ನಿಮೇಷರಹಿತಾ ಸತೀ ।
ಶರತ್ಪಾರ್ವಣಚಂದ್ರಾಭಸುಧಾಪೂರ್ಣಂ ಪ್ರಭೋರ್ಮುಖಂ ॥ ೨೬೯ ॥

ತತಃ ಪ್ರದಕ್ಷಿಣೀಕೃತ್ಯ ಸಪ್ತಧಾ ಪರಮೇಶ್ವರೀ ।
ಪ್ರಣಮ್ಯ ಸಪ್ತಧಾ ಚೈವ ಪುನಸ್ತಸ್ಥೌ ಹರೇಃ ಪುರಃ ॥ ೨೭೦ ॥

ಆಜಗ್ಮುರ್ಗೋಪಿಕಾನಾಂ ಚ ತ್ರಿಃಸಪ್ತಶತಕೋಟಯಃ ।
ಆಜಗಾಮ ಚ ಗೋಪಾನಾಂ ಸಮೂಹಃ ಕೋಟಿಸಂಖ್ಯಕಃ ॥ ೨೭೧ ॥

ಗೋಪಾನಾಂ ಗೋಪಿಕಾನಾಂ ಚ ಸಮೂಹೈಃ ಸಹ ರಾಧಿಕಾ ।
ಪುನಃ ಪ್ರಣಮ್ಯ ತಂ ರಾಧಾ ತತ್ರ ತಸ್ಥೌ ಚ ನಾರದ ॥ ೨೭೨ ॥

ತ್ರಯಸ್ತ್ರಿಂಶದ್ವಯಸ್ಯಾಭಿರ್ಗೋಪೀಭಿಃ ಸಹ ಸುಂದರೀ ।
ಗೋಪಾನಾಂ ಚ ಸಮೂಹೈಶ್ಚ ಪ್ರಣಮ್ಯ ಪ್ರಯಯೌ ಮಹೀಂ ॥ ೨೭೩ ॥

---

೨೬೯. ಶರತ್ಪೂರ್ಣಿಮಾ ಚಂದ್ರನಂತೆ ಅಮೃತಪೂರ್ಣವಾದ ಶ್ರೀಹರಿಯ ಮುಖಚಂದ್ರಿಕೆಯನ್ನು, ಕಣ್ಣುಗಳೆಂಬ ಚಕೋರಗಳಿಂದ ರೆಪ್ಪೆಬಡಿಯದೆ ಪಾನ ಮಾಡಿದಳು.

೨೭೦. ಅನಂತರ ಪರಮೇಶ್ವರಿಯಾದ ರಾಧೆಯು ಶ್ರೀಹರಿಗೆ ಏಳು ಸಾರಿ ಪ್ರದಕ್ಷಿಣೆಮಾಡಿ, ಏಳುಸಾರಿ ನಮಸ್ಕರಿಸಿ ಶ್ರೀಹರಿಯ ಮುಂದೆ ನಿಂತಳು.

೨೭೧. ಆಗ ಮುನ್ನೂರ ಎಪ್ಪತ್ತುಕೋಟಿ ಗೋಪಿಯರೂ ಕೋಟಿಸಂಖ್ಯೆ ಗೋಪಾಲಕರೂ ಅಲ್ಲಿಗೆ ಬಂದರು.

೨೭೨. ಎಲೈ ನಾರದನೇ, ಆ ಗೋಪಗೋಪಿಯರೊಡಗೂಡಿ ರಾಧಾದೇವಿಯು ಶ್ರೀಕೃಷ್ಣನಿಗೆ ವಂದಿಸಿ ಸುಮ್ಮನೆ ನಿಂತುಕೊಂಡಳು.

೨೭೩. ಸುಂದರಿಯಾದ ಆರಾಧೆಯು ಆಪ್ತಸಖಿಯರಾದ ಮೂವತ್ತಮೂರು ಗೋಪಿಯರೊಡನೆಯೂ, ಅಸಂಖ್ಯ ಗೋಪರೊಡನೆಯೂ ಶ್ರೀಕೃಷ್ಣನಿಗೆ ವಂದಿಸಿ ಭೂಮಂಡಲಕ್ಕೆ ತೆರಳಿದಳು.

ಹರಿಣಾ ಯೋಜಿತಂ ಸ್ಥಾನಂ ಪ್ರಜಗ್ಮುರ್ನಂದಗೋಕುಲಂ ।
ವೃಷಭಾನುಗೃಹಂ ರಾಧಾ ಗೋಪೀಗೋಪಗೃಹಂ ಯಯೌ　　॥ ೧೭೪ ॥

ಮಹೀಂ ಗತಾಯಾಂ ರಾಧಾಯಾಂ ಗೋಪೀಭಿಃ ಸಹ ಗೋಪಕೈಃ ।
ಬಭೂವ ಶ್ರೀಹರಿಃ ಸದ್ಯಃ ಪೃಥಿವೀಂ ಗಮನೋತ್ಸುಕಃ　　॥ ೨೭೫ ॥

ಸಂಭಾಷ್ಯ ಗೋಪಾನ್ಗೋಪೀಶ್ಚ ನಿಯೋಜ್ಯ ಸ್ವೀಯಕರ್ಮಣಿ ।
ಮನೋಯಾಯಿನಾ ಜಗನ್ನಾಥೋ ಜಗಾಮ ಮಧುರಾಂ ಹರಿಃ　　॥ ೧೭೬ ॥

ಪೂರ್ವಂ ಯದ್ಯದಪತ್ಯಂ ಚ ದೇವಕೀವಸುದೇವಯೋಃ ।
ಬಭೂವ ಸರ್ವಸ್ತತ್ಕಂಸಃ ಪುತ್ರಷಟ್ಕಂ ಜಘಾನ ಹ　　॥ ೨೭೭ ॥

ಶೇಷಾಂಶಂ ಸಪ್ತಮಂ ಗರ್ಭಂ ಮಾಯಯಾ ಕೃಷ್ಣ ಗೋಕುಲೇ ।
ನಿಧಾಯ ರೋಹಿಣೀಗರ್ಭೇ ಜಗಾಮ ಚಾಜ್ಞಯಾ ಹರೇಃ　　॥ ೨೭೮ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರದನಾರಾಯಣಸಂವಾದೇ ಷಷ್ಠೋಽಧ್ಯಾಯಃ

---

೨೭೪. ಶ್ರೀಹರಿಯು ನಿಯಮಿಸಿದಂತೆ ಎಲ್ಲರೂ ನಂದಗೋಕುಲಕ್ಕೆ ಹೋದರು. ರಾಧೆಯು ವೃಷಭಾನುವಿನ ಮಂದಿರದಲ್ಲಿಯೂ ಗೋಪಿಯು ನಂದಗೋಪನಮಂದಿರದಲ್ಲಿಯೂ ಅವತರಿಸಿದರು.

೨೭೫. ಈ ರೀತಿಯಾಗಿ ಗೋಪಗೋಪಿಯರೊಡನೆ ರಾಧಾದೇವಿಯು ಭೂಮಂಡಲಕ್ಕೆ ಹೋಗಲು ಶ್ರೀಹರಿಯು ಕೂಡ ಭೂಮಿಗೆ ತೆರಳಲು ಉತ್ಸಾಹಯುತನಾದನು.

೨೭೬. ಗೋಪಗೋಪಿಯರನ್ನು ಸಂಭಾಷಿಸಿ, ಅವರವರ ಕರ್ಮದಲ್ಲಿ ನಿಯೋಗಿಸಿ, ಜಗದೊಡೆಯನು ಮನೋವೇಗದಲ್ಲಿ ಮಧುರಾಪಟ್ಟಣಕ್ಕೆ ತೆರಳಿದನು.

೨೭೭. ಅಲ್ಲಿ ದೇವಕಿವಸುದೇವರಿಗೆ ಉತ್ಪನ್ನವಾದ ಮೊದಲಿನ ಆರು ಮಕ್ಕಳನ್ನೂ, ದೇವಕಿಯ ಸಹೋದರನಾದ ಕಂಸನು ಸಂಹಾರಮಾಡಿದನು.

೨೭೮. ಆದಿಶೇಷನ ಅಂಶವಾದ ಏಳನೆಯ ಗರ್ಭವನ್ನು ಮಾಯೆಯಿಂದ ಗೋಕುಲಕ್ಕೆ ಒಯ್ದು ರೋಹಿಣಿಯ ಗರ್ಭದಲ್ಲಿರಿಸಿ ಶ್ರೀಹರಿಯ ಆಜ್ಞೆಯಂತೆ ವಸುದೇವನು ಹಿಂತಿರುಗಿದನು.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮ ಖಂಡದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

## ಆರನೆಯ ಅಧ್ಯಾಯದ ಸಾರಾಂಶ

ಗೋಲೋಕದಲ್ಲಿ ನಿರ್ಗುಣನೂ, ನಿರಾಕಾರನೂ. ಆದ ಪರಮಾತ್ಮನ ತೇಜೋ ಮಂಡಲದ ಮಧ್ಯದಲ್ಲಿ ಭಕ್ತರಿಗಾಗಿ ಕಲ್ಪಿತವೂ, ಕೋಟಿಮನ್ಮಥರಸೌಂದರ್ಯದಿಂದ ಶೋಭಿತವೂ ಆದ ದಿವ್ಯವಿಗ್ರಹವನ್ನೂ ಅದರ ವಕ್ಷಃಸ್ಥಳದಲ್ಲಿ ನೆಲೆಸಿರುವ ಮನೋಹರವಾದ ರಾಧಾದೇವಿಯ ದಿವ್ಯರೂಪವನ್ನೂ ಬ್ರಹ್ಮಾದಿದೇವತೆಗಳು ಮನದಣಿಯುವಂತೆ ನೋಡಿ ಆನಂದದಿಂದ ಸ್ತುತಿಸಿದರು. ಶ್ರೀಕೃಷ್ಣಪರಮಾತ್ಮನು ಅವರೆಲ್ಲರ ಭಕ್ತಿಗೆ ಮೆಚ್ಚಿ, ಪ್ರತ್ಯಕ್ಷನಾಗಿ ಕಾಲಕರ್ಮಸಂಯೋಗದಿಂದ ಆಗಬೇಕಾದುದೆಲ್ಲವೂ ಆಗಿಯೇ ತೀರುವುದೆಂದು ಹೇಳಿ, ಭೂಭಾರವನ್ನಿಳುಹಿ ದುಷ್ಟನಿಗ್ರಹಶಿಷ್ಟಪರಿಪಾಲನೆಯನ್ನು ಮಾಡಲು ತಾನು ವಸುದೇವಪುತ್ರನಾಗಿ ಭೂಲೋಕದಲ್ಲಿ ಅವತರಿಸುವೆನೆಂದು ಭರವಸೆಯಿತ್ತನು. ಅಲ್ಲದೆ ರಾಧಾದೇವಿಯು (ಶ್ರೀದಾಮನ ಶಾಪದಂತೆ) ವೃಷಭಾನುವಿನ ಕನ್ಯೆಯಾಗಿಯೂ, ಲಕ್ಷ್ಮೀದೇವಿಯು ಭೀಷ್ಮಕನ ಕನ್ಯೆ(ರುಕ್ಮಿಣಿ) ಯಾಗಿಯೂ, ದುರ್ಗಾದೇವಿಯು ಒಂದಂಶದಿಂದ ಯಶೋದೆಯ ಕನ್ಯೆಯಾಗಿಯೂ, ಮತ್ತೊಂದಂಶದಿಂದ ಜಾಂಬವಂತ (ಕರಡಿ)ನ ಕನ್ಯೆಯಾಗಿಯೂ ಅವತರಿಸಬೇಕೆಂದು ಹೇಳಿದನು. ರತಿಮನ್ಮಥರು ಮಾಯಾವತಿ ಮತ್ತು ಪ್ರದ್ಯುಮ್ನರಾಗಿಯೂ, ಸರಸ್ವತಿಯು ಬಾಣಾಸುರನ ಪುತ್ರಿಯಾಗಿಯೂ, ಬ್ರಹ್ಮನು ತನ್ನ ಅಂಶದಿಂದ ಅನಿರುದ್ಧನಾಗಿಯೂ, ಆದಿಶೇಷನು ಬಲರಾಮನಾಗಿಯೂ, ವಸುಂಧರೆಯು ಸತ್ಯಭಾಮೆಯಾಗಿಯೂ, ಭೂಲೋಕದಲ್ಲಿ ಅವತರಿಸುವಂತೆ ಆಜ್ಞೆಮಾಡಿದನು 'ಹಿಂದೊಮ್ಮೆ ಪಾರ್ವತಿಯು ವಿಷ್ಣುವಿನ ಸುಂದರರೂಪವನ್ನು ನೋಡಿ ಕಾಮಿಸಿದುದನ್ನು ತಿಳಿದ ಶಂಕರನು, ಹನುವಂತನ ಅಂಶದಿಂದ ಅವತರಿಸುವ ಜಾಂಬವಂತನ (ಕರಡಿ) ಮಗಳಾಗಿ ಶ್ರೀಕೃಷ್ಣನನ್ನು ವರಿಸುವಂತೆ ಹೇಳಿದುದರಿಂದ' ಪಾರ್ವತಿಯು ಜಾಂಬವತಿಯಾಗಿ ಅವತರಿಸುವಂತೆಯೂ ಅಂತೆಯೇ ಧರ್ಮಪುರುಷನು ಧರ್ಮರಾಜನಾಗಿಯೂ, ವಾಯುದೇವನು ಭೀಮಸೇನನಾಗಿಯೂ, ದೇವೇಂದ್ರನು ಅರ್ಜುನನಾಗಿಯೂ. ಅಶ್ವಿನೀದೇವತೆಗಳು ನಕುಲಸಹದೇವರಾಗಿಯೂ, ಸೂರ್ಯನು ಕರ್ಣನಾಗಿಯೂ, ಕಲಿಪುರುಷನು ದುರ್ಯೋಧನನಾಗಿಯೂ, ಶಂಕರನು ಅಶ್ವತ್ಥಾಮನಾಗಿಯೂ, ಸಮುದ್ರರಾಜನು ಭೀಷ್ಮನಾಗಿಯೂ, ಅಗ್ನಿದೇವನು ದ್ರೋಣ ಮತ್ತು ಧೃಷ್ಟದ್ಯುಮ್ನನಾಗಿಯೂ, ಚಂದ್ರನು ಅಭಿಮನ್ಯುವಾಗಿಯೂ ತಮ್ಮತಮ್ಮ ಅಂಶದಿಂದ ಅವತರಿಸುವಂತೆಯೂ ಹೇಳಿ ವಿರಹದುಃಖಿತೆಯಾದ ರಾಧಾದೇವಿಯನ್ನು ಸಮಾಧಾನಗೊಳಿಸಿ ಶ್ರೀಕೃಷ್ಣನು ಎಲ್ಲರನ್ನೂ ಬೀಳ್ಕೊಟ್ಟನು

— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

॥ ಸಪ್ತಮೋಽಧ್ಯಾಯಃ ॥

॥ ನಾರದ ಉವಾಚ ॥

ತಸ್ಯಾತಿರೇಕಂ ಕೃಷ್ಣಸ್ಯ ಮಹತ್ಪುಣ್ಯಕರಂ ಪರಂ ।
ವದ ಜನ್ಮ ಮಹಾಭಾಗ ಜನ್ಮಮೃತ್ಯುಜರಾಪಹಂ ॥ ೧ ॥

ವಸುದೇವಃ ಕಸ್ಯ ಪುತ್ರಃ ಕಸ್ಯ ಕನ್ಯಾ ಚ ದೇವಕೀ ।
ಕೋ ವಸುರ್ದೇವಕೀ ಕಾ ವಾ ವಿವಾಹಂ ಚೋಭಯೋರ್ವದ ॥ ೨ ॥

ಕಥಂ ಜಘಾನ ಕಂಸಸ್ತತ್ಪುತ್ರಷಟ್ಕಂ ಚ ದಾರುಣಃ ।
ಕಸ್ಮಿನ್ ದಿನೇ ಹರೇರ್ಜನ್ಮ ಶ್ರೋತುಮಿಚ್ಛಾಮಿ ತತ್ವತಃ ॥ ೩ ॥

---

## ಏಳನೆಯ ಅಧ್ಯಾಯವು

೧. ನಾರದ :—ಎಲೈ ಮಹಾಭಾಗ್ಯಶಾಲಿಯಾದ ನಾರಾಯಣಮಹರ್ಷಿಯೇ ಜನ್ಮಜರಾಮರಣಪರಿಹಾರಕವೂ, ಅತ್ಯಂತ ಪುಣ್ಯಕರವೂ ಆದ ಶ್ರೀಕೃಷ್ಣನ ಜನ್ಮ ವೃತ್ತಾಂತವನ್ನು ತಿಳಿಸಿದೆನು.

೨. ವಸುದೇವನು ಯಾರ ಮಗನು? ದೇವಕಿಯು ಯಾರ ಮಗಳು? ವಸುದೇವ ದೇವಕಿಯರು ಯಾರು? ಇವರಿಬ್ಬರಿಗೂ ವಿವಾಹವಾದುದೆಂತು? ಎಂಬುವನ್ನು ಹೇಳು.

೩. ಕಟುಕನಾದ ಕಂಸನು ಅವರ ಆರು ಮಕ್ಕಳನ್ನು ಹೇಗೆ ಕೊಂದನು? ಶ್ರೀಹರಿಯು ಅವರ ಗರ್ಭದಲ್ಲಿ ಯಾವ ದಿವಸ ಜನ್ಮವೆತ್ತಿದನು? ಇದನ್ನು ಕೇಳ ಬೇಕೆಂದು ನನಗೆ ಇಚ್ಛೆ ಇದೆ.

|| ಶ್ರೀ ನಾರಾಯಣ ಉವಾಚ ||

ಕಶ್ಯಪೋ ವಸುದೇವಶ್ಚ ದೇವಮಾತಾ ಚ ದೇವಕೀ |
ಪೂರ್ವಪುಣ್ಯಫಲೇನೈವ ಪ್ರಾಪತುಃ ಶ್ರೀಹರಿಂ ಸುತಂ || ೪ ||

ದೇವಮೀಢಾನ್ಮಾರಿಷಾಯಾಂ ವಸುದೇವೋ ಮಹಾನಭೂತ್ |
ಯಸ್ಯೋದ್ಭವೇ ದೇವಸಂಘೋ ವಾದಯಾಮಾಸ ದುಂದುಭಿಂ || ೫ ||

ಆನಕಂ ಚ ಮಹಾಹೃಷ್ಟಾಃ ಶ್ರೀಹರೇರ್ಜನಕಂ ಚ ತಂ |
ಸಂತಃ ಪುರಾತನಾಸ್ತೇನ ವದಂತ್ಯಾನಕದುಂದುಭಿಂ || ೬ ||

ಆಹುಕಸ್ಯ ಸುತಃ ಶ್ರೀಮಾನ್ಯದುವಂಶಸಮುದ್ಭವಃ |
ದೇವಕೋ ಜ್ಞಾನಸಿಂಧುಶ್ಚ ತಸ್ಯ ಕನ್ಯಾ ಚ ದೇವಕೀ || ೭ ||

ಗರ್ಗೋ ಯದುಕುಲಾಚಾರ್ಯಃ ಸಂಬಂಧಂ ವಸುನಾ ಸಹ |
ದೇವಕ್ಯಾಂ ಕಾರಯಾಮಾಸ ವಿಧಿವಚ್ಚ ಯಥೋದಿತಂ || ೮ ||

---

೪. ಶ್ರೀನಾರಾಯಣ: — ಕಶ್ಯಪನು ವಸುದೇವನಾಗಿಯೂ, ದೇವತೆಗಳ ಮಾತೆಯಾದ ಅದಿತಿಯು ದೇವಕಿಯಾಗಿಯೂ, ಜನ್ಮವೆತ್ತಿದರು ಅವರ ಪೂರ್ವ ಪುಣ್ಯದ ಫಲದಿಂದ ಶ್ರೀಹರಿಯು ಅವರಿಗೆ ಪುತ್ರನಾಗಿ ಅವತರಿಸಿದನು.

೫. ಮಹಾತ್ಮನಾದ ವಸುದೇವನು ದೇವಮೀಢನೆಂಬುವನಿಂದ ಮಾರಿಷೆಯೆಂಬುವಳಲ್ಲಿ ಉತ್ಪನ್ನನಾದನು. ಅವನು ಹುಟ್ಟಿದಾಗ ದೇವತೆಗಳೆಲ್ಲರೂ ದುಂದುಭಿಯನ್ನು (ನಗಾರಿ) ಬಾರಿಸಿದರು.

೬. ಶ್ರೀಹರಿಯ ಜನಕನಾದ ಆ ವಸುದೇವನು ಹುಟ್ಟಿದಾಗ ದೇವತೆಗಳು (ಆನಕ) ತಮಟೆ ಮತ್ತು (ದುಂದುಭಿ) ನಗಾರಿಯನ್ನು ಬಾರಿಸಿದುದರಿಂದ ಪುರಾತನರು ಆ ವಸುದೇವನನ್ನು 'ಆನಕದುಂದುಭಿ' ಎಂದು ಕರೆದರು

೭. ಯದುವಂಶದಲ್ಲಿ ಹುಟ್ಟಿದ ಆಹುಕನೆಂಬುವನ ಪುತ್ರನೇ ಶ್ರೀಮಂತನಾದ ದೇವಕನು. ಜ್ಞಾನಸಿಂಧುವಾದ ಆ ದೇವಕನ ಮಗಳೇ ದೇವಕಿಯೆಂಬುವಳು.

೮. ಯದುವಂಶಕ್ಕೆ ಆಚಾರ್ಯನಾದ ಗರ್ಗನೆಂಬುವನು ದೇವಕಿಯನ್ನು ವಸುದೇವನಿಗೆ ಕೊಡಿಸಿ ವಿಧ್ಯುಕ್ತವಾಗಿ ವಿವಾಹಮಾಡಿಸಿದನು.

ಮಹಾಸಂಭೃತಸಂಭಾರೋ ವಸುದೇವಃ ಶುಭೇ ಕ್ಷಣೇ ।
ಉದ್ವಾಹೇ ದೇವಕೀಂ ತಸ್ಮೈ ದೇವಕಃ ಪ್ರದದೌ ಕಿಲ ॥ ೯ ॥

ಅಶ್ವಾನಾಂ ಚ ಸಹಸ್ರಾಣಿ ಗಜಾನಾಂ ಚ ಶತಾನಿ ಚ ।
ಸಾಲಂಕೃತಾನಾಂ ದಾಸೀನಾಂ ಶತಾನಿ ಸುಂದರಾಣಿ ಚ ॥ ೧೦ ॥

ನಾನಾವಿಧಾನಿ ದ್ರವ್ಯಾಣಿ ರತ್ನಾನಿ ವಿವಿಧಾನಿ ಚ ।
ಮಣಿಶ್ರೇಷ್ಠಾನಿ ವಜ್ರಾಣಿ ಸ್ವರ್ಣಪಾತ್ರಾಣಿ ನಾರದ ॥ ೧೧ ॥

ಸದ್ರತ್ನಭೂಷಿತಾಂ ಕನ್ಯಾಂ ಶತಚಂದ್ರಸಮಪ್ರಭಾಂ ।
ತ್ರೈಲೋಕ್ಯಮೋಹಿನೀಂ ಧನ್ಯಾಂ ಮಾನ್ಯಾಂ ಶ್ರೇಷ್ಠಾಂ ಚ ಯೋಷಿತಾಂ ॥

ರೂಪಾಧಾರಾಂ ಗುಣಾಧಾರಾಂ ಸುಸ್ಮಿತಾಂ ವಕ್ರಲೋಚನಾಂ ।
ನವಸಂಗಮಯೋಗ್ಯಾಂ ಚ ಪ್ರೋದ್ಭಿನ್ನನವಯೌವನಾಂ ॥ ೧೩ ॥

---

೯. ವಸುದೇವನು ವಿವಾಹೋಚಿತವಾದ ಸಂಭಾರಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಶುಭಕ್ಷಣವನ್ನು ನಿರೀಕ್ಷಿಸುತ್ತಿದ್ದನು ದೇವಕನು ದೇವಕಿಯನ್ನು ಅವನಿಗೆ ಧಾರೆಯೆರೆದುಕೊಟ್ಟನು.

೧೦. ಆ ಸಮಯದಲ್ಲಿ ಸಾವಿರಕುದುರೆಗಳನ್ನೂ, ನೂರು ಆನೆಗಳನ್ನೂ, ಸುಂದರಿಯರೂ ಅಲಂಕೃತರೂ ಆದ ನೂರು ದಾಸಿಯರನ್ನೂ ದೇವಕನು ದೇವಕಿಗೆ ಬಳುವಳಿಯಾಗಿಕೊಟ್ಟನು.

೧೧. ಎಲೈ ನಾರದನೇ, ನಾನಾವಿಧ ದ್ರವ್ಯಗಳನ್ನೂ, ವಿವಿಧರತ್ನಗಳನ್ನೂ ಶ್ರೇಷ್ಠಮಣಿಗಳನ್ನೂ, ವಜ್ರಗಳನ್ನೂ ಸುವರ್ಣಪಾತ್ರೆಗಳನ್ನೂ ಆ ದೇವಕಿಗೆ ಬಳುವಳಿಯಾಗಿ ಕೊಟ್ಟನು.

೧೨-೧೩ ರತ್ನಾಭರಣಭೂಷಿತಳೂ, ನೂರುಚಂದ್ರರಿಗೆ ಸಮನಾದ ದೇಹಕಾಂತಿಯುಳ್ಳವಳೂ, ತ್ರಿಲೋಕಮೋಹಿನಿಯೂ, ಸ್ತ್ರೀಯರಲ್ಲೆಲ್ಲ ಧನ್ಯಳೂ, ಮಾನ್ಯಳೂ, ಗುಣರೂಪಗಳಿಗೆ ಆಧಾರಳೂ, ಸ್ಮಿತಮುಖಳೂ, ಚಂಚಲಕಟಾಕ್ಷವುಳ್ಳವಳೂ, ನವಸಂಗಮಕ್ಕೆ ಯೊಗ್ಯಳೂನವಯೌವನ ಸಂಪನ್ನೆಯೂ ಆದ ದೇವಕಿಯನ್ನು ವಸುದೇವನಿಗೆ ಕೊಟ್ಟು ವಿವಾಹಮಾಡಿದನು.

ತಾಂ ಗೃಹೀತ್ವಾ ರಥೇ ಕೃತ್ವಾ ಪ್ರಸ್ಥಾನೆಸಮಯೇ ತದಾ ।
ಕಂಸೋ ಹೃಷ್ಟಃ ಸಹಚರೋ ಭಗಿನ್ಯಾದ್ವಾಹಕರ್ಮಣಿ ॥ ೧೪ ॥

ತಸ್ಯಾ ರಥಸಮೀಪಸ್ಥೇ ಕಂಸೇ ಗಚ್ಛತಿ ತತ್ಕ್ಷಣೇ ।
ಕಂಸಂ ಸಂಬೋಧ್ಯ ಗಗನೇ ವಾಗ್ಬಭೂವಾಶರೀರಿಣೀ ॥ ೧೫ ॥

ಕಥಂ ಹೃಷ್ಟೋಽಸಿ ರಾಜೇಂದ್ರ ಶೃಣು ಸತ್ಯಂ ವಚೋ ಹಿತಂ ।
ದೇವಕ್ಯಾ ಹ್ಯಷ್ಟಮೋ ಗರ್ಭೋ ಮೃತ್ಯುಹೇತುಸ್ತ್ವವೈವ ಹಿ ॥ ೧೬ ॥

ಶ್ರುತ್ವೈವಂ ದೇವಕೀಂ ಕಂಸಃ ಖಡ್ಗಹಸ್ತೋ ಮಹಾಬಲಃ ।
ದೇವವಾಕ್ಯಾದ್ಭಯಾತ್ಕ್ರೋಧಾತ್ಪಾಪಿಷ್ಠೋ ಹಂತುಮುದ್ಯತಃ ॥ ೧೭ ॥

ತಾಂ ಹಂತುಮುದ್ಯತಂ ದೃಷ್ಟ್ವಾ ವಸುದೇವಃ ಸುಪಂಡಿತಃ ।
ಬೋಧಯಾಮಾಸ ನೀತಿಜ್ಞೋ ನೀತಿಶಾಸ್ತ್ರವಿಶಾರದಃ ॥ ೧೮ ॥

---

೧೪. ವಸುದೇವನು ಅವಳನ್ನು ಕರೆದುಕೊಂಡು ರಥದಲ್ಲಿ ಕುಳ್ಳಿರಿಸಿಕೊಂಡು ಪ್ರಯಾಣಮಾಡುವ ಸಮಯದಲ್ಲಿ, ಮದುವೆಯ ಸಮಾರಂಭದಲ್ಲೆಲ್ಲ ಓಡಾಡಿದ ಅವಳ ಸಹೋದರನಾದ ಕಂಸನೂ ಕೂಡ ಜತೆಯಲ್ಲಿ ಬಂದನು.

೧೫. ಈ ರೀತಿಯಾಗಿ ಆ ರಥದಲ್ಲಿಯೇ ಕಂಸನೂ ಬಹಳ ಸಂತೋಷದಿಂದ ಪ್ರಯಾಣಮಾಡುತ್ತಿರಲಾಗಿ, ಕಂಸನನ್ನು ಕುರಿತು ಆಕಾಶದಲ್ಲಿ ಅಶರೀರವಾಣಿ ಯಾಯಿತು

೧೬. ಎಲೈ ರಾಜೇಂದ್ರನೇ, ಇದೇನು ಇಷ್ಟು ಸಂತೋಷದಿಂದಿರುವೆ. ನಾನು ಹೇಳುವ ಹಿತವೂ ಸತ್ಯವೂ ಆದ ನುಡಿಯನ್ನು ಕೇಳು. ಈ ದೇವಕಿಯ ಎಂಟನೆಯ ಗರ್ಭವು ನಿನಗೆ ಮೃತ್ಯುಕಾರಣವಾಗುವುದು.

೧೭. ಈ ರೀತಿಯಾದ ದೇವವಾಣಿಯನ್ನು ಕೇಳಿ ಭಯಗೊಂಡ ಪಾಪಿಯೂ ಮಹಾಬಲಿಷ್ಠನೂ ಆದ ಕಂಸನು ಕೂಡಲೇ ಕತ್ತಿಯನ್ನೆತ್ತಿ ಬಹಳ ಕುಪಿತನಾಗಿ ದೇವಕಿಯನ್ನು ಕೊಲ್ಲಲುದ್ಯುಕ್ತನಾದನು

೧೮. ಈ ರೀತಿಯಾಗಿ ಕಂಸನು ದೇವಕಿಯ ವಧೆಗೆ ತೊಡಗಿದುದನ್ನು ನೋಡಿ, ಪ್ರಾಜ್ಞನಾದ ವಸುದೇವನು ತಾನು ತಿಳಿದಿದ್ದ ನೀತಿಶಾಸ್ತ್ರಗಳ ಸಾರವನ್ನು ಅವನಿಗೆ ಬೋಧಿಸಿದನು.

॥ ವಸುದೇವ ಉವಾಚ ॥

ರಾಜನೀತಿಂ ನ ಜಾನಾಸಿ ಶೃಣು ಮೇ ವಚನಂ ಹಿತಂ ।
ಯಶಸ್ಕರಂ ಚ ದೋಷಘ್ನಂ ಶಾಸ್ತ್ರೋಕ್ತಂ ಸಮಯೋಚಿತಂ ॥ ೧೯ ॥

ಅಸ್ಯಾ ಏವಾಷ್ಟಮೋ ಗರ್ಭೋ ಮೃತ್ಯುಶ್ಚೇತ್ತವ ಭೂಮಿಪ ।
ಇಮಾಂ ಚ ಹತ್ವಾ ದುಷ್ಕೀರ್ತಿಂ ಕರೋಷಿ ತ್ವಂ ನರಃ ಕಥಂ ॥ ೨೦ ॥

ವಧೇ ಚ ಕ್ಷುದ್ರಜಂತೂನಾಂ ಹಿಂಸಕಾನಾಂ ಚ ಪಂಡಿತಃ ।
ಕಾಷಾರ್ಪಣಂ ಸಮುತ್ಸೃಜ್ಯ ಮೃತ್ಯುಕಾಲೇ ಪ್ರಮುಚ್ಯತೇ ॥ ೨೧ ॥

ಅಹಿಂಸಕಾನಾಂ ಕ್ಷುದ್ರಾಣಾಂ ವಧಃ ಶತಗುಣಂ ಧ್ರುವಂ ।
ಪ್ರಾಯಶ್ಚಿತ್ತಂ ಮೃತ್ಯುಕಾಲೇ ಕಥಿತಂ ಪದ್ಮಯೋನಿನಾ ॥ ೨೨ ॥

---

೧೯. ವಸುದೇವ :—ಎಲೈ ರಾಜಪುತ್ರನಾದ ಕಂಸನೇ, ನಿನಗೆ ರಾಜನೀತಿಯು ತಿಳಿಯದು. ನನ್ನ ಹಿತವಚನವನ್ನು ಕೇಳು. ಶಾಸ್ತ್ರೋಕ್ತವೂ ಸಮಯೋಚಿತವೂ ಆದ ನನ್ನ ನೀತಿವಚನವನ್ನು ಕೇಳುವುದರಿಂದ ನಿನ್ನ ಅಜ್ಞಾನವು ಪರಿಹಾರವಾಗಿ ಕೀರ್ತಿಯುಂಟಾಗುವುದು.

೨೦. ಎಲೈ ರಾಜಪುತ್ರನೇ ಈ ದೇವಕಿಯ ಎಂಟನೆಯ ಗರ್ಭವು ನಿನಗೆ ಮೃತ್ಯುಪ್ರದವಾದರೆ, ನೀನು ಈಕೆಯನ್ನೇಕೆ ಕೊಂದು ದುಷ್ಕೀರ್ತಿಗೆ ಪಾತ್ರನಾಗುವೆ ?

೨೧. ಪಂಡಿತನಾದವನು ಹಿಂಸಕವಾದ ಕ್ಷುದ್ರಜಂತುಗಳ ವಧೆ ಮಾಡಿದ್ದರೂ ಕೂಡ ಆ ಪಾಪ ಪರಿಹಾರಕ್ಕಾಗಿ ಸಾಯುವ ಕಾಲದಲ್ಲಿ ಸುವರ್ಣನಾಣ್ಯವನ್ನು ದಾನಮಾಡಿ ಮುಕ್ತನಾಗುವನು.

೨೨. ಅಹಿಂಸಕವಾದ ಕ್ಷುದ್ರ ಜಂತುಗಳ ವಧೆಮಾಡಿದರೆ ಅದಕ್ಕೆ ನೂರರಷ್ಟು ಪ್ರಾಯಶ್ಚಿತ್ತ ಮಾ[illegible]ೊಳ್ಳಬೇಕು. ಮೃತ್ಯುಕಾಲದಲ್ಲಾದರೂ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಬ್ರಹ್ಮನೇ ಹೇಳಿರುವನು.

ವಧೇ ವಿಶಿಷ್ಟಜಂತೂನಾಂ ಪಶ್ವಾದೀನಾಂ ಚ ಕಾಮತಃ ।
ತತಃ ಶತಗುಣಂ ಪಾಪಂ ನಿಶ್ಚಿತಂ ಮನುರಬ್ರವೀತ್ ॥ ೨೩ ॥

ನರಾಣಾಂ ಮ್ಲೇಚ್ಛಜಾತೀನಾಂ ವಧೇ ಶತಗುಣಂ ತತಃ ।
ಮ್ಲೇಚ್ಛಾನಾಂ ಚ ಶತಾನಾಂ ಚ ಯತ್ಪಾಪಂ ಲಭತೇ ವಧೇ ॥ ೨೪ ॥

ಸಚ್ಛೂದ್ರೈಕಸ್ಯ ಚ ವಧೇ ತತ್ಪಾಪಂ ಲಭತೇ ಪುಮಾನ್ ।
ಸಚ್ಛೂದ್ರಾಣಾಂ ಶತಾನಾಂ ಚ ಯತ್ಪಾಪಂ ಲಭತೇ ವಧೇ ॥ ೨೫ ॥

ತತ್ಪಾಪಂ ಲಭತೇ ನೂನಂ ಗೋವಧೈಕೇನ ನಿಶ್ಚಿತಂ ।
ಗವಾಂ ದಶಗುಣಂ ಪಾಪಂ ಬ್ರಾಹ್ಮಣಸ್ಯ ವಧೇ ಭವೇತ್ ॥ ೨೬ ॥

ವಿಪ್ರಹತ್ಯಾಸಮಂ ಪಾಪಂ ಸ್ತ್ರೀವಧೇ ಲಭತೇ ನರಃ ।
ವಿಶೇಷತೋ ಹಿ ಭಗಿನೀ ಪೋಷ್ಯಾ ಚ ಶರಣಾಗತಾ ॥ ೨೭ ॥

---

೨೩. ಪಶುಪಕ್ಷಿಗಳೇ ಮುಂತಾದ ಸಾಧು ಪ್ರಾಣಿಗಳನ್ನು ಇಚ್ಛಾಪೂರ್ವಕವಾಗಿ ವಧೆಮಾಡಿದರೆ ಹಿಂದೆ ಹೇಳಿದುದರ ನೂರರಷ್ಟು ಪಾಪ ಸಂಘಟಿಸುವುದೆಂದು ಮನುವು ಹೇಳಿರುವನು.

೨೪-೨೬. ಮ್ಲೇಚ್ಛಜಾತಿಯ ಮನುಜರನ್ನು ಕೊಲ್ಲುವುದರಿಂದ ಅದಕ್ಕಿಂತ ನೂರರಷ್ಟು ಪಾಪ ಸಂಘಟಿಸುವುದೆಂದೂ, ನೂರು ಜನ ಮ್ಲೇಚ್ಛರನ್ನು ವಧೆ ಮಾಡುವುದರಿಂದ ಯಾವ ಪಾಪವುಂಟಾಗುವುದೋ ಆ ಪಾಪವು ಯೋಗ್ಯನಾದ ಶೂದ್ರನೊಬ್ಬನನ್ನು ವಧೆಮಾಡುವುದರಿಂದುಂಟಾಗುವುದು ನೂರುಜನ ಯೋಗ್ಯ ಶೂದ್ರರನ್ನು ವಧೆಮಾಡಿದರೆ ಸಂಘಟಿಸುವಷ್ಟು ಪಾಪವು ಒಂದು ಗೋವಿನ ವಧೆಯಿಂದುಂಟಾಗುವುದು. ಬ್ರಾಹ್ಮಣನನ್ನು ವಧೆಮಾಡಿದರೆ ಗೋವಧೆಯ ಹತ್ತರಷ್ಟು ಪಾಪ ಬರುವುದು.

೨೭. ಬ್ರಾಹ್ಮಣನ ವಧೆಮಾಡಿದರೆ ಲಭಿಸುವಷ್ಟು ಪಾಪವು ಸ್ತ್ರೀವಧೆಯಿಂದಲೂ ಸಂಘಟಿಸುವುದು. ಅದರಲ್ಲೂ ಶರಣಾಗತಳಾದ ಸಹೋದರಿಯು ಪೋಷಣೆಗೆ ಅರ್ಹಳಾಗಿರುವಳು.

ಸ್ತ್ರೀಹತ್ಯಾಶತಪಾಪಂ ಚ ಭವೇದಸ್ಯಾ ವಧೇ ನೃಪ ।
ತಪೋ ಜಪಂ ಚ ದಾನಂ ಚ ಪೂಜನಂ ತೀರ್ಥದರ್ಶನಂ ॥ ೨೮ ॥

ವಿಪ್ರಾಣಾಂ ಭೋಜನಂ ಹೋಮಂ ಸ್ವರ್ಗಾರ್ಥಂ ಕುರತೇ ಬುಧಃ ।
ಜಲಬುದ್ಬುದವತ್ಸರ್ವಂ ಸ್ವಪ್ನತುಲ್ಯಸಮಂ ಭವಂ ॥ ೨೯ ॥

ಪಶ್ಯಂತಿ ಸತತಂ ಸಂತೋ ಧರ್ಮಂ ಕುರ್ವಂತಿ ಯತ್ನತಃ ।
ಭಗಿನೀಂ ತ್ಯಜ ಧರ್ಮಿಷ್ಠ ಸ್ವವಂಶಪದ್ಮಭಾಸ್ಕರ ॥ ೩೦ ॥

ಬುಧಾಃ ಕತಿವಿಧಾಃ ಸಂತಿ ಸಭಾಯಾಂ ಪೃಚ್ಛ್ಯತಾಂ ನೃಪ ।
ಅಸ್ಯಾಶ್ಚೈವಾಷ್ಟಮೋ ಗರ್ಭೋ ಯದಪತ್ಯಂ ಭವಿಷ್ಯತಿ ॥ ೩೧ ॥

ಬಂಧೋ ತುಭ್ಯಂ ಪ್ರದಾಸ್ಯಾಮಿ ತೇನ ಮೇ ಕಿಂ ಪ್ರಯೋಜನಂ ।
ಅಥವಾ ಯಾನ್ಯಪತ್ಯಾನಿ ಭವಂತಿ ಜ್ಞಾನಿನಾಂ ವರ ॥ ೩೨ ॥

---

೨೮. ಆದುದರಿಂದ ಅವಳನ್ನು ವಧೆ ಮಾಡಿದರೆ ನೂರುಜನ ಸ್ತ್ರೀಯರನ್ನು ವಧೆಮಾಡಿದಷ್ಟು ಪಾಪ ಸಂಭವಿಸುವುದು. ಅನಂತರ ಜಪ ತಪಸ್ಸು ದಾನ, ಪೂಜೆ ಮತ್ತು ತೀರ್ಥಯಾತ್ರೆಗಳನ್ನು ಮಾಡಿದರೂ ಪರಿಹಾರವಾಗುವುದಿಲ್ಲ.

೨೯. ಸ್ತ್ರೀವಧೆ ಮಾಡಿದ ಮನುಜನು ಸ್ವರ್ಗಪ್ರಾಪ್ತಿಗಾಗಿ ವಿಪ್ರ ಭೋಜನವನ್ನು ಮಾಡಿಸಿ ದೇವತಾತೃಪ್ತಿಗಾಗಿ ಹೋಮವನ್ನು ಮಾಡಬೇಕು. ಈ ಸಂಸಾರವೆಲ್ಲವೂ ನೀರಿನ ಮೇಲಿನ ಗುಳ್ಳೆಯಂತೆಯೂ, ಸ್ವಪ್ನದೃಷ್ಟವಸ್ತುವಿನಂತೆಯೂ ಚಂಚಲವಾದುದು.

೩೦. ಆದುದರಿಂದ ಸತ್ಪುರುಷರೆಲ್ಲರೂ ವಿವೇಚನೆಯಿಂದ ಧರ್ಮಾಚರಣೆಯಲ್ಲಿ ತತ್ಪರರಾಗುವರು. ನಿನ್ನ ವಂಶವೆಂಬ ಪದ್ಮವನ್ನು ಬೆಳಗಿಸುವುದರಲ್ಲಿ ಸೂರ್ಯಸಮಾನನೂ, ಧರ್ಮಪರಾಯಣನೂ ಆದ ಎಲೈ ಕಂಸನೇ, ನೀನು ನಿನ್ನ ಸಹೋದರಿಯ ವಧೆ ಮಾಡಬೇಡ.

೩೧–೩೨. ಎಲೈ ರಾಜನೇ, ನನ್ನ ಪರಿವಾರದಲ್ಲಿ ಅನೇಕ ಪಂಡಿತರಿದ್ದಾರೆ. ಎಲ್ಲರ ಸಾಕ್ಷಿಯಾಗಿ ನಾನು ಹೇಳುವೆನು ಕೇಳು. ಈ ದೇವಕಿಯ ಎಂಟನೆಯ ಗರ್ಭದಲ್ಲಿ ಯಾವ ಮಗುವು ಜನಿಸುವುದೋ ಆ ಮಗುವನ್ನು ನಿನಗೆ ಕೊಡುವೆನು. ನನಗಿಂತ ಮತ್ತೆ ಯಾರು ನನಗೆ ಆಪ್ತರು ನೀನಿಷ್ಟಪಟ್ಟರೆ ದೇವಕಿಗೆ ಎಷ್ಟು ಮಕ್ಕ

ತಾನಿ ಸರ್ವಾಣಿ ದಾಸ್ಯಾಮಿ ತ್ವತ್ತಃ ಕೋ ಮೇ ವರಃ ಪ್ರಿಯಃ ।
ಭಗಿನೀಂ ತ್ಯಜ ರಾಜೇಂದ್ರ ಕನ್ಯಾತುಲ್ಯಾಂ ಪ್ರಿಯಾಂ ತವ ॥ ೩೩ ॥

ಮಿಷ್ಟಾನ್ನಪಾನದಾನೇನ ವರ್ಧಿತಾಂ ಮನುಜಾಂ ಸದಾ ।
ವಸುದೇವವಚಃ ಶ್ರುತ್ವಾ ತತ್ಯಾಜ ಭಗಿನೀಂ ನೃಪಃ ॥ ೩೪ ॥

ವಸುದೇವಃ ಪ್ರಿಯಾಂ ನೀತ್ವಾ ಜಗಾಮ ನಿಜಮಂದಿರೇ ।
ಕ್ರಮಾದಪತ್ಯಷಟ್ಕಂ ಚ ಯದ್ಯದ್ಭೂತಂ ಚ ನಾರದ ॥ ೩೫ ॥

ದದೌ ತಸ್ಮೈ ವಸುಃ ಸತ್ಯಾತ್ಸ ಜಘಾನ ಕ್ರಮೇಣ ತಾನ್ ।
ದೇವಕ್ಯಾಃ ಸಪ್ತಮೇ ಗರ್ಭೇ ಕಂಸೋ ರಕ್ಷಾಂ ದದೌ ಭಿಯಾ ॥ ೩೬ ॥

ರೋಹಿಣೀಜಠರೇ ಮಾಯಾ ತಮಾಕೃಷ್ಯ ರರಕ್ಷ ಚ ।
ರಕ್ಷಕಾಃ ಕಥಯಾಮಾಸುರ್ಗರ್ಭಸ್ರಾವೋ ಬಭೂವ ಹ ॥ ೩೭ ॥

---

ಳಾಗುವರೋ ಅವರೆಲ್ಲರನ್ನೂ ನಿನಗೆ ಸಮರ್ಪಿಸಿಬಿಡುವೆನು. ಆದುದರಿಂದ ಎಲೈ ರಾಜೇಂದ್ರನೇ, ನಿನ್ನ ಮಗಳಿಗೆ ಸಮಾನಳಾದ ನಿನ್ನ ಸಹೋದರಿಯನ್ನು ಉಳಿಸಿ ಕೊಡು.

೩೪. ವಸುದೇವನ ಈ ಮಾತುಗಳನ್ನು ಕೇಳಿ ಕಂಸನು, ಮಿಷ್ಟಾನ್ನಪಾನಗಳಿಂದ ಪೋಷಿಸಿ ತನ್ನ ಮಂದಿರದಲ್ಲಿಯೇ ಬೆಳೆಸಿದ ತನ್ನ ಸಹೋದರಿಯ ವಧೆ ಮಾಡದೆ ಉಳಿಸಿಕೊಟ್ಟನು

೩೫-೩೬ ಅನಂತರ ವಸುದೇವನು ತನ್ನ ಪತ್ನಿಯೊಡನೆ ತನ್ನ ಮಂದಿರಕ್ಕೆ ತೆರಳಿದನು ಎಲೈ ನಾರದನೇ, ಅಲ್ಲಿಂದ ಮುಂದೆ ಕ್ರಮವಾಗಿ ದೇವಕಿಯಲ್ಲಿ ಜನಿಸಿದ ಆರು ಮಕ್ಕಳನ್ನೂ ವಸುದೇವನು ಸ್ವಲ್ಪವೂ ವಂಚನೆಮಾಡದೆ ಕಂಸನಿಗರ್ಪಿಸಿದನು. ಕಂಸನೂ ಕೂಡ ಆ ಮಕ್ಕಳೆಲ್ಲರನ್ನೂ ಕ್ರಮವಾಗಿ ಕೊಂದನು. ಅಲ್ಲದೆ ಭೀತನಾದ ಕಂಸನು ದೇವಕಿಯ ಏಳನೆಯ ಗರ್ಭವನ್ನು ಬಹಳ ಜಾಗರೂಕತೆಯಿಂದ ನೋಡಿಕೊಳ್ಳುವಂತೆ ಕಾವಲುಗಾರರಿಗೆ ಆಜ್ಞೆಯಿತ್ತನು.

೩೭. ಆದರೂ ಮಾಯೆಯು ಆ ಗರ್ಭವನ್ನು ರೋಹಣಿಯ ಗರ್ಭಕ್ಕೆ ಸಂಕ್ರಮಿಸಿ ಕಾಪಾಡಿದಳು. ಕಾರಾಗೃಹದ ರಕ್ಷಕರೆಲ್ಲರೂ ಗರ್ಭಸ್ರಾವವುಂಟಾಯಿತೆಂದು ಕಂಸನಿಗೆ ಹೇಳಿದರು.

ತಸ್ಮಾದ್ಬಭೂವ ಭಗವಾನಾತ್ಮಾ ಸಂಕರ್ಷಣಃ ಪ್ರಭುಃ ।
ತಸ್ಯಾ ಏವಾಷ್ಟಮೋ ಗರ್ಭೋ ವಾಯುಪೂರ್ಣೋ ಬಭೂವ ಹ ॥ ೩೮ ॥

ಗತೇ ಚ ನವಮೇ ಮಾಸಿ ದಶಮೇ ಸಮುಪಸ್ಥಿತೇ ।
ದೃಷ್ಟಿಂ ದದೌ ಚ ಗರ್ಭೇ ಚ ಭಗವಾನ್ಸರ್ವದರ್ಶನಃ ॥ ೩೯ ॥

ಸ್ವಯಂ ರೂಪವತೀ ದೇವೀ ಸರ್ವಾಸಾಂ ಯೋಷಿತಾಂ ವರಾ ।
ಬಭೂವ ದರ್ಶನಾತ್ತಸ್ಯಃ ಸುಂದರೀ ಸಾ ಚತುರ್ಗುಣಾ ॥ ೪೦ ॥

ದದರ್ಶ ದೇವಕೀಂ ಕಂಸಃ ಪ್ರಫುಲ್ಲವದನೇಕ್ಷಣಾಂ ।
ತೇಜಸಾ ಪ್ರಜ್ವಲಂತೀಂ ಚ ಮಾಯಾಮಿವ ದಿಶೋ ದಶ ॥ ೪೧ ॥

ಜ್ಯೋತಿಷಾಂ ಸಂಹತಿಂ ಚೈವ ಯಥಾ ಮೂರ್ತಿಮತೀಮಿವ ।
ದೃಷ್ಟ್ವಾ ತಾಮಸುರೇಂದ್ರಶ್ಚ ವಿಸ್ಮಯಂ ಪರಮಂ ಯಯೌ ॥ ೪೨ ॥

---

೩೮. ಆ ಏಳನೆಯ ಗರ್ಭದಲ್ಲಿಯೇ ಆದಿಶೇಷನು ಬಲರಾಮನ ರೂಪದಿಂದವ ತರಿಸಿದನು. ಅನಂತರ ದೇವಕಿಯ ಎಂಟನೆಯ ಗರ್ಭವು ವಾಯುವಿನಿಂದ ಪೂರಿತವಾಯಿತು.

೩೯ ಒಂಭತ್ತು ತಿಂಗಳು ಕಳೆದು ಹತ್ತನೆಯ ತಿಂಗಳು ಬರಲಾಗಿ, ಸರ್ವ ವ್ಯಾಪಕನಾದ ಭಗವಂತನು ಆ ಗರ್ಭದಲ್ಲಿ ತನ್ನ ಕೃಪಾಕಟಾಕ್ಷವನ್ನು ಬೀರಿದನು.

೪೦ ಸ್ವತಃ ರೂಪವತಿಯೂ, ಸುಂದರಿಯರಿಗೆಲ್ಲ ಶ್ರೇಷ್ಠಳೂ ಆದ ಆ ದೇವಕಿಯು ಪರಮಾತ್ಮನ ಪದಾಮರ್ಶದಿಂದ ನಾಲ್ಕಡಿ ಸುಂದರಿಯಾದಳು.

೪೧. ಆದಿಮಾಯೆಯಂತೆ ದಶದಿಕ್ಕುಗಳನ್ನೂ ತನ್ನ ತೇಜಸ್ಸಿನಿಂದ ಬೆಳಗು ತ್ತಿದ್ದ, ಪ್ರಸನ್ನಮುಖಿಯಾದ ದೇವಕಿಯನ್ನು ಕಂಸನು ನೋಡಿದನು

೪೨. ಮೂರ್ತಿಮತ್ತಾದ ತೇಜಃಸಮೂಹದಂತಿರುವ ಆಕೆಯನ್ನು ನೋಡಿ ರಾಕ್ಷಸರಾಜನಾದ ಕಂಸನು ಅತ್ಯಂತ ವಿಸ್ಮಿತನಾದನು.

ಅಸ್ಮಾದ್ಗರ್ಭಾದಪತ್ಯಂ ಚ ಮೃತ್ಯುಬೀಜಂ ಮಮೈವ ಚ।
ಇತ್ಯೇವಮುಕ್ತ್ವಾ ಕಂಸಶ್ಚ ದದೌ ರಕ್ಷಾಂ ಪ್ರಯತ್ನತಃ।
ದೇವಕೀಂ ವಸುದೇವಂ ಚ ಸಪ್ತದ್ವಾರಂ ರರಕ್ಷ ಚ ॥ ೪೩ ॥

ಪೂರ್ಣೇ ಚ ದಶಮೇ ಮಾಸೇ ಗರ್ಭಃ ಪೂರ್ಣೋ ಬಭೂವ ಹ।
ಬಭೂವ ಸಾ ಚಲಸ್ಪಂದಾ ಜಡರೂಪಾ ಚ ನಾರದ ॥ ೪೪ ॥

ಗರ್ಭೇ ಚ ವಾಯುನಾ ಪೂರ್ಣೇ ನಿರ್ಲಿಪ್ತೋ ಭಗವಾನಜಿತ್।
ಹೃತ್ಪದ್ಮಕೋಶೇ ದೇವಕ್ಯಾ ಅಧಿಷ್ಠಾನಂ ಚಕಾರ ಹ ॥ ೪೫ ॥

ಸಾ ವಿಶ್ವಂಭರಗರ್ಭಾ ಚ ಮಂದಿರಾಭ್ಯಂತರೇ ಸತೀ।
ಉವಾಸ ಜಡರೂಪಾ ಚ ಕ್ಲೇಶಯುಕ್ತಾ ಬಭೂವ ಹ ॥ ೪೬ ॥

ಉವಾಸ ಚ ಕ್ಷಣಂ ದೇವೀ ಕ್ಷಣಮುತ್ಥಾಯ ತಿಷ್ಠತಿ।
ಕ್ಷಣಂ ವ್ರಜತಿ ಪಾದೈಕಂ ಕ್ಷಣಂ ಸ್ವಪಿತಿ ತತ್ರ ವೈ ॥ ೪೭ ॥

---

೪೩. ಈ ಎಂಟನೆಯ ಗರ್ಭದಿಂದ ಜನಿಸುವ ಶಿಶುವೇ ನನ್ನ ಮರಣಕ್ಕೆ ಕಾರಣವೆಂದು ಕಂಸನು ತಿಳಿದು ಬಹಳ ಎಚ್ಚರಿಕೆಯಿಂದ ದೇವಕೀವಸುದೇವರನ್ನು ಸೆರೆಮನೆಯಲ್ಲಿಟ್ಟು ಏಳು ಬಾಗಿಲುಗಳಲ್ಲೂ ಕಾವಲಿಟ್ಟಿದ್ದನು.

೪೪. ಹತ್ತು ತಿಂಗಳು ತುಂಬುವ ಹೊತ್ತಿಗೆ ಗರ್ಭವು ಪೂರ್ಣವಾಗಿ ಬೆಳೆಯಿತು. ಎಲೈ ನಾರದನೇ, ಆಗ ದೇವಕಿಯು ಅತ್ಯಂತ ಜಡಸ್ವಭಾವದವಳೂ ಮಂದಗಮನೆಯೂ ಆದಳು.

೪೫. ಈ ರೀತಿಯಾಗಿ ಗರ್ಭವು ವಾಯುಪೂರಿತವಾಗಿದ್ದಾಗ, ಸ್ವಯಂ ನಿರ್ಲಿಪ್ತನಾದ ಪರಮಾತ್ಮನು ದೇವಕಿಯ ಹೃತ್ಕಮಲದಲ್ಲಿ ನೆಲೆಸಿದನು

೪೬. ಪ್ರಪಂಚಕ್ಕೇ ಆಧಾರನಾದ ಪರಮಾತ್ಮನನ್ನು ಗರ್ಭದಲ್ಲಿ ಧರಿಸಿರುವ ಆ ದೇವಕಿಯು ಜಡಸ್ವಭಾವವುಳ್ಳವಳಾಗಿ ಬಹಳ ಕಷ್ಟದಿಂದ ಆ ಕಾರಾಗೃಹದ ಒಳಗಿದ್ದಳು.

೪೭. ಕ್ಷಣಕಾಲ ಕುಳಿತುಕೊಂಡೂ, ಮರುಕ್ಷಣದಲ್ಲಿ ನಿಂತುಕೊಂಡೂ, ಕ್ಷಣಕಾಲ ಒಂದೆರಡು ಹೆಜ್ಜೆ ನಡೆಯುತ್ತಲೂ, ಕ್ಷಣಕಾಲ ಅಲ್ಲಿಯೇ ಮಲಗಿಕೊಂಡೂ ಕಾಲ ಕಳೆಯುತ್ತಿದ್ದಳು

ದೃಷ್ಟ್ವಾ ಚ ದೇವಕೀಂ ಶೀಘ್ರಂ ವಸುದೇವೋ ಮಹಾಮನಾಃ ।
ಪ್ರಸೂತಿಸಮಯಂ ಜ್ಞಾತ್ವಾ ಸಸ್ಮಾರ ಹರಿಮೀಶ್ವರಂ ॥ ೪೮ ॥

ರತ್ನಪ್ರದೀಪಸಂಯುಕ್ತೇ ಮಂದಿರೇ ಸುಮನೋಹರೇ ।
ಸ್ಥಾಪಯಾಮಾಸ ಖಡ್ಗಂ ಚ ಲೋಹಂ ತೋಯಂ ಹುತಾಶನಂ ॥ ೪೯ ॥

ಮಂತ್ರಜ್ಞಂ ಚ ನರಂ ಚೈವ ಬಂಧುಪತ್ನೀರ್ಭಯಾಕುಲಃ
ವಿದ್ವಾಂಸಂ ಬ್ರಾಹ್ಮಣಂ ಚೈವ ತ್ರಸ್ತೋ ಬಂಧೂಂಶ್ಚ ಸಾದರಂ ॥ ೫೦ ॥

ಏತಸ್ಮಿನ್ನಂತರೇ ತಸ್ಯಾ ರಾತ್ರೇರ್ದ್ವೌ ಪ್ರಹರೌ ಗತೌ ।
ವ್ಯಾಪ್ತಂ ಚ ಗಗನಂ ಮೇಘೈಃ ಕ್ಷಣದ್ಯುತಿಸಮನ್ವಿತೈಃ ॥ ೫೧ ॥

ವವುಶ್ಚ ವಾಯವಶ್ಚೇಷ್ಟಾ ಯಯುರ್ನಿದ್ರಾಂ ಚ ರಕ್ಷಕಾಃ ।
ಅಚೇಷ್ಟಿತಾಶ್ಚ ಶಯನೇ ಮೃತಾ ಇವ ವಿಚೇತಸಾಃ ॥ ೫೨ ॥

---

೪೮. ಈ ರೀತಿ ದೇವಕಿಯು ಸಂಕಟಪಡುತ್ತಿರುವುದನ್ನು ನೋಡಿ ಮಹಾಜ್ಞಾನಿಯಾದ ವಸುದೇವನು ದೇವಕಿಗೆ ಪ್ರಸವಕಾಲವು ಸಮೀಪಿಸಿರುವುದೆಂದು ತಿಳಿದು, ಸರ್ವೇಶ್ವರನಾದ ಶ್ರೀಹರಿಯನ್ನು ಸ್ಮರಿಸಿಕೊಂಡನು.

೪೯ ರತ್ನದೀಪದಿಂದ ಪ್ರಜ್ವಲಿಸುತ್ತಿರುವ ಆ ಮಂದಿರದಲ್ಲಿ ಕತ್ತಿ, ಲೋಹ, ನೀರು ಮತ್ತು ಬೆಂಕಿಯನ್ನು ರಕ್ಷಾರ್ಥವಾಗಿ ಇರಿಸಿದನು.

೫೦. ದೇವಕಿಗೆ ಏನು ತೊಂದರೆಯಾಗುವದೋ ಎಂಬ ಭಯದಿಂದ, ಮಂತ್ರಜ್ಞರಾದ ಮನುಜರನ್ನೂ, ದೇವಕಿಗೆ ಆಪ್ತರಾದ ಸ್ತ್ರೀಯರನ್ನೂ, ವಿದ್ವಾಂಸರಾದ ಬ್ರಾಹ್ಮಣರನ್ನೂ ಇನ್ನೂ ಇತರ ಬಂಧುಗಳನ್ನೂ ಅಲ್ಲಿ ಬರಮಾಡಿಕೊಂಡನು.

೫೧. ಅಷ್ಟುಹೊತ್ತಿಗೆ ರಾತ್ರಿಯ ಎರಡುಝಾವ ಕಳೆಯಿತು. ಆಕಾಶವೆಲ್ಲವೂ ಮಿಂಚುಮೋಡಗಳಿಂದ ವ್ಯಾಪ್ತವಾಗಿದ್ದಿತು.

೫೨. ಮಂದಮಾರುತವು ಮನೋಹರವಾಗಿ ಬೀಸತೊಡಗಿತು. ಕಾರಾಗೃಹದ ರಕ್ಷಕರು ನಿದ್ರಿತರಾಗಿ ಸತ್ತವರಂತೆ ಅಚೇತನರಾಗಿ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದರು

ಏತಸ್ಮಿನ್ನಂತರೇ ತತ್ರ ಆಜಗ್ಮುಸ್ತ್ರಿದಶೇಶ್ವರಾಃ ।
ತುಷ್ಟುವುರ್ಧರ್ಮಬ್ರಹ್ಮೇಶಾ ಗರ್ಭಸ್ಥಂ ಪರಮೇಶ್ವರಂ ॥ ೫೩ ॥

॥ ದೇವಾ ಊಚುಃ ॥

ಜಗದ್ಯೋನಿರಯೋನಿಸ್ತ್ವಮನಂತೋಽವ್ಯಯ ಏವ ಚ ।
ಜ್ಯೋತಿಃಸ್ವರೂಪೋ ಹ್ಯನಘಃ ಸಗುಣೋ ನಿರ್ಗುಣೋ ಮಹಾನ್ ॥ ೫೪ ॥

ಭಕ್ತಾನುರೋಧಾತ್ಸಾಕಾರೋ ನಿರಾಕಾರೋ ನಿರಂಕುಶಃ ।
ನಿರ್ವ್ಯೂಹೋ ನಿಖಿಲಾಧಾರೋ ನಿಃಶಂಕೋ ನಿರುಪದ್ರವಃ ॥ ೫೫ ॥

ನಿರುಪಾಧಿಶ್ಚ ನಿರ್ಲಿಪ್ತೋ ನಿರೀಹೋ ನಿಧನಾಂತಕಃ ।
ಸ್ವಾತ್ಮಾರಾಮಃ ಪೂರ್ಣಕಾಮೋ ನಿರ್ದೋಷೋ ನಿತ್ಯ ಏವ ಚ ॥ ೫೬ ॥

ಸ್ವೇಚ್ಛಾಮಯಃ ಸರ್ವಹೇತುಃ ಸರ್ವಃ ಸರ್ವಗುಣಾಶ್ರಯಃ ।
ಸುಖದೋ ದುಃಖದೋ ದುರ್ಗೋ ದುರ್ಜನಾಂತಕ ಏವ ಚ ॥ ೫೭ ॥

---

೫೩. ಈ ಮಧ್ಯೆ ದೇವತೆಗಳೆಲ್ಲರೂ ಇಲ್ಲಿಗೆ ಬಂದರು. ದೇವಕಿಯ ಗರ್ಭದಲ್ಲಿರುವ ಪರಮಾತ್ಮನನ್ನು ಧರ್ಮ, ಬ್ರಹ್ಮ, ಈಶ್ವರ ಮುಂತಾದ ಸಕಲದೇವತೆಗಳೂ ಸ್ತುತಿಸಲಾರಂಭಿಸಿದರು

೫೪-೫೫. ದೇವತೆಗಳು : — ಎಲೈ ಪರಮಾತ್ಮನೇ ಕಾರಣವುಳ್ಳ ಜಗತ್ತಿಗ ಕಾರಣರಹಿತನಾದ ನೀನೇ ಆದಿಕಾರಣನಾಗಿರುವೆ. ಅನಂತನೂ, ಅವ್ಯಯನೂ, ಜ್ಯೋತಿರ್ಮಯನೂ, ನಿರ್ಗುಣನೂ, ನಿರ್ಲಿಪ್ತನೂ ಆದ ನೀನೇ ಭಕ್ತಾನುಗ್ರಹಕ್ಕಾಗಿ ಸಗುಣಸ್ವರೂಪನಾಗುವೆ. ನಿರಂಕುಶನೂ, ನಿಃಶಂಕನೂ, ನಿರುಪದ್ರವನೂ ಆದ ನೀನೇ ನಿಖಿಲಪ್ರಪಂಚಕ್ಕೂ ಆಧಾರನಾಗಿರುವೆ.

೫೬. ಆಶ್ರಯರಹಿತನೂ, ಇಚ್ಛಾರಹಿತನೂ, ಸ್ವಾತ್ಮಾರಾಮನೂ, ಪೂರ್ಣಕಾಮನೂ, ನಿರ್ದೋಷನೂ ಆದ ಎಲೈ ಪರಮಾತ್ಮನೇ ನೀನೊಬ್ಬನೇ ನಿತ್ಯನಾಗಿರುವೆ.

೫೭. ಸ್ವೇಚ್ಛಾಮಯನೂ, ಸರ್ವಕಾರಣನೂ, ಸರ್ವಗುಣಗಳಿಗೆ ಆಶ್ರಯನೂ, ಸುಖದುಃಖದಾಯಕನೂ, ದುಷ್ಟರಿಗೆ ವಿಘ್ನರೂಪನೂ ಆದ ನೀನೇ ದುರ್ಜನರಿಗೆ ಅಂತಕನಾಗಿರುವೆ.

ಸುಭಗೋ ದುರ್ಭಗೋ ವಾಗ್ಮೀ ದುರಾರಾಧ್ಯೋ ದುರತ್ಯಯಃ ।
ವೇದಹೇತುಶ್ಚ ವೇದಾಶ್ಚ ವೇದಾಂಗೋ ವೇದವಿದ್ವಿಭುಃ　　॥ ೫೮ ॥

ಇತ್ಯೇವಮುಕ್ತ್ವಾ ದೇವಾಶ್ಚ ಪ್ರಣೇಮುಶ್ಚ ಮುಹುರ್ಮುಹುಃ ।
ಹರ್ಷಾಶ್ರುಲೋಚನಾಃ ಸರ್ವೇ ವವೃಷುಃ ಕುಸುಮಾನಿ ಚ　　॥ ೫೯ ॥

ದ್ವಿಚತ್ವಾರಿಂಶನ್ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।
ದೃಢಾಂ ಭಕ್ತಿಂ ಹರೇರ್ದಾಸ್ಯಂ ಲಭತೇ ವಾಂಛಿತಂ ಫಲಂ　　॥ ೬೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಬ್ರಹ್ಮಾದಿಕೃತ ಶ್ರೀಕೃಷ್ಣಸ್ತೋತ್ರಂ

॥ ನಾರಾಯಣ ಉವಾಚ ॥

ಇತ್ಯೇವಂ ಸ್ತವನಂ ಕೃತ್ವಾ ದೇವಾಸ್ತೇ ಸ್ವಾಲಯಂ ಯಯುಃ　　॥ ೬೧ ॥

---

೫೮. ಸೌಭಾಗ್ಯ ದೌರ್ಭಾಗ್ಯಗಳಿಗೆ ಕಾರಣನೂ, ವಾಕ್ಚತುರನೂ, ದುರಾರಾಧ್ಯನೂ, ದುರತಿಕ್ರಮನೂ, ವೇದಗಳಿಗೆ ಕಾರಣನೂ, ವೇದವೇತ್ತೃವೂ ಆದ ನೀನೇ ವಿಶ್ವವ್ಯಾಪಕನಾಗಿರುವೆ.

೫೯. ಈ ರೀತಿಯಾಗಿ ಸ್ತುತಿಸಿ ದೇವತೆಗಳು ಪರಮಾತ್ಮನಿಗೆ ಪುನಃಪುನಃ ನಮಸ್ಕರಿಸಿದರು. ಕಣ್ಣುಗಳಲ್ಲಿ ಆನಂದಾಶ್ರುಪರಿಪೂರ್ಣರಾಗಿ, ಪರಮಾತ್ಮನ ಮೇಲೆ ಹೂಮಳೆಗರೆದರು.

೬೦ ಈ ನಲವತ್ತೆರಡು ದಿವ್ಯನಾಮಗಳನ್ನು ಪ್ರಾತಃಕಾಲದಲ್ಲೆದ್ದು ಯಾರು ಪಠಿಸುವರೋ ಅವರಿಗೆ ದೃಢವಾದ ಭಕ್ತಿಯೂ, ಶ್ರೀಹರಿಯ ದಾಸ್ಯವೂ, ವಾಂಛಿತಾರ್ಥಸಿದ್ಧಿಯೂ ಲಭಿಸುವುದು.

ಇಲ್ಲಿಗೆ ಬ್ರಹ್ಮವೈವರ್ತ ಪುರಾಣದಲ್ಲಿ ಬ್ರಹ್ಮಾದಿ ದೇವತೆಗಳು ಮಾಡಿದ ಶ್ರೀಕೃಷ್ಣಸ್ತೋತ್ರವು ಮುಗಿದುದು.

೬೧. ನಾರಾಯಣಮಹರ್ಷಿ :—ದೇವತೆಗಳೆಲ್ಲರೂ ಈ ರೀತಿಯಾಗಿ ಸ್ತೋತ್ರಮಾಡಿ ತಮ್ಮ ತಮ್ಮ ಮಂದಿರಕ್ಕೆ ಹಿಂತಿರುಗಿದರು.

ಬಭೂವ ಜಲವೃಷ್ಟಿಶ್ಚ ನಿಶ್ಚೇಷ್ಟಾ ಮಥುರಾ ಪುರೀ ।
ಘೋರಾಂಧಕಾರನಿಬಿಡಾ ಬಭೂವ ಯಾಮಿನೀ ಮುನೇ ॥ ೬೨ ॥

ಗತೇ ಸಪ್ತಮುಹೂರ್ತೇ ತು ಚಾಷ್ಟಮೇ ಸಮುಪಸ್ಥಿತೇ
ವೇದಾತಿರಿಕ್ತದುಜ್ಞೇಯೇ ಸರ್ವೋತ್ಕೃಷ್ಟೇ ಶುಭೇ ಕ್ಷಣೇ ॥ ೬೩ ॥

ಶುಭಗ್ರಹೇ ದೃಷ್ಟಿಯುಕ್ತೇಽಪ್ಯದೃಷ್ಟೇ ಚಾಶುಭಗ್ರಹೇ ।
ಅರ್ಧರಾತ್ರೇ ಸಮುತ್ಪನ್ನೇ ರೋಹಿಣ್ಯಾಮಷ್ಟಮೀ ತಿಥೌ ॥ ೬೪ ॥

ಜಯಂತೀಯೋಗಸಂಯುಕ್ತೇ ಚಾರ್ಧಚಂದ್ರೋದಯೇ ಮುನೇ ।
ದೃಷ್ಟ್ವಾ ದೃಷ್ಟ್ವಾ ಕ್ಷಣಂ ಲಗ್ನಂ ಭೀತಾಃ ಸೂರ್ಯಾದಯಸ್ತಥಾ ॥ ೬೫ ॥

ಗಗನೇ ಕ್ರಮಮುಲ್ಲಂಘ್ಯ ಜಗ್ಮುರ್ಮೀನಂ ಶುಭಾವಹಾಃ ।
ಸುಪ್ರಸನ್ನಾ ಗ್ರಹಾಃ ಸರ್ವೇ ಬಭೂವುಸ್ತತ್ರ ಸಂಸ್ಥಿತಾಃ ॥ ೬೬ ॥

---

೬೨. ಮಥುರಾಪಟ್ಟಣವೆಲ್ಲವೂ ನಿಶ್ಚೇಷ್ಟವಾಗಿದ್ದ ಆ ಸಮಯದಲ್ಲಿ ಜೋರಾಗಿ ಮಳೆಗರೆಯಲಾರಂಭವಾಯಿತು. ಆ ರಾತ್ರಿಯು ಗಾಢಾಂಧಕಾರದಿಂದ ಬಹಳ ಭಯಂಕರವಾಗಿದ್ದಿತು.

೬೩. ಹೀಗೆ ಏಳು ಮುಹೂರ್ತಗಳು ಕಳೆದು ಎಂಟನೆಯ ಮುಹೂರ್ತವು ಬರಲು, ನಿಗಮಾತೀತವೂ, ಸರ್ವೋತ್ಕೃಷ್ಟವೂ ಆದ ಶುಭಕ್ಷಣ ಸಮೀಪಿಸಿತು.

೬೪. ಅಶುಭಗ್ರಹಗಳೆಲ್ಲಾ ದೂರವಾಗಿ ಶುಭಗ್ರಹಗಳ ದೃಷ್ಟಿ ಬಿದ್ದಿರುವ ರೋಹಿಣೀನಕ್ಷತ್ರಯುತವಾದ ಅಷ್ಟಮೀ ತಿಥಿಯ ಅರ್ಧರಾತ್ರಿಯು ಸನ್ನಿಹಿತವಾಯಿತು.

೬೫-೬೬. ಎಲೈ ನಾರದಮುನಿಯೇ, ಜಯಂತೀಯೋಗಯುಕ್ತವೂ, ಅರ್ಧಚಂದ್ರೋದಯಯುತವೂ ಆದ ಆ ಶುಭಲಗ್ನವನ್ನು ನೋಡಿ ಸೂರ್ಯಾದಿಗ್ರಹಗಳು ವಿಷಮಸ್ಥಾನದಲ್ಲಿರಲು ಭೀತರಾಗಿ, ಆಕಾಶದಲ್ಲಿ ತಮ್ಮ ಸಂಚಾರಕ್ರಮವನ್ನು ಮೀರಿ ಮೀನರಾಶಿಗೆ ಬಂದು ಸೇರಿದರು ಒಟ್ಟಿನಲ್ಲಿ ಸಮಸ್ತಗ್ರಹಗಳೂ ಪ್ರಸನ್ನವಾಗಿದ್ದವು.

ಏಕಾದಶಾಸ್ತೇ ಪ್ರೀತ್ಯಾ ಚ ಮುಹೂರ್ತಂ ಧಾತುರಾಜ್ಞಯಾ ।
ವವರ್ಷುಶ್ಚ ಜಲಧರಾ ವವುರ್ವಾತಾಃ ಸುಶೀತಲಾಃ ॥ ೧೭ ॥

ಸುಪ್ರಸನ್ನಾ ಚ ಪೃಥಿವೀ ಪ್ರಸನ್ನಾಶ್ಚ ದಿಶೋ ದಶ ।
ಋಷಯೋ ಮುನಯಶ್ಚೈವ ಯಕ್ಷಗಂಧರ್ವಕಿನ್ನರಾಃ ॥ ೧೮ ॥

ದೇವಾದೇವ್ಯಶ್ಚ ಮುದಿತಾ ನನೃತುಶ್ಚಾಪ್ಸರೋಗಣಾಃ ।
ಜಗುರ್ಗಂಧರ್ವಪತಯೋ ವಿದ್ಯಾಧರ್ಯಶ್ಚ ನಾರದ ॥ ೧೯ ॥

ಸುಖೇನ ಸುಸ್ರುವುರ್ನದ್ಯೋ ಜಜ್ವಲುಶ್ಚಾಗ್ನಯೋ ಮುದಾ ।
ನೇದುರ್ದುಂದುಭಯೋ ನಾಕೇ ಚಾನಕಾಶ್ಚ ಮನೋಹರಾಃ ॥ ೨೦ ॥

ಪಾರಿಜಾತಪ್ರಸೂನಾನಾಂ ಮಹಾವೃಷ್ಟಿರ್ಬಭೂವ ಹ ।
ಜಗಾಮ ಸೂತಿಕಾಗೇಹಂ ನಾರೀರೂಪಂ ವಿಧಾಯ ಭೂಃ ॥ ೨೧ ॥

---

೧೭. ಅವುಗಳೆಲ್ಲ ಏಕಾದಶಸ್ಥಾನದಲ್ಲಿ, ಪ್ರೀತಿಯಿಂದ ಮುಹೂರ್ತಕಾಲ ಬ್ರಹ್ಮನ ಅನುಜ್ಞೆಯಂತೆ ಪ್ರಸನ್ನವಾಗಿದ್ದವು. ಮೋಡಗಳು ಹೂಮಳೆಗರೆದವು. ಗಾಳಿಯು ತಣ್ಣಗೆ ಬೀಸಲಾರಂಭಿಸಿತು.

೧೮. ಭೂಮಂಡಲವೂ ದಶದಿಕ್ಕುಗಳೂ ಪ್ರಸನ್ನವಾದುವು. ಋಷಿಗಳೂ, ಮನುಗಳೂ, ಯಕ್ಷಗಂಧರ್ವಕಿನ್ನರರೂ ಪ್ರಸನ್ನರಾದರು.

೧೯. ದೇವದೇವಿಯರೂ, ಅಪ್ಸರೆಯರೂ ನರ್ತನಮಾಡಿದರು. ಗಂಧರ್ವ ಪತಿಗಳೂ ವಿದ್ಯಾಧರಸ್ತ್ರೀಯರೂ ಶ್ರುತಿಮಧುರವಾಗಿ ಹಾಡಿದರು.

೨೦. ನದಿಗಳು ನಿರ್ಮಲವಾಗಿ ಹರಿದವು. ಅಗ್ನಿಯು ಪ್ರದಕ್ಷಿಣಾಕಾರವಾಗಿ ಜ್ವಲಿಸುತ್ತಿದ್ದಿತು. ಸ್ವರ್ಗಲೋಕದಲ್ಲಿ ನಗಾರಿ ಮತ್ತು ತಮಟೆಗಳು ಮನೋಹರವಾಗಿ ಧ್ವನಿಗೈಯ್ಯುತ್ತಿದ್ದವು

೨೧. ಪಾರಿಜಾತಪುಷ್ಪಗಳ ಮಳೆಯು ಧಾರಾಕಾರವಾಗಿ ಸುರಿಯಿತು ಕೂಡಲೇ, ಭೂದೇವಿಯು ಸ್ತ್ರೀರೂಪವನ್ನು ಧರಿಸಿ ಸೂತಿಕಾಮಂದಿರವೊಳಕ್ಕೆ ಪ್ರವೇಶಿಸಿದಳು.

ಜಯಶಬ್ದಃ ಶಂಖಶಬ್ದೋ ಹರಿಶಬ್ದೋ ಬಭೂವ ಹ ।
ಏತಸ್ಮಿನ್ನಂತರೇ ತತ್ರ ಪಪಾತ ದೇವಕೀ ಸತೀ ॥ ೭೨ ॥

ನಿಃಸಸಾರ ಚ ವಾಯುಶ್ಚ ದೇವಕೀಜಠರಾತ್ತತಃ ।
ತತ್ರೈವ ಭಗವಾನ್ಕೃಷ್ಣೋ ದಿವ್ಯರೂಪಂ ವಿಧಾಯ ಚ ॥ ೭೩ ॥

ಹೃತ್ಪದ್ಮಕೋಶಾದ್ದೇವಕ್ಯಾ ಹರಿರಾವಿರ್ಬಭೂವ ಹ ।
ಅತೀವ ಕಮನೀಯಂ ಚ ಶರೀರಂ ಸುಮನೋಹರಂ ॥ ೭೪ ॥

ದ್ವಿಭುಜಂ ಮುರಲೀಹಸ್ತಂ ಸ್ಫುರನ್ಮಕುಟಕುಂಡಲಂ ।
ಈಷದ್ಧಾಸ್ಯಂ ಪ್ರಸನ್ನಾಸ್ಯಂ ಭಕ್ತಾನುಗ್ರಹಕಾತರಂ ॥ ೭೫ ॥

ಮಣಿರತ್ನೇಂದ್ರಸಾರಾಣಾಂ ಭೂಷಣೈಶ್ಚ ವಿಭೂಷಿತಂ ।
ನವೀನನೀರದಶ್ಯಾಮಂ ಶೋಭಿತಂ ಪೀತವಾಸಸಾ ॥ ೭೬ ॥

---

೭೨. ಎಲ್ಲೆಲ್ಲೂ ಜಯಧ್ವನಿಯೂ, ಶಂಖಧ್ವನಿಯೂ ಕುದುರೆಗಳು ಕೆನೆಯುವ ಧ್ವನಿಯೂ ಕೇಳಿತು. ಇಷ್ಟು ಹೊತ್ತಿಗೆ ದೇವಕಿಯು ಪ್ರಸವವೇದನೆಯಿಂದ ಭೂಮಿಯ ಮೇಲೆ ಮಲಗಿಕೊಂಡಳು.

೭೩-೭೪. ಅನಂತರದಲ್ಲಿ ದೇವಕಿಯ ಗರ್ಭದಿಂದ ವಾಯುವು ಹೊರಕ್ಕೆ ಬಂದಿತು. ಆಗಲೇ ಭಗವಂತನಾದ ಕೃಷ್ಣನು ಮನೋಹರವಾದ ಶರೀರವನ್ನೂ ದಿವ್ಯ ಸುಂದರಾಕಾರವನ್ನೂ ಧರಿಸಿ ದೇವಕಿಯ ಹೃದಯಾರವಿಂದದಿಂದ ಆವಿರ್ಭವಿಸಿದನು.

೭೫. ದ್ವಿಭುಜನೂ, ಮುರಳೀಧರನೂ, ಕಿರೀಟಕುಂಡಲಗಳಿಂದ ಶೋಭಿತನೂ ಆದ ಆ ಶ್ರೀಕೃಷ್ಣನು ಮಂದಹಾಸದಿಂದ ಪ್ರಸನ್ನಮುಖನಾಗಿ ಭಕ್ತರಿಗೆ ಅನುಗ್ರಹ ಮಾಡಲು ಕಾತರನಾಗಿದ್ದನು.

೭೬. ಶ್ರೇಷ್ಠವಾದ ಮಣಿರತ್ನಗಳ ಭೂಷಣಗಳಿಂದ ಭೂಷಿತನಾಗಿ, ನವ ಮೇಘದಂತೆ ಶ್ಯಾಮಲವರ್ಣನಾಗಿದ್ದ ಆ ಶ್ರೀಕೃಷ್ಣನು ಪೀತಾಂಬರದಿಂದ ಶೋಭಿತನಾಗಿದ್ದನು

ಚಂದನಾಗುರುಕಸ್ತೂರೀಕುಂಕುಮದ್ರವಚರ್ಚಿತಂ ।
ಶರತ್ಪಾರ್ವಣಚಂದ್ರಾಸ್ಯಂ ಬಿಂಬಾಧರಮನೋಹರಂ ॥ ೭೭ ॥

ಮಯೂರಪಿಚ್ಛಚೂಡಂ ಚ ಸದ್ರತ್ನಮುಕುಟೋಜ್ಜ್ವಲಂ ।
ತ್ರಿಭಂಗವಕ್ರಮಧ್ಯಂ ಚ ವನಮಾಲಾವಿಭೂಷಿತಂ ॥ ೭೮ ॥

ಶ್ರೀವತ್ಸವಕ್ಷಸಂ ಚಾರು ಕೌಸ್ತುಭೇನ ವಿರಾಜಿತಂ ।
ಕಿಶೋರವಯಸಂ ಶಾಂತಂ ಕಾಂತಂ ಬ್ರಹ್ಮೇಶಯೋಃ ಪರಂ ॥ ೭೯ ॥

ದದರ್ಶ ವಸುದೇವಶ್ಚ ದೇವಕೀಪುರತೋ ಮುನೇ ।
ತುಷ್ಟಾವ ಪರಯಾ ಭಕ್ತ್ಯಾ ವಿಸ್ಮಯಂ ಪರಮಂ ಯಯೌ ॥ ೮೦ ॥

ಕೃತಾಂಜಲಿಪುಟೋ ಭೂತ್ವಾ ಭಕ್ತಿನಮ್ರಾತ್ಮಕಂಧರಃ ।
ಸಾಶ್ರುಪೂರ್ಣಃ ಸಪುಲಕೋ ದೇವಕ್ಯಾ ಚ ಸ್ತ್ರಿಯಾ ಸಹ ॥ ೮೧ ॥

---

೭೭. ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮದ್ರವಗಳನ್ನು ಲೇಪನ ಮಾಡಿಕೊಂಡಿದ್ದ ಅವನ ಮುಖವು ಶರತ್ಪೂರ್ಣಿಮಾಚಂದ್ರನಂತೆಯೂ, ಕೆಳದುಟಿಯು ತೊಂಡೆ ಹಣ್ಣಿನಂತೆಯೂ ಮನೋಹರವಾಗಿದ್ದಿತು.

೭೮. ತಲೆಯ ಮೇಲೆ ರತ್ನದ ಕಿರೀಟವನ್ನಿಟ್ಟು ಕೇಶಪಾಶಗಳಲ್ಲಿ ನವಿಲುಗರಿಗಳನ್ನು ಧರಿಸಿದ್ದನು ವನಮಾಲೆಯಿಂದ ಶೋಭಿತನಾದ ಆ ಶ್ರೀಕೃಷ್ಣನ ಕಟಿಪ್ರದೇಶವು ತ್ರಿವಳಿಗಳಿಂದ ಮಡಿಕೆಮಡಿಕೆಯಾಗಿಯೂ, ದರ್ಶನೀಯವಾಗಿಯೂ ಇದ್ದಿತು.

೭೯. ಅವನ ವಕ್ಷಃಸ್ಥಲದಲ್ಲಿ ಶ್ರೀವತ್ಸನೆಂಬ ಮಚ್ಚೆಯೂ ಸುಂದರವಾದ ಕೌಸ್ತುಭಮಣಿಯೂ, ಶೋಭಿಸುತ್ತಿದ್ದವು. ಗೋಪಕಿಶೋರವೇಷಧರನಾದ ಆ ಶ್ರೀಕೃಷ್ಣನು ಬ್ರಹ್ಮ ಮತ್ತು ಈಶ್ವರನಿಗಿಂತಲೂ ಮನೋಹರನಾಗಿದ್ದನು.

೮೦. ಎಲೈ ನಾರದನೇ, ದೇವಕಿಯ ಮುಂದಿದ್ದ ಆ ಶಿಶುವನ್ನು ವಸುದೇವನು ನೋಡಿ ಪರಮಾನಂದ ತುಂದಿಲನಾಗಿ ಪರಮಭಕ್ತಿಯಿಂದ ಸ್ತುತಿಸಲಾರಂಭಿಸಿದನು.

೮೧. ತನ್ನ ಪತ್ನಿಯಾದ ದೇವಕಿಯೊಡನೆ ಕೈಮುಗಿದುಕೊಂಡು ಭಕ್ತಿಯಿಂದ ತಲೆಬಾಗಿ, ಕಣ್ಣುಗಳಲ್ಲಿ ಆನಂದ ಬಾಷ್ಪವನ್ನು ಸುರಿಸುತ್ತ ರೋಮಾಂಚಿತ ಶರೀರನಾಗಿ ಸ್ತುತಿಸಲಾರಂಭಿಸಿದನು.

|| ವಸುದೇವ ಉವಾಚ ||

ಶ್ರೀಮಂತಮಿಂದ್ರಿಯಾತೀತಮಕ್ಷರಂ ನಿರ್ಗುಣಂ ವಿಭುಂ ।
ಧ್ಯಾನಾಸಾಧ್ಯಂ ಚ ಸರ್ವೇಷಾಂ ಪರಮಾತ್ಮಾನಮೀಶ್ವರಂ || ೮೨ ||

ಸ್ವೇಚ್ಛಾಮಯಂ ಸರ್ವರೂಪಂ ಸ್ವೇಚ್ಛಾರೂಪಧರಂ ಪರಂ ।
ನಿರ್ಲಿಪ್ತಂ ಪರಮಂ ಬ್ರಹ್ಮ ಬೀಜರೂಪಂ ಸನಾತನಂ || ೮೩ ||

ಸ್ಥೂಲಾತ್ಸ್ಥೂಲತರಂ ವ್ಯಾಪ್ತಮತಿಸೂಕ್ಷ್ಮಮದರ್ಶನಂ ।
ಸ್ಥಿತಂ ಸರ್ವಶರೀರೇಷು ಸಾಕ್ಷಿರೂಪಮದೃಶ್ಯಕಂ || ೮೪ ||

ಶರೀರವಂತಂ ಸಗುಣಮಶರೀರಂ ಗುಣೋತ್ಕರಂ ।
ಪ್ರಕೃತಿಂ ಪ್ರಕೃತೀಶಂ ಚ ಪ್ರಾಕೃತಂ ಪ್ರಕೃತೇಃ ಪರಂ || ೮೫ ||

---

೮೨ ವಸುದೇವ :—ಎಲೈ ಪರಮಾತ್ಮನೇ ಇಂದ್ರಿಯಗಳಿಗೆ ಗೋಚರವಾಗದವನೂ, ನಾಶರಹಿತನೂ, ನಿರ್ಗುಣನೂ, ವಿಶ್ವವ್ಯಾಪಕನೂ, ಧ್ಯಾನದುರ್ಲಭನೂ ಸರ್ವೇಶ್ವರನೂ ಆದ ನಿನ್ನನ್ನು ನಾನೆಂತು ನುತಿಸಲಿ ?

೮೩. ಸ್ವೇಚ್ಛಾಮಯನಾದ ನೀನು ಸ್ವೇಚ್ಛಾರೂಪಧರನಾದುದರಿಂದ ಎಲ್ಲ ರೂಪಗಳಲ್ಲೂ ಇರುತ್ತೀಯೆ. ನಿರ್ಲಿಪ್ತನೂ, ಅನಾದಿಯೂ ಜಗತ್ತಿಗೆ ಬೀಜಸ್ವರೂಪನೂ, ಪರಬ್ರಹ್ಮವಸ್ತುವೂ ಆದ ನಿನ್ನನ್ನು ನಾನು ಹೇಗೆ ಸ್ತುತಿಸಲಿ.

೮೪. ವಿಶ್ವವ್ಯಾಪಕನಾದುದರಿಂದ ಸ್ಥೂಲವಾದ ವಸ್ತುಗಳೆಲ್ಲಕ್ಕಿಂತ ಸ್ಥೂಲನೂ ಅತೀಂದ್ರಿಯನಾದುದರಿಂದ ಸೂಕ್ಷ್ಮವಸ್ತುಗಳೆಲ್ಲಕ್ಕಿಂತ ಸೂಕ್ಷ್ಮನೂ, ಅದೃಶ್ಯನಾದರೂ ಎಲ್ಲ ಶರೀರಗಳಲ್ಲೂ ಸಾಕ್ಷಿರೂಪದಿಂದಿರುವವನೂ ಆದ ನಿನ್ನನ್ನು ನಾನು ಸ್ತುತಿಸಬಲ್ಲೆನೆ ?

೮೫. ನೀನೊಬ್ಬನೇ ಶರೀರಿಯೂ, ಅಶರೀರಿಯೂ ಗುಣವಂತನೂ ಗುಣಾತೀತನೂ ಆಗಿರುವೆ. ಪ್ರಕೃತಿಸ್ವರೂಪನೂ ಪ್ರಕೃತಿಗೊಡೆಯನೂ, ಪ್ರಕೃತ್ಯತೀತನೂ ಪ್ರಾಕೃತನೂ ಆದ ನಿನ್ನನ್ನು ನಾನೆಂತು ನುತಿಸಲಿ ?

ಸರ್ವೇಶಂ ಸರ್ವರೂಪಂ ಚ ಸರ್ವಾಂತಕರಮವ್ಯಯಂ ।
ಸರ್ವಾಧಾರಂ ನಿರಾಧಾರಂ ನಿರ್ವ್ಯೂಹಂ ಸ್ತೌಮಿ ಕಿಂ ವಿಭುಂ　　॥ ೮೬ ॥

ಅನಂತಃ ಸ್ತವನೇಽಶಕ್ತೋಽಶಕ್ತಾ ದೇವೀ ಸರಸ್ವತೀ ।
ಯಂ ವಾ ಸ್ತೋತುಮಶಕ್ತಶ್ಚ ಪಂಚವಕ್ತ್ರಃ ಷಡಾನನಃ　　॥ ೮೭ ॥

ಚತುರ್ಮುಖೋ ವೇದಕರ್ತಾ ಯಂ ಸ್ತೋತುಮಕ್ಷಮಃ ಸದಾ ।
ಗಣೇಶೋ ನ ಸಮರ್ಥಶ್ಚ ಯೋಗೀಂದ್ರಾಣಾಂ ಗುರೋರ್ಗುರುಃ　　॥ ೮೮ ॥

ಋಷಯೋ ದೇವತಾಶ್ಚೈವ ಮುನೀಂದ್ರಮನುಮಾನವಾಃ ।
ಸ್ವಪ್ನೇ ತೇಷಾಮದೃಶ್ಯಂ ಚ ತ್ವಾಮೇವಂ ಕಿಂ ಸ್ತುವಂತಿ ತೇ　　॥ ೮೯ ॥

ಶ್ರುತಯಃ ಸ್ತವನೇಽಶಕ್ತಾಃ ಕಿಂ ಸ್ತುವಂತಿ ವಿಪಶ್ಚಿತಃ ।
ವಿಹಾಯೈವಂ ಶರೀರಂ ಚ ಬಾಲೋ ಭವಿತುಮರ್ಹಸಿ　　॥ ೯೦ ॥

---

೮೬. ಸರ್ವೇಶ್ವರನೂ, ಸರ್ವರೂಪನೂ, ಸರ್ವನಾಶಕನೂ, ಸ್ವಯಂ ನಾಶರಹಿತನೂ, ಸರ್ವಾಧಾರನೂ ಸ್ವತಃ ನಿರಾಧಾರನೂ ನಿರ್ಲಿಪ್ತನೂ ವಿಶ್ವ ವ್ಯಾಪಕನೂ ಆದ ನಿನ್ನನ್ನು ಏನೆಂದು ಸ್ತುತಿಸಲಿ?

೮೭. ನಿನ್ನನ್ನು ಸಾವಿರಬಾಯುಳ್ಳ ಆದಿಶೇಷನು ಸ್ತುತಿಸಲಾರನು? ವಾಗ್ದೇವತೆಯಾದ ಸರಸ್ವತಿಯು ಸ್ತುತಿಸಲಾರಳು. ಐದುಮುಖವುಳ್ಳ ಶಿವನಾಗಲೀ ಆರುಮುಖವುಳ್ಳ ಕಾರ್ತಿಕೇಯನಾಗಲೀ, ನಿನ್ನನ್ನು ಸ್ತುತಿಸಲಾರನು.

೮೮. ವೇದವೇತ್ತೃವಾದ ಚತುರ್ಮುಖನು ನಿನ್ನನ್ನು ಸ್ತುತಿಸಲಾರನು ಯೋಗಿಶ್ರೇಷ್ಠರ ಗುರುಗಳಿಗೆಲ್ಲ ಗುರುವೆನಿಸಿದ ಗಣಪತಿಯೂ ನಿನ್ನನ್ನು ಬಣ್ಣಿಸ ಲಾರನು

೮೯. ಋಷಿಗಳಿಗೂ, ದೇವತೆಗಳಿಗೂ, ಮನುಮುನಿಮಾನವರಿಗೂ, ಸ್ವಪ್ನ ದಲ್ಲಿಯೂ ಅದೃಶ್ಯನಾದ ನಿನ್ನನ್ನು ಅವರು ಹೇಗೆತಾನೆ ಸ್ತುತಿಸಿ ಯಾರು?

೯೦. ಚತುರ್ವೇದಗಳೇ ನಿನ್ನ ಸ್ತುತಿಯಲ್ಲಿ ಕುಂಠಿತವಾಗುವುವು. ಇನ್ನು ವಿದ್ವಾಂಸರೆಂತು ಸ್ತುತಿಸಬಲ್ಲರು. ಅಶರೀರಿಯಾದ ನೀನು ಈಗ ಬಾಲರೂಪಧರ ನಾಗಿರುವೆ.

ವಸುದೇವಕೃತಂ ಸ್ತೋತ್ರಂ ತ್ರಿಸಂಧ್ಯಂ ಯಃ ಪಠೇನ್ನರಃ ।
ಭಕ್ತಿಂ ದಾಸ್ಯಮವಾಪ್ನೋತಿ ಶ್ರೀಕೃಷ್ಣಚರಣಾಂಬುಜೇ ॥ ೯೧ ॥

ವಿಶಿಷ್ಟಪುತ್ರಂ ಲಭತೇ ಹರಿದಾಸಂ ಗುಣಾನ್ವಿತಂ ।
ಸಂಕಟಂ ವಿಸ್ತರೇತ್ತೂರ್ಣಂ ಶತ್ರುಭೀತ್ಯಾ ಪ್ರಮುಚ್ಯತೇ ॥ ೯೨ ॥

॥ ಇತಿ ಶ್ರೀ ಬ್ರಹ್ಮವೈವರ್ತೇ ॥
॥ ವಸುದೇವಕೃತಂ ಶ್ರೀಕೃಷ್ಣಸ್ತೋತ್ರಂ ॥
॥ ನಾರಾಯಣ ಉವಾಚ ॥

ವಸುದೇವವಚಃ ಶ್ರುತ್ವಾ ತಮುವಾಚ ಹರಿಃ ಸ್ವಯಂ ।
ಪ್ರಸನ್ನವದನಃ ಶ್ರೀಮಾನ್ ಭಕ್ತಾನುಗ್ರಹಕಾತರಃ ॥ ೯೩ ॥

॥ ಶ್ರೀಕೃಷ್ಣ ಉವಾಚ ॥

ತಪಸಾಂ ಚ ಫಲೇನೈವ ಪುತ್ರೋಽಹಂ ತವ ಸಾಂಪ್ರತಂ ।
ವರಂ ವೃಣೀಷ್ವ ಭದ್ರಂ ತೇ ಭವಿಷ್ಯತಿ ನ ಸಂಶಯಃ ॥ ೯೪ ॥

---

೯೧. ವಸುದೇವನು ಮಾಡಿದ ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ ಯಾರು ಭಕ್ತಿಪೂರ್ವಕವಾಗಿ ಪಠಿಸುವರೋ ಅವರಿಗೆ ಶ್ರೀಕೃಷ್ಣನ ಚರಣಕಮಲದಲ್ಲಿ ಭಕ್ತಿಯೂ ದಾಸ್ಯವೂ ದೊರೆಯುವುದು.

೯೨. ಅವನು ವಿಷ್ಣುಭಕ್ತನೂ ಗುಣವಂತನೂ ಆದ ಪುತ್ರನನ್ನು ಪಡೆಯುವುದಲ್ಲದೆ ಸಂಕಟಗಳಿಂದಲೂ, ಶತ್ರುಭಯದಿಂದಲೂ ಜಾಗ್ರತೆ ಪಾರಾಗುವನು.

ಇಲ್ಲಿಗೆ ಬ್ರಹ್ಮವೈವರ್ತ ಪುರಾಣದಲ್ಲಿ ವಸುದೇವನುಮಾಡಿದ ಶ್ರೀಕೃಷ್ಣನ
ಸ್ತೋತ್ರವು ಮುಗಿದುದು.

೯೩. ನಾರಾಯಣಮಹರ್ಷಿ :—ವಸುದೇವನ ಸ್ತೋತ್ರವನ್ನು ಕೇಳಿ ಭಕ್ತಾನುಗ್ರಹಕಾತರನಾದ ಶ್ರೀಕೃಷ್ಣನು ಪ್ರಸನ್ನಮುಖನಾಗಿ ಅವನನ್ನು ಕುರಿತಿಂತೆಂದನು.

೯೪. ಶ್ರೀಕೃಷ್ಣ :—ಎಲೈ ವಸುದೇವನೇ ನಿನ್ನ ಪೂರ್ವಜನ್ಮದ ತಪಃಫಲದಿಂದ ನಾನು ನಿನಗೆ ಪುತ್ರನಾಗಿ ಅವತರಿಸಿದ್ದೇನೆ. ಬೇಕಾದ ವರವನ್ನು ಕೇಳಿಕೋ ನಿನಗೆ ಮಂಗಳವಾಗುವುದು.

ಪುರಾ ತಪಸ್ವಿನಾಂ ಶ್ರೇಷ್ಠಃ ಸುತಪಾಸ್ತ್ವಂ ಪ್ರಜಾಪತಿಃ ।
ಪತ್ನೀ ತೇ ಪೃಶ್ನಿನಾಮ್ನೀ ಚ ತಪಸಾऽರಾಧಿತಸ್ತ್ವಯಾ　　　　॥ ೯೫ ॥

ಪುತ್ರೋ ಮತ್ಸದೃಶಸ್ತತ್ರ ದೃಷ್ಟ್ವಾ ಮಾಂ ಚ ವೃತೋ ವರಃ ।
ಮಯಾ ದತ್ತೋ ವರಸ್ತುಭ್ಯಂ ಮತ್ಸಮೋ ಭವಿತಾ ಸುತಃ　　　　॥ ೯೬ ॥

ದತ್ವಾ ತುಭ್ಯಂ ವರಂ ತಾತ ಮನಸಾಲೋಚ್ಯ ಚಿಂತಿತಃ ।
ಮತ್ಸಮೋ ನಾಸ್ತಿ ಭುವನೇ ಪುತ್ರೋऽಹಂ ತೇನ ಹೇತುನಾ　　　　॥ ೯೭ ॥

ತಪಸಾಂ ಚ ಪ್ರಭಾವೇಣ ತ್ವಮೇವ ಕಶ್ಯಪಃ ಸ್ವಯಂ ।
ಸುತಪಾ ದೇವಮಾತೇಯಮದಿತಿಶ್ಚ ಪತಿವ್ರತಾ　　　　॥ ೯೮ ॥

ಅಧುನಾ ಕಶ್ಯಪಾಂಶಸ್ತ್ವಂ ವಸುದೇವಃ ಪಿತಾ ಮಮ ।
ದೇವಕೀ ದೇವಮಾತೇಯಮದಿತೇರಂಶಸಂಭವಾ　　　　॥ ೯೯ ॥

---

೯೫. ಪೂರ್ವದಲ್ಲಿ ನೀನು ತಪಸ್ವಿಗಳೆಲ್ಲೆಲ್ಲ ಶ್ರೇಷ್ಠನಾದ ಸುತಪನೆಂಬ ಪ್ರಜಾಪತಿಯಾಗಿ ಜನಿಸಿದ್ದೆ. ಪೃಶ್ನಿ ಎಂಬ ಪತಿವ್ರತೆಯು ನಿನಗೆ ಪತ್ನಿಯಾಗಿದ್ದಳು. ನೀನು ನನ್ನನ್ನು ಆರಾಧಿಸಿದೆ.

೯೬. ನೀನು ನನ್ನನ್ನು ನೋಡಿ ನಿನಗೆ ನನ್ನಂತಹ ಪುತ್ರನಾಗುವಂತೆ ಅನುಗ್ರಹಿಸಬೇಕೆಂದು ಬೇಡಿದೆ. ನಾನೂ ಕೂಡ ನನಗೆ ಸಮನಾದ ಪುತ್ರನು ನಿನಗೆ ಜನಿಸಲೆಂದು ವರವಿತ್ತೆನು.

೯೭ ನಿನಗೆ ವರವನ್ನು ಕೊಟ್ಟಮೇಲೆ ಮನಸ್ಸಿನಲ್ಲಿ ಎಷ್ಟು ಯೋಚಿಸಿದರೂ ನನ್ನಂತಿರುವ ಬೇರೊಬ್ಬನು ದೊರೆಯದಿದ್ದುದರಿಂದ ನಾನೇ ನಿನಗೆ ಪುತ್ರನಾದೆನು.

೯೮. ತಪಃಪ್ರಭಾವದಿಂದ ನೀನೇ ಕಶ್ಯಪಪ್ರಜಾಪತಿಯಾಗಿ ಜನಿಸಿದ್ದಾಗ, ಪತಿಪರಾಯಣೆಯಾದ ಪೃಶ್ನಿದೇವಿಯೂ ಕೂಡ ದೇವತೆಗಳ ಮಾತೃವಾದ ಅದಿತಿಯಾದಳು.

೯೯. ಈಗ ಕಶ್ಯಪನ ಅಂಶದಿಂದಲೇ ನೀನು ವಸುದೇವನಾಗಿ ಜನಿಸಿ ನನ್ನ ತಂದೆಯಾಗಿರುವೆ. ದೇವಕೀದೇವಿಯೂ ಕೂಡ ದೇವತೆಗಳ ಮಾತೆಯಾದ ಅದಿತಿಯ ಅಂಶದಿಂದ ಸಂಭವಿಸಿರುವಳು.

ತ್ವತ್ತೋಽದಿತ್ಯಾಂ ವಾಮನೋಽಹಂ ಪುತ್ರಸ್ತೇಂಽಶೇನ ಸಂಭವಃ ।
ಅಧುನಾ ಪರಿಪೂರ್ಣೋಽಹಂ ಪುತ್ರಸ್ತೇ ತಪಸಾಂ ಫಲಾತ್ ॥ ೧೦೦ ॥

ಮಾಂ ವಾ ತ್ವಂ ಪುತ್ರಭಾವೇನ ಬ್ರಹ್ಮಭಾವೇನ ವಾ ಪುನಃ ।
ಮಾಂ ಪ್ರಾಪ್ತೋಽಸಿ ಮಹಾಪ್ರಾಜ್ಞ ಜೀವನ್ಮುಕ್ತೋ ಭವಿಷ್ಯಸಿ ॥ ೧೦೧ ॥

ಯಶೋದಾಭವನಂ ಶೀಘ್ರಂ ಮಾಂ ಗೃಹೀತ್ವಾ ವ್ರಜಂ ವ್ರಜ ।
ಸಂಸ್ಥಾಪ್ಯ ತತ್ರ ಮಾಂ ತಾತ ಮಾಯಾಮಾದಾಯ ಸ್ಥಾಪಯ ॥ ೧೦೨ ॥

ಇತ್ಯುಕ್ತ್ವಾ ಶ್ರೀಹರಿಸ್ತತ್ರ ಬಾಲರೂಪೋ ಬಭೂವ ಹ ।
ನಗ್ನಂ ಭೂಮೌ ಶಯಾನಂ ಚ ದದರ್ಶ ಶ್ಯಾಮಲಂ ಸುತಂ ॥ ೧೦೩ ॥

ದೃಷ್ಟ್ವಾ ಸ ಬಾಲಕಂ ತತ್ರ ಮೋಹಿತೋ ವಿಷ್ಣುಮಾಯಯಾ ।
ಕಿಂ ವಾ ಕೂಟಂ ಚ ತಂದ್ರಾಯಾಮಪೂರ್ವಂ ಸೂತಿಕಾಗೃಹಂ ॥ ೧೦೪ ॥

---

೧೦೦. ಪೂರ್ವದಲ್ಲಿ ಕಶ್ಯಪ ಪ್ರಜಾಪತಿಯಾಗಿದ್ದ ನಿನಗೆ ಅದಿತಿಯಲ್ಲಿ ನಾನು ನನ್ನ ಅಂಶದಿಂದ ವಾಮನನಾಗಿ ಜನಿಸಿದ್ದೆನು. ಈಗ ನಿನ್ನ ಪೂರ್ಣ ತಪಸ್ಸಿನ ಫಲವಾಗಿ ನನ್ನ ಪೂರ್ಣಸ್ವರೂಪದಿಂದ ನಿನ್ನ ಪುತ್ರನಾಗಿ ಜನಿಸಿದ್ದೇನೆ.

೧೦೧. ನನ್ನನ್ನು ಪುತ್ರಭಾವದಿಂದಾಗಲೀ, ಬ್ರಹ್ಮ ಭಾವದಿಂದಾಗಲೀ, ನೀನು ಆರಾಧಿಸಿದರೂ, ಮಹಾಪ್ರಾಜ್ಞನಾದ ನೀನು ಜೀವನ್ಮುಕ್ತನಾಗುವುದರಲ್ಲಿ ಸಂಶಯವಿಲ್ಲ.

೧೦೨. ಈಗ ನನ್ನನ್ನೆತ್ತಿಕೊಂಡು ನಂದಗೋಕುಲದಲ್ಲಿರುವ ಯಶೋದೆಯ ಗೃಹಕ್ಕೆ ಜಾಗ್ರತೆ ಹೋಗು. ಅಲ್ಲಿ ನನ್ನನ್ನು ಯಶೋಧೆಯ ಬಳಿಯಲ್ಲಿರಿಸಿ, ಮಾಯೆಯ ಅವತಾರವಾದ ಅಲ್ಲಿರುವ ಸ್ತ್ರೀಶಿಶುವನ್ನೆತ್ತಿಕೊಂಡು ಇಲ್ಲಿಗೆ ಬಾ.

೧೦೩. ಹೀಗೆ ಹೇಳಿ ಶ್ರೀಹರಿಯು ಶಿಶುರೂಪವನ್ನು ಧರಿಸಿದನು. ಭೂಮಿಯಲ್ಲಿ ಬೆತ್ತಲೆಯಾಗಿ ಮಲಗಿರುವ ನೀಲಮೇಘಶ್ಯಾಮನಾದ ಶಿಶುವನ್ನು ವಸುದೇವನು ಕಂಡನು.

೧೦೪. ವಸುದೇವನು ಆ ಶಿಶುವನ್ನು, ನೋಡಿ ವಿಷ್ಣುಮಾಯೆಯಿಂದ ಮೋಹಿತನಾಗಿ " ಇದೇನು ಈ ಸೂತಿಕಾಗೃಹದ ಮಹಿಮೆಯೆಂದು " ಮರುಳಾದನು.

ಇತ್ಯುಕ್ತ್ವಾ ವಸುದೇವಶ್ಚ ಸಮಾಲೋಚ್ಯ ಸ್ತ್ರಿಯಾ ಸಹ ।
ಗೃಹೀತ್ವಾ ಬಾಲಕಂ ಕ್ರೋಡೇ ಜಗಾಮ ನಂದಗೋಕುಲಂ ॥ ೧೦೫ ॥

ಗತ್ವಾ ನಂದವ್ರಜಂ ಶೀಘ್ರಂ ವಿವೇಶ ಸೂತಿಕಾಗೃಹಂ ।
ದದರ್ಶ ಶಯನಾವಿಷ್ಟಾಂ ಯಶೋದಾಂ ನಿದ್ರಯಾನ್ವಿತಾಂ ॥ ೧೦೬ ॥

ನಿದ್ರಾನ್ವಿತಂ ಚ ನಂದಂ ಚ ಸರ್ವಂ ತತ್ರ ಗೃಹೇ ಸ್ಥಿತಂ ।
ದದರ್ಶ ಬಾಲಿಕಾಂ ನಗ್ನಾಂ ತಪ್ತಕಾಂಚನಸನ್ನಿಭಾಂ ॥ ೧೦೭ ॥

ಈಷದ್ಧಾಸ್ಯಾಂ ಪ್ರಸನ್ನಾಸ್ಯಾಂ ಪಶ್ಯಂತೀಂ ಗೃಹಶೇಖರಂ ।
ತಾಂ ದೃಷ್ಟ್ವಾ ವಸುದೇವಶ್ಚ ವಿಸ್ಮಯಂ ಪರಮಂ ಯಯೌ ॥ ೧೦೮ ॥

ಸಂಸ್ಥಾಪ್ಯ ತತ್ರ ಪುತ್ರಂ ಚ ಕನ್ಯಾಮಾದಾಯ ಸತ್ವರಂ ।
ಜಗಾಮ ಮಥುರಾಂ ಹೃಷ್ಟಃ ಸ್ವಕಾಂತಾಸೂತಿಕಾಗೃಹಂ ॥ ೧೦೯ ॥

---

೧೦೫. ವಸುದೇವನು ಹೀಗೆ ಹೇಳುತ್ತ ದೇವಕಿಗೆ ಸಮಾಚಾರವನ್ನೆಲ್ಲ ತಿಳಿಸಿ ಬಾಲಕನನ್ನು ಎದೆಗಪ್ಪಿಕೊಂಡು ನಂದಗೋಕುಲಕ್ಕೆ ತೆರಳಿದನು.

೧೦೬. ಜಾಗ್ರತೆಯಾಗಿ ನಂದಗೋಕುಲವನ್ನು ಸೇರಿ, ನಂದಗೋಪನ ಮನೆಯ ಸೂತಿಕಾಗೃಹವನ್ನು ಪ್ರವೇಶಿಸಿ, ಹಾಸಿಗೆಯಲ್ಲಿ ಮಲಗಿ ನಿದ್ರೆಮಾಡುತ್ತಿದ್ದ ಯಶೋದೆಯನ್ನು ಕಂಡನು.

೧೦೭. ಆಗ ನಂದಗೋಪನೇ ಮುಂತಾಗಿ ಸಕಲರೂ ನಿದ್ರೆಮಾಡುತ್ತಿದ್ದರು. ಅಲ್ಲಿ ಬೆತ್ತಲೆಯಾಗಿ ಮಲಗಿರುವ ಪುಟಕ್ಕೆ ಹಾಕಿದ ಚಿನ್ನದಂತೆ ಬೆಳಗುತ್ತಿರುವ ಸ್ತ್ರೀಶಿಶುವನ್ನು ಕಂಡನು.

೧೦೮. ಮಂದಸ್ಮಿತದಿಂದ ಪ್ರಸನ್ನ ಮುಖಿಯಾದ ಆ ಶಿಶುವು ಮೇಲುಛಾವಣಿಯನ್ನು ನೋಡುತ್ತಿದ್ದಿತು. ಆ ಶಿಶುವನ್ನು ನೋಡಿ ವಸುದೇವನು ಪರಮಾಶ್ಚರ್ಯಭರಿತನಾದನು.

೧೦೯. ವಸುದೇವನು ಅಲ್ಲಿ ಶ್ರೀಕೃಷ್ಣನನ್ನು ಇರಿಸಿ, ಆ ಸ್ತ್ರೀಶಿಶುವನ್ನು ಜಾಗ್ರತೆಯಾಗಿ ಎತ್ತಿಕೊಂಡು, ಮಥುರೆಗೆ ಹಿಂತಿರುಗಿ ತನ್ನ ಕಾಂತೆಯಿದ್ದ ಸೂತಿಕಾಗೃಹಕ್ಕೆ ಬಂದನು.

ಸ್ಥಾಪಯಾಮಾಸ ತತ್ರೈವ ಮಹಾಮಾಯಾಂ ಚ ಬಾಲಿಕಾಂ ।
ರೋರೂಯಮಾಣಾಂ ತಾಮೇವ ದೃಷ್ಟ್ವಾ ಹೃಷ್ಟಾ ಚ ದೇವಕೀ ॥ ೧೧೦ ॥

ರೋದನೇನೈವ ಸಾ ಬಾಲಾ ಬೋಧಯಾಮಾಸ ರಕ್ಷಕಾನ್ ।
ಉತ್ಥಾಯ ರಕ್ಷಕಾಃ ಶೀಘ್ರಂ ಬಾಲಿಕಾಂ ಜಗೃಹುಸ್ತದಾ ॥ ೧೧೧ ॥

ಗೃಹೀತ್ವಾ ಬಾಲಿಕಾಂ ತೇ ಚ ಪ್ರಜಗ್ಮುಃ ಕಂಸಸನ್ನಿಧಿಂ ।
ಜಗಾಮ ದೇವಕೀ ಪಶ್ಚಾದ್ವಸುದೇವಶ್ಚ ಶೋಕತಃ ॥ ೧೧೨ ॥

ದೃಷ್ಟ್ವಾ ಚ ಬಾಲಿಕಾಂ ಕಂಸೋ ನಾತಿಹೃಷ್ಟೋ ಮಹಾಮುನೇ ।
ರೋರೂಯಮಾಣಾಂ ಕಲ್ಯಾಣೀಂ ತದ್ದಯಾ ನ ಬಭೂವ ಹ ॥ ೧೧೩ ॥

ತಾಂ ಗೃಹೀತ್ವಾ ಚ ಪಾಷಾಣೇ ಹಂತುಂ ಯಾಂತಂ ಸುದಾರುಣಂ ।
ಉವಾಚ ವಸುದೇವಶ್ಚ ದೇವಕೀ ಪರಮಾದರಂ ॥ ೧೧೪ ॥

---

೧೧೦. ಮಹಾಮಾಯೆಯ ಅವತಾರಿಣಿಯಾದ ಆ ಬಾಲಿಕೆಯನ್ನು ಅಲ್ಲಿರಿಸಲು ಆ ಶಿಶುವು ಸಾಮಾನ್ಯ ಮಕ್ಕಳಂತೆ ಅಳುತ್ತಿದ್ದುದನ್ನು ನೋಡಿ ದೇವಕಿಯು ಆಶ್ಚರ್ಯಭರಿತಳಾದಳು.

೧೧೧. ಆ ಬಾಲೆಯ ಅಳುವ ಧ್ವನಿಯನ್ನು ಕೇಳಿ, ಕಾರಾಗೃಹದ ರಕ್ಷಕರೆಲ್ಲರೂ ಎಚ್ಚೆತ್ತರು. ಕೂಡಲೇ ರಕ್ಷಕರೆಲ್ಲರೂ ಬಂದು ಆ ಬಾಲೆಯನ್ನು ಎತ್ತಿಕೊಂಡರು.

೧೧೨. ಮಗುವನ್ನೆತ್ತಿಕೊಂಡು ರಕ್ಷಕರು ಕಂಸನ ಸಮೀಪಕ್ಕೆ ತೆರಳಿದರು. ದೇವಕಿ ವಸುದೇವರು ಗೋಳಾಡುತ್ತ ಅವರ ಹಿಂದೆಯೇ ಹೊರಟರು.

೧೧೩. ಎಲೈ ನಾರದಮುನಿಯೇ, ಆ ಬಾಲಿಕೆಯನ್ನು ನೋಡಿ ಕಂಸನಿಗೆ ಅಷ್ಟು ಸಂತೋಷವಾಗಲಿಲ್ಲ. ಅಳುತ್ತಿರುವ ಆ ಮಂಗಳಾಂಗಿಯನ್ನು ನೋಡಿ ಕಂಸನಿಗೆ ಕೊಂಚವೂ ದಯೆಬರಲಿಲ್ಲ.

೧೧೪. ಆ ಶಿಶುವನ್ನೆತ್ತಿಕೊಂಡು ಬಂಡೆಯ ಮೇಲೆ ಅಪ್ಪಳಿಸಲು ಹೊರಟ ಆ ಕ್ರೂರಿಯಾದ ಕಂಸನನ್ನು ಕುರಿತು ದೇವಕಿವಸುದೇವರು ದೀನತೆಯಿಂದ ಇಂತೆಂದರು.

ಭೋಃ ಭೋಃ ಕಂಸ ನೃಪಶ್ರೇಷ್ಠ ನೀತಿಶಾಸ್ತ್ರವಿಶಾರದ ।
ನಿಬೋಧ ವಾಕ್ಯಂ ಸತ್ಯಂ ಚ ನೀತಿಯುಕ್ತಂ ಮನೋರಮಂ ॥ ೧೧೫ ॥

ಹತ್ವಾಽಽವಯೋಃ ಪುತ್ರಷಟ್ಕಂ ದಯಾ ತೇ ನಾಸ್ತಿ ಬಾಂಧವ ।
ಅಧುನಾ ಚಾಷ್ಟಮೇ ಗರ್ಭೇ ಬಾಲಿಕಾಮಬಲಾಂ ಮಮ ॥ ೧೧೬ ॥

ಹತ್ವಾ ತವ ಕಿಮೈಶ್ವರ್ಯಂ ಭವಿಷ್ಯತಿ ಮಹೀತಲೇ ।
ಸ್ತ್ರೀನೇವ ಹಂತುಮಬಲಾಂ ಕಿಂ ಕ್ಷಮಾ ರಣಮೂರ್ಧನಿ ॥ ೧೧೭ ॥

ಇತ್ಯೇವಮುಕ್ತ್ವಾ ತಂ ವಸುದೇವಕೀ ಚ ಸಭಾತಲೇ ।
ರುರೋದ ಪುರತಸ್ತತ್ರ ಕಂಸಸ್ಯ ಚ ದುರಾತ್ಮನಃ ॥ ೧೧೮ ॥

॥ ಕಂಸ ಉವಾಚ ॥

ಶೃಣು ವಾಕ್ಯಂ ಮದೀಯಂ ಚ ನಿಬೋಧ ಬೋಧಯಾಮಿ ತೇ ॥ ೧೧೯ ॥

---

೧೧೫. ರಾಜೇಂದ್ರನೂ, ನೀತಿಶಾಸ್ತ್ರವಿಶಾರದನೂ ಆದ ಎಲೈ ಕಂಸನೇ, ನೀತಿಯುತವೂ ಸತ್ಯವೂ ಮನೋಹರವೂ ಆದ ನನ್ನ ವಾಕ್ಯಗಳನ್ನು ಕೇಳುವವನಾಗು.

೧೧೬–೧೧೭. ಎಲೈ ಆಪ್ತಬಂಧುವೇ, ನಮ್ಮ ಆರುಜನಮಕ್ಕಳನ್ನು ಕೊಂದರೂ ನಿನಗೆ ಇನ್ನೂ ದಯೆ ಬರಲಿಲ್ಲವೇ ? ಈಗ ಎಂಟನೆಯ ಗರ್ಭದಲ್ಲಿ ಜನಿಸಿರುವ ಅಬಲೆಯಾದ ಬಾಲೆಯನ್ನು ಕೊಂದು ಈ ಭೂಮಂಡಲದಲ್ಲಿ ನೀನು ಗಳಿಸುವ ಐಶ್ವರ್ಯವೇನು ? ಯುದ್ಧದಲ್ಲಿ ಸ್ತ್ರೀವಧೆಮಾಡುವವರು ದುರ್ಬಲರೆನಿಸುವುದಿಲ್ಲವೇ ?

೧೧೮. ಹೀಗೆ ಹೇಳಿ ಆ ವಸುದೇವದೇವಕಿಯರು, ಆ ದುರಾತ್ಮನಾದ ಕಂಸನ ಮುಂದೆ ಸಭಾಮಂಟಪದಲ್ಲಿ ಬಿಕ್ಕಿ ಬಿಕ್ಕಿ ಅಳತೊಡಗಿದರು. ಅವರ ಮಾತನ್ನು ಕೇಳಿ ಆ ಪಾಪಿ ಕಂಸನು ಇಂತೆಂದನು.

೧೧೯. ಕಂಸ :—ಎಲೈ ವಸುದೇವದೇವಕಿಯರೇ, ನಾನು ಸತ್ಯವಾದ ಮಾತನ್ನು ಹೇಳುವೆನು. ಸಾವಧಾನದಿಂದ ಕೇಳಿ.

ತೃಣೇನ ಪರ್ವತಂ ಹಂತುಂ ಶಕ್ತೋ ಧಾತಾ ಚ ದೈವತಃ ।
ಕೀಟೇನ ಸಿಂಹಶಾರ್ದೂಲಂ ಮಶಕೇನ ಗಜಂ ತಥಾ ॥ ೧೨೦ ॥

ಶಿಶುನಾ ಚ ಮಹಾವೀರಂ ಮಹಾಂತಂ ಕ್ಷುದ್ರಜಂತುಭಿಃ ।
ಮೂಷಕೇನ ಚ ಮಾರ್ಜಾರಂ ಮಂಡೂಕೇನ ಭುಜಂಗಮಂ ॥ ೧೨೧ ॥

ಏವಂ ಜನ್ಯೇನ ಜನಕಂ ಭಕ್ಷ್ಯೇಣೈವ ಚ ಭಕ್ಷಕಂ ।
ವಹ್ನಿನಾ ಚ ಜಲಂ ನಷ್ಟಂ ವಹ್ನಿಂ ಶುಷ್ಕತೃಣೇನ ಚ ॥ ೧೨೨ ॥

ಪೀತಾಃ ಸಪ್ತಸಮುದ್ರಾಶ್ಚ ದ್ವಿಜೇನೈಕೇನ ಜಂತುನಾ ।
ಧಾತುರ್ಗತಿರ್ವಿಚಿತ್ರಾ ತು ದುರ್ಜ್ಞೇಯಾ ಭುವನತ್ರಯೇ ॥ ೧೨೩ ॥

ದೈವೇನ ಬಾಲಿಕಾ ನಷ್ಟಂ ಮಾಂ ಸಮರ್ಥಾ ಭವಿಷ್ಯತಿ ।
ಬಾಲಿಕಾಂ ಚ ವಧಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥ ೧೨೪ ॥

---

೧೨೦. ಸರ್ವಶಕ್ತನಾದ ಬ್ರಹ್ಮನು ಹುಲ್ಲಿನಿಂದ ಪರ್ವತವನ್ನೂ, ಸಣ್ಣಕೀಟದಿಂದ ಸಿಂಹ, ಹುಲಿ ಮುಂತಾದ ಕ್ರೂರಮೃಗಗಳನ್ನೂ ಸೊಳ್ಳೆಯಿಂದ ಆನೆಯನ್ನೂ ಕೊಲ್ಲಿಸಬಲ್ಲನು

೧೨೧. ಹಾಗೆಯೇ ಸಣ್ಣ ಮಗುವಿನ ಮೂಲಕ ಮಹಾವೀರನನ್ನೂ, ಕ್ಷುದ್ರಪ್ರಾಣಿಗಳಿಂದ ಮಹಾತ್ಮರನ್ನೂ, ಇಲಿಯಿಂದ ಬೆಕ್ಕನ್ನೂ, ಕಪ್ಪೆಯಿಂದ ಕ್ರೂರ ಸರ್ಪವನ್ನೂ ಕೊಲ್ಲಿಸಬಲ್ಲನು.

೧೨೨. ಇದೇ ರೀತಿಯಾಗಿ ಮಗನಿಂದ ತಂದೆಯನ್ನೂ, ತಿನ್ನಲರ್ಹವಾದ ವಸ್ತುವಿನಿಂದ ತಿನ್ನುವವನನ್ನೂ, ಅಗ್ನಿಯಿಂದ ನೀರನ್ನೂ, ಒಣಹುಲ್ಲಿನಿಂದ ಅಗ್ನಿಯನ್ನೂ ನಾಶಗೊಳಿಸಬಲ್ಲನು.

೧೨೩. ಒಬ್ಬನೇ ಒಬ್ಬ ಬ್ರಾಹ್ಮಣನು ಏಳುಸಮುದ್ರಗಳನ್ನೂ ಪಾನ ಮಾಡಿದನು. (ಅಗಸ್ತ್ಯ) ಬ್ರಹ್ಮನ ವಿಚಿತ್ರವಾದ ಚಾರಿತ್ರವನ್ನು ಭುವನತ್ರಯದಲ್ಲಿಯೂ ಯಾರೂ ಸುಲಭವಾಗಿ ತಿಳಿಯಲಾರರು.

೧೨೪. ದೈವಬಲದಿಂದ ಈ ಬಾಲಿಕೆಯೂ ನನ್ನನ್ನು ವಧೆಮಾಡಲು ಸಮರ್ಥಳಾಗುವಳು. ಆದುದರಿಂದ ಈ ಬಾಲೆಯನ್ನು ನಾನು ಕೊಂದೇ ತೀರುವೆನು. ಈ ವಿಷಯದಲ್ಲಿ ಸಂಶಯವಿಲ್ಲ.

ಇತ್ಯೇವಮುಕ್ತ್ವಾ ಕಂಸಶ್ಚ ಗೃಹೀತ್ವಾ ಬಾಲಿಕಾಂ ತದಾ।
ಹಂತುಮಾರಬ್ಧವಾನ್ಕಂಸಸ್ತಮುವಾಚ ವಸುಸ್ತದಾ ॥ ೧೨೫ ॥

ವೃಥಾ ಹಿಂಸಿತವಾನ್ರಾಜನ್ದೇಹಿ ಬಾಲಾಂ ಕೃಪಾನಿಧೇ।
ಸ ತಚ್ಛ್ರುತ್ವಾ ವಿಚಾರಜ್ಞಃ ಕಂಸಸ್ತುಷ್ಟೋ ಮಹಾಮುನೇ ॥ ೧೨೬ ॥

ಸಂಬೋಧಯಂತಂ ತತ್ರೈವ ವಾಗ್ಬಭೂವಾಶರೀರಿಣೀ।
ಹೇ ಕಂಸ ಹಂಸಿ ಕಾಂ ಮೂಢ ನ ವಿಜ್ಞಾಯ ಹರೇರ್ಗತಿಂ ॥ ೧೨೭ ॥

ಕುತ್ರಚಿತ್ತ್ವನ್ನಿಹಂತಾಸ್ತಿ ಕಾಲೇ ವ್ಯಕ್ತೋ ಭವಿಷ್ಯತಿ।
ಶ್ರುತ್ವೈವ ದೇವವಾಣೀಂ ಚ ತತ್ಯಾಜ ಬಾಲಿಕಾಂ ನೃಪಃ ॥ ೧೨೮ ॥

ವಸುದೇವೋ ದೇವಕೀ ಚ ತಾವಾದಾಯ ಮುದಾನ್ವಿತೌ।
ಜಗ್ಮತುಃ ಸ್ವಗೃಹಂ ತೌ ಚ ಕನ್ಯಾಂ ಕೃತ್ವಾ ಸ್ವವಕ್ಷಸಿ ॥ ೧೨೯ ॥

---

೧೨೫. ಹೀಗೆ ಹೇಳಿ ಆ ಕ್ರೂರಕಂಸನು ಆ ಬಾಲಿಕೆಯನ್ನೆತ್ತಿಕೊಂಡು ವಧೆ ಮಾಡಲು ಉದ್ಯುಕ್ತನಾದನು. ಆಗ ವಸುದೇವನು ಪುನಃ ಅವನನ್ನು ಕುರಿತಿಂತೆಂದನು.

೧೨೬. ಎಲೈ ರಾಜೇಂದ್ರನೇ, ನೀನು ಆ ಸ್ತ್ರೀಶಿಶುವನ್ನು ಏಕೆ ವ್ಯರ್ಥವಾಗಿ ಹಿಂಸಿಸುವೆ. :ದಯವಿಟ್ಟು ಹಿಂದಕ್ಕೆ ಕೊಡು. ಎಂದ ಮಾತನ್ನು ಕೇಳಿ ವಿಚಾರ ಪರನಾದ ಕಂಸನು ಸಂತುಷ್ಟನಾದನು.

೧೨೭-೧೨೮. ವಸುದೇವನನ್ನು ಕುರಿತು ಪುನಃ ಮಾತನಾಡ ಬೇಕೆನ್ನುವಾಗಲೇ ಎಲೈಕಂಸನೇ, ಶ್ರೀಹರಿಯ ಚಿತ್ರ ಚಾರಿತ್ರವನ್ನು ತಿಳಿಯದೆ ಮೂಢನಾಗಿ ಯಾರನ್ನು ಕೊಲ್ಲಲುದ್ಯುಕ್ತನಾಗಿರುವೆ. ನಿನ್ನನ್ನು ವಧೆಮಾಡುವವನು ಎಲ್ಲಿಯೋ ಬೆಳೆಯುತ್ತಿದ್ದಾನೆ. ಉಚಿತವಾದ ಕಾಲದಲ್ಲಿ ಅವನು ಹೊರಕ್ಕೆ ಬರುತ್ತಾನೆ' ಎಂದು ಅಶರೀರ ವಾಣಿಯಾಯಿತು. ಕೂಡಲೇ ಆ ಕಂಸನು ಆ ಶಿಶುವನ್ನು ಬಿಟ್ಟುಬಿಟ್ಟನು.

೧೨೯. ಸಂತೋಷಗೊಂಡ ವಸುದೇವದೇವಕಿಯರು ಆ ಶಿಶುವನ್ನೆತ್ತಿಕೊಂಡು ಮುದ್ದಾಡುತ್ತ, ತಮ್ಮ ಮನೆಗೆ ಹಿಂತಿರುಗಿದರು.

ಸ್ಮೃತಾಮಿವ ಪುನಃ ಪ್ರಾಪ್ಯ ಬ್ರಾಹ್ಮಣೇಭ್ಯೋ ದದೌ ಧನಂ ।
ಸಾ ಪರಾ ಭಗಿನೀ ವಿಪ್ರ ಕೃಷ್ಣಸ್ಯ ಪರಮಾತ್ಮನಃ ॥ ೧೩೦ ॥

ಏಕಾನಂಶೇತಿ ವಿಖ್ಯಾತಾ ಪಾರ್ವತ್ಯಂಶಸಮುದ್ಭವಾ ।
ವಸುಸ್ತಾಂ ದ್ವಾರಕಾಯಾಂ ತು ರುಕ್ಮಿಣ್ಯುದ್ವಾಹಕರ್ಮಣಿ ॥ ೧೩೧ ॥

ದದೌ ದುರ್ವಾಸಸೇ ಭಕ್ತ್ಯಾ ಶಂಕರಾಂಶಾಯ ಭಕ್ತಿತಃ ।
ಏವಂ ನಿಗದಿತಂ ಸರ್ವಂ ಕೃಷ್ಣಜನ್ಮಾನುಕೀರ್ತನಂ ।
ಜನ್ಮಮೃತ್ಯುಜರಾತಿಘ್ನಂ ಸುಖದಂ ಪುಣ್ಯದಂ ಮುನೇ ॥ ೧೩೨ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರದನಾರಾಯಣಸಂವಾದೇ ಸಪ್ತಮೋಽಧ್ಯಾಯಃ

---

೧೩೦. ಸತ್ತಶಿಶುವನ್ನು ಬದುಕಿಸಿಕೊಂಡಮ್ಮ ಸಂತೋಷಪಟ್ಟು ಬ್ರಾಹ್ಮಣರಿಗೆ ಬೇಕಾದಷ್ಟು ದ್ರವ್ಯದಾನ ಮಾಡಿದರು. ಎಲೈ ನಾರದನೇ, ಆ ಶಿಶುವೇ ಶ್ರೀಕೃಷ್ಣಪರಮಾತ್ಮನ ಸಹೋದರಿಯು.

೧೩೧-೧೩೨. ಪಾರ್ವತಿಯ ಅಂಶದಿಂದ ಅವತರಿಸಿದ ಆ ಬಾಲೆಯು ಏಕಾನಂಶಳೆಂಬ ಹೆಸರಾಂತಳು. ವಸುದೇವನು ದ್ವಾರಕೆಯಲ್ಲಿ ರುಕ್ಮಿಣಿಯ ವಿವಾಹ ಸಂದರ್ಭದಲ್ಲಿ ಆ ಬಾಲೆಯನ್ನು ಶಂಕರಾಂಶಸಂಭೂತನಾದ ದೂರ್ವಾಸಮಹರ್ಷಿಗೆ ಭಕ್ತಿಪೂರ್ವಕವಾಗಿ ದಾನಮಾಡಿದನು

ಈ ರೀತಿಯಾಗಿ ಸುಖಕರವೂ, ಪುಣ್ಯದಾಯಕವೂ ಜನ್ಮಜರಾಮರಣ ಪರಿಹಾರಕವೂ ಆದ ಶ್ರೀಕೃಷ್ಣಪರಮಾತ್ಮನ ಜನ್ಮ ಕಥೆಯನ್ನು ನಿನಗೆ ವಿಸ್ತರಿಸಿ ಹೇಳಿರುವೆನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ಶ್ರೀಕೃಷ್ಣಾವತಾರವನ್ನು ತಿಳಿಸುವ ಏಳನೆಯ
ಅಧ್ಯಾಯವು ಮುಗಿದುದು.



## ಏಳನೆಯ ಅಧ್ಯಾಯದ ಸಾರಾಂಶ

ಪರಮಾತ್ಮನ ನಿದೇಶದಂತೆ ಕಶ್ಯಪನು ದೇವಮೀಢನ ಪುತ್ರನಾಗಿ ಹುಟ್ಟಿ ವಸುದೇವನೆಂದು ಪ್ರಖ್ಯಾತನಾದನು. ಅವನು ಹುಟ್ಟಿದಾಗ ದೇವಲೋಕದಲ್ಲಿ ಆನಕ (ತಮಟೆ) ದುಂದುಭಿ (ನಗಾರಿ) ಗಳು ಮೊಳಗಿದುದರಿಂದ ಅವನಿಗೆ ಆನಕ ದುಂದುಭಿ ಎಂದೂ ಹೆಸರಾಯಿತು. ಇತ್ತ ದೇವಮಾತೆಯಾದ ಅದಿತಿಯು ದೇವಕನ ಮಗಳಾಗಿ ಹುಟ್ಟಿ ದೇವಕಿಯೆಂದು ಹೆಸರಾಂತಳು. ಇವಳ ಸಹೋದರನೇ ಕಂಸನು. ದೇವಕಿಯು ಪ್ರಾಪ್ತವಯಸ್ಕಳಾದುದನ್ನು ನೋಡಿ ದೇವಕನು ಅವಳನ್ನು ವಸುದೇವ ನಿಗೆ ಕೊಟ್ಟು ಬಹಳ ವಿಜೃಂಭಣೆಯಿಂದ ಮದುವೆ ಮಾಡಿದನು. ವಿವಾಹಾನಂತರ ವಸುದೇವದೇವಕಿಯರನ್ನು ಕಂಸನು ರಥದಲ್ಲಿ ಕುಳ್ಳಿರಿಸಿಕೊಂಡು ಕರೆದೊಯ್ಯು ತ್ತಿದ್ದನು. ಆಗ ಕಂಸನನ್ನು ಕುರಿತು 'ದೇವಕಿಯ ಎಂಟನೆಯಗರ್ಭದಲ್ಲಿ ಅವತರಿಸುವ ಶಿಶುವು ನಿನ್ನನ್ನುಕೊಲ್ಲುವುದು' ಎಂದು ಅಶರೀರವಾಣಿಯಾಯಿತು. ಕೂಡಲೇ ದೇವಕಿ ಯನ್ನೇ ಸಂಹರಿಸಲುದ್ಯುಕ್ತನಾದ ಕಂಸನಿಗೆ ಅವಳ ಗರ್ಭದಲ್ಲಿ ಜನಿಸಿದ ಶಿಶುಗಳನ್ನೆಲ್ಲ ಸಮರ್ಪಿಸುವುದಾಗಿ ಮಾತುಕೊಟ್ಟು ವಸುದೇವನು ಅವಳನ್ನುಳಿಸಿಕೊಂಡನು. ಅದರಂತೆ ದೇವಕಿಯ ಗರ್ಭದಲ್ಲಿ ಜನಿಸಿದ ಆರು ಮಕ್ಕಳನ್ನೂ ಕಂಸನಿಗೆ ಸಮರ್ಪಿಸಿ ದನು. ಕಂಸನು ನಿರ್ದಯದಿಂದ ಆ ಮಕ್ಕಳನ್ನು ನಿಗ್ರಹಿಸಿದುದಲ್ಲದೆ ವಸುದೇವ ದೇವಕಿಯರನ್ನು ಸೆರೆಯಲ್ಲಿಟ್ಟು ಬಲವಾದ ಕಾವಲಿಟ್ಟನು. ಆದರೂ ದೇವಕಿಯ ಏಳನೆಯ ಗರ್ಭದಲ್ಲಿದ್ದ ಆದಿಶೇಷನು ಮಾಯಾಶಕ್ತಿಯಿಂದ ನಂದಗೋಪನ ಪತ್ನಿ ಯಾದರೋಹಿಣಿಯ ಗರ್ಭಕ್ಕೆ ಸೇರಿ ಅವತರಿಸಿ ಬಲರಾಮನೆನಿಸಿಕೊಂಡನು. ಅನಂತರ ದೇವಕಿಯ ಎಂಟನೆಯ ಗರ್ಭದಲ್ಲಿ ಶ್ರೀಕೃಷ್ಣನು ಅವತರಿಸಿ, ಶಿಶುರೂಪನಾದ ತನ್ನನ್ನು ನಂದಗೋಕುಲದಲ್ಲಿ ಯಶೋದೆಯ ಸಮೀಪದಲ್ಲಿರಿಸಿ, ಯಶೋದೆಯು ಪ್ರಸುವಿಸಿರುವ ದುರ್ಗಾಂಶಸಂಭೂತಳಾದ ಸ್ತ್ರೀಶಿಶುವನ್ನು ಕಾರಾಗೃಹಕ್ಕೆ ತರ ಬೇಕೆಂದು ವಸುದೇವನಿಗೆ ಹೇಳಿ ಪರಮಾತ್ಮನು ಶಿಶುರೂಪನಾದನು. ಪರಮಾತ್ಮನ ಆಜ್ಞೆಯಂತೆ ವಸುದೇವನು ಮಕ್ಕಳನ್ನು ವಿನಿಮಯಮಾಡಿದನಂತರ, ಬಂದ ಕಂಸನು ಆ ಸ್ತ್ರೀಶಿಶುವನ್ನೇ ವಧೆಮಾಡಲುದ್ಯುಕ್ತನಾದನು. ಆಗ "ನಿನ್ನನ್ನು ಕೊಲ್ಲುವವನು ಬೇರೆಕಡೆ ಬೆಳೆಯುತ್ತಿದ್ದಾನೆ. ವೃಥಾ ಈ ಶಿಶುವನ್ನೇಕೆ ಕೊಲ್ಲುವೆ" ಎಂದು ಅಶ ರೀರವಾಣಿಯಾಗಲು ಕಂಸನು ಆ ಶಿಶುವನ್ನು ಬಿಟ್ಟನು. 'ಏಕಾನಂಶಳೆಂದು' ಹೆಸರಾಂತ ಆ ಮಗಳನ್ನೇ ವಸುದೇವನು ಈಶ್ವರಾಂಶಸಂಭೂತನಾದ ದೂರ್ವಾಸ ಮಹರ್ಷಿಗೆ ದಾನಮಾಡಿದನು.

— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ಅಷ್ಟಮೋಽಧ್ಯಾಯಃ ॥

॥ ನಾರದ ಉವಾಚ ॥

ಜನ್ಮಾಷ್ಟಮೀವ್ರತಂ ಬ್ರೂಹಿ ವ್ರತಾನಾಂ ವ್ರತಮುತ್ತಮಂ ।
ಫಲಂ ಜಯಂತೀಯೋಗಸ್ಯ ಸಾಮಾನ್ಯೇನೈವ ಸಾಂಪ್ರತಂ ॥ ೧ ॥

ಕೋ ವಾ ದೋಷೋಽಪ್ಯಕರಣೇ ಭೋಜನೇ ವಾ ಮಹಾಮುನೇ ।
ಉಪವಾಸಫಲಂ ಕಿಂ ವಾ ಜಯಂತ್ಯಾಂ ಚ ಸುಸಂಮತಂ ॥ ೨ ॥

ವ್ರತಂ ಪೂಜಾವಿಧಾನಂ ಚ ಸಂಯಮಸ್ಯ ಚ ಸಾಂಪ್ರತಂ ।
ಉಪವಾಸಪಾರಣಯೋಃ ಸುವಿಚಾರ್ಯ ವದಪ್ರಭೋ ॥ ೩ ॥

---

### ಎಂಟನೆಯ ಅಧ್ಯಾಯವು

೧. ನಾರದ :—ಎಲೈ ನಾರಾಯಣಮಹರ್ಷಿಯೇ, ವ್ರತಗಳಲ್ಲೆಲ್ಲ ಅತ್ಯುತ್ತಮವಾದ ಜನ್ಮಾಷ್ಟಮೀವ್ರತವಿಧಾನವನ್ನೂ, ಜಯಂತೀಯೋಗವಿರುವುದರ ಫಲವನ್ನೂ ಸಾಮಾನ್ಯವಾಗಿ ಈಗ ವಿವರಿಸು

೨. ಜಯಂತಿಯನ್ನು ಆಚರಿಸದಿರುವುದರಿಂದಾಗಲೀ, ಆದಿವಸ ಊಟ ಮಾಡುವುದರಿಂದಾಗಲೀ ದೋಷವೇನು ? ಜಯಂತೀದಿವಸ ಉಪವಾಸಮಾಡುವುದರಿಂದ ಯಾವ ಫಲ ಲಭಿಸುವುದು.

೩. ಆ ವ್ರತದಲ್ಲಿ ಮಾಡಬೇಕಾದ ಪೂಜಾವಿಧಾನವನ್ನೂ, ಇಂದ್ರಿಯ ನಿಗ್ರಹಕ್ರಮವನ್ನೂ, ಉಪವಾಸ ಮತ್ತು ಪಾರಣೆಯ ರೀತಿಯನ್ನೂ ಚೆನ್ನಾಗಿ ವಿವರಿಸಿ ಹೇಳು.

॥ ನಾರಾಯಣ ಉವಾಚ ॥

ಕೃತ್ವಾ ಹವಿಷ್ಯಂ ಸಪ್ತಮ್ಯಾಂ ಸಂಯತಃ ಪಾರಣೇ ತಥಾ ।
ಅರುಣೋದಯವೇಲಾಯಾಂ ಸಮುತ್ಥಾಯ ಪರೇಽಹನಿ ॥ ೪ ॥

ಪ್ರಾತಃಕೃತ್ಯಂ ಸಂವಿಧಾಯ ಸ್ನಾತ್ವಾ ಸಂಕಲ್ಪಮಾಚರೇತ್ ।
ವ್ರತೋಪವಾಸಯೋರ್ಬ್ರಹ್ಮನ್ ಶ್ರೀಕೃಷ್ಣಪ್ರೀತಿಹೇತುಕಂ ॥ ೫ ॥

ಮನ್ವಾದಿದಿವಸೇ ಪ್ರಾಪ್ತೇ ಯತ್ಫಲಂ ಸ್ನಾನಪೂಜನೈಃ ।
ಫಲಂ ಭಾದ್ರಪದೇಽಷ್ಟಮ್ಯಾಂ ಭವೇತ್ಕೋಟಿಗುಣಂ ದ್ವಿಜ ॥ ೬ ॥

ತಸ್ಯಾಂ ತಿಥೌ ವಾರಿಮಾತ್ರಂ ಪಿತೄಣಾಂ ಯಃ ಪ್ರಯಚ್ಛತಿ ।
ಗಯಾಶ್ರಾದ್ಧಂ ಕೃತಂ ತೇನ ಶತಾಬ್ದಂ ನಾತ್ರ ಸಂಶಯಃ ॥ ೭ ॥

---

೪. ನಾರಾಯಣ :—ಸಪ್ತಮಿಯ ದಿವಸ ಹವಿಷ್ಯಾನ್ನವನ್ನು ನಿಯಮದಿಂದ ಮಿತವಾಗಿ ಊಟಮಾಡಿ, ಅಷ್ಟಮಿಯದಿನ ಅರುಣೋದಯದ ವೇಳೆಗೆ ಸರಿಯಾಗಿ ಹಾಸಿಗೆಯಿಂದೇಳಬೇಕು.

೫. ಅನಂತರ ಸ್ನಾನಮಾಡಿ ಪ್ರಾತಃಕಾಲದ ನಿತ್ಯವಿಧಿಗಳನ್ನಾಚರಿಸಿ ಶ್ರೀಕೃಷ್ಣನ ಪ್ರೀತಿಗಾಗಿ ಉಪವಾಸದಿಂದ ವ್ರತವನ್ನಾಚರಿಸುವೆನೆಂದು ಸಂಕಲ್ಪ ಮಾಡಬೇಕು.

೬. ಎಲೈ ನಾರದನೇ, ಮನ್ವಾದಿ ದಿವಸಗಳಲ್ಲಿ ಸ್ನಾನ ಮತ್ತು ಪೂಜೆ ಮಾಡುವುದರಿಂದ ಯಾವ ಫಲ ದೊರೆಯುವುದೋ ಅದರ ಕೋಟಿಗುಣಫಲವು ಕೃಷ್ಣಾಷ್ಟಮಿಯದಿವಸ ಪೂಜೆಮಾಡುವುದರಿಂದ ಲಭಿಸುವುದು.*

೭. ಆ ಅಷ್ಟಮಿಯ ದಿವಸ ಯಾರು ಪಿತೃದೇವತೆಗಳಿಗೆ ಕೇವಲ ನೀರನ್ನಾದರೂ ತರ್ಪಣಕೊಡುವರೋ ಅವರು ನೂರುವರ್ಷ ಗಯಾಶ್ರಾದ್ಧಮಾಡಿದ ಪುಣ್ಯಕ್ಕೆ ಭಾಗಿಗಳಾಗುವರು

---

*ಟಿಪ್ಪಣಿ :—ಶ್ರೀಕೃಷ್ಣ 'ಜಯಂತಿ' ಯನ್ನಾಚರಿಸುವವರಿಗೆ ಕನ್ಯಾಮಾಸವೇ ಪ್ರಧಾನವಾದುದರಿಂದಲೂ, ಕನ್ಯಾಮಾಸವು ಒಮ್ಮೊಮ್ಮೆ ಭಾದ್ರಪದಮಾಸದಲ್ಲಿ ಬರುವುದರಿಂದಲೂ, 'ಭಾದ್ರಪದೇಽಷ್ಟಮ್ಯಾಂ' ಎಂದು ಹೇಳುವುದು ಉಚಿತವಾಗಿದೆ.

ಸ್ನಾತ್ವಾ ನಿತ್ಯಕ್ರಿಯಾಂ ಕೃತ್ವಾ ನಿರ್ಮಾಯ ಸೂತಿಕಾಗೃಹಂ ।
ಲೋಹಖಂಡವಹ್ನಿಜಾಲೈರ್ಯುಕ್ತಂ ರಕ್ಷಕಸಂಘಕೈಃ ॥ ೮ ॥

ತತ್ರ ದ್ರವ್ಯಂ ಬಹುವಿಧಂ ನಾಭಿಚ್ಛೇದನಕರ್ತನಂ ।
ಧಾತ್ರೀಸ್ವರೂಪಾಂ ನಾರೀಂ ಚ ಯತ್ನತಃ ಸ್ಥಾಪಯೇದ್ಬುಧಃ ॥ ೯ ॥

ಪೂಜಾದ್ರವ್ಯಾಣಿ ಚಾರೂಣಿ ಸೋಪಚಾರಾಣಿ ಷೋಡಶ ।
ಫಲಾನ್ಯಷ್ಟೌ ಚ ಮಿಷ್ಟಾನಿ ದ್ರವ್ಯಾಣ್ಯೇವ ಹಿ ನಾರದ ॥ ೧೦ ॥

ಜಾತೀಫಲಂ ಚ ಕಂಕೋಲಂ ದಾಡಿಮಂ ಶ್ರೀಫಲಂ ತಥಾ ।
ನಾರಿಕೇರಂ ಚ ಜಂಬೀರಂ ಕೂಷ್ಮಾಂಡಂ ಚ ಸುಮಾಸಸಂ ॥ ೧೧ ॥

---

೮. ಆ ದಿವಸ ಸ್ನಾನಾದಿ ನಿತ್ಯಕರ್ಮಗಳನ್ನು ಮಾಡಿ, ಒಂದು ಸೂತಿಕಾ ಗೃಹವನ್ನು ನಿರ್ಮಿಸಿ ಅಲ್ಲಿ ಪಂಚಲೋಹದ ಚೂರುಗಳನ್ನೂ, ಅಗ್ನಿಯನ್ನೂ ಇತರ ರಕ್ಷಾಬಂಧನಗಳನ್ನೂ ಇಡಬೇಕು.

೯. ಅಲ್ಲದೆ ಸೂತಿಕಾಗೃಹೋಪಯುಕ್ತವಾದ ನಾನಾವಿಧ ದ್ರವ್ಯಗಳನ್ನೂ, ಶಿಶುವಿನ ಹೊಕ್ಕಳನ್ನೂ, ಕತ್ತರಿಸುವಸಾಧನವನ್ನೂ, ಧಾತ್ರೀರೂಪಧಾರಿಣಿಯಾದ ಒಬ್ಬ ಹೆಂಗಸನ್ನೂ ಅಲ್ಲಿ ಕಲ್ಪಿಸಬೇಕು.

೧೦ ಮನೋಹರವಾದ ಪೂಜಾದ್ರವ್ಯಗಳನ್ನೂ, ಷೋಡಶೋಪಚಾರ ಸಾಮಗ್ರಿಗಳನ್ನೂ, ಎಂಟುಫಲಗಳನ್ನೂ, ಮಿಷ್ಟದ್ರವ್ಯಗಳನ್ನೂ ಸಿದ್ಧಪಡಿಸಬೇಕು.

೧೧. ಜಾತಿ ಮತ್ತು ಕಂಕೋಲಫಲಗಳನ್ನೂ, ದಾಳಿಂಬೆ ಮತ್ತು ಬಿಲ್ವಫಲ ಗಳನ್ನೂ, ನಾರಿಕೇಳ ಮತ್ತು ನಿಂಬೆಫಲಗಳನ್ನೂ, ಕೂಷ್ಮಾಂಡ ಮತ್ತು ಸುವಾಸಸ್ಸು ಗಳನ್ನೂ ಸಿದ್ಧಪಡಿಸಿಕೊಳ್ಳಬೇಕು. (ಇವೆಲ್ಲ ವನ್ಯ ಫಲವಿಶೇಷಗಳು).

ಆಸನಂ ವಸನಂ ಪಾದ್ಯಂ ಮಧುಪರ್ಕಂ ತಥೈವ ಚ ।
ಅರ್ಘ್ಯಮಾಚನೀಯಂ ಚ ಸ್ನಾನೀಯಂ ಶಯನಂ ತಥಾ ॥ ೧೨ ॥

ಗಂಧಂ ಪುಷ್ಪಂ ಚ ನೈವೇದ್ಯಂ ತಾಂಬೂಲಮನುಲೇಪನಂ ।
ಧೂಪದೀಪೌ ಭೂಷಣಂ ವೈ ಚೋಪಚಾರಾಂಶ್ಚ ಷೋಡಶ ॥ ೧೩ ॥

ಪಾದಪ್ರಕ್ಷಾಲನಂ ಕೃತ್ವಾ ಧೃತ್ವಾ ಧೌತೇ ಚ ವಾಸಸೀ ।
ಆಚಮ್ಯ ಚಾಸನೇ ಸ್ಥಿತ್ವಾ ಸ್ವಸ್ತಿವಾಚನಪೂರ್ವಕಂ ॥ ೧೪ ॥

ಘಟಸ್ಯಾರೋಪಣಂ ಕೃತ್ವಾ ಸಂಪೂಜ್ಯ ಪಂಚದೇವತಾಃ ।
ಘಟೇ ಹ್ಯಾವಾಹನಂ ಕೃತ್ವಾ ಶ್ರೀಕೃಷ್ಣಂ ಪರಮೇಶ್ವರಂ ॥ ೧೫ ॥

ವಸುದೇವಂ ದೇವಕೀಂ ಚ ಯಶೋದಾಂ ನಂದಮೇವ ಚ ।
ರೋಹಿಣೀಂ ಬಲದೇವಂ ಚ ಷಷ್ಠೀದೇವೀಂ ವಸುಂಧರಾಂ ॥ ೧೬ ॥

---

೧೨–೧೩. ಅಂತೆಯೇ, ಆಸನ, ವಸ್ತ್ರ, ಪಾದ್ಯ, ಮಧುಪರ್ಕ, ಅರ್ಘ್ಯ, ಆಚಮನೀಯ, ಸ್ನಾನ, ಶಯನ, ಗಂಧ, ಪುಷ್ಪ, ನೈವೇದ್ಯ, ತಾಂಬೂಲ, ಅನುಲೇಪನ, ಧೂಪ, ದೀಪ, ಮತ್ತ ಭೂಷಣವೆಂಬ ಈ ಷೋಡಶೋಪಚಾರಗಳನ್ನು ಶ್ರೀಕೃಷ್ಣಪರಮಾತ್ಮನಿಗೆ ಸಿದ್ಧಪಡಿಸಿಕೊಳ್ಳಬೇಕು.

೧೪. ಮೊದಲು ಕೈಕಾಲುಗಳನ್ನು ತೊಳೆದುಕೊಂಡು ಶುಭ್ರವಾದ ಎರಡು ವಸ್ತ್ರಗಳನ್ನು ಧರಿಸಿ ಆಚಮನ ಮಾಡಿ ಸ್ವಸ್ತಿ ವಾಚನಪೂರ್ವಕವಾಗಿ ಆಸನದಲ್ಲಿ ಕುಳಿತುಕೊಳ್ಳಬೇಕು.

೧೫. ಅನಂತರ ಪೀಠದಲ್ಲಿ ಕಲಶವನ್ನಿಟ್ಟು ಪಂಚಾಯತನ ದೇವತೆಗಳನ್ನು ಪೂಜಿಸಿ ಶ್ರೀಕೃಷ್ಣಪರಮಾತ್ಮನನ್ನು ಕಲಶದಲ್ಲಿ ಆವಾಹನೆ ಮಾಡಬೇಕು.

೧೬. ವಸುದೇವದೇವಕಿಯರನ್ನೂ, ಯಶೋದೆ ಮತ್ತು ನಂದಗೋಪರನ್ನೂ ರೋಹಿಣೀಬಲರಾಮರನ್ನೂ, ಷಷ್ಠೀದೇವೀ ಮತ್ತು ವಸುಂಧರೆಯನ್ನೂ ಆವಾಹನೆ ಮಾಡಬೇಕು.

ರೋಹಿಣೀಂ ಬ್ರಾಹ್ಮಣೀಂ ಚೈವ ಅಷ್ಟಮಿಾಂ ಸ್ಥಾನದೇವತಾಂ ।
ಅಶ್ವತ್ಥಾಮ್ನಾ ಸಹ ಬಲಿಂ ಹನುಮಂತಂ ವಿಭೀಷಣಂ ॥ ೧೭ ॥

ಕೃಪಂ ಪರಶುರಾಮಂ ಚ ವೇದವ್ಯಾಸಂ ಮೃಕಂಡಕಂ ।
ಸರ್ವಸ್ಯಾವಾಹನಂ ಕೃತ್ವಾ ಧ್ಯಾನಂ ಕುರ್ಯಾದ್ಧರೇಸ್ತದಾ ॥ ೧೮ ॥

ಪುಷ್ಪಕಂ ಮಸ್ತಕೇ ನ್ಯಸ್ಯ ಪುನರ್ಧ್ಯಾಯೇದ್ವಿಚಕ್ಷಣಃ ।
ಧ್ಯಾನಂ ಚ ಸಾಮವೇದೋಕ್ತಂ ಶೃಣು ವಕ್ಷ್ಯಾಮಿ ನಾರದ ॥ ೧೯ ॥

ಬ್ರಹ್ಮಣಾ ಕಥಿತಂ ಪೂರ್ವಂ ಕುಮಾರಾಯ ಮಹಾತ್ಮನೇ ॥ ೨೦ ॥

ಬಾಲಂ ನೀಲಾಂಬುಜಾಭಮತಿಶಯರುಚಿರಂ
ಸ್ಮೇರವಕ್ತ್ರಾಂಬುಜಂ ತಂ ಬ್ರಹ್ಮೇಶಾನಂತಧರ್ಮೈಃ
ಕತಿಕತಿದಿವಸೈಃ ಸ್ತೂಯಮಾನಂ ಪರಂ ಯತ್ ॥

---

೧೭. ಅಂತೆಯೇ ಬ್ರಾಹ್ಮಣಿಯನ್ನು, ಅಷ್ಟಮಿಯ ಅಭಿಮಾನಿದೇವತೆಯನ್ನೂ, ಅಶ್ವತ್ಥಾಮ ಮತ್ತು ಬಲಿಚಕ್ರವರ್ತಿಯನ್ನೂ, ಹನುಮಂತ ಮತ್ತು ವಿಭೀಷಣರನ್ನೂ ಆವಾಹನೆಮಾಡಬೇಕು.

೧೮. ಕೃಪ, ಪರಶುರಾಮ, ವೇದವ್ಯಾಸ ಮತ್ತು ಮೃಕಂಡುಮುನಿಯನ್ನೂ ಅಲ್ಲಿ ಆವಾಹನೆಮಾಡಿ ಶ್ರೀಹರಿಯನ್ನು ಧ್ಯಾನಿಸಬೇಕು (ಚಿರಂಜೀವಿಗಳಾದ ಇವರೆಲ್ಲರೂ ಶ್ರೀಹರಿಯ ಪರಮಭಕ್ತರಾದುದರಿಂದ ಶ್ರೀಹರಿಯೊಡನೆ ಪೂಜೆಗೆ ಅರ್ಹರು.)

೧೯. ಶ್ರೀಕೃಷ್ಣನ ತಲೆಯ ಮೇಲೆ ಹೂಮಾಲೆಯನ್ನಿಟ್ಟು ಪುನಃ ಧ್ಯಾನಿಸಬೇಕು. ಎಲೈ ನಾರದನೇ, ಈಗ ಸಾಮವೇದೋಕ್ತವಾದ ಧ್ಯಾನಕ್ರಮವನ್ನು ವಿವರಿಸುವೆನು ಕೇಳು.

೨೦. ಈ ಧ್ಯಾನಸ್ತೋತ್ರವನ್ನು ಪೂರ್ವದಲ್ಲಿ ಬ್ರಹ್ಮನು, ಮಹಾತ್ಮನಾದ ಷಣ್ಮುಖನಿಗೆ ಉಪದೇಶಿಸಿದನು.

೨೧. ಕನ್ನೈದಿಲೆಯಂತೆ ಕಾಂತಿಯುಳ್ಳವನೂ, ಬಹಳ ಮನೋಹರನೂ, ನಗುಮುಖವುಳ್ಳವನೂ, ಬ್ರಹ್ಮ, ಈಶ್ವರ, ಅನಂತ ಮತ್ತು ಧರ್ಮಪುರುಷರಿಂದ

ಧ್ಯಾನಾಸಾಧ್ಯಮೃಷೀಂದ್ರೈರ್ಮುನಿಗಣಮನುಜೈಃ ।
ಸಿದ್ಧಸಂಘೈರಸಾಧ್ಯಂ ಯೋಗೀಂದ್ರಾಣಾಮಚಿಂತ್ಯ ।
ಮತಿಶಯಮತುಲಂ ಸಾಕ್ಷಿರೂಪಂ ಭಜೇಽಹಂ ॥ ೨೧ ॥

ಧ್ಯಾತ್ವಾ ಪುಷ್ಪಂ ಚ ದತ್ವಾ ಚ ತತ್ಸರ್ವಂ ಚ ನಿವೇದಯೇತ್ ।
ಏವಂ ವ್ರತೀ ವ್ರತಂ ಕುರ್ಯಾಚ್ಛೃಣು ಮಂತ್ರಕ್ರಮಂ ಮುನೇ ॥ ೨೨ ॥

ಆಸನಂ ಸರ್ವಶೋಭಾಢ್ಯಂ ಸದ್ರತ್ನಮಣಿನಿರ್ಮಿತಂ ।
ವಿಚಿತ್ರಂ ಚ ವಿಚಿತ್ರೇಣ ಗೃಹ್ಯತಾಂ ಶೋಭನಂ ಹರೇ ॥ ೨೩ ॥

ವಸನಂ ವಹ್ನಿಶೌಚಂ ಚ ನಿರ್ಮಿತಂ ವಿಶ್ವಕರ್ಮಣಾ ।
ಪ್ರತಪ್ತಸ್ವರ್ಣಖಚಿತಂ ಚಿತ್ರಿತಂ ಗೃಹ್ಯತಾಂ ಹರೇ ॥ ೨೪ ॥

ಪಾದಪ್ರಕ್ಷಾಲನಾರ್ಥಂ ಚ ಸ್ವರ್ಣಪಾತ್ರಸ್ಥಿತಂ ಜಲಂ ।
ಪವಿತ್ರಂ ನಿರ್ಮಲಂ ಚಾರು ಪಾದ್ಯಂ ಚ ಗೃಹ್ಯತಾಂ ಹರೇ ॥ ೨೫ ॥

---

ಸ್ತುತಿಸಲ್ಪಡುವವನೂ, ಋಷಿಮುನಿಗಳಿಗೂ, ಮನುಜರಿಗೂ, ಸಿದ್ಧರಿಗೂ, ದ್ಯಾನ ದುರ್ಲಭನೂ, ಯೋಗೀಂದ್ರರಿಗೆ ಅಚಿಂತ್ಯನೂ ಸರ್ವಸಾಕ್ಷಿಸ್ವರೂಪನೂ ಆದ ಗೋಪ ಬಾಲನನ್ನು ಭಜಿಸುವೆನು.

೨೨. ಈ ರೀತಿಯಾಗಿ ಧ್ಯಾನಮಾಡಿ ಪುಷ್ಪವನ್ನು ಸಮರ್ಪಿಸಿ ಮೇಲೆ ಹೇಳಿದ ಫಲಗಳನ್ನು ನಿವೇದಿಸಬೇಕು. ವ್ರತಮಾಡಬಯಸುವವನು ಈ ರೀತಿ ಶಾಸ್ತ್ರೋಕ್ತ ಕ್ರಮದಿಂದ ವ್ರತಮಾಡಬೇಕು. ಈಗ ಮಂತ್ರವಿಧಾನವನ್ನು ಹೇಳುವೆನು, ಕೇಳು.

೨೩. ಶ್ರೇಷ್ಟವಾದ ಮಣಿರತ್ನಗಳಿಂದ ನಿರ್ಮಿತವೂ, ಶೋಭಾಯುತವೂ, ಚಿತ್ರವಿಚಿತ್ರವೂ ಆದ ದಿವ್ಯಾಸನವನ್ನು ಎಲೈ, ಶ್ರೀಹರಿಯೇ ಸ್ವೀಕರಿಸು

೨೪ ವಿಶ್ವಕರ್ಮನಿಂದ ನಿರ್ಮಿತವೂ, ಅಗ್ನಿಯಂತೆ ಪರಿಶುದ್ಧವೂ, ಪುಟಕ್ಕೆ ಹಾಕಿದ ಚಿನ್ನದಿಂದ ಖಚಿತವೂ ಆದ ದಿವ್ಯವಸ್ತ್ರವನ್ನು ಸ್ವೀಕರಿಸು

೨೫. ಸುವರ್ಣಪಾತ್ರೆಯಲ್ಲಿರುವ ಪವಿತ್ರವೂ, ನಿರ್ಮಲವೂ ಆದ ಜಲವನ್ನು ಪಾದಪ್ರಕ್ಷಾಳನೆಗಾಗಿ ಎಲೈ ಶ್ರೀಹರಿಯೇ ಸ್ವೀಕರಿಸುವವನಾಗು.

ಮಧುಸರ್ಪಿರ್ದಧಿಕ್ಷೀರಂ ಶರ್ಕರಾಸಂಯುತಂ ಪರಂ ।
ಸ್ವರ್ಣಪಾತ್ರಸ್ಥಿತಂ ದೇಯಂ ಸ್ನಾನಾರ್ಥಂ ಗೃಹ್ಯತಾಂ ಹರೇ ॥ ೨೬ ॥

ದೂರ್ವಾಕ್ಷತಂ ಶುಕ್ಲಪುಷ್ಪಂ ಸ್ವಚ್ಛತೋಯಸಮನ್ವಿತಂ ।
ಚಂದನಾಗುರುಕಸ್ತೂರೀಸಹಿತಂ ಗೃಹ್ಯತಾಂ ಹರೇ ॥ ೨೭ ॥

ಸುಸ್ವಾದುಸ್ವಚ್ಛತೋಯಂ ಚ ವಾಸಿತಂ ಗಂಧವಸ್ತುನಾ ।
ಶುದ್ಧಮಾಚಮನೀಯಂ ಚ ಗೃಹ್ಯತಾಂ ಪರಮೇಶ್ವರ ॥ ೨೮ ॥

ಗಂಧದ್ರವ್ಯಸಮಾಯುಕ್ತಂ ವಿಷ್ಣೋ ತೈಲಂ ಸುವಾಸಿತಂ ।
ಆಮಲಕ್ಯಾ ದ್ರವಂ ಚೈವ ಸ್ನಾನೀಯಂ ಗೃಹ್ಯತಾಂ ಹರೇ ॥ ೨೯ ॥

ಸದ್ರತ್ನಮಣಿಸಾರೇಣ ರಚಿತಾಂ ಸುಮನೋಹರಾಂ ।
ಛಾದಿತಾಂ ಸೂಕ್ಷ್ಮವಸ್ತ್ರೇಣ ಶಯ್ಯಾಂ ಚ ಗೃಹ್ಯತಾಂ ಹರೇ ॥ ೩೦ ॥

---

೨೬. ಜೇನು, ತುಪ್ಪ, ಹಾಲು, ಮೊಸರು ಮತ್ತು ಸಕ್ಕರೆಯೊಡಗೂಡಿದ ಪಂಚಾಮೃತವನ್ನು ಸ್ನಾನಕ್ಕಾಗಿ ಸ್ವೀಕರಿಸು.

೨೭. ದೂರ್ವಾಕ್ಷತೆಯನ್ನೂ, ಬಿಳೀಹೂವನ್ನೂ, ಸ್ವಚ್ಛವಾದ ನೀರಿನಲ್ಲಿ ಮಿಶ್ರಮಾಡಿದ ಚಂದನ, ಅಗುರು ಮತ್ತು ಕಸ್ತೂರಿಗಳನ್ನೂ ಸ್ವೀಕರಿಸು.

೨೮. ಎಲೈ ಪರಮೇಶ್ವರನೇ, ಏಲಕ್ಕಿ ಮುಂತಾದ ಸುವಾಸಿತ ವಸ್ತುಗಳಿಂದ ಮಿಶ್ರಿತವಾದ ತಿಳಿನೀರನ್ನು ಶುದ್ಧಾಚಮನಕ್ಕಾಗಿ ಸ್ವೀಕರಿಸು.

೨೯. ಸುಗಂಧದ್ರವ್ಯಗಳಿಂದ ಕೂಡಿದ ಸುವಾಸನೆಯಾದ ತೈಲವನ್ನೂ, ನೆಲ್ಲಿಕಾಯಿನ ರಸವನ್ನೂ ಸ್ನಾನಾರ್ಥವಾಗಿ ಎಲೈ ವಿಷ್ಣುವೇ, ಸ್ವೀಕರಿಸು.

೩೦. ಮಣಿಹಾರಂಗಳಿಂದಲಂಕೃತವಾಗಿ ಸೂಕ್ಷ್ಮವಸ್ತ್ರದಿಂದ ಮರೆಮಾಡಲ್ಪಟ್ಟಿರುವ ದಿವ್ಯಶಯನವನ್ನು ಶಯನಾರ್ಥವಾಗಿ ಸ್ವೀಕರಿಸು.

ಚೂರ್ಣಂ ಚ ವೃಕ್ಷಭೇದಾನಾಂ ಮೂಲಾನಾಂ ದ್ರವಸಂಯುತಂ।
ಕಸ್ತೂರೀದ್ರವಸಂಯುಕ್ತಂ ಗಂಧಂ ಚ ಗೃಹ್ಯತಾಂ ಹರೇ ॥ ೩೧ ॥

ಪುಷ್ಪಂ ಸುಗಂಧಿಯುಕ್ತಂ ಚ ಸಂಯುಕ್ತಂ ಕುಂಕುಮೇನ ಚ।
(ವನಸ್ಪತಿ ಸಮುದ್ಭವಂ)
ಸುಪ್ರಿಯಂ ಸರ್ವದೇವಾನಾಂ ಸಾಂಪ್ರತಂ ಗೃಹ್ಯತಾಂ ಹರೇ ॥ ೩೨ ॥

ಗೃಹ್ಯತಾಂ ಸ್ವಸ್ತಿಕೋಕ್ತಂ ಚ ಮಿಷ್ಟದ್ರವ್ಯಸಮನ್ವಿತಂ।
ಸುಪಕ್ವ ಫಲಸಂಯುಕ್ತಂ ನೈವೇದ್ಯಂ ಗೃಹ್ಯತಾಂ ಹರೇ ॥ ೩೩ ॥

ಲಡ್ಡುಕಂ ಮೋದಕಂ ಚೈವ ಸರ್ಪಿಃ ಕ್ಷೀರಂ ಗುಡಂ ಮಧು।
ನವೋದ್ಧೃತಂ ದಧಿ ತಕ್ರಂ ನೈವೇದ್ಯಂ ಗೃಹ್ಯತಾಂ ಹರೇ ॥ ೩೪ ॥

ಶೀತಲಂ ಶರ್ಕರಾಯುಕ್ತಂ ಕ್ಷೀರಸ್ವಾದುಸುಪಕ್ವಕಂ।
ತಾಂಬೂಲಂ ಭೋಗಸಾರಂ ಚ ಕರ್ಪೂರಾದಿಸಮನ್ವಿತಂ ॥ ೩೫ ॥

---

೩೧. ಸುವಾಸನೆಯಾದ ಬೇರುಗಳ ದ್ರವದಿಂದಲೂ, ಕಸ್ತೂರಿದ್ರವದಿಂದಲೂ ಮಿಶ್ರಿತವಾದ ಚಂದನಾದಿ ವೃಕ್ಷಗಳ ಚೂರ್ಣಮಿಶ್ರಿತವಾದ ದಿವ್ಯಗಂಧವನ್ನು ಸ್ವೀಕರಿಸು.

೩೨. ಕುಂಕುಮಮಿಶ್ರಿತವಾದ, ಸರ್ವದೇವತೆಗಳಿಗೂ ಪ್ರಿಯವಾದ ಸುವಾಸನೆಯಾದ ಪುಷ್ಪವನ್ನು ಎಲೈ ಹರಿಯೇ, ಸ್ವೀಕರಿಸು.

೩೩. ಮಿಷ್ಟದ್ರವ್ಯಗಳಿಂದ ಕೂಡಿದ ಸ್ವಸ್ತಿಕವಾಯನವನ್ನೂ, ಚೆನ್ನಾಗಿ ಪಕ್ವವಾದ ಫಲಗಳನ್ನೂ ನೈವೇದ್ಯಕ್ಕಾಗಿ ಸ್ವೀಕರಿಸು.

೩೪. ಲಾಡು, ಕರಿಗಡಬು, ತುಪ್ಪ, ಹಾಲು, ಬೆಲ್ಲ, ಜೇನು, ಹೊಸದಾಗಿ ಹೆಪ್ಪುಕಟ್ಟಿರುವ ಮೊಸರು ಮುಂತಾದ ನೈವೇದ್ಯಗಳನ್ನು ಸ್ವೀಕರಿಸು.

೩೫. ಶೀತಲವಾಗಿಯೂ, ಸಕ್ಕರೆಸಹಿತವಾಗಿಯೂ, ಒಳ್ಳೆಯ ಹಾಲಿನಲ್ಲಿ ಪಕ್ವವಾಗಿಯೂ, ಪಚ್ಚಕರ್ಪೂರಾದಿಗಳಿಂದ ಸುವಾಸಿತವಾಗಿಯೂ ಇರುವ ತಾಂಬೂಲವನ್ನು ಭೋಗಾರ್ಥವಾಗಿ ಸ್ವೀಕರಿಸು.

ಭಕ್ತ್ಯಾ ನಿವೇದಿತಮಿದಂ ಗೃಹ್ಯತಾಂ ಪರಮೇಶ್ವರ ।
ಚಂದನಾಗುರುಕಸ್ತೂರೀಕುಂಕುಮದ್ರವಸಂಯುತಂ || ೩೬ ||

ಅಬೀರಚೂರ್ಣಂ ರುಚಿರಂ ಗೃಹ್ಯತಾಂ ಪರಮೇಶ್ವರ ।
ತರುಭೇದರಸೋತ್ಕರ್ಷೋ ಗಂಧಯುಕ್ತೋಽಗ್ನಿನಾ ಸಹ || ೩೭ ||

ಸುಪ್ರಿಯಃ ಸರ್ವದೇವಾನಾಂ ಧೂಪೋಽಯಂ ಗೃಹ್ಯತಾಂ ಹರೇ ।
ಘೋರಾಂಧಕಾರನಾಶೈಕಹೇತುರೇವ ಶುಭಾವಹಃ || ೩೮ ||

ಸುಪ್ರದೀಪೋ ದೀಪ್ತಿಕರೋ ದೀಪೋಽಯಂ ಗೃಹ್ಯತಾಂ ಹರೇ ।
ಪವಿತ್ರಂ ನಿರ್ಮಲಂ ತೋಯಂ ಕರ್ಪೂರಾದಿಸಮಾಯುತಂ || ೩೯ ||
(ಗೃಹ್ಯತಾಂ ಪರಮೇಶ್ವರ)

ಜೀವನಂ ಸರ್ವಬೀಜಾನಾಂ ಪಾನಾರ್ಥಂ ಗೃಹ್ಯತಾಂ ಹರೇ ।
ನಾನಾಪುಷ್ಪಸಮಾಯುಕ್ತಂ ಗ್ರಥಿತಂ ಸೂಕ್ಷ್ಮತಂತುನಾ || ೪೦ ||

---

೩೬. ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮಕೇಸರಿಗಳಿಂದ ಯುತವಾದ ಈ ಅನುಲೇಪನದ್ರವ್ಯಗಳನ್ನು ಭಕ್ತಿಯಿಂದರ್ಪಿಸುವೆನು ಸ್ವೀಕರಿಸು

೩೭. ಎಲೈ ಪರಮೇಶ್ವರನೇ, ಸುಗಂಧದಿಂದಲೂ, ಒಳ್ಳೆಯ ರಸದಿಂದಲೂ ಕೂಡಿ ಮನೋಹರವಾಗಿರುವ 'ಅಬೀರ'ವೆಂಬ ಮರದ ಚೂರ್ಣದಿಂದ ನಿರ್ಮಿತವಾಗಿ, ದೇವತೆಗಳಿಗೆಲ್ಲ ಪ್ರಿಯವಾದ ದಿವ್ಯಧೂಪವನ್ನು ಸ್ವೀಕರಿಸು.

೩೮. ಘೋರಾಂಧಕಾರ ನಾಶಕ್ಕೆ ಕಾರಣವೂ, ಶುಭಕರವೂ, ದೀಪ್ತಿಕರವೂ ಆದ ದಿವ್ಯದೀಪವನ್ನು ಎಲೈ ಶ್ರೀಹರಿಯೇ, ಸ್ವೀಕರಿಸು.

೩೯. ಪವಿತ್ರವೂ, ನಿರ್ಮಲವೂ, ಕರ್ಪೂರವೇ ಮುಂತಾದ ಸುಗಂಧದ್ರವ್ಯಗಳಿಂದ ಮಿಶ್ರಿತವೂ, ಸಕಲ ಬೀಜಗಳಿಗೆ ಜೀವನಪ್ರದವೂ ಆದ ಶೀತಲೋದಕವನ್ನು ಪಾನಮಾಡಲು ಸ್ವೀಕರಿಸು.

೪೦. ಸೂಕ್ಷ್ಮವಾದ ದಾರದಿಂದ ಪೋಣಿಸಿರುವ ನಾನಾವಿಧ ಪುಷ್ಪಗಳಿಂದ ಕೂಡಿದ ಈ ದಿವ್ಯಮಾಲೆಯನ್ನು ಭೂಷಣಾರ್ಥವಾಗಿ ಸ್ವೀಕರಿಸು.

ಶರೀರಭೂಷಣವರಂ ಮೂಲ್ಯಂ ಚ ಪ್ರತಿಗೃಹ್ಯತಾಂ ।
ದತ್ವಾ ದೇಯಾನಿ ದ್ರವ್ಯಾಣಿ ಪೂಜೋಪಯೋಗಿತಾನಿ ಚ ॥ ೪೦ ॥

ವ್ರತಸ್ಥಾನಸ್ಥಿತಂ ದ್ರವ್ಯಂ ಹರಯೇ ದೇವಮೇವ ಚ ।
ಫಲಾನಿ ತರುಬೀಜಾನಿ ಸ್ವಾದೂನಿ ಸುಂದರಾಣಿ ಚ ॥ ೪೧ ॥

ವಂಶವೃದ್ಧಿಕರಾಣ್ಯೇವ ಗೃಹ್ಯತಾಂ ಪರಮೇಶ್ವರ ।
ಆವಾಹಿತಾಂಶ್ಚ ದೇವಾಂಶ್ಚ ಪ್ರತ್ಯೇಕಂ ಪೂಜಯೇದ್ವ್ರತೀ ॥ ೪೨ ॥

ತಾನ್ಸಂಪೂಜ್ಯ ಭಕ್ತಿಭಾವೇನ ದದ್ಯಾತ್ಪುಷ್ಪಾಂಜಲಿತ್ರಯಂ ।
ಸುನಂದನಂದಕುಮುದಾನ್ಗೋಪಾನ್ಗೋಪೀಶ್ಚ ರಾಧಿಕಾಂ ॥ ೪೪ ॥

ಗಣೇಶಂ ಕಾರ್ತಿಕೇಯಂ ಚ ಬ್ರಹ್ಮಾಣಂ ಚ ಶಿವಂ ಶಿವಾಂ ।
ಲಕ್ಷ್ಮೀಂ ಸರಸ್ವತೀಂ ಚೈವ ದಿಕ್ಪಾಲಾಂಶ್ಚ ಗ್ರಹಾಂಸ್ತಥಾ ॥ ೪೫ ॥

ಶೇಷಂ ಸುದರ್ಶನಂ ಚೈವ ಪಾರ್ಷದಪ್ರವರಾಂಸ್ತಥಾ ।
ಸಂಪೂಜ್ಯ ಸರ್ವದೇವಾಂಶ್ಚ ಪ್ರಣಮ್ಯ ದಂಡವದ್ಭುವಿ ।
ಬ್ರಾಹ್ಮಣೇಭ್ಯಶ್ಚ ನೈವೇದ್ಯಂ ದತ್ವಾ ದದ್ಯಾಚ್ಚ ದಕ್ಷಿಣಾಂ ॥ ೪೬ ॥

---

೪೦—೪೨. ಈ ರೀತಿ ಹೇಳುತ್ತ ವ್ರತಕ್ಕಾಗಿ ತಂದ ಪೂಜೋಪಯುಕ್ತವಾದ ಸಕಲ ದ್ರವ್ಯಗಳನ್ನೂ ಶ್ರೀಹರಿಗೆ ಸಮರ್ಪಿಸಿ, ಮಧುರವೂ ಮನೋಹರವೂ ಆದ ಪೂರ್ಣಫಲಗಳನ್ನು ವಂಶಾಭಿವೃದ್ಧಿಗಾಗಿ ಶ್ರೀಹರಿಗೆ ಸಮರ್ಪಿಸಬೇಕು. ಅನಂತರ ಅಲ್ಲಿ ಆವಾಹನೆಮಾಡಿರುವ ಎಲ್ಲ ದೇವತೆಗಳನ್ನೂ ಪೂಜಿಸಬೇಕು.

೪೪. ಎಲ್ಲ ದೇವತೆಗಳನ್ನೂ ಭಕ್ತಿಪೂರ್ವಕವಾಗಿ ಪೂಜಿಸಿ ಮೂರುಸಾರಿ ಬೊಗಸೆಯಲ್ಲಿ ಹೂವನ್ನು ಅರ್ಪಿಸಬೇಕು.

೪೫—೪೬. ಅನಂತರ ಸುನಂದ, ನಂದ, ಕುಮುದ ಮುಂತಾದ ಗೋಪರನ್ನೂ, ಗೋಪಿಯರನ್ನೂ, ರಾಧಿಕೆಯನ್ನೂ, ಗಣೇಶ, ಷಣ್ಮುಖ, ಬ್ರಹ್ಮ ಮತ್ತು ಶಿವಪಾರ್ವತಿಯರನ್ನೂ, ಲಕ್ಷ್ಮೀ ಮತ್ತು ಸರಸ್ವತೀದೇವಿಯರನ್ನೂ, ದಿಕ್ಪಾಲರನ್ನೂ, ನವಗ್ರಹಗಳನ್ನೂ, ಆದಿಶೇಷನನ್ನೂ, ಸುದರ್ಶನಚಕ್ರವನ್ನೂ, ವಿಷ್ಣುವಿನ ಪಾರ್ಷದರನ್ನೂ, ಎಲ್ಲ ದೇವತೆಗಳನ್ನೂ ಪೂಜಿಸಿ, ಭೂಮಿಯಮೇಲೆ ಸಾಷ್ಟಾಂಗ ಎರಗಿ, ಬ್ರಾಹ್ಮಣರಿಗೆ ನೈವೇದ್ಯವನ್ನೂ, ದಕ್ಷಿಣೆಯನ್ನೂ ಸಮರ್ಪಿಸಬೇಕು.

ಕಥಾಂ ಚ ಜನ್ಮಾಧ್ಯಾಯೋಕ್ತಾಂ ಶೃಣುಯಾದ್ಭಕ್ತಿಭಾವತಃ ।
ತದಾ ಕುಶಾಸನೇ ಸ್ಥಿತ್ವಾ ಕುರ್ಯಾಜ್ಜಾಗರಣಂ ವ್ರತೀ ॥ ೪೭ ॥

ಪ್ರಭಾತೇ ಚಾಹ್ನಿಕಂ ಕೃತ್ವಾ ಸಂಪೂಜ್ಯ ಶ್ರೀಹರಿಂ ಮುದಾ ।
ಬ್ರಾಹ್ಮಣಾನ್ಭೋಜಯಿತ್ವಾ ಚ ಕಾರಯೇದ್ಧರಿಕೀರ್ತನಂ ॥ ೪೮ ॥

॥ ನಾರದ ಉವಾಚ ॥

ವ್ರತಕಾಲವ್ಯವಸ್ಥಾಂ ಚ ವೇದೋಕ್ತಾಂ ಸರ್ವಸಂಮತಾಂ ।
ವೇದಾರ್ಥಂ ಚ ಸಮಾಲೋಚ್ಯ ಸಂಹಿತಾಂ ಚ ಪುರಾತನೀಂ ॥ ೪೯ ॥

ಉಪವಾಸೇ ಜಾಗರಣೇ ವ್ರತೇ ಕಿಂ ವಾ ಫಲಂ ಮುನೇ ।
ಕಿಂ ವಾ ಪಾಪಂ ತತ್ರ ಭುಕ್ತ್ವಾ ವದ ವೇದವಿದಾಂ ವರ ॥ ೫೦ ॥

॥ ಶ್ರೀ ನಾರಾಯಣ ಉವಾಚ ॥

ಅಷ್ಟಮೀ ಕರ್ಕ್ಷಸಂಯುಕ್ತಾ ರಾತ್ರ್ಯರ್ಧೇ ಯದಿ ದೃಶ್ಯತೇ ।
ಸ ಏವ ಮುಖ್ಯಕಾಲಶ್ಚ ತತ್ರ ಜಾತಃ ಸ್ವಯಂ ಹರಿಃ ॥ ೫೧ ॥

---

೪೭. ಅನಂತರ ಭಕ್ತಿಪೂರ್ವಕವಾಗಿ ಜನ್ಮಾಧ್ಯಾಯದಲ್ಲಿ ಹೇಳಿರುವ ಕಥೆಯನ್ನು ಕೇಳಬೇಕು. ಅಲ್ಲದೆ ಕುಶಾಸನದಲ್ಲಿ ಕುಳಿತು ರಾತ್ರಿಯೆಲ್ಲ ಜಾಗರಣೆ ಮಾಡಬೇಕು.

೪೮. ಮಾರನೆಯ ದಿವಸ ಪ್ರಾತಃಕಾಲದಲ್ಲೆದ್ದು ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು, ಬ್ರಾಹ್ಮಣಸಂತರ್ಪಣೆಮಾಡಿ ಶ್ರೀಹರಿಕೀರ್ತನೆಯನ್ನು ಮಾಡಿಸಬೇಕು.

೪೯–೫೦. ನಾರದ :—ಎಲೈ ವೇದಜ್ಞರಲ್ಲಿ ಶ್ರೇಷ್ಠನಾದ ನಾರಾಯಣ ಮಹರ್ಷಿಯೇ, ವೇದೋಕ್ತವೂ, ಸಕಲಸಂಮತವೂ ಆದ ವ್ರತಕಾಲವನ್ನೂ, ಆ ಕಾಲದಲ್ಲಿ ಉಪವಾಸ ಮತ್ತು ಜಾಗರಣಮಾಡುವುದರಿಂದ ದೊರೆಯುವ ಫಲವನ್ನೂ, ಆ ದಿವಸ ಊಟಮಾಡುವುದರಿಂದುಂಟಾಗುವ ಪಾಪವನ್ನೂ, ವೇದಾರ್ಥ ಸಂಹಿತೆಗಳ ವಿಮರ್ಶೆಯಿಂದ ಹೇಳು.

೫೧. ಶ್ರೀ ನಾರಾಯಣ :–ಅರ್ಧರಾತ್ರಿಯಲ್ಲಿ ರೋಹಿಣೀನಕ್ಷತ್ರಯುತವಾದ ಅಷ್ಟಮೀತಿಥಿಯಿದ್ದರೆ ಅದೇ ವ್ರತಾಚರಣೆಗೆ ಮುಖ್ಯಕಾಲ. ಆ ಹೊತ್ತಿನಲ್ಲಿಯೇ ಶ್ರೀಹರಿಯು ಜನಿಸಿದ್ದು

ಜಯಂ ಪುಣ್ಯಂ ಚ ಕುರುತೇ ಜಯಂತೀ ತೇನ ಸಂಸ್ಕೃತಾ ।
ತತ್ರೋಪೋಷ್ಯ ವ್ರತಂ ಕೃತ್ವಾ ಕುರ್ಯಾಜ್ಜಾಗರಣಂ ಬುಧಃ ॥ ೫೨ ॥

ಸರ್ವಾಪವಾದಃ ಕಾಲೋಽಯಂ ಪ್ರಧಾನಃ ಸರ್ವಸಂಮತಃ ।
ಇತಿ ವೇದವಿದಾಂ ವಾಣೀ ಚೇತ್ಯುಕ್ತಾ ವೇಧಸಾ ಪುರಾ ॥ ೫೩ ॥

ತತ್ರ ಜಾಗರಣಂ ಕೃತ್ವಾ ಯಸ್ತೂಪೋಷ್ಯ ವ್ರತಂ ಚರೇತ್ ।
ಕೋಟಿಜನ್ಮಾರ್ಜಿತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೫೪ ॥

ವರ್ಜನೀಯಾ ಪ್ರಯತ್ನೇನ ಸಪ್ತಮೀಸಹಿತಾಷ್ಟಮೀ ।
ಸಾ ಸಋಕ್ಷಾಪಿ ನ ಕರ್ತವ್ಯಾ ಸಪ್ತಮೀಸಹಿತಾಷ್ಟಮೀ ।
ಅವಿದ್ಧಾಯಾಂ ಸಋಕ್ಷಾಯಾಂ ಜಾತೋ ದೇವಕಿನಂದನಃ ॥ ೫೫ ॥

---

೫೨. ಜಯವನ್ನೂ, ಪುಣ್ಯವನ್ನೂ ಒದಗಿಸಿಕೊಡುವುದರಿಂದ ಆ ನಕ್ಷತ್ರ, ತಿಥಿ ಮತ್ತು ಕಾಲದ ಯೋಗವು ‘ಜಯಂತೀ’ಯೆನಿಸುವುದು. ಆ ಸಂದರ್ಭದಲ್ಲಿ ವ್ರತಮಾಡುವವನು ಉಪವಾಸವಿದ್ದು ಜಾಗರಣೆ ಮಾಡಬೇಕು.

೫೩. ಎಲ್ಲ ಕಾಲಕ್ಕೂ ಅಪವಾದಕವಾಗಿ ಪ್ರಧಾನವೂ, ಸರ್ವಸಮ್ಮತವೂ ಆದ ಕಾಲವಿದು. ಇದು ವೇದಜ್ಞರೆಲ್ಲರೂ ಒಪ್ಪತಕ್ಕ ಮಾತೆಂದು ಪೂರ್ವದಲ್ಲಿ ಬ್ರಹ್ಮನೇ ಹೇಳಿರುವನು.

೫೪. ಆ ದಿವಸ ಉಪವಾಸದಿಂದ ವ್ರತಾಚರಣೆಮಾಡಿ ಜಾಗರಣೆ ಮಾಡುವವನ ಕೋಟಿಜನ್ಮದ ಪಾಪಗಳೆಲ್ಲ ಪರಿಹಾರವಾಗುವುದರಲ್ಲಿ ಸಂಶಯವಿಲ್ಲ.

೫೫. ಸಪ್ತಮೀಸಹಿತವಾದ ಅಷ್ಟಮಿಯದಿವಸ ಈ ವ್ರತವನ್ನಾಚರಿಸ ಕೂಡದು. ರೋಹಿಣೀನಕ್ಷತ್ರವಿದ್ದರೂ ಸಪ್ತಮೀಯುತವಾದ ಅಷ್ಟಮಿಯದಿನ ಈ ವ್ರತವನ್ನಾಚರಿಸಬಾರದು. ಸಪ್ತಮಿಯ ವೇಧೆಯಿಲ್ಲದಿರುವ ಅಷ್ಟಮೀದಿವಸ ರೋಹಿಣೀನಕ್ಷತ್ರದಲ್ಲಿ ದೇವಕೀನಂದನನು ಜನಿಸಿದನು.

ವೇದವೇದಾಂಗಗುಪ್ತೇತಿವಿಶಿಷ್ಟೇಮಂಗಲಕ್ಷಣೇ ।
ವ್ಯತೀತೇ ರೋಹಿಣೀಋಕ್ಷೇ ವ್ರತೀ ಕುರ್ಯಾಚ್ಚ ಪಾರಣಾಂ ॥ ೫೬ ॥

ತಿಥ್ಯಂತೇ ಚ ಹರಿಂ ಸ್ಮೃತ್ವಾ ಕೃತ್ವಾ ದೇವಾರ್ಚನಂ ವ್ರತೀ ।
ಪಾರಣಂ ಪಾವನಂ ಪುಂಸಾಂ ಸರ್ವಪಾಪಪ್ರಣಾಶನಂ ॥ ೫೭ ॥

ಉಪವಾಸಾಂಗಭೂತಂ ಚ ಫಲದಂ ಸಿದ್ಧಿಕಾರಣಂ ।
ಸರ್ವೇಷ್ವೇವೋಪವಾಸೇಷು ದಿವಾ ಪಾರಣಮಿಷ್ಯತೇ ॥ ೫೮ ॥

ಅನ್ಯಥಾ ಫಲಹಾನಿಃ ಸ್ಯಾತ್ಕೃತೇ ಧಾರಣಪಾರಣೇ ।
ನ ರಾತ್ರೌ ಪಾರಣಂ ಕುರ್ಯಾದೃತೇ ವೈ ರೋಹಿಣೀವ್ರತಾತ್ ॥ ೫೯ ॥

ನಿಶಾಯಾಂ ಪಾರಣಂ ಕುರ್ಯಾದ್ವರ್ಜಯಿತ್ವಾ ಮಹಾನಿಶಾಂ ।
ಪೂರ್ವಾಹ್ಣೇ ಪಾರಣಂ ಶಸ್ತಂ ಕೃತ್ವಾ ವಿಪ್ರಸುರಾರ್ಚನಂ ॥ ೬೦ ॥

---

೫೬. ಈರೀತಿ ವಿಶಿಷ್ಟವಾದ ಮಂಗಳಕಾಲದಲ್ಲಿ ವೇದವೇದಾಂಗರಕ್ಷಕನನ್ನು ಪೂಜಿಸಬೇಕು. ರೋಹಿಣೀನಕ್ಷತ್ರವು ಕಳೆದನಂತರ ವ್ರತಿಯು ಪಾರಣಮಾಡಬೇಕು.

೫೭. ಅಷ್ಟಮೀತಿಥಿಯು ಕಳೆದನಂತರ ಹರಿಸ್ಮರಣಪೂರ್ವಕವಾಗಿ ದೇವತಾರ್ಚನೆಮಾಡಿ ಪಾರಣೆಮಾಡುವ ವ್ರತಪರರ ಪಾಪವೆಲ್ಲವೂ ಪರಿಹಾರವಾಗುವುದು.

೫೮. ಪಾರಣೆಯೆಂಬುದು ಉಪವಾಸಕ್ಕೆ ಅಂಗಭೂತವೂ, ಫಲಸಿದ್ಧಿದಾಯಕವೂ ಆದುದು. ಎಲ್ಲ ಉಪವಾಸಗಳಲ್ಲೂ ಪ್ರಾತಃಕಾಲದಲ್ಲಿಯೇ ಪಾರಣೆ ಮಾಡಬೇಕು.

೫೯. ರಾತ್ರಿಯಹೊತ್ತು ಪಾರಣೆಮಾಡುವುದರಿಂದ ವ್ರತಭಂಗವುಂಟಾಗುವುದು. ಆದರೆ ಜನ್ಮಾಷ್ಟಮೀ ವ್ರತದದಿವಸ ಮಾತ್ರ ರಾತ್ರಿಯಹೊತ್ತು ಪಾರಣೆ ಮಾಡಬಹುದು.

೬೦. ಅರ್ಧರಾತ್ರಿಯು ಕಳೆದನಂತರ ಪಾರಣೆಮಾಡಬಹುದು. ದೇವಬ್ರಾಹ್ಮಣರನ್ನು ಪೂಜಿಸಿ ಪ್ರಾತಃಕಾಲದಲ್ಲಿ ಪಾರಣೆಮಾಡುವುದು ಪ್ರಶಸ್ತವಾದುದು.

ಸರ್ವೇಷಾಂ ಸಂಮಂತಂ ಕುರ್ಯಾದೃತೇ ವೈ ರೋಹಿಣೀವ್ರತಂ ।
ಬುಧಸೋಮಸಮಾಯುಕ್ತಾ ಜಯಂತೀ ಯದಿ ಲಭ್ಯತೇ ॥ ೬೧ ॥

ನ ಕುರ್ಯಾದ್ಗರ್ಭವಾಸಂ ಚ ತತ್ರ ಕೃತ್ವಾ ವ್ರತಂ ವ್ರತೀ ।
ಉದಯೇ ಚಾಷ್ಟಮೀ ಕಿಂಚಿನ್ನವಮೀ ಸಕಲಾ ಯದಿ ॥ ೬೨ ॥

ಭವೇದ್ಬುಧೇಂದುಸಂಯುಕ್ತಾ ಪ್ರಾಜಾಪತ್ಯರ್ಕ್ಷಸಂಯುತಾ ।
ಅಪಿ ವರ್ಷಶತೇನಾಪಿ ಲಭ್ಯತೇ ವಾ ನ ಲಭ್ಯತೇ ॥ ೬೩ ॥

ವ್ರತಂ ತತ್ರ ವ್ರತೀ ಕುರ್ಯಾತ್ಪುಂಸಾಂ ಕೋಟಿಂ ಸಮುದ್ಧರೇತ್ ।
ನೃಣಾಂ ವಿನಾ ವ್ರತೇನಾಪಿ ಭಕ್ತಾನಾಂ ಹೀನಸಂಪದಾಂ ॥ ೬೪ ॥

ಕೃತೇನೈವೋಪವಾಸೇನ ಪ್ರೀತೋ ಭವತಿ ಮಾಧವಃ ।
ಭಕ್ತ್ಯಾ ನಾನೋಪಚಾರೇಣ ರಾತ್ರೌ ಜಾಗರಣೇನ ಚ ॥ ೬೫ ॥

---

೬೧–೬೩. ರೋಹಿಣೀವ್ರತವನ್ನು ಬಿಟ್ಟು ಉಳಿದ ವ್ರತಗಳಲ್ಲೆಲ್ಲಾ ಬೆಳಗಿನ ಪಾರಣೆಯೇ ಪ್ರಶಸ್ತವಾದುದು. ಬುಧವಾರ ಅಥವಾ ಸೋಮವಾರ ಈ ಜಯಂತೀ ಯೋಗವು ಲಭಿಸಿದಾಗ ವ್ರತಮಾಡಿದರೆ ಪುನಃ ಜನ್ಮವಿರುವುದಿಲ್ಲ. ಉದಯ ಕಾಲದಲ್ಲಿ ಸ್ವಲ್ಪ ಅಷ್ಟಮಿಯೂ, ಅಸ್ತಕಾಲದವರೆಗೆ ನವಮಿಯೂ ಇದ್ದು (ಬುಧವಾರ ಅಥವಾ ಸೋಮವಾರ) ರೋಹಿಣೀನಕ್ಷತ್ರವಿದ್ದರೆ ಆ ದಿನವು ವ್ರತಾಚರಣೆಗೆ ಬಹಳ ಪುಣ್ಯಕರವಾದುದು. ಅಂಥ ಪುಣ್ಯದಿವಸವು ನೂರುವರ್ಷಕ್ಕೊಮ್ಮೆಯಾದರೂ ದೊರೆಯುವುದು ದುರ್ಲಭವಾಗುವುದು.

೬೪–೬೫. ಆದಿನ ವ್ರತಮಾಡಿದವನು ತನ್ನ ವಂಶದ ಕೋಟಿಪುರುಷರನ್ನುದ್ಧರಿಸುವನು. ವ್ರತವನ್ನಾಚರಿಸಲು ಶಕ್ತರಲ್ಲದ ಬಡಭಕ್ತರು, ಕೇವಲ ಉಪವಾಸಮಾಡಿ, ರಾತ್ರಿ ಜಾಗರಣೆಮಾಡಿ, ಭಕ್ತಿಪೂರ್ವಕವಾಗಿ ನಾನಾವಿಧವಾದ ಉಪಚಾರಗಳನ್ನು ಮಾಡಿದರೂ ಶ್ರೀಹರಿಯು ಸುಪ್ರೀತನಾಗುವನು.

ಫಲಂ ದದಾತಿ ದೈತ್ಯಾರಿರ್ಜಯಂತೀ ವ್ರತಸಂಭವಂ ।
ವಿತ್ತಶಾಠ್ಯಮಕುರ್ವಾಣಃ ಸಮ್ಯಕ್ಫಲಮವಾಪ್ನುಯಾತ್ ॥ ೬೬ ॥

ಕುರ್ವಾಣೋ ವಿತ್ತಶಾಠ್ಯಂ ಚ ಲಭತೇ ಸದೃಶಂ ಫಲಂ ।
ಅಷ್ಟಮ್ಯಾಮಥ ರೋಹಿಣ್ಯಾಂ ನ ಕುರ್ಯಾತ್ಪಾರಣಂ ಬುಧಃ ॥ ೬೭ ॥

ಹನ್ಯಾತ್ಪುರಾ ಕೃತಂ ಪುಣ್ಯಂ ಚೋಪವಾಸಾರ್ಜಿತಂ ಫಲಂ ।
ತಿಥಿರಷ್ಟಗುಣಂ ಹಂತಿ ನಕ್ಷತ್ರಂ ಚ ಚತುರ್ಗುಣಂ ॥ ೬೮ ॥

ತಸ್ಮಾತ್ಪ್ರಯತ್ನತಃ ಕುರ್ಯಾತ್ತಿಥಿಭಾಂತೇ ಚ ಪಾರಣಾಂ ।
ಮಹಾನಿಶಾಯಾಂ ಪ್ರಾಪ್ತಾಯಾಂ ತಿಥಿಭಾಂತಂ ಯದಾ ಭವೇತ್ ॥ ೬೯ ॥

ತೃತೀಯೇಽಹ್ನಿ ಮುನಿಶ್ರೇಷ್ಠ ಪಾರಣಂ ಕುರುತೇ ಬುಧಃ ।
ಷಣ್ಮುಹೂರ್ತೇ ವ್ಯತೀತೇ ತು ರಾತ್ರಾವೇವ ಮಹಾನಿಶಾ ॥ ೭೦ ॥

---

೬೬. ಕೇವಲ ಉಪವಾಸ ಜಾಗರಣೆಗಳನ್ನು ಮಾಡುವವರಿಗೂ, ಶ್ರೀಕೃಷ್ಣನು ಜಯಂತೀವ್ರತವನ್ನಾಚರಿಸಿದ ಫಲವನ್ನು ಕೊಡುವನು. ಹಣವಂತರು ಲೋಭಿಗಳಾಗದೆ ಔದಾರ್ಯದಿಂದ ವ್ರತವನ್ನಾಚರಿಸಿದರೆ ಸತ್ಫಲವು ದೊರೆಯುವುದು.

೬೭. ಖರ್ಚಿನಲ್ಲಿ ಲೋಭಮಾಡುವವನು ಅದಕ್ಕೆ ತಕ್ಕ ಫಲವನ್ನು ಪಡೆಯುವನು. ಅಷ್ಟಮೀತಿಥಿಯೂ, ರೋಹಿಣೀನಕ್ಷತ್ರವೂ ಇರುವಾಗ ಪಂಡಿತನಾದವನು ಪಾರಣೆಯನ್ನು ಮಾಡಕೂಡದು.

೬೮. ಆ ಕಾಲನಲ್ಲಿ ಪಾರಣೆಮಾಡಿದರೆ ಹಿಂದಿನ ಪುಣ್ಯವೆಲ್ಲವೂ ನಾಶವಾಗುವುದಲ್ಲದೆ ಉಪವಾಸಮಾಡಿದ ಫಲವೂ ನಾಶವಾಗುವುದು. ಕೇವಲ ಅಷ್ಟಮೀತಿಥಿಯಿದ್ದರೆ ಎಂಟರಷ್ಟು ಪುಣ್ಯವೂ ಕೇವಲ ರೋಹಿಣೀನಕ್ಷತ್ರವಿದ್ದರೆ ನಾಲ್ಕರಷ್ಟು ಪುಣ್ಯವೂ ನಾಶವಾಗುವುದು.

೬೯–೭೦. ಆದುದರಿಂದ ಅಷ್ಟಮೀತಿಥಿ ಮತ್ತು ರೋಹಿಣೀನಕ್ಷತ್ರಗಳು ಕಳೆದನಂತರವೇ ಪಾರಣೆಮಾಡಬೇಕು. ಅರ್ಧರಾತ್ರಿಯಲ್ಲೇ ನಕ್ಷತ್ರ ಮತ್ತು ತಿಥಿಯು ಮುಗಿದರೂ ಕೂಡ ಮೂರನೇದಿವಸವೇ ಪ್ರಾಜ್ಞನಾದವನು ಪಾರಣೆ ಮಾಡುವನು. ರಾತ್ರಿಯಲ್ಲಿ ಆರು ಮುಹೂರ್ತಕಾಲ ಕಳೆದರೆ ಅದೇ ಮಹಾರಾತ್ರಿಯೆನಿಸುವುದು.

ಲಭತೇ ಬ್ರಹ್ಮಹತ್ಯಾಂ ಚ ತತ್ರ ಭುಕ್ತ್ವಾ ಚ ನಾರದ ।
ಗೋಮಾಂಸವಿಣ್ಮೂತ್ರಸಮಂ ತಾಂಬೂಲಂ ಚ ಫಲಂ ಜಲಂ ॥ ೭೧ ॥

ಪುಂಸಾಮಭಕ್ಷ್ಯಂ ಶುದ್ಧಾನಾಮೋದನಸ್ಯ ಚ ಕಾ ಕಥಾ ।
ತ್ರಿಯಾಮಾಂ ರಜನೀಂ ಪ್ರಾಹುಸ್ತ್ಯಕ್ತ್ವಾದ್ಯಂ ಚ ಚತುಷ್ಟಯಂ ॥ ೭೨ ॥

ದಂಡಾನಾಂ ತದುಭೇ ಸಂಧ್ಯೇ ದಿವಸಾದ್ಯಂತಸಂಜ್ಞಿತೇ ।
ಜನ್ಮಾಷ್ಟಮ್ಯಾಂ ಚ ಶುದ್ಧಾಯಾಂ ಕೃತ್ವಾ ಜಾಗರಣಂ ವ್ರತಂ ॥ ೭೩ ॥

ಶತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಜನ್ಮಾಷ್ಟಮ್ಯಾಂ ಚ ಶುದ್ಧಾಯಾಮುಪೋಷ್ಯ ಕೇವಲಂ ನರಃ ॥ ೭೪ ॥

---

೭೧. ಎಲೈ ನಾರದನೇ, ಅಷ್ಟುಹೊತ್ತಿನಲ್ಲಿ ಊಟಮಾಡುವವನು ಬ್ರಹ್ಮ ಹತ್ಯಾದೋಷಕ್ಕೆ ಗುರಿಯಾಗುವನು. ಆಗ ಸೇವಿಸುವ ಫಲ, ಜಲ, ತಾಂಬೂಲಗಳು, ಗೋವಿನ ಮಾಂಸ, ಸಗಣಿ ಮತ್ತು ಗಂಜಲಕ್ಕೆ ಸದೃಶವೆನಿಸುವುವು.

೭೨. ಆ ಹೊತ್ತಿನಲ್ಲಿ ನಿಯಮವುಳ್ಳ ಮನುಜರು ಫಲಜಲಾದಿಗಳನ್ನೇ ಸೇವಿಸಕೂಡದೆಂದ ಮೇಲೆ ಅನ್ನವನ್ನು ಊಟಮಾಡಬಾರದೆಂದು ಪ್ರತ್ಯೇಕವಾಗಿ ಹೇಳಬೇಕಾದ್ದಿಲ್ಲ. ಹಗಲಿನ ನಾಲ್ಕು ಝಾವವನ್ನು ಬಿಟ್ಟರೆ ರಾತ್ರಿಯು ಮೂರು ಝಾವಯುತವಾಮುದೆಂದು ಹೇಳುವರು.

೭೩. ಉಳಿದ ಒಂದು ಝಾವ ಅಥವಾ ಮೂರು ಘಂಟೆಯಲ್ಲಿ ಅರ್ಧಝಾವ ಪ್ರಾತಃಸಂಧ್ಯೆಯೆಂದೂ, ಉಳಿದರ್ಧಝಾವ ಸಾಯಂಸಂಧ್ಯೆಯೆಂದೂ ಪ್ರಸಿದ್ಧ ವಾಗಿರುವುದು.

೭೪. ಶ್ರಾವಣ ಕೃಷ್ಣ ಜನ್ಮಾಷ್ಟಮಿಯ ದಿವಸ ಜಾಗರಣವ್ರತವನ್ನಾ ಚರಿಸುವವರು ನೂರು ಜನ್ಮಗಳಲ್ಲಿ ಮಾಡಿದ ಪಾಪದಿಂದ ಮುಕ್ತರಾಗುವುದರಲ್ಲಿ ಸಂಶಯವಿಲ್ಲ

ಅಶ್ವಮೇಧಫಲಂ ತಸ್ಯ ವ್ರತಂ ಜಾಗರಣಂ ವಿನಾ ।
ಯದ್ಬಾಲ್ಯೇ ಯಚ್ಚ ಕೌಮಾರೇ ಯೌವನೇ ಯಚ್ಚ ವಾರ್ಧಕೇ ॥ ೭೫ ॥

ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಶ್ರೀಕೃಷ್ಣಜನ್ಮದಿವಸೇ ಯಶ್ಚ ಭುಂಕ್ತೇ ನರಾಧಮಃ ॥ ೭೬ ॥

ಸ ಭವೇನ್ಮಾತೃಗಾಮೀ ಚ ಬ್ರಹ್ಮಹತ್ಯಾಶತಂ ಲಭೇತ್ ।
ಕೋಟಿಜನ್ಮಾರ್ಜಿತಂ ಪುಣ್ಯಂ ತಸ್ಯ ನಶ್ಯತಿ ನಿಶ್ಚಿತಂ ॥ ೭೭ ॥

ಅನರ್ಹಶ್ಚಾಶುಚಿಃ ಶಶ್ವದ್ದೈವೇ ಪಿತ್ರ್ಯೇ ಚ ಕರ್ಮಣಿ ।
ಅಂತೇ ವಸೇತ್ಕಾಲಸೂತ್ರೇ ಯಾವಚ್ಚಂದ್ರದಿವಾಕರೌ ॥ ೭೮ ॥

---

೭೫. ಕೃಷ್ಣ ಜನ್ಮಾಷ್ಟಮಿಯಲ್ಲಿ ಕೇವಲ ಉಪವಾಸಮಾಡಿದವರೂ ಕೂಡ (ಜಾಗರಣೆ ಮಾಡದಿದ್ದರೂ ಕೂಡ) ಅಶ್ವಮೇಧಯಾಗಮಾಡಿದ ಫಲವು ದೊರೆಯುವುದು.

೭೬. ಅಲ್ಲದೆ ಏಳು ಜನ್ಮಾಂತರಗಳಲ್ಲೂ, ಬಾಲ್ಯ, ಕೌಮಾರ, ಯೌವನ ಮತ್ತು ವಾರ್ಧಕ್ಯಗಳಲ್ಲೂ ಮಾಡಿದ ಸಕಲ ಪಾಪಗಳಿಂದ ಮುಕ್ತರಾಗುವುದರಲ್ಲಿ ಸಂಶಯವಿಲ್ಲ.

೭೭. ಶ್ರೀಕೃಷ್ಣ ಜನ್ಮದಿವಸದಲ್ಲಿ ಊಟಮಾಡುವ ನೀಚ ಮನುಜನು ಮಾತೃಗಮನಮಾಡಿದ ದೋಷಕ್ಕೂ, ನೂರು ಬ್ರಹ್ಮಹತ್ಯೆಮಾಡಿದ ಪಾಪಕ್ಕೂ ಗುರಿಯಾಗುವುದಲ್ಲದೆ ಅವನು ಕೋಟಿಜನ್ಮಗಳಿಂದಾರ್ಜಿಸಿದ ಪುಣ್ಯವೂ ನಾಶವಾಗುವುದರಲ್ಲಿ ಸಂಶಯವಿಲ್ಲ.

೭೮. ಅಲ್ಲದೆ ಅವನು ದೇವಪಿತೃಕರ್ಮಗಳನ್ನಾಚರಿಸಲು ಅನರ್ಹನೂ, ಅಶುಚಿಯೂ ಆಗುವನು. ಕೊನೆಯಲ್ಲಿ ಚಂದ್ರಸೂರ್ಯರಿರುವವರೆಗೆ ಕಾಲಸೂತ್ರವೆಂಬ ನರಕದಲ್ಲಿ ನರಳುವನು.

ಕೃಮಿಭಿಃ ಶೂಲತುಲ್ಯೈಶ್ಚ ತೀಕ್ಷ್ಣದಂಷ್ಟ್ರೈಶ್ಚ ಭಕ್ಷಿತಃ ।
ಪಾಪೀ ತತಃ ಸಮುತ್ಥಾಯ ಭಾರತೇ ಜನ್ಮ ಚೇಲ್ಲಭೇತ್ ॥ ೭೯ ॥

ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಚ ಕೃಮಿರ್ಭವೇತ್ ।
ಗೃಧ್ರಕೋಟಿ ಸಹಸ್ರಾಣಿ ಶತಜನ್ಮಾನಿ ಸೂಕರಃ ॥ ೮೦ ॥

ಶ್ವಾಪದಃ ಶತಜನ್ಮಾನಿ ಸೃಗಾಲಃ ಸಪ್ತ ಜನ್ಮ ಚ ।
ಸಪ್ತಜನ್ಮಸು ಸರ್ಪಶ್ಚ ಕಾಕಶ್ಚ ಸಪ್ತಜನ್ಮಸು ॥ ೮೧ ॥

ತತೋ ಭವೇನ್ನರೋ ಮೂಕೋ ಗಲತ್ಕುಷ್ಠೀ ಸದಾತುರಃ ।
ತತೋ ಭವೇತ್ಪಶುಘ್ನಶ್ಚ ವ್ಯಾಲಗ್ರಾಹೀ ತತೋ ಭವೇತ್ ॥ ೮೨ ॥

ತದಂತೇ ಚ ಭವೇದ್ದಸ್ಯುರ್ಧರ್ಮಹೀನೋ ನರಘ್ನಕಃ ।
ತತೋ ಭವೇತ್ಸ ರಜಕಸ್ತೈಲಕಾರಸ್ತತೋ ಭವೇತ್ ॥ ೮೩ ॥

---

೭೯–೮೦. ಅಲ್ಲಿ ಶೂಲಾಯುಧಕ್ಕೆ ಸದೃಶವಾದ ತೀಕ್ಷ್ಣದಂಷ್ಟ್ರಗಳುಳ್ಳ ಕ್ರಿಮಿಗಳಿಂದ ತಿನ್ನಲ್ಪಡುವನಲ್ಲದೆ ಅಲ್ಲಿಂದ ಪಾರಾಗಿ ಒಂದುವೇಳೆ ಭರತಖಂಡದಲ್ಲಿ ಪುನರ್ಜನ್ಮವೆತ್ತಿದರೂ ಅರವತ್ತುಸಾವಿರವರ್ಷಗಳು ಮಲದಲ್ಲಿ ಕ್ರಿಮಿಯಾಗಿ ಹುಟ್ಟಿರುವನು. ಅನಂತರ ಸಹಸ್ರಜನ್ಮಗಳು ಹದ್ದಾಗಿಯೂ, ನೂರು ಜನ್ಮಗಳು ಹಂದಿಯಾಗಿಯೂ ಇರುವನು.

೮೧. ನೂರು ಜನ್ಮಗಳಲ್ಲಿ ದುಷ್ಟಮೃಗವಾಗಿಯೂ, ಏಳು ಜನ್ಮಗಳಲ್ಲಿ ನರಿಯಾಗಿಯೂ, ಮತ್ತೇಳುಜನ್ಮಗಳಲ್ಲಿ ಹಾವಾಗಿಯೂ, ಪುನಃ ಏಳು ಜನ್ಮಗಳಲ್ಲಿ ಕಾಗೆಯಾಗಿಯೂ ಜನಿಸುವನು.

೮೨. ಅನಂತರ ಮನುಷ್ಯಜನ್ಮವೆತ್ತಿದರೂ ಮೂಗನೂ, ಕುಷ್ಠರೋಗಿಯೂ ಆಗಿರುವನು. ಅನಂತರ ಪಶುಸಂಹಾರಕನೂ, ಮುಂದೆ ಹಾವಾಡಿಗನೂ ಆಗಿ ಹುಟ್ಟುವನು.

೮೩. ಅನಂತರ ಕಳ್ಳನಾಗಿಯೂ, ಧರ್ಮಹೀನನಾಗಿಯೂ ನರಘಾತಕ ಯಾಗಿಯೂ, ಮುಂದೆ ಅಗಸ ಮತ್ತು ಗಾಣಿಗನಾಗಿಯೂ ಜನ್ಮವೆತ್ತುವನು.

ತತೋ ಭವೇದ್ದೇವಲಕೋ ಬ್ರಾಹ್ಮಣಶ್ಚ ಸದಾಶುಚಿಃ ।
ಉಪವಾಸಾಸಮರ್ಥಶ್ಚೇದೇಕಂ ವಿಪ್ರಂ ಚ ಭೋಜಯೇತ್ ॥ ೮೪ ॥

ತಾವದ್ಧನಾನಿ ವಾ ದದ್ಯಾದ್ಯದ್ಭುಕ್ತಂ ದ್ವಿಗುಣಂ ಭವೇತ್ ।
ಸಹಸ್ರಸಂಮಿತಾಂ ದೇವೀಂ ಜಪೇದ್ವಾ ಪ್ರಾಣಸಂಯಮಾತ್ ॥ ೮೫ ॥

ಕುರ್ಯಾದ್ದ್ವಾದಶ ಸಂಖ್ಯಾಕಾನ್ಯಥಾರ್ಥಂ ತದ್ವ್ರತೇ ನರಃ ।
ಇತ್ಯೇವ ಕಥಿತಂ ವತ್ಸ ಶ್ರುತಂ ಯದ್ಧರ್ಮವಕ್ತ್ರತಃ ।
ವ್ರತೋಪವಾಸಪೂಜಾನಾಂ ವಿಧಾನಮುಕ್ತಂ ಚ ಯತ್ ॥ ೮೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ನಾರಾಯಣನಾರದಸಂವಾದೇ
ಶ್ರೀಕೃಷ್ಣ ಜನ್ಮಖಂಡೇ ಕೃಷ್ಣ ಜನ್ಮಾಷ್ಟಮೀವ್ರತಪೂಜೋಪವಾಸ
ನಿರೂಪಣಂ ನಾಮ ಅಷ್ಟಮೋಽಧ್ಯಾಯಃ

---

೮೪. ಮುಂದೆ ಬ್ರಾಹ್ಮಣಜನ್ಮವೆತ್ತಿದರೂ ಸರ್ವದಾ ಅಶುಚಿಯಾದ ದೇವ ಪೂಜಕನಾಗುವನು. ಆದುದರಿಂದ ಜನ್ಮಾಷ್ಟಮಿಯದಿನ ಉಪವಾಸಮಾಡಲಾಗದವನು ಒಬ್ಬ ಬ್ರಾಹ್ಮಣನಿಗಾದರೂ ಊಟಮಾಡಿಸಬೇಕು.

೮೫. ಅಥವಾ ಊಟದ ಎರಡರಷ್ಟು ಧನವನ್ನಾದರೂ ದಾನಮಾಡಬೇಕು. ಪ್ರಾಣಸಂಯಮಪೂರ್ವಕವಾಗಿ ಸಹಸ್ರಸಮ್ಮಿತೆಯಾದ ಗಾಯಿತ್ರೀದೇವಿಯನ್ನು ಸಹಸ್ರಸಂಖ್ಯಾಕವಾಗಿ ಜಪಿಸಬೇಕು. ಅರ್ಥಸಹಿತವಾಗಿ ಹನ್ನೆರಡುಸಾರಿಯಾದರೂ ಆ ವ್ರತಕಾಲದಲ್ಲಿ ಜಪಿಸಬೇಕು.

೮೬. ಎಲೈ ವತ್ಸ ನಾರದನೇ, ಧರ್ಮಪುರುಷನ ಬಾಯಿನಿಂದ ನಾನು ಕೇಳಿದ, ಜನ್ಮಾಷ್ಟಮಿಯ ವ್ರತೋಪವಾಸ ಪೂಜಾವಿಧಾನಗಳನ್ನೂ, ಇವನ್ನಾಚರಿಸದಿರುವುದರಿಂದ ಬರುವ ದೋಷಗಳನ್ನೂ ವಿವರಿಸಿರುವೆನು.

ಇಲ್ಲಿಗೆ ಬ್ರಹ್ಮವೈವರ್ತ ಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ಶ್ರೀಕೃಷ್ಣ
ಜನ್ಮಾಷ್ಟಮೀ ವ್ರತ, ಪೂಜೆ ಮತ್ತು ಉಪವಾಸಾದಿ ಕ್ರಮಗಳು
ಎಂಬಲ್ಲಿಗೆ ಎಂಟನೆಯ ಅಧ್ಯಾಯವು ಮುಗಿದುದು.



## ಎಂಟನೆಯ ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಶ್ರೀಕೃಷ್ಣಜನ್ಮಾಷ್ಟಮೀ ವ್ರತವಿಧಾನವು ಸವಿಸ್ತಾರವಾಗಿ ನಿರೂಪಿತವಾಗಿದೆ. ಈ ವ್ರತದಲ್ಲಿ ಕೆಲವರು ಅಷ್ಟಮೀತಿಥಿಯನ್ನೇ ಪ್ರಧಾನವಾಗಿಯೂ, ಮತ್ತೆ ಕೆಲವರು ರೋಹಿಣೀನಕ್ಷತ್ರವನ್ನೇ ಪ್ರಧಾನವಾಗಿಯೂ ಎಣಿಸುತ್ತಾರೆ. ಆದರೆ ಕನ್ಯಾಮಾಸದ ಕೃಷ್ಣಾಷ್ಟಮಿಯ ಅರ್ಧರಾತ್ರಿಯಲ್ಲಿ ರೋಹಿಣೀನಕ್ಷತ್ರದ ಯೋಗವು ಒದಗಿದರೆ ಅದನ್ನು 'ಜಯಂತಿ' ಎನ್ನುವರು. ಈ 'ಜಯಂತಿ' ಯಲ್ಲಿ ವ್ರತಾಚರಣೆಮಾಡುವುದು ಅತ್ಯುತ್ತಮವೆನಿಸುವುದು. ಅದರಲ್ಲೂ ಸೋಮ ಅಥವಾ ಸೌಮ್ಯ ವಾಸರದಲ್ಲಿ ಈ ಯೋಗವು ಲಭಿಸಿದರೆ ಲೋಕೋತ್ತರವಾದುದು. ಜನ್ಮಾಷ್ಟಮೀ ವ್ರತದದಿವಸ ಸಪ್ತಮಿಯ ವೇಧೆ ಇರಕೂಡದು. ಸಪ್ತಮೀದಿವಸ ಏಕಭುಕ್ತ (ಹವಿಷ್ಯಾನ್ನವನ್ನು ತಿಂದು) ಮಾಡಿ ಅಷ್ಟಮೀದಿವಸ ನಿಯಮದಿಂದ ಶಾಸ್ತ್ರೋಕ್ತವಾಗಿ ವ್ರತವನ್ನಾಚರಿಸಿ, ಅಷ್ಟಮೀತಿಥಿ ಮತ್ತು ರೋಹಿಣೀನಕ್ಷತ್ರವು ಸಂಪೂರ್ಣವಾಗಿ ಕಳೆದನಂತರ ಪಾರಣೆಮಾಡಬೇಕು. ವಿಧ್ಯುಕ್ತವಾಗಿ ಶ್ರೀಕೃಷ್ಣಜನ್ಮಾಷ್ಟಮೀ ವ್ರತವನ್ನಾಚರಿಸುವವರು ಜನ್ಮಾಂತರಕೃತವಾದ ಸಕಲ ಪಾಪಗಳಿಂದಲೂ ಮುಕ್ತರಾಗುವರಲ್ಲದೆ ಪರಮಾತ್ಮನ ಸಾನ್ನಿಧ್ಯವನ್ನು ಪಡೆಯುವರು. ಈ ವ್ರತವನ್ನಾಚರಿಸದೆ, ಜನ್ಮಾಷ್ಟಮಿಯದಿವಸ ಊಟಮಾಡುವ ಮನುಜನು ಮಹಾಪಾಪಿಯಾಗಿ ಸಕಲ ಸತ್ಕರ್ಮಗಳಿಗೂ ಅನರ್ಹನಾಗುವುದಲ್ಲದೆ ಕಾಲಸೂತ್ರವೆಂಬ ನರಕದಲ್ಲಿ ನರಳಿ ಮುಂದೆ ಅನೇಕ ಜನ್ಮಗಳಲ್ಲಿ ತಿರ್ಯಗ್ಜಂತುವಾಗುವನು. ಆದುದರಿಂದ ಜನ್ಮಾಷ್ಟಮಿಯದಿವಸ ವ್ರತವನ್ನಾಚರಿಸಲು ಅಶಕ್ತರಾದವರು ಅದಕ್ಕೆ ಪ್ರತ್ಯಾಮ್ನಾಯವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು ಅಥವಾ ಸಹಸ್ರಗಾಯತ್ರಿಯನ್ನಾದರೂ ಭಕ್ತಿಯಿಂದ ಜಪಿಸಬೇಕು.

॥ ಓಂ ॥

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ನವಮೋಽಧ್ಯಾಯಃ ॥

॥ ನಾರದ ಉವಾಚ ॥

**ಸಂಸ್ಥಾಪ್ಯ ಗೋಕುಲೇ ಕೃಷ್ಣಂ ಯಶೋದಾಮಂದಿರೇ ವಸುಃ ।**
**ಜಗಾಮ ಸ್ವಗೃಹಂ ನಂದಃ ಕಿಂ ಚಕಾರ ಮಹಾಪ್ರಭುಃ ॥ ೧ ॥**

**ಕಿಂ ಚಕಾರ ಹರಿಸ್ತತ್ರ ಕತಿವರ್ಷಸ್ಥಿತಿಃ ಪ್ರಭೋಃ ।**
**ಬಾಲಕ್ರೀಡನಕಂ ತಸ್ಯ ವರ್ಣಯ ಕ್ರಮಶೋ ಮುನೇ ॥ ೨ ॥**

**ಪುರಾ ಕೃತಾ ಯಾ ಪ್ರತಿಜ್ಞಾ ಗೋಲೋಕೇ ರಾಧಯಾ ಸಹ ।**
**ತತ್ಕೃತಂ ಕೇನ ವಿಧಿನಾ ಪ್ರತಿಜ್ಞಾಪಾಲನಂ ಹರೇಃ ॥ ೩ ॥**

---

### ಒಂಭತ್ತನೆಯ ಅಧ್ಯಾಯವು

೧. ನಾರದನು ಹೇಳಿದನು :—ವಸುದೇವನು ಶ್ರೀಕೃಷ್ಣನನ್ನು ಗೋಕುಲದಲ್ಲಿ ಯಶೋದೆಯ ಮನೆಯಲ್ಲಿಟ್ಟು ಹಿಂದಿರುಗಿದನಂತರ ನಂದಗೋಪನು ಆ ಬಾಲಕನನ್ನು ಹೇಗೆ ಸಾಕಿದನು ?

೨. ಶ್ರೀಹರಿಯೂ ಕೂಡ ಅಲ್ಲಿ ಎಷ್ಟು ವರ್ಷಗಳಿದ್ದು ಯಾವಯಾವ ಮಹತ್ಕಾರ್ಯಗಳನ್ನೆಸಗಿದನು ? ಎಲೈ ನಾರಾಯಣಮಹರ್ಷಿಯೇ, ಶ್ರೀಕೃಷ್ಣ ಪರಮಾತ್ಮನ ಬಾಲಕ್ರೀಡೆಗಳನ್ನು ಕ್ರಮವಾಗಿ ವರ್ಣಿಸು.

೩. ಪೂರ್ವದಲ್ಲಿ ಶ್ರೀಹರಿಯು ಗೋಲೋಕದಲ್ಲಿ ರಾಧಾದೇವಿಯೊಡನೆ ಮಾಡಿದ ಪ್ರತಿಜ್ಞೆಯನ್ನು ಯಾವ ರೀತಿಯಲ್ಲಿ ಪರಿಪಾಲನೆಮಾಡಿದನು ?

ಕೀದೃಗ್ವೃಂದಾವನಂ ನಾಮ ಮಂಡಲಂ ಕಿಂವಿಧಂ ವದ ।
ರಾಸಕ್ರೀಡಾಂ ಜಲಕ್ರೀಡಾಂ ಸಂವ್ಯಸ್ಯ ವರ್ಣಯ ಪ್ರಭೋ ॥ ೪ ॥

ನಂದಸ್ತಪಃ ಕಿಂ ಚಕಾರ ಯಶೋದಾ ಚಾಥ ರೋಹಿಣೀ ।
ಹರೇಃ ಪೂರ್ವಂ ಚ ಹಲಿನಃ ಕುತ್ರ ಜನ್ಮ ಬಭೂವ ಹ ॥ ೫ ॥

ಪೀಯೂಷಖಂಡವಾಖ್ಯಾನಮಪೂರ್ವಂ ಶ್ರೀಹರೇಃ ಸ್ಮೃತಂ ।
ವಿಶೇಷತಃ ಕವಿಮುಖೇ ಕಾವ್ಯಂ ನೂತ್ನಂ ಪದೇ ಪದೇ ॥ ೬ ॥

ಸ್ವರಾಸಮಂಡಲಕ್ರೀಡಾಂ ವರ್ಣಯ ಸ್ವಯಮೇವ ಚ ।
ಪರೋಕ್ಷವರ್ಣನಾತ್ಕಾವ್ಯಂ ಪ್ರಶಸ್ತಂ ನವ್ಯವರ್ಣನಂ ॥ ೭ ॥

ಶ್ರೀಕೃಷ್ಣಾಂಶೋ ಭವಾನ್ ಸಾಕ್ಷಾದ್ಯೋಗೀಂದ್ರಾಣಾಂ ಗುರೋರ್ಗುರುಃ ।
ಯೋ ಯಸ್ಯಾಂಶಃ ಸ ಚ ಜನಸ್ತಸ್ಯೈವ ಸುಖತಃ ಸುಖೀ ॥ ೮ ॥

---

೪. ವೃಂದಾವನ ಮತ್ತು ರಾಸಮಂಡಲವು ಹೇಗಿದ್ದಿತು? ಶ್ರೀಕೃಷ್ಣನ ರಾಸಕ್ರೀಡೆ ಮತ್ತು ಜಲಕ್ರೀಡೆಗಳನ್ನು ಸಂಕ್ಷೇಪವಾಗಿ ವರ್ಣಿಸು.

೫. ನಂದಯಶೋದೆಯರು ಶ್ರೀಕೃಷ್ಣನಿಗೆ ತಂದೆತಾಯಿಯರೆನಿಸಿಕೊಳ್ಳಲು ಯಾವ ತಪಸ್ಸುಮಾಡಿದ್ದರು. ರೋಹಿಣಿಯು ಯಾವ ತಪಸ್ಸಿನ ಫಲವಾಗಿ ಬಲರಾಮನ ಮಾತೆಯಾದಳು. ಶ್ರೀಹರಿಗಿಂತ ಮೊದಲೇ ಬಲರಾಮನು ಹೇಗೆ ಜನ್ಮವೆತ್ತಿದನು.

೬. ಅಪೂರ್ವವಾದ ಶ್ರೀಹರಿಯ ಕಥೆಯು ಅಮೃತೋಪಮವೆಂದು ಪ್ರಸಿದ್ಧವಾಗಿದೆ. ಅದರಲ್ಲೂ ಚತುರನಾದ ಕವಿಯ ವರ್ಣನೆಗೆ ಸಿಲುಕಿದ ಈ ಕಥೆಯು ಕ್ಷಣಕ್ಷಣಕ್ಕೂ ಹೊಸ ಹೊಸದಾಗಿ ತೋರುತ್ತದೆ.

೭. ಶ್ರೀಕೃಷ್ಣಾಂಶಸಂಭೂತನಾದ ನೀನು ನಿನ್ನ ರಾಸಮಂಡಲದ ಕ್ರೀಡೆಯನ್ನು ನೀನೇ ವರ್ಣಿಸು. ಅನನುಭವಿಗಳು ಕಾವ್ಯದಲ್ಲಿ ವರ್ಣಿಸುವುದಕ್ಕಿಂತ ಸ್ವತಃ ಅನುಭವಮಾಡಿದವರು ವರ್ಣಿಸುವುದು ಅತ್ಯುತ್ತಮವಲ್ಲವೇ?

೮. ಯೋಗಿಗಳ ಗುರುವಾದ ನೀನು ಸಾಕ್ಷಾತ್ ಶ್ರೀಕೃಷ್ಣನ ಅಂಶಸಂಭವನಾಗಿದ್ದೀಯೆ. ಯಾರು ಯಾರ ಅಂಶದಿಂದ ಜನಿಸಿರುವರೋ ಅವರು ತಮ್ಮ ಅಂಶಿಗಳ ಸುಖದಿಂದ ತಾವೂ ಸುಖಿಗಳಾಗಿರುವರು

ತ್ವಯೈವ ವರ್ಣಿತೌ ಪಾದೌ ವಿಲೀನೌ ತು ಯುವಾಂ ಹರೇಃ ।
ಸಾಕ್ಷಾದ್ಗೋಲೋಕನಾಥಾಂಶಸ್ತ್ವಮೇವ ತತ್ಸಮೋ ಮಹಾನ್ ॥ ೯ ॥

॥ ನಾರಾಯಣ ಉವಾಚ ॥

ಬ್ರಹ್ಮೇಶಶೇಷವಿಘ್ನೇಶಾಃ ಕೂರ್ಮೋ ಧರ್ಮೋಽಹಮೇವ ಚ ।
ನರಶ್ಚ ಕಾರ್ತಿಕೇಯಶ್ಚ ಶ್ರೀಕೃಷ್ಣಾಂಶಾ ವಯಂ ನವ ॥ ೧೦ ॥

ಅಹೋ ಗೋಲೋಕನಾಥಸ್ಯ ಮಹಿಮಾ ಕೇನ ವರ್ಣ್ಯತೇ ।
ಯಂ ಸ್ವಯಂ ನೋ ವಿಜಾನೀಮೋ ನ ವೇದಾಃ ಕಿಂ ವಿಪಶ್ಚಿತಃ ॥ ೧೧ ॥

ಸೂಕರೋ ವಾಮನಃ ಕಲ್ಕಿರ್ಬೌದ್ಧಃ ಕಪಿಲಮೀನಕೌ ।
ಏತೇ ಚಾಂಶಾ ಕಲಾಶ್ಚಾನ್ಯೇ ಸಂತ್ಯೇವ ಕತಿಧಾ ಮುನೇ ॥ ೧೨ ॥

೯ ಶ್ರೀಕೃಷ್ಣಪರಮಾತ್ಮನ ಪಾದಕಮಲಗಳಲ್ಲಿ ಐಕ್ಯನಾದೆನೆಂದು ಹಿಂದೆ ನೀನೇ ಹೇಳಿದೆ. ಆದಕಾರಣ ಗೋಲೋಕನಾಥನ ಅಂಶಸಂಭೂತನಾದ ನೀನು ಶ್ರೀಹರಿಗೆ ಸಮಾನನಾಗಿರುವೆ.

೧೦. ನಾರಾಯಣ :—ಬ್ರಹ್ಮ, ಈಶ್ವರ, (ಶಿವ) ಆದಿಶೇಷ, ವಿಘ್ನೇಶ, ಆದಿಕೂರ್ಮ, ನಾನು (ನಾರಾಯಣ), ನರ ಮತ್ತು ಷಣ್ಮುಖ ಈ ಒಂಭತ್ತು ಜನವೂ ಶ್ರೀಕೃಷ್ಣನ ಪೂರ್ಣಾಂಶದಿಂದ ವ್ಯಕ್ತರಾದವರು.

೧೧. ಗೋಲೋಕನಾಥನಾದ ಶ್ರೀಕೃಷ್ಣನ ಮಹಿಮೆಯನ್ನು ಯಾರು ತಾನೇ ವರ್ಣಿಸಲು ಸಾಧ್ಯ? ನಮಗಾಗಲೀ, ಚತುರ್ವೇದಗಳಿಗಾಗಲೀ ಆ ಮಹಿಮೆಯು ತಿಳಿಯದಿರುವಾಗ ಇನ್ನು ಪಂಡಿತರ ಮಾತೇನು?

೧೨. ಆದಿವರಾಹ, ವಾಮನ, ಕಲ್ಕಿ, ಬೌದ್ಧ, ಕಪಿಲ, ಮತ್ಸ್ಯ ಇವಿಷ್ಟೂ ಶ್ರೀಕೃಷ್ಣಪರಮಾತ್ಮನ ಅಂಶಾವತಾರಗಳು. ಶ್ರೀಕೃಷ್ಣನ ಕಲೆಯಿಂದ ಜನಿಸಿದವರನೇಕರಿದ್ದಾರೆ.

ಕೂರ್ಮೋ ನೃಸಿಂಹೋ ರಾಮಶ್ಚ ಶ್ವೇತದ್ವೀಪವಿರಾಡ್ವಿಭುಃ ।
ಪರಿಪೂರ್ಣತಮಃ ಕೃಷ್ಣೋ ವೈಕುಂಠೇ ಗೋಕುಲೇ ಸ್ವಯಂ ॥ ೧೩ ॥

ವೈಕುಂಠೇ ಕಮಲಾಕಾಂತೋ ರೂಪಭೇದಾಚ್ಚತುರ್ಭುಜಃ ।
ಗೋಲೋಕೇ ಗೋಕುಲೇ ರಾಧಾಕಾಂತೋಽಯಂ ದ್ವಿಭುಜಃ ಸ್ವಯಂ ॥ ೧೪॥

ಅಸ್ಯೈವ ತೇಜೋ ನಿತ್ಯಂ ಚ ಚಿತ್ತೇ ಕುರ್ವಂತಿ ಯೋಗಿನಃ ।
ಭಕ್ತಾಃ ಪಾದಾಂಬುಜಂ ತೇಜಃ ಕುತಸ್ತೇಜಸ್ವಿನಂ ವಿನಾ ॥ ೧೫ ॥

ಶೃಣು ವಿಪ್ರ ವರ್ಣಯಾಮಿ ಯಶೋದಾನಂದಯೋಸ್ತಪಃ ।
ರೋಹಿಣ್ಯಾಶ್ಚ ಯತೋ ಹೇತೋರ್ದದೃಶುಸ್ತೇ ಹರೇರ್ಮುಖಂ ॥ ೧೬ ॥

---

೧೩. ಕೂರ್ಮ, ನರಸಿಂಹ, ರಾಮ ಈ ಮೂರು ಅವತಾರಗಳೂ ಶ್ರೀಕೃಷ್ಣ ಪರಮಾತ್ಮನ ಪೂರ್ಣಾಂಶದಿಂದ ಉಂಟಾದವು. ಶ್ವೇತದ್ವೀಪನಿವಾಸಿಯಾದ ವಿರಾಟ್ಪುರುಷನೂ, ವೈಕುಂಠದಲ್ಲಿರುವ ವಿಷ್ಣುವೂ, ಗೋಕುಲದಲ್ಲಿರುವ ಶ್ರೀಕೃಷ್ಣನೂ ಅಭಿನ್ನರು.

೧೪. ವೈಕುಂಠದಲ್ಲಿ ಲಕ್ಷ್ಮೀಪತಿಯ ರೂಪದಿಂದ ಚತುರ್ಭುಜನಾಗಿರುವವನೇ, ಗೋಲೋಕದಲ್ಲೂ, ಗೋಕುಲದಲ್ಲೂ ರಾಧಾಪತಿಯೆನಿಸಿ ದ್ವಿಭುಜಗಳಿಂದ ಮೆರೆಯುತ್ತಿದ್ದಾನೆ.

೧೫ ತೇಜಃಸ್ವರೂಪನಾದ ಆ ಪರಮಾತ್ಮನನ್ನೇ ಯೋಗಿಗಳು ನಿತ್ಯವೂ ಧ್ಯಾನಿಸುವರು. ತೇಜಸ್ವಿಯಾದ ಧರ್ಮಿಯಿಲ್ಲದೆ ತೇಜಸ್ಸೆಂಬ ಧರ್ಮವೆಲ್ಲಿ ಬರಬೇಕೆಂದು ಯೋಚಿಸಿ ಭಕ್ತರು ಸಗುಣಸ್ವರೂಪನಾದ ಆತನ ಪಾದಕಮಲಗಳನ್ನು ಧ್ಯಾನಿಸುತ್ತಾರೆ

೧೬. ಎಲೈ ನಾರದನೇ, ಯಶೋದೆಯೂ, ನಂದಗೋಪನೂ ಮಾಡಿದ ತಪಸ್ಸನ್ನೂ, ರೋಹಿಣಿಯು ಮಾಡಿದ ತಪಸ್ಸನ್ನೂ, ಯಾವ ಕಾರಣದಿಂದ ಅವರು ಶ್ರೀಹರಿಯ ಮುಖದರ್ಶನ ಮಾಡಿದರೆಂಬುದನ್ನೂ ಹೇಳುವೆನು ಕೇಳು.

ವಸೂನಾಂ ಪ್ರವರೋ ನಂದೋ ನಾಮ್ನಾ ದ್ರೋಣಸ್ತಪೋಧನಃ ।
ತಸ್ಯ ಪತ್ನೀ ಧರಾ ಸಾಧ್ವೀ ಯಶೋದಾ ಸಾ ತಪಸ್ವಿನೀ ॥ ೧೭ ॥

ರೋಹಿಣೀ ಸರ್ಪಮಾತಾ ಚ ಕದ್ರೂಶ್ಚ ಸರ್ಪಕಾರಿಣೀ ।
ಏತೇಷಾಂ ಜನ್ಮ ಚರಿತಂ ನಿಬೋಧ ಕಥಯಾಮಿ ತೇ ॥ ೧೮ ॥

ಏಕದಾ ಚ ಧರಾದ್ರೋಣೌ ಪರ್ವತೇ ಗಂಧಮಾದನೇ ।
ಪುಣ್ಯದೇ ಭಾರತೇ ವರ್ಷೇ ಗೌತಮಾಶ್ರಮಸನ್ನಿಧೌ ॥ ೧೯ ॥

ಚಕ್ರತುಶ್ಚ ತಪಸ್ತತ್ರ ವರ್ಷಾಣಾಮಯುತಂ ಮುನೇ ।
ಶ್ರೀಕೃಷ್ಣದರ್ಶನಾರ್ಥಂ ಚ ನಿರ್ಜನೇ ಸುಪ್ರಭಾತಟೇ ॥ ೨೦ ॥

ನ ದದರ್ಶ ಹರಿಂ ದ್ರೋಣೋ ಧರಾ ಚೈವ ತಪಸ್ವಿನೀ ।
ಕೃತ್ವಾಗ್ನಿಕುಂಡಂ ವೈರಾಗ್ಯಾತ್ಪ್ರವೇಷ್ಟುಂ ಸಮುಪಸ್ಥಿತೌ ॥ ೨೧ ॥

---

೧೭. ಅಷ್ಟವಸುಗಳಲ್ಲಿ ಶ್ರೇಷ್ಠನಾದ ದ್ರೋಣನೆಂಬ ತಪಸ್ವಿಯು ನಂದಗೋಪನಾಗಿಯೂ, ದ್ರೋಣನಪತ್ನಿಯೂ ಪರಮಪವಿತ್ರೆಯೂ ಆದ ಧರಾದೇವಿಯು ಯಶೋದೆಯಾಗಿಯೂ ಜನ್ಮವೆತ್ತಿದರು

೧೮. ಸರ್ಪಗಳ ಮಾತೆಯಾದ ಕದ್ರುದೇವಿಯು ರೋಹಿಣಿಯಾಗಿ ಹುಟ್ಟಿದಳು. ಇವರುಗಳ ಜನ್ಮ ಮತ್ತು ಚರಿತ್ರೆಯನ್ನು ವಿಸ್ತರಿಸಿ ಹೇಳುವೆನು ಕೇಳು.

೧೯-೨೦. ಎಲೈ ನಾರದನೇ, ಹಿಂದೊಮ್ಮೆ ಧರಾದೇವಿ ಮತ್ತು ದ್ರೋಣರು ಪುಣ್ಯಕರವಾದ ಭರತಖಂಡದಲ್ಲಿ ಗೌತಮಾಶ್ರಮ ಸಮೀಪದಲ್ಲಿರುವ ನಿರ್ಜನವಾದ ಗಂಧಮಾದನಪರ್ವತದಲ್ಲಿ ಸುಪ್ರಭಾನದಿಯ ತೀರದಲ್ಲಿ ಶ್ರೀಕೃಷ್ಣನ ದರ್ಶನಲಾಭಕ್ಕಾಗಿ ಹತ್ತುಸಾವಿರ ವರ್ಷಗಳ ಕಾಲ ತಪಸ್ಸುಮಾಡಿದರು.

೨೧ ಅಷ್ಟುಕಾಲ ತಪಸ್ಸು ಮಾಡಿದರೂ ಶ್ರೀಹರಿಯ ದರ್ಶನವಾಗದಿರಲು ಆ ದ್ರೋಣ ಮತ್ತು ಧರಾದೇವಿಯರು ವೈರಾಗ್ಯದಿಂದ ಅಗ್ನಿಕುಂಡವನ್ನು ರಚಿಸಿ ಪ್ರವೇಶಮಾಡಲು ಸಿದ್ಧರಾದರು.

ತೌ ಮರ್ತುಕಾಮೌ ದೃಷ್ಟ್ವಾ ಚ ವಾಗ್ಬಭೂವಾಶರೀರಿಣೀ।
ದ್ರಕ್ಷ್ಯಥಃ ಶ್ರೀಹರಿಂ ಪೃಥ್ವ್ಯಾಂ ಗೋಕುಲೇ ಪುತ್ರರೂಪಿಣಂ || ೨೨ ||

ಜನ್ಮಾಂತರೇ ವಸುಶ್ರೇಷ್ಠ ದುರ್ದರ್ಶಂ ಯೋಗಿನಾಂ ವಿಭುಂ।
ಧ್ಯಾನಾಸಾಧ್ಯಂ ಚ ವಿದುಷಾಂ ಬ್ರಹ್ಮಾದೀನಾಂ ಚ ವಂದಿತಂ || ೨೩ ||

ಶ್ರುತ್ವೈವಂ ತದ್ಧರಾದ್ರೋಣೌ ಜಗ್ಮತುಃ ಸ್ವಾಲಯಂ ಸುಖಾತ್।
ಲಬ್ಧ್ವಾ ತು ಭಾರತೇ ಜನ್ಮ ದೃಷ್ಟಂ ತಾಭ್ಯಾಂ ಹರೇರ್ಮುಖಂ || ೨೪ ||

ಯಶೋದಾನಂದಯೋರೇವಂ ಕಥಿತಂ ಚರಿತಂ ತವ।
ಸುಗೋಪ್ಯಂ ತ್ರಿದಶಾನಾಂ ಚ ರೋಹಿಣೀಚರಿತಂ ಶೃಣು || ೨೫ ||

ಏಕದಾ ದೇವಮಾತಾ ಚ ಪುಷ್ಪೋತ್ಸವದಿನೇ ಸತೀ।
ವಿಜ್ಞಾಪನಂ ಚರದ್ವಾರಾ ಚಕಾರ ಕಶ್ಯಪಂ ಮುನೇ || ೨೬ ||

---

೨೨ ಸಾಯಲು ಸಿದ್ಧರಾಗಿರುವ ಅವರಿಬ್ಬರನ್ನು ಕುರಿತು 'ಶ್ರೀಹರಿಯು ನಂದಗೋಕುಲದಲ್ಲಿ ನಿಮ್ಮಿಬ್ಬರಿಗೆ ಪುತ್ರನಾಗುವುದನ್ನು ನೋಡುವಿರಿ' ಎಂದು ಅಶರೀರವಾಣಿ ನುಡಿಯಿತು.

೨೩. ಆದುದರಿಂದ ವಸುಗಳಲ್ಲಿ ಶ್ರೇಷ್ಠನಾದ ಆ ದ್ರೋಣನು ಜನ್ಮಾಂತರದಲ್ಲಿ, ಯೋಗೀಶ್ವರನೂ, ವಿದ್ವಾಂಸರಿಗೂ ಧ್ಯಾನದುರ್ಲಭನೂ, ಬ್ರಹ್ಮಾದಿಗಳಿಂದ ವಂದಿತನೂ ಆದ ಪರಮಾತ್ಮನನ್ನು ನೋಡಿದನು.

೨೪ ಮೇಲೆ ಹೇಳಿದ ಅಶರೀರವಾಣಿಯನ್ನು ಕೇಳಿ ಆ ಧರಾ ಮತ್ತು ದ್ರೋಣರು, ತಮ್ಮ ಮಂದಿರಕ್ಕೆ ಹಿಂತಿರುಗಿದರು. ಮುಂದೆ ಭರತಖಂಡದಲ್ಲಿ ಜನ್ಮವೆತ್ತಿ ಅವರಿಬ್ಬರೂ ಶ್ರೀಹರಿಯ ದಿವ್ಯದರ್ಶನವನ್ನು ಪಡೆದರು.

೨೫ ಈ ರೀತಿಯಾಗಿ ಯಶೋದಾ ಮತ್ತು ನಂದರ ಚರಿತ್ರೆಯನ್ನು ನಿನಗೆ ಹೇಳಿದುದಾಯಿತು. ಈಗ ದೇವತೆಗಳಿಗೂ ತಿಳಿಯದಂಥ ಗೋಪ್ಯವಾದ ರೋಹಿಣೀ ಕಥೆಯನ್ನು ಹೇಳುವೆನು ಕೇಳು.

೨೬. ಹಿಂದೊಮ್ಮೆ ದೇವತೆಗಳ ಮಾತೆಯಾದ ಅದಿತಿದೇವಿಯು ಪುಷ್ಪವತಿಯಾಗಿದ್ದಾಗ, ಚಾರನ ಮುಖಾಂತರ ಕಶ್ಯಪನಿಗೆ ಹೇಳಿಕಳುಹಿಸಿದಳು.

**ಸುಸ್ನಾತಾ ಸುಂದರೀ ದೇವೀ ರತ್ನಾಲಂಕಾರಭೂಷಿತಾ |**
**ಚಕಾರ ವೇಷಂ ವಿವಿಧಂ ದದರ್ಶ ದರ್ಪಣೇ ಮುಖಂ || ೨೭ ||**

**ಕಸ್ತೂರೀಬಿಂದುನಾ ಸಾರ್ಧಂ ಸಿಂದೂರಬಿಂದುಸ-ಯುತಂ |**
**ರತ್ನಕುಂಡಲಶೋಭಾಢ್ಯಂ ಪತ್ರಾಭರಣಭೂಷಿತಂ || ೨೮ ||**

**ರಾಜಮೌಕ್ತಿಕಸಂಯುಕ್ತಂ ನಾಸಾಗ್ರಂ ಸುಮನೋಹರಂ |**
**ಶರತ್ಪಾರ್ವಣಚಂದ್ರಾಸ್ಯಂ ಶರತ್ಪಂಕಜಲೋಚನಂ || ೨೯ ||**

**ವಕ್ರಭ್ರೂಭಂಗಿನಾ ಯುಕ್ತಂ ವಿಚಿತ್ರಕಜ್ಜಲೋಜ್ಜ್ವಲಂ |**
**ಪಕ್ವದಾಡಿಮಬೀಜಾಭದಂತಪಂಕ್ತಿವಿರಾಜಿತಂ || ೩೦ ||**

**ಪಕ್ವಬಿಂಬಾಧರೌಷ್ಠಂ ಚ ಸಸ್ಮಿತಂ ಸುಂದರಂ ಸದಾ |**
**ಅತೀವ ಕಮನೀಯಂ ಚ ಮುನೀಂದ್ರಚಿತ್ತಮೋಹನಂ || ೩೧ ||**

---

೨೭. ಅತ್ಯಂತಸುಂದರಿಯಾದ ಆಕೆಯು ಋತುಸ್ನಾತಳಾಗಿ ರತ್ನಾಲಂಕಾರಗಳನ್ನು ತೊಟ್ಟು, ವಿವಿಧ ವೇಷಭೂಷಣಗಳನ್ನು ಧರಿಸಿ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಳು.

೨೮. ಹಣೆಯಲ್ಲಿ ಕಸ್ತೂರಿಯ ತಿಲಕವನ್ನೂ, ಸಿಂದೂರದ ಬೊಟ್ಟುಗಳನ್ನೂ ಧರಿಸಿ, ಕಿವಿಯಲ್ಲಿ ರತ್ನಕುಂಡಲಗಳನ್ನಿಟ್ಟು ಕಪೋಲಗಳಲ್ಲಿ ಮಕರಿಕಾದಿ ಪತ್ರಗಳನ್ನು ರಚಿಸಿಕೊಂಡಳು.

೨೯. ಮೂಗಿನ ತುದಿಯಲ್ಲಿ ಮನೋಹರವಾದ ಆನೆಯ ಕುಂಭಸ್ಥಳದ ಮುತ್ತನ್ನು ಧರಿಸಿ, ಶರತ್ಪೂರ್ಣಿಮಾ ಚಂದ್ರನಂತಿರುವ ಮುಖದಿಂದಲೂ, ಶರದೃತುವಿನ ತಾವರೆಯಂತೆ ವಿಶದವಾದ ನೇತ್ರಗಳಿಂದಲೂ ಶೋಭಿಸುತ್ತಿದ್ದಳು.

೩೦. ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಿಕೊಂಡು, ವಕ್ರವಾದ ಭ್ರೂಭಂಗದಿಂದಲೂ ಪಕ್ವವಾದ ದಾಳಿಂಬೆಬೀಜದಂತೆ ಮನೋಹರವಾದ ದಂತಪಂಕ್ತಿಗಳಿಂದಲೂ ವಿರಾಜಿಸುತ್ತಿದ್ದಳು.

೩೧. ಚೆನ್ನಾಗಿ ಪಕ್ವವಾದ ತೊಂಡೆಹಣ್ಣಿನಂತೆ ಕೆಂಪಾದ ತುಟಿಗಳಲ್ಲಿ ಮುಗುಳುನಗೆಯನ್ನು ಬೀರುತ್ತ, ಮುನಿಗಳ ಮನಸ್ಸಿಗೂ ಮೋಹಕರವಾದ ಕಮನೀಯ ವೇಷವನ್ನು ಧರಿಸಿಕೊಂಡಳು.

ಏವಂ ಭೂತಂ ಮುಖಂ ದೃಷ್ಟ್ವಾ ಸುಂದರೀ ಸ್ವಗೃಹೇ ಸ್ಥಿತಾ ।
ಪಶ್ಯಂತೀ ಪತಿಮಾರ್ಗಂ ಚ ಕಾಮಬಾಣಪ್ರಪೀಡಿತಾ ॥ ೩೨ ॥

ಶುಶ್ರಾವ ವಾರ್ತಾಮದಿತಿಃ ಕಶ್ಯಪಂ ಕದ್ರುಸಂಯುತಂ ।
ರತ್ನಸಾರಸಮಾರಂಭೇ ತಸ್ಯಾ ವಕ್ಷಃಸ್ಥಲೇ ಸ್ಥಿತಂ ॥ ೩೩ ॥

ಶ್ರುತ್ವಾ ಚುಕೋಪ ಸಾಧ್ವೀ ಸಾ ಹತಾಶಾ ರತಿಕಾತರಾ ।
ನ ಶಶಾಪ ಪತಿಂ ಪ್ರೇಮ್ಣಾ ಶಶಾಪ ಸರ್ಪಮಾತರಂ ॥ ೩೪ ॥

ನ ದೇವಾಲಯಯೋಗ್ಯಾ ಸಾ ಧರ್ಮಿಷ್ಠಾ ಧರ್ಮನಾಶಿನೀ ।
ದೂರಂ ಗಚ್ಛತು ಸ್ವರ್ಲೋಕಾದಾತ್ಮಯೋನಿಂ ಚ ಮಾನವೀಂ ॥ ೩೫ ॥

ಶ್ರುತ್ವೈವಂ ಸಾ ಚರದ್ವಾರಾ ಶಶಾಪ ದೇವಮಾತರಂ ।
ಸಾ ಚೈವಂ ಮಾನವೀಂ ಯೋನಿಂ ಯಾತು ಮರ್ತ್ಯೇ ಜರಾಯುತಂ ॥ ೩೬ ॥

---

೩೨. ಈ ರೀತಿಯಾದ ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡು ಗರ್ವಿತಳಾದ ಆ ಸುಂದರಿಯು, ಮನ್ಮಥಬಾಣಪೀಡಿತಳಾಗಿ, ತನ್ನ ಪತಿಯ ಆಗಮನವನ್ನು ನಿರೀಕ್ಷಿಸುತ್ತ ತನ್ನ ಮನೆಯಲ್ಲಿಯೇ ಇದ್ದಳು.

೩೩. ಈ ಮಧ್ಯದಲ್ಲಿ ಕಶ್ಯಪನು ರತ್ನಪರ್ಯಂಕದಲ್ಲಿ ಕದ್ರುವಿನ ಆಲಿಂಗನೆಯಲ್ಲಿ ಸುಖನಿದ್ರಿತನಾಗಿರುವುದನ್ನು ಅದಿತಿಯು ಕೇಳಿದಳು

೩೪. ಈ ಮಾತನ್ನು ಕೇಳಿದ ಕೂಡಲೇ ರತಿಸುಖದಿಂದ ಹತಾಶಳಾದ ಅದಿತಿಯು ಕೋಪಗೊಂಡು ಸರ್ಪಮಾತೆಯಾದ ಕದ್ರುವಿಗೆ ಶಾಪವಿತ್ತಳು. ಪ್ರೇಮಬದ್ಧಳಾಗಿ ಪತಿಗೆ ಶಾಪವನ್ನು ಕೊಡಲಿಲ್ಲ.

೩೫. 'ಧರ್ಮನಾಶಕಳಾದ ಆ ಕದ್ರುವು ದೇವಲೋಕದಲ್ಲಿರಲು ಅಯೋಗ್ಯಳಾದುದರಿಂದ, ಸ್ವರ್ಗಲೋಕದಿಂದ ದೂರವಾಗಿ ಮಾನವಯೋನಿಯಲ್ಲಿ ಜನ್ಮವೆತ್ತಲಿ.'

೩೬. ಈ ಶಾಪವಾಕ್ಯವನ್ನು ಕೇಳಿ, ಕದ್ರುವೂ ಕೂಡ ದೇವಮಾತೆಯಾದ ಅದಿತಿಗೆ 'ಅವಳೂ ಭೂಲೋಕದಲ್ಲಿ ಮಾನವಯೋನಿಯಲ್ಲಿ ಜನ್ಮವೆತ್ತಲಿ' ಎಂದು ದೂತನ ಮುಖಾಂತರ ಪ್ರತಿಶಾಪವಿತ್ತಳು.

ಕಶ್ಯಪೋ ಬೋಧಯಾಮಾಸ ಕದ್ರುಂ ಚ ಸರ್ಪಮಾತರಂ ।
ಕಾಲೇ ಯಾಸ್ಯಸಿ ಮರ್ತ್ಯಂ ಚ ಮಯಾ ಸಹ ಶುಚಿಸ್ಮಿತೇ ॥ ೩೭ ॥

ತ್ಯಜ ಭೀತಿಂ ಲಭ ಸುಖಂ ದ್ರಕ್ಷ್ಯಸಿ ಶ್ರೀಹರೇರ್ಮುಖಂ ।
ಏವಮುಕ್ತ್ವಾ ಕಶ್ಯಪಶ್ಚ ಜಗಾಮ ಚಾದಿತೇರ್ಗೃಹಂ ॥ ೩೮ ॥

ವಾಂಛಾಂ ಪೂರ್ಣಾಂ ಚ ತಸ್ಯಾಶ್ಚ ಚಕಾರ ಭಗವಾನ್ವಿಭುಃ ।
ಸುತೌ ತತ್ರ ಮಹೇಂದ್ರಶ್ಚ ಬಭೂವ ಚ ಸುರರ್ಷಭಃ ॥ ೩೯ ॥

ಅದಿತಿರ್ದೇವಕೀ ಚೈವ ಸರ್ಪಮಾತಾ ಚ ರೋಹಿಣೀ ।
ಕಶ್ಯಪೋ ವಸುದೇವಶ್ಚ ಶ್ರೀಕೃಷ್ಣ ಜನಕೋ ಮಹಾನ್ ॥ ೪೦ ॥

ರಹಸ್ಯಂ ಗೋಪನೀಯಂ ಚ ಸರ್ವಂ ನಿಗದಿತಂ ಮುನೇ ।
ಅಧುನಾ ಬಲದೇವಸ್ಯ ಜನ್ಮಾಖ್ಯಾನಂ ಮುನೇ ಶೃಣು ॥ ೪೧ ॥

---

೩೭. ಅನಂತರ ಕಶ್ಯಪನು ಸರ್ಪಮಾತೆಯಾದ ಕದ್ರುವನ್ನು ಕುರಿತು 'ಎಲೌ ಶುಚಿಸ್ಮಿತಳೇ, ಕಾಲಾನುಗುಣವಾಗಿ ನೀನು ನನ್ನೊಡನೆಯೇ ಭೂಲೋಕಕ್ಕೆ ಬರುವೆ.

೩೮. ಆದುದರಿಂದ ಭಯವನ್ನು ಬಿಡು, ಸುಖಿಯಾಗು. ಶ್ರೀಹರಿಯ ಮುಖ ದರ್ಶನವನ್ನು ಪಡೆಯುವೆ' ಈ ರೀತಿಯಾಗಿ ಸಮಾಧಾನಗೊಳಿಸಿ ಕಶ್ಯಪನು ಅದಿತಿಯ ಗೃಹಕ್ಕೆ ಬಂದನು.

೩೯. ಅಲ್ಲಿ ಆಕೆಯ ಮನೋರಥವನ್ನು ಪೂರ್ಣಗೊಳಿಸಿದನು. ಆಗ ಅದಿತಿಯು ಗರ್ಭಿಣಿಯಾಗಿ ದೇವರಾಜನಾದ ಇಂದ್ರನನ್ನು ಹಡೆದಳು.

೪೦. ಆದಕಾರಣದಿಂದಲೇ ಅದಿತಿಯು ದೇವಕಿಯಾಗಿಯೂ, ಕದ್ರುವು ರೋಹಿಣಿಯಾಗಿಯೂ, ಕಶ್ಯಪನು ವಸುದೇವನಾಗಿಯೂ ಜನಿಸಿ, ಶ್ರೀಕೃಷ್ಣನಿಗೆ ಜನನೀಜನಕರಾದರು.

೪೧. ಎಲೈ ನಾರದಮುನಿಯೇ, ಅತಿರಹಸ್ಯವಾದ ಈ ಕಥೆಯನ್ನು ನಿನಗೆ ಹೇಳಿದುದಾಯಿತು. ಈಗ ಬಲರಾಮನ ಜನ್ಮಕಥೆಯನ್ನು ಹೇಳುವೆನು, ಕೇಳು.

ಅನಂತಸ್ಯಾಪ್ರಮೇಯಸ್ಯ ಸಹಸ್ರಶಿರಸಃ ಪ್ರಭೋಃ ।
ರೋಹಿಣೀ ವಸುದೇವಸ್ಯ ಭಾರ್ಯಾರತ್ನಂ ಚ ಪ್ರೇಯಸೀ ॥ ೪೨ ॥

ಜಗಾಮ ಗೋಕುಲಂ ಸಾಧ್ವೀ ವಸುದೇವಾಜ್ಞಯಾ ಮುನೇ ।
ಸಂಕರ್ಷಣಸ್ಯ ರಕ್ಷಾರ್ಥಂ ಕಂಸಭೀತಾ ಪಲಾಯಿತಾ ॥ ೪೩ ॥

ದೇವಕ್ಯಾಃ ಸಪ್ತಮಂ ಗರ್ಭಂ ಮಾಯಾ ಕೃಷ್ಣಾಜ್ಞಯಾ ತದಾ ।
ರೋಹಿಣ್ಯಾ ಜಠರೇ ತತ್ರ ಸ್ಥಾಪಯಾಮಾಸ ಗೋಕುಲೇ ॥ ೪೪ ॥

ಸಂಸ್ಥಾಪ್ಯ ಚ ತದಾ ಗರ್ಭಂ ಕೈಲಾಸಂ ಸಾ ಜಗಾಮ ಹ ।
ದಿನಾಂತರೇ ಕತಿಪಯೇ ರೋಹಿಣೀ ನಂದಮಂದಿರೇ ॥ ೪೫ ॥

ಸುಷಾವ ಪುತ್ರಂ ಕೃಷ್ಣಾಂಶಂ ತಪ್ತರೌಪ್ಯಾಭಮೀಶ್ವರಂ ।
ಈಷದ್ಧಾಸ್ಯಂ ಪ್ರಸನ್ನಾಸ್ಯಂ ಜ್ವಲಂತಂ ಬ್ರಹ್ಮತೇಜಸಾ ॥ ೪೬ ॥

ತಸ್ಯೈವ ಜನ್ಮಮಾತ್ರೇಣ ದೇವಾ ಮುಮುದಿರೇ ತದಾ ।
ಸ್ವರ್ಗೇ ದುಂದುಭಯೋ ನೇದುರಾನಕಾ ಮುರಜಾದಯಃ ॥ ೪೭ ॥

---

೪೨—೪೩ ಅನಂತನೂ, ಅಪ್ರಮೇಯನೂ, ಸಹಸ್ರ ಶಿರಸ್ಸುಳ್ಳವನೂ ಆದ ಆದಿಶೇಷನ ಅಂಶದಿಂದ ಬಲರಾಮನು ಅವತರಿಸಿದನು. ವಸುದೇವನ ಪ್ರಿಯ ಪತ್ನಿಯಾದ ರೋಹಿಣಿಯು ವಸುದೇವನ ಅಪ್ಪಣೆಯಂತೆ ಗೋಕುಲಕ್ಕೆ ಹೋಗಿ ಕಂಸನ ಭಯದಿಂದ ಸಂಕರ್ಷಣನನ್ನು ರಕ್ಷಿಸಿಕೊಂಡಿದ್ದಳು.

೪೪. ಮಾಯೆಯು ದೇವಕಿಯ ಏಳನೆಯ ಗರ್ಭವನ್ನು ಶ್ರೀಕೃಷ್ಣನ ಆಜ್ಞೆಯಂತೆ, ರೋಹಿಣಿಯ ಗರ್ಭಕ್ಕೆ ಸಂಕ್ರಮಿಸಿದಳು (ಬದಲಾಯಿಸಿದಳು).

೪೫-೪೬. ಈ ರೀತಿಯಾಗಿ ರೋಹಿಣಿಯ ಗರ್ಭದಲ್ಲಿ ಸಂಕರ್ಷಣನನ್ನಿಟ್ಟು ಮಾಯೆಯು ಕೈಲಾಸಕ್ಕೆ ತೆರಳಿದಳು. ಕೆಲವು ದಿವಸಗಳನಂತರ ರೋಹಿಣಿಯು ನಂದಗೋಪನ ಮಂದಿರದಲ್ಲಿ ಶ್ರೀಕೃಷ್ಣಾಂಶನೂ, ಶುಭ್ರವಾದ ಬೆಳ್ಳಿಯಂತೆ ಮನೋಹರನೂ, ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿತನೂ, ಮಂದಹಾಸದಿಂದ ಪ್ರಸನ್ನಮುಖನೂ ಆದ ಪುತ್ರನನ್ನು ಹಡೆದಳು.

೪೭. ಅವನು ಹುಟ್ಟಿದಾಗ ದೇವತೆಗಳಿಗೆಲ್ಲ ಬಹಳ ಸಂತೋಷವಾಯಿತು. ಸ್ವರ್ಗಲೋಕದಲ್ಲಿ ನಗಾರಿ, ತಮಟೆ ಮತ್ತು ಕಹಳೆಗಳು ಮೊಳಗಿದವು.

ಜಯಶಬ್ದಂ ಶಂಖಶಬ್ದಂ ಚಕ್ರುರ್ದೇವಾ ಮುದಾನ್ವಿತಾಃ ।
ನಂದೋ ಹೃಷ್ಟೋ ಬ್ರಾಹ್ಮಣೇಭ್ಯೋ ಧನಂ ಬಹುವಿಧಂ ದದೌ ॥ ೪೮ ॥

ಚಿಚ್ಛೇದ ನಾಡೀಂ ಧಾತ್ರೀ ಚ ಸ್ನಾಪಯಾಮಾಸ ಬಾಲಕಂ ।
ಜಯಶಬ್ದಂ ಜಗುರ್ಗೋಪ್ಯಃ ಸರ್ವಾಭರಣಭೂಷಿತಾಃ ॥ ೪೯ ॥

ಪರಪುತ್ರೋತ್ಸವಂ ನಂದಶ್ಚಕಾರ ಪರಮಾದರಾತ್ ।
ತದಾ ಯಶೋದಾ ಗೋಪೀಭ್ಯೋ ಬ್ರಾಹ್ಮಣೇಭ್ಯೋ ದದೌ ಮುದಾ ॥

ಧನಾನಿ ನಾನಾವಸ್ತ್ರಾನಿ ತೈಲಂ ಸಿಂದೂರಮೇವ ಚ ।
ಇತ್ಯೇವಂ ಕಥಿತಂ ವತ್ಸ ಯಶೋದಾನಂದಯೋಸ್ತಪಃ ॥ ೫೧ ॥

ಜನ್ಮಾಖ್ಯಾನಂ ಚ ಹಲಿನೋ ರೋಹಿಣೀಚರಿತಂ ತಥಾ ।
ಅಧುನಾ ತೇ ವಾಂಛನೀಯಂ ನಂದಪುತ್ರೋತ್ಸವಂ ಶೃಣು ॥ ೫೨ ॥

---

೪೮. ದೇವತೆಗಳೆಲ್ಲರೂ ಸಂತೋಷದಿಂದ ಜಯಕಾರವನ್ನೂ, ಶಂಖಧ್ವನಿಯನ್ನೂ ಮಾಡಿದರು. ನಂದಗೋಪನು ಸಂತುಷ್ಟನಾಗಿ ಬ್ರಾಹ್ಮಣರಿಗೆಲ್ಲ ವಿವಿಧ ದ್ರವ್ಯಗಳನ್ನು ದಾನಮಾಡಿದರು.

೪೯. ಧಾತ್ರಿಯು ಆ ಬಾಲಕನ ಹೊಕ್ಕುಳನ್ನು ಕತ್ತರಿಸಿ ಸ್ನಾನಮಾಡಿಸಿದಳು. ಸಕಲಾಲಂಕಾರ ಭೂಷಿತೆಯರಾದ ಗೋಪಿಯರೆಲ್ಲರೂ ಜಯಜಯಕಾರಮಾಡಿದರು.

೫೦. ನಂದಗೋಪನು ಪರಮಪ್ರೀತಿಯಿಂದ ಪುತ್ರೋತ್ಸವವನ್ನು ನೆರವೇರಿಸಿದನು. ಯಶೋದೆಯು ಗೋಪಿಯರಿಗೂ, ಬ್ರಾಹ್ಮಣರಿಗೂ ಸಂತೋಷದಿಂದ ಯಥೇಚ್ಛವಾಗಿ ದಾನಮಾಡಿದಳು.

೫೧. ಧನವನ್ನೂ, ನಾನಾವಿಧ ವಸ್ತ್ರಗಳನ್ನೂ, ಎಣ್ಣೆ ಮತ್ತು ಚಂದ್ರವನ್ನೂ ಯಶೋದೆಯು ದಾನಮಾಡಿದಳು. ಎಲೈ ನಾರದನೇ, ಈ ರೀತಿಯಾಗಿ ಯಶೋದೆ ಮತ್ತು ನಂದರು ಜನ್ಮಾಂತರದಲ್ಲಿ ಮಾಡಿದ ತಪಸ್ಸನ್ನು ವಿವರಿಸಿದೆನು.

೫೨. ಬಲರಾಮನ ಜನ್ಮಕಥೆಯನ್ನೂ, ರೋಹಿಣೀದೇವಿಯ ಚರಿತ್ರೆಯನ್ನೂ ಹೇಳಿದುದಾಯಿತು. ಈಗ ನಿನಗೆ ಅಭೀಪ್ಸಿತವಾದ ನಂದಪುತ್ರೋತ್ಸವವನ್ನು ವಿವರಿಸುವೆನು ಕೇಳು.

**ಸುಖದಂ ಮೋಕ್ಷದಂ ಸಾರಂ ಜನ್ಮಮೃತ್ಯುಜರಾಪಹಂ ।**
**ಮಂಗಲಂ ಕೃಷ್ಣಚರಿತಂ ವೈಷ್ಣವಾನಾಂ ಚ ಜೀವನಂ ॥ ೫೩ ॥**

**ಸರ್ವಾಶುಭವಿನಾಶಂ ಚ ಭಕ್ತಿದಾಸ್ಯಪ್ರದಂ ಹರೇಃ ।**
**ಶ್ರೀಕೃಷ್ಣಂ ವಸುದೇವಶ್ಚ ಸಂಸ್ಥಾಪ್ಯ ನಂದಮಂದಿರೇ ॥ ೫೪ ॥**

**ಗೃಹೀತ್ವಾ ಬಾಲಿಕಾಂ ಹೃಷ್ಟೋ ಜಗಾಮ ನಿಜಮಂದಿರಂ ।**
**ಕಥಿತಂ ಚರಿತಂ ತಸ್ಯಾಃ ಶ್ರುತಂ ಸಂಮುಖತೋ ಮುನೇ ॥ ೫೫ ॥**

**ಅಧುನಾ ಗೋಕುಲೇ ಕೃಷ್ಣಚರಿತಂ ಶೃಣು ಮಂಗಲಂ ।**
**ವಸುದೇವೇ ಗೃಹಂ ಯಾತೇ ಯಶೋದಾ ನಂದ ಏವ ಚ ॥ ೫೬ ॥**

**ಮಂಗಲೇ ಸೂತಿಕಾಗಾರೇ ಜಯಾಗಾರೇ ಜಯಾನ್ವಿತೇ ।**
**ದದರ್ಶ ಪುತ್ರಂ ಭೂಮಿಸ್ಥಂ ನವೀನನೀರದಪ್ರಭಂ ॥ ೫೭ ॥**

---

೫೩. ಸುಖಕರವೂ, ಮೋಕ್ಷದಾಯಕವೂ, ಜನ್ಮಜರಾಮರಣಪರಿಹಾರಕವೂ, ಮಂಗಳಕರವೂ ಆದ ಶ್ರೀಕೃಷ್ಣ ಚರಿತ್ರೆಯು ವಿಷ್ಣುಭಕ್ತರಿಗೆಲ್ಲ ಜೀವನಸ್ವರೂಪವಾಗಿರುವುದು.

೫೪–೫೫. ಸಕಲ ಅಮಂಗಲಗಳನ್ನು ಪರಿಹರಿಸಿ, ಭಕ್ತಿದಾಸ್ಯಗಳನ್ನು ಕೊಡುವ ಬಾಲಕನಾದ ಶ್ರೀಕೃಷ್ಣನನ್ನು ವಸುದೇವನು ನಂದಗೋಪನ ಮಂದಿರದಲ್ಲಿಟ್ಟು ಅಲ್ಲಿದ್ದ ಬಾಲಿಕೆಯನ್ನೆತ್ತಿಕೊಂಡು ತನ್ನ ಮನೆಗೆ ಹಿಂತಿರುಗಿದನು ಆ ಬಾಲಿಕೆಯ ಚರಿತ್ರೆಯನ್ನು ಹಿಂದೆಯೇ ಹೇಳಿದುದಾಯಿತು.

೫೬–೫೭. ಈಗ ಗೋಕುಲದಲ್ಲಿ ನಡೆದ ಶ್ರೀಕೃಷ್ಣನ ಮಂಗಳಚರಿತ್ರೆಯನ್ನು ಕೇಳು. ವಸುದೇವನು ತನ್ನ ಮನೆಗೆ ಹಿಂತಿರುಗಿದನಂತರ ಯಶೋದೆ ಮತ್ತು ನಂದರು ಮಂಗಳಕರವೂ, ಜಯಪ್ರದವೂ ಆದ ಸೂತಿಕಾಗೃಹದಲ್ಲಿ ನವಘನಶ್ಯಾಮನಾದ ಬಾಲಕನು ನೆಲದ ಮೇಲೆ ಮಲಗಿರುವುದನ್ನು ನೋಡಿದರು.

ಅತೀವ ಸುಂದರಂ ನಗ್ನಂ ಪಶ್ಯಂತಂ ಗೃಹಶೇಖರಂ ।
ಶರತ್ಪಾರ್ವಣಚಂದ್ರಾಸ್ಯಂ ನೀಲೇಂದೀವರಲೋಚನಂ ॥ ೫೮ ॥

ರುದಂತಂ ಚ ಹಸಂತಂ ಚ ವೇಣುಸಂಸಕ್ತವಿಗ್ರಹಂ ।
ಹಸ್ತದ್ವಯಂ ಸುವಿನ್ಯಸ್ತಂ ಪ್ರೇಮವಂತಂ ಪದಾಂಬುಜಂ ॥ ೫೯ ॥

ದೃಷ್ಟ್ವಾ ನಂದಃ ಸ್ತ್ರಿಯಾ ಸಾರ್ಧಂ ಹರಿಂ ಹೃಷ್ಟೋ ಬಭೂವ ಹ ।
ಧಾತ್ರೀ ತಂ ಸ್ನಾಪಯಾಮಾಸ ಶೀತತೋಯೇನ ಬಾಲಕಂ ॥ ೬೦ ॥

ಚಿಚ್ಛೇದ ನಾಡೀಂ ಬಾಲಸ್ಯ ಹರ್ಷಾದ್ಗೋಪ್ಯೋ ಜಯಂ ದದುಃ ।
ಆಜಗ್ಮುರ್ಗೋಪಿಕಾಃ ಸರ್ವಾ ಬೃಹಚ್ಛ್ರೋಣ್ಯಶ್ಚಲತ್ಕುಚಾಃ ॥ ೬೧ ॥

ಬಾಲಿಕಾಶ್ಚ ವಯಸ್ಯಾಶ್ಚ ವಿಪ್ರಪತ್ನ್ಯಶ್ಚ ಸೂತಿಕಾಂ ।
ಆಶಿಷಂ ಯುಯುಜುಃ ಸರ್ವಾ ದದೃಶುರ್ಬಾಲಕಂ ಮುದಾ ॥ ೬೨ ॥

---

೫೮. ಶರತ್ಪೂರ್ಣಿಮಾ ಚಂದ್ರನಂತಿರುವ ಮುಖದಿಂದಲೂ, ಕನ್ನೈದಿಲೆಯಂತಿರುವ ಕಣ್ಣುಗಳಿಂದಲೂ ಮನೋಹರವಾದ ಆ ಬಾಲನು ಬೆತ್ತಲೆಯಾಗಿ ಮನೆಯ ಶಿಖರವನ್ನು ನೋಡುತ್ತ ಮೇಲ್ಮುಖನಾಗಿ ಮಲಗಿದ್ದನು

೫೯. ಒಮ್ಮೆ ಅಳುತ್ತಲೂ, ಮತ್ತೊಮ್ಮೆ ನಗುತ್ತಲೂ ಇರುವ ಆ ಶಿಶುವು ಕೈಗಳೆರಡನ್ನೂ ಸರಿಯಾಗಿಟ್ಟುಕೊಂಡು, ಒಂದು ಕೈಯಲ್ಲಿ ಕೊಳಲನ್ನು ಧರಿಸಿದ್ದಿತು.

೬೦. ನಂದಗೋಪನು ತನ್ನ ಪತ್ನಿಯೊಡನೆ ಶ್ರೀಹರಿಯ ಪಾದಕಮಲವನ್ನು ನೋಡಿ ಸಂತೋಷಗೊಂಡನು. ದಾದಿಯು ಆ ಬಾಲಕನಿಗೆ ತಣ್ಣೀರಿನಿಂದ ಸ್ನಾನ ಮಾಡಿಸಿದಳು.

೬೧ ದಾದಿಯು ಆ ಬಾಲಕನ ಹೊಕ್ಕಳನ್ನು ಕತ್ತರಿಸಿದಳು. ಗೋಪಿಯರೆಲ್ಲರೂ ಬಹಳ ಸಂತೋಷದಿಂದ ಜಯಕಾರಮಾಡಿದರು. ಆಗ ವರ್ತುಳಾಕಾರವಾದ ನಿತಂಬಗಳಿಂದಲೂ, ಚಂಚಲವಾದ ಕುಚಗಳಿಂದಲೂ ಶೋಭಿತರಾದ ಗೋಪಿಯರು ಅಲ್ಲಿಗೆ ಬಂದರು.

೬೨ ಬಾಲಿಕೆಯರೂ, ಯಶೋದೆಯ ಗೆಳತಿಯರೂ, ಬ್ರಾಹ್ಮಣ ಮುತ್ತೈದೆಯರೂ, ಸೂತಿಕಾಗೃಹದಲ್ಲಿ ಶಿಶುವಿಗೆ ಆಶೀರ್ವಾದಮಾಡಿ 'ಎಲ್ಲರೂ ದರ್ಶನಾನಂದ ಭಾಗಿಗಳಾದರು.

ಕ್ರೋಡೇ ಚಕ್ರುಃ ಪ್ರಶಂಸಂತ್ಯ ಊಷುಸ್ತತ್ರ ಚ ಕಾಶ್ಚನ ।
ನಂದಃ ಸಚ್ಚೈಲಃ ಸ್ನಾತಶ್ಚ ಧೃತ್ವಾ ಧೌತೇ ಚ ವಾಸಸೀ || ೬೩ ||

ಪಾರಂಪರ್ಯವಿಧಿಂ ತತ್ರ ಚಕಾರ ಹೃಷ್ಟಮಾನಸಃ ।
ಬ್ರಾಹ್ಮಣಾನ್ ಭೋಜಯಾಮಾಸ ಕಾರಯಾಮಾಸ ಮಂಗಲಂ || ೬೪ ||

ವಾದ್ಯಾನಿ ವಾದಯಾಮಾಸ ಬಂದಿಭ್ಯಶ್ಚ ದದೌ ಧನಂ ।
ತತೋ ನಂದಶ್ಚ ಸಾನಂದಂ ಬ್ರಾಹ್ಮಣೇಭ್ಯೋ ದದೌ ಧನಂ || ೬೫ ||

ಸದ್ರತ್ನಾನಿ ಪ್ರವಾಲಾನಿ ಹೀರಕಾಣಿ ಚ ಸಾದರಂ ।
ತಿಲಾನಾಂ ಪರ್ವತಾನ್ಸಪ್ತ ಸುವರ್ಣಶತಕಂ ಮುನೇ || ೬೬ ||

ರೌಪ್ಯಂ ಧಾನ್ಯಾಚಲಂ ವಸ್ತ್ರಂ ಗೋಸಹಸ್ರಂ ಮನೋಹರಂ ।
ದಧಿದುಗ್ಧಂ ಶರ್ಕರಾಂ ಚ ನವನೀತಂ ಘೃತಂ ಮಧು || ೬೭ ||

---

೬೩. ಕೆಲವರು ಅಲ್ಲಿಯೇ ಸ್ವಲ್ಪ ಹೊತ್ತು ಕುಳಿತುಕೊಂಡು ಆ ಶಿಶುವನ್ನು ಹೊಗಳುತ್ತ ಅಪ್ಪಿಕೊಂಡರು. ಇತ್ತ ನಂದಗೋಪನು ಉಟ್ಟಬಟ್ಟೆಯೊಡನೆ ಸ್ನಾನಮಾಡಿ ಒಗೆದ ಶುಭ್ರವಸ್ತ್ರಗಳನ್ನು ಧರಿಸಿದನು.

೬೪. ಸಂತುಷ್ಟಮನಸ್ಕನಾಗಿ, ವಂಶಪರಂಪರೆಯಾಗಿ ಬಂದ ಜಾತಕರ್ಮಾದಿಗಳನ್ನಾಚರಿಸಿ, ಬ್ರಾಹ್ಮಣರ ಭೋಜನಮಾಡಿಸಿ ಮಂಗಳ ಮಾಡಿಸಿದನು.

೬೫ ವಾದ್ಯಗಳನ್ನು ಮೊಳಗಿಸಿ ವಂದಿಮಾಗಧರಿಗೆ ಯಥೇಚ್ಛವಾಗಿ ಧನವನ್ನು ಕೊಟ್ಟನು. ಅಂತೆಯೇ ಆನಂದಪರವಶನಾದ ನಂದನು ಬ್ರಾಹ್ಮಣರಿಗೂ ದ್ರವ್ಯದಾನಮಾಡಿದನು.

೬೬. ಎಲೈ ನಾರದಮುನಿಯೇ, ರತ್ನ, ಹವಳ, ವಜ್ರ, ಮುಂತಾದ ಅಮೂಲ್ಯವಸ್ತುಗಳನ್ನೂ, ಎಳ್ಳಿನ ಏಳು ರಾಶಿಗಳನ್ನೂ ನೂರಾರು ಸುವರ್ಣ ನಾಣ್ಯಗಳನ್ನೂ ದಾನಮಾಡಿದನು.

೬೭. ಬೆಳ್ಳಿಯನ್ನೂ, ಧಾನ್ಯರಾಶಿಯನ್ನೂ, ವಸ್ತ್ರವನ್ನೂ, ಮನೋಹರವಾದ ಸಾವಿರ ಗೋವುಗಳನ್ನೂ, ಮೊಸರು, ಹಾಲು, ಸಕ್ಕರೆ, ಬೆಣ್ಣೆ, ತುಪ್ಪ ಮತ್ತು ಜೇನುತುಪ್ಪವನ್ನೂ ಯಥೇಚ್ಛವಾಗಿ ದಾನಮಾಡಿದನು.

ಮಿಷ್ಟಾನ್ನಂ ಸಲ್ಲಡ್ಡುಕೌಘಂ ಸ್ವಾದೂನಿ ಮೋದಕಾನಿ ಚ ।
ಭೂಮಿಂ ಚ ಸರ್ವಸಸ್ಯಾಢ್ಯಾಂ ವಾಯುವೇಗಾಂಸ್ತುರಂಗಮಾನ್ ॥ ೭೮ ॥

ತಾಂಬೂಲಾನಿ ಚ ತೈಲಾನಿ ದತ್ವಾ ಹೃಷ್ಟೋ ಬಭೂವ ಹ ।
ರಕ್ಷಿತುಂ ಸೂತಿಕಾಗಾರಂ ಯೋಜಯಾಮಾಸ ಬ್ರಾಹ್ಮಣಾನ್ ॥ ೭೯ ॥

ತತ್ರ ಮಂತ್ರಜ್ಞಮನುಜಾನ್ಸ್ಥವಿರಾನ್ಗೋಪಿಕಾಗಣಾನ್ ।
ವೇದಾಂಶ್ಚ ಪಾಠಯಾಮಾಸ ಹರೇರ್ನಾಮೈಕಮಂಗಲಂ ॥ ೭೦ ॥

ಭಕ್ತ್ಯಾ ಚ ಬ್ರಾಹ್ಮಣದ್ವಾರಾ ಪೂಜಯಾಮಾಸ ದೇವತಾಃ ।
ಗೋಪಾಲಿಕಾಶ್ಚ ವೃದ್ಧಾಶ್ಚ ರತ್ನಾಲಂಕಾರಭೂಷಿತಾಃ ॥ ೭೧ ॥

ಸಸ್ಮಿತಾಃ ಶೀಘ್ರಗಾಮಿನ್ಯ ಆಜಗ್ಮುರ್ನಂದಮಂದಿರಂ ।
ನಾನಾವಿಧಾಶ್ಚ ಗಣಕಾ ಜ್ಯೋತಿಃಶಾಸ್ತ್ರವಿಶಾರದಾಃ ॥ ೭೨ ॥

---

೬೮. ಮಿಷ್ಟಾನ್ನವನ್ನೂ, ಲಾಡುಗಳ ರಾಶಿಯನ್ನೂ, ಸಿಹಿಯಾದ ಕರಿಗಡಬು ಗಳನ್ನೂ, ಸಕಲ ಸಸ್ಯಸಮೃದ್ಧವಾದ ಭೂಮಿಯನ್ನೂ ವಾಯುವೇಗವುಳ್ಳ ಕುದುರೆ ಗಳನ್ನೂ ದಾನಮಾಡಿದನು.

೬೯. ತಾಂಬೂಲವನ್ನೂ ತೈಲವನ್ನೂ ದಾನಮಾಡಿ, ನಂದನು ಸಂತುಷ್ಟ ನಾಮದಲ್ಲದೆ ಸೂತಿಕಾಗೃಹವನ್ನು ರಕ್ಷಿಸಲು ಬ್ರಾಹ್ಮಣರನ್ನು ನಿಯಮಿಸಿದನು

೭೦. ಮಂತ್ರಜ್ಞರಾದ ಬ್ರಾಹ್ಮಣರನ್ನೂ ಗೋಪವೃದ್ಧೆಯರನ್ನೂ ನಿಯಮಿಸಿ ಸೂತಿಕಾಗೃಹದ ದ್ವಾರದಲ್ಲಿ ಚತುರ್ವೇದಗಳನ್ನೂ, ಶ್ರೀಹರಿಯ ದಿವ್ಯನಾಮಗಳನ್ನೂ ಪಾರಮಾಡಿಸಿದನು.

೭೧. ಯೋಗ್ಯರಾದ ಬ್ರಾಹ್ಮಣರ ಮುಖಾಂತರ ಭಕ್ತಿಪೂರ್ವಕವಾಗಿ ದೇವತೆಗಳ ಪೂಜೆಮಾಡಿಸಿದನು.

೭೨. ರತ್ನಾಲಂಕಾರಭೂಷಿತರಾದ ಗೋಪಾಲಿಕೆಯರೂ, ವೃದ್ಧಸ್ತ್ರೀಯರೂ ಸ್ಮಿತಮುಖಿಯರಾಗಿ ಜಾಗ್ರತೆ ನಂದನ ಮಂದಿರಕ್ಕೆ ಬಂದರು.

ವಾಕ್ಸಿದ್ಧಾಃ ಪುಸ್ತಕಕರಾಃ ಆಜಗ್ಮುರ್ನಂದಮಂದಿರಂ |
ಸಸ್ಮಿತಾ ವಿಪ್ರಪತ್ನ್ಯಶ್ಚ ವಯಸ್ಯಾಃ ಸ್ಥವಿರಾ ವರಾಃ || ೭೩ ||

ಬಾಲಿಕಾ ಬಾಲಕಯುತಾ ಆಜಗ್ಮುರ್ನಂದಮಂದಿರಂ |
ತೇಭ್ಯೋಽಪಿ ಪ್ರದದೌ ರತ್ನಂ ಧನಾನಿ ವಿವಿಧಾನಿ ಚ || ೭೪ ||

ವರವಸ್ತ್ರಾಣಿ ರೌಪ್ಯಾಣಿ ಗೋಸಹಸ್ರಾಣಿ ಸಾದರಂ |
ನಂದಸ್ತೇಭ್ಯೋ ನಮಸ್ಕೃತ್ಯ ಚಕಾರ ವಿನಯಂ ಮುದಾ || ೭೫ ||

ಆಶಿಷಂ ಯುಯುಜುಃ ಸರ್ವೇ ದದೃಶುರ್ಬಾಲಕಂ ಪರಂ |
ಏವಂ ಸಂಭೃತಸಂಭಾರೋ ಬಭೂವ ವ್ರಜಪುಂಗವಃ || ೭೬ ||

ಗಣಕೈಃ ಕಾರಯಾಮಾಸ ಯದ್ಭವಿಷ್ಯಂ ಶುಭಾಶುಭಂ |
ಏವಂ ವವರ್ಧ ಬಾಲಶ್ಚ ಶುಕ್ಲಪಕ್ಷೇ ಯಥಾ ಶಶೀ || ೭೭ ||

---

೭೩. ಜ್ಯೋತಿಃಶಾಸ್ತ್ರಪಾರಂಗತರಾದ ಅನೇಕವಿಧ ಪಂಡಿತರೂ, ವಾಕ್ಸಿದ್ಧಿಯುಳ್ಳವರೂ ಪುಸ್ತಕಹಸ್ತರಾಗಿ ನಂದನ ಮಂದಿರಕ್ಕೆ ಬಂದರು.

೭೪. ಗೆಳತಿಯರೊಡನೆ ಬ್ರಾಹ್ಮಣಸ್ತ್ರೀಯರೂ, ವೃದ್ಧೆಯರೂ, ಬಾಲರೊಡನೆ ಬಾಲಿಕೆಯರೂ, ನಂದನ ಮಂದಿರಕ್ಕೆ ಬಂದರು.

೭೫. ಅವರೆಲ್ಲರಿಗೂ ರತ್ನಗಳನ್ನೂ ವಿವಿಧದ್ರವ್ಯಗಳನ್ನೂ, ಮನೋಹರವಾದ ವಸ್ತ್ರಗಳನ್ನೂ, ಬೆಳ್ಳಿಯನ್ನೂ, ಸಾವಿರಾರು ಗೋವುಗಳನ್ನೂ, ಕೊಟ್ಟು ನಂದನು ಅವರೆಲ್ಲರಿಗೂ ವಿನಯಪೂರ್ವಕವಾಗಿ ನಮಸ್ಕಾರಮಾಡಿದನು.

೭೬. ಅವರೆಲ್ಲರೂ ಶಿಶುವಿನ ಸಂದರ್ಶನಮಾಡಿ ನಂದನಿಗೂ ಶಿಶುವಿಗೂ ಆಶೀರ್ವದಿಸಿದರು. ಈ ರೀತಿಯಾಗಿ ಸಮಸ್ತಸಂಭಾರ ಪರಿಪೂರ್ಣನಾಗಿ ಶಿಶುವು ವಜ್ರಕಾಯನಾದನು.

೭೭. ಆ ಶಿಶುವಿನ ಶುಭಾಶುಭಭವಿಷ್ಯಗಳನ್ನು ಜ್ಯೌತಿಷಿಕರಿಂದ ಬರೆಸಿಟ್ಟನು. ಇಂತು ಆ ಶಿಶುವು ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಗೊಳ್ಳುತ್ತಿದ್ದನು.

ನಂದಾಲಯೇ ಹಲೀ ಚೈವ ಭುಂಕ್ತೇ ಮಾತುಃ ಪಯೋಧರಂ ।
ತದಾ ಚ ರೋಹಿಣೀ ದೃಷ್ಟ್ವಾ ತತ್ರ ಪುತ್ರೋತ್ಸವೇ ಮುದಾ ॥ ೭೮ ॥

ತೈಲಸಿಂದೂರತಾಂಬೂಲಂ ಧನಂ ತಾಭ್ಯೋ ದದೌ ಮುನೇ ।
ದತ್ವಾಶಿಷಶ್ಚ ಶಿರಸಿ ತಾಶ್ಚ ತೇ ಸ್ವಾಲಯಂ ಯಯುಃ ॥ ೭೯ ॥

ಯಶೋದಾರೋಹಿಣೀನಂದಾಸ್ತಸ್ಥುರ್ಗೇಹೇ ಮುದಾನ್ವಿತಾಃ ॥ ೮೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣ–ನಾರದಸಂವಾದೇ ನಂದಪುತ್ರೋತ್ಸವೋ
ನಾಮ ನವಮೋಽಧ್ಯಾಯಃ

---

೭೮–೭೯. ನಂದಮಂದಿರದಲ್ಲಿ ಬಲರಾಮನೂ ಮಾತೃಸ್ತನ್ಯವನ್ನು ಪಾನ ಮಾಡಿ ಬೆಳೆಯುತ್ತಿದ್ದನು. ರೋಹಿಣೀದೇವಿಯು ನಂದನಿಗೆ ಪುತ್ರೋತ್ಸವವಾದು ದನ್ನು ಕೇಳಿ ಸಂತಸಗೊಂಡು ಎಣ್ಣೆ, ಸಿಂದೂರ, ಮತ್ತು ತಾಂಬೂಲಗಳನ್ನೂ, ಯಥೇಚ್ಛವಾಗಿ ಧನವನ್ನೂ ಎಲ್ಲರಿಗೂ ದಾನಮಾಡಿದಳು. ಅವರೆಲ್ಲರೂ ಆಶೀರ್ವಾದ ಮಾಡಿ ತಮ್ಮ ತಮ್ಮ ಮನೆಗೆ ಹಿಂತಿರುಗಿದರು.

೮೦. ಯಶೋದೆ, ರೋಹಿಣಿ ಮತ್ತು ನಂದರು ತಮ್ಮ ಮನೆಯಲ್ಲಿ ಸುಖ ಸಂತೋಷದಿಂದ ನಲಿದಾಡುತ್ತಿದ್ದರು.

ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ನಂದಪುತ್ರೋತ್ಸವವೆಂಬ ಒಂಭತ್ತನೆಯ
ಅಧ್ಯಾಯವು ಮುಗಿದುದು.



## ಒಂಭತ್ತನೆಯ ಅಧ್ಯಾಯದ ಸಾರಾಂಶ

ನಂದಗೋಕುಲದಲ್ಲಿ ಬಾಲಚಂದ್ರನಂತೆ ಬೆಳೆಯುತ್ತಿದ್ದ ಶ್ರೀಕೃಷ್ಣನ ಮಹಿಮೆಯನ್ನೂ, ನಂದಗೋಪ ಯಶೋದೆಯರ, ವಸುದೇವ ದೇವಕಿಯರ ಮತ್ತು ರೋಹಿಣೀ ಬಲರಾಮರ ಪೂರ್ವಕಥೆಯನ್ನೂ ವಿವರಿಸಬೇಕೆಂದು ನಾರದನು ವಿನಯದಿಂದ ಕೇಳಲು, ನಾರಾಯಣಮಹರ್ಷಿಯು ಇಂತೆಂದನು. ಪೂರ್ವದಲ್ಲಿ ಅಷ್ಟವಸುಗಳಲ್ಲಿ ಶ್ರೇಷ್ಠನಾದ ದ್ರೋಣಪ್ರಜಾಪತಿಯೂ, ಅವನ ಪತ್ನಿಯಾದ ಧರಾದೇವಿಯೂ, ಶ್ರೀಕೃಷ್ಣನ ದರ್ಶನಲಾಭಕ್ಕಾಗಿ ಗಂಧಮಾದನ ಪರ್ವತದಲ್ಲಿ ಹತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನಾಚರಿಸಿ, ಪರಮಾತ್ಮನ ದರ್ಶನವಾಗದೆ ಬೇಸತ್ತು ಅಗ್ನಿಪ್ರವೇಶ ಮಾಡಲನುವಾದಾಗ ' ಶ್ರೀಹರಿಯು ಗೋಕುಲದಲ್ಲಿ ನಿಮ್ಮಿಬ್ಬರಿಗೆ ಪುತ್ರನಾಗಿ ನಿಮಗೆ ದರ್ಶನವನ್ನು ಕೊಡುವನು ' ಎಂದು ಅಶರೀರವಾಣಿಯಾಯಿತು. ಅದರಂತೆ ಅವರಿಬ್ಬರೂ ಗೋಕುಲದಲ್ಲಿ ನಂದಯಶೋದೆಯರಾಗಿ ಹುಟ್ಟಿ ಶ್ರೀಕೃಷ್ಣನ ತಂದೆ ತಾಯಿಯರೆನಿಸಿ ಅವನ ದರ್ಶನಸುಖವನ್ನು ಅನುಭವಿಸಿದರು. ದೇವಮಾತೆಯಾದ ಅದಿತಿಯು ಹಿಂದೊಮ್ಮೆ ಋತುಸ್ನಾತಳಾಗಿದ್ದ ದಿವಸ ಕಶ್ಯಪನು ಅವಳನ್ನು ಉದಾಸೀನಮಾಡಿ ಸರ್ಪಗಳ ಮಾತೆಯಾದ ಕದ್ರುವಿನೊಡನೆ ರತ್ಯಾಸಕ್ತನಾಗಿದ್ದುದರಿಂದ ಕುಪಿತಳಾದ ಅದಿತಿಯು ತನ್ನ ಕಾಂತನನ್ನು ಒಲಿಸಿಕೊಂಡ ಕದ್ರುವು ಮಾನವ ಯೋನಿಯಲ್ಲಿ ಹುಟ್ಟುವಂತೆ ಶಾಪವಿತ್ತಳು. ಕದ್ರುವೂ ಕೂಡ ಅದೇ ರೀತಿಯಾಗಿ ಅದಿತಿಗೆ ಪ್ರತಿಶಾಪವಿತ್ತಳು. ಅದರಂತೆ ಅದಿತಿಯು ದೇವಕಿಯಾಗಿಯೂ, ಕಶ್ಯಪನು ವಸುದೇವನಾಗಿಯೂ, ಕದ್ರುವು ರೋಹಿಣಿಯಾಗಿಯೂ, ಹುಟ್ಟಿ ಶ್ರೀಕೃಷ್ಣನ ಜನನೀ ಜನಕರಾದರು. ಆದಿಶೇಷನು ರೋಹಿಣಿಯ ಗರ್ಭದಲ್ಲಿ ಬಲರಾಮನಾಗಿ ಅವತರಿಸಿ ಶ್ರೀಕೃಷ್ಣನೊಡನೆ ಗೋಕುಲದಲ್ಲಿ ಬೆಳೆದನು. ವಸುದೇವ ದೇವಕಿಯರು ಶಿಶುವಾದ ಶ್ರೀಕೃಷ್ಣನನ್ನು ಗೋಕುಲದಲ್ಲಿರಿಸಿ ತೆರಳಿದನಂತರ, ನಂದಗೋಪ ಯಶೋದೆಯರು ಆ ಶಿಶುವಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿ, ಬ್ರಾಹ್ಮಣರಿಗೆ ಮಿಷ್ಟ ಭೋಜನ ಮಾಡಿಸಿ, ಯಥೇಚ್ಛವಾಗಿ ದ್ರವ್ಯದಾನಮಾಡಿ ಪುತ್ರೋತ್ಸವದಿಂದ ಆನಂದ ತುಂದಿಲರಾದರು.



॥ ಓಂ ॥

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

॥ ದಶಮೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

**ಅಥ ಕಂಸಃ ಸಭಾಮಧ್ಯೇ ಸ್ವರ್ಣಸಿಂಹಾಸನಸ್ಥಿತಃ ।**
**ಶುಶ್ರಾವ ವಾಚಂ ಗಗನೇ ಸೂನೃತಾಮಶರೀರಿಣೀಂ ॥ ೧ ॥**

**ಕಿಂ ಕರೋಷಿ ಮಹಾಮೂಢ ಚಿಂತಾಂ ಸ್ವಶ್ರೇಯಸಃ ಕುರು ।**
**ಜಾತಃ ಕಾಲೋ ಧರಣ್ಯಾಂ ತೇ ತಿಷ್ಠೋಽಪಾಯೋ ನರಾಧಿಪ ॥ ೨ ॥**

**ನಂದಾಯ ತನಯಂ ದತ್ವಾ ವಸುದೇವಸ್ತವಾಂತಕಂ ।**
**ಕನ್ಯಾಮಾದಾಯ ತುಭ್ಯಂ ಚ ದತ್ವಾ ಸಂಮಾಯಯಾ ಸ್ಥಿತಃ ॥ ೩ ॥**

---

### ಹತ್ತನೆಯ ಅಧ್ಯಾಯವು

೧. ಶ್ರೀನಾರಾಯಣ :—ಇತ್ತ ಕಂಸನು ಸಭಾಮಧ್ಯದಲ್ಲಿ ಸ್ವರ್ಣಸಿಂಹಾಸನದಲ್ಲಿ ಕುಳಿತಿದ್ದಂತೆಯೇ ಗಗನ ಮಧ್ಯದಲ್ಲಿ ನುಡಿದ ಅಶರೀರವಾಣಿಯೊಂದನ್ನು ಕೇಳಿದನು

೨. ಎಲೈ ಮಹಾಮೂಢನೇ ನೀನೇನು ಮಾಡುತ್ತಿರುವೆ. ನಿನ್ನ ಮುಂದಿನ ಕಲ್ಯಾಣವನ್ನು ಕುರಿತು ಯೋಚಿಸು. ಎಲೈ ರಾಜನೇ, ಭೂಮಿಯಲ್ಲಿ ನಿನ್ನ ಅಂತಕನು ಅವತರಿಸಿರುವನು. ಅವನಿಗೆ ಸಿಲುಕದಂತೆ ಪರಿಹಾರೋಪಾಯವನ್ನು ಯೋಚಿಸು.

೩. ವಸುದೇವನು ನಿನ್ನ ನಾಶಕನಾದ ಪುತ್ರನನ್ನು ನಂದನಿಗೆ ಕೊಟ್ಟು, ಅವನ ಸ್ತ್ರೀಶಿಶುವನ್ನು ತಂದು ನಿನಗೊಪ್ಪಿಸಿ ಮಾಯಾಮಹಿಮೆಯಿಂದ ಏನೂ ತಿಳಿಯದಂತಿದ್ದಾನೆ.

ಮಾಯಾಂಶಾ ಕನ್ಯಕೇಯಂ ಚ ವಾಸುದೇವಃ ಸ್ವಯಂ ಹರಿಃ ।
ತವ ಹಂತಾ ಗೋಕುಲೇ ಚ ವರ್ದ್ಧತೇ ನಂದಮಂದಿರೇ ॥ ೪ ॥

ದೇವಕ್ಯಾಃ ಸಪ್ತಮೋ ಗರ್ಭೋ ವರ್ಧತೇ ನಂದಮಂದಿರೇ ।
ದೇವಕ್ಯಾಃ ಸಪ್ತಮೋ ಗರ್ಭೋ ನ ಸುಸ್ರಾವಮೃತಂ ಸುತಂ ॥ ೫ ॥

ಸ್ಥಾಪಯಾಮಾಸ ಮಾಯಾ ತಂ ರೋಹಿಣೀಜಠರೇ ಕಿಲ ।
ತತ್ರ ಜಾತಶ್ಚ ಶೇಷಾಂಶೋ ಬಲದೇವೋ ಮಹಾಬಲಃ ॥ ೬ ॥

ಗೋಕುಲೇ ತೌ ಚ ವರ್ಧೇತೇ ಕಾಲೌ ತೇ ನಂದಮಂದಿರೇ ।
ಶ್ರುತ್ವೇತಿ ವಚನಂ ರಾಜಾ ಬಭೂವಾನಮ್ರಕಂಧರಃ ॥ ೭ ॥

ಚಿಂತಾಮವಾಪ ಸಹಸಾ ತತ್ಯಾಜಾಹಾರಮುನ್ಮನಾಃ ।
ಪೂತನಾಂ ಚ ಸಮಾನೀಯ ಪ್ರಾಣೇಭ್ಯಃ ಪ್ರೇಯಸೀಂ ಸತೀಂ ॥ ೮ ॥

---

೪. ವಸುದೇವನ ಮಂದಿರದಲ್ಲಿದ್ದ ಈ ಕನ್ನಿಕೆಯು ಮಾಯಾಂಶಸಂಭೂತಳು. ವಸುದೇವಪುತ್ರನಾದ ಶ್ರೀಹರಿಯು ನಿನ್ನ ವಧೆಗಾಗಿ ನಂದಗೋಕುಲದಲ್ಲಿ ನಂದನ ಮಂದಿರದಲ್ಲಿ ಬೆಳೆಯುತ್ತಿದ್ದಾನೆ

೫. ದೇವಕಿಯ ಸಪ್ತಮಗರ್ಭದಲ್ಲಿ ಜನಿಸಿದ ಶಿಶುವೂ ನಂದನ ಮಂದಿರದಲ್ಲಿ ಬೆಳೆಯುತ್ತಿದೆ. ದೇವಕಿಯು ಏಳನೆಯ ಗರ್ಭದಲ್ಲಿ ಮೃತಶಿಶುವು ಜನಿಸಿದುದು ಸುಳ್ಳು.

೬. ಆದಿಮಾಯೆಯು ಆ ಶಿಶುವನ್ನು ರೋಹಿಣೀದೇವಿಯ ಜಠರದಲ್ಲಿರಿಸಿದಳು. ಅಲ್ಲಿ ಆದಿಶೇಷನ ಅಂಶದಿಂದ ಮಹಾಬಲಿಷ್ಠನಾದ ಬಲರಾಮನು ಜನಿಸಿದನು

೭. ನಿನಗೆ ಕಾಲಸ್ವರೂಪರಾದ ಆ ಕೃಷ್ಣಬಲರಾಮರಿಬ್ಬರೂ ಗೋಕುಲದ ನಂದನಮಂದಿರದಲ್ಲಿ ಅಭಿವೃದ್ಧಿಗೊಳ್ಳುತ್ತಿದ್ದಾರೆ ಈ ರೀತಿಯಾದ ಅಶರೀರವಾಣಿಯನ್ನು ಕೇಳಿ ರಾಜನಾದ ಕಂಸನು ದುಃಖದಿಂದ ತಲೆಬಾಗಿದನು.

೮. ಹಠಾತ್ತನೆ ಚಿಂತಾಕ್ರಾಂತನಾಗಿ, ಉದ್ವಿಗ್ನತೆಯಿಂದ ಆಹಾರವನ್ನು ತೊರೆದು, ತನ್ನ ಪ್ರಾಣಕಿಂತಲೂ ಪ್ರೀತಿಪಾತ್ರಳಾದ ಪೂತನಿಯನ್ನು ಕರೆಸಿದನು.

ಉವಾಚ ಭಗಿನೀಂ ರಾಜಾ ಸಭಾಮಧ್ಯೇ ಚ ನೀತಿವಿತ್ ।

॥ ಕಂಸ ಉವಾಚ ॥

ಪೂತನೇ ಗೋಕುಲಂ ಗಚ್ಛ ಕಾರ್ಯಾರ್ಥಂ ನಂದಮಂದಿರಂ ॥ ೯ ॥

ವಿಷಾಕ್ತಂ ಚ ಸ್ತನಂ ಕೃತ್ವಾ ಶಿಶವೇ ದೇಹಿ ಸತ್ವರಂ ।
ತ್ವಂ ಮನೋಯಾಯಿನೀ ವತ್ಸೇ ಮಾಯಾಶಾಸ್ತ್ರವಿಶಾರದಾ ॥ ೧೦ ॥

ಮಾಯಾಮಾನುಷರೂಪಂ ಚ ವಿಧಾಯ ವ್ರಜ ಯೋಗಿನಿ ।
ದುರ್ವಾಸಸೋ ಮಹಾಮಂತ್ರಂ ಪ್ರಾಪ್ಯ ಸರ್ವತ್ರ ಗಾಮಿನೀ ॥ ೧೧ ॥

ಸರ್ವರೂಪಂ ವಿಧಾತುಂ ತ್ವಂ ಶಕ್ತಾಸಿ ಸುಪ್ರತಿಷ್ಠಿತೇ ।
ಇತ್ಯುಕ್ತ್ವಾ ತಾಂ ಮಹಾರಾಜಸ್ತಸ್ಥೌ ಸಂಸದಿ ನಾರದ ॥ ೧೨ ॥

---

೯. ಅನಂತರ ಸಭೆಯ ಮಧ್ಯದಲ್ಲಿ ತನ್ನ ಸಹೋದರಿಯಾದ ಪೂತನಿಯನ್ನು ಕುರಿತು ರಾಜನು ನೀತಿಯುತವಾದ ಮಾತುಗಳನ್ನು ಹೇಳಿದನು. ಕಂಸ :— ' ಎಲೌ ಪೂತನಿಯೇ, ನನ್ನದೊಂದು ಕಾರ್ಯಾರ್ಥವಾಗಿ ಗೋಕುಲದಲ್ಲಿ ನಂದನ ಮನೆಗೆ ಹೋಗಿ ಬಾ

೧೦. ನಿನ್ನ ಸ್ತನಗಳಿಗೆ ವಿಷವನ್ನು ಬಳಿದುಕೊಂಡು ಹೋಗಿ ಅಲ್ಲಿರುವ ಶಿಶುವಿಗೆ ಸ್ತನ್ಯಪಾನ ಮಾಡಿಸು ಮಾಯಾಮಂತ್ರಗಳಲ್ಲಿ ನಿಪುಣೆಯಾದ ನೀನು ಮನೋವೇಗದಲ್ಲಿ ಹೋಗಿ ಬರಬಲ್ಲೆ.

೧೧. ದೂರ್ವಾಸರ ಮಹಾಮಂತ್ರಪ್ರಭಾವದಿಂದ ಸರ್ವಗಾಮಿನಿಯಾದ ನೀನು ಯೋಗಶಕ್ತಿಯಿಂದ ಮಾಯಾಮಾನುಷರೂಪಧಾರಿಣಿಯಾಗಿ ನಂದಗೋಕುಲಕ್ಕೆ ಹೋಗು.

೧೨. ದಿವ್ಯಜ್ಞಾನವುಳ್ಳ ನೀನು ಸಕಲರೂಪವನ್ನೂ ಧರಿಸುವಷ್ಟು ಶಕ್ತಳಾಗಿರುವೆ ' ಎಲೈ ನಾರದನೇ ಕಂಸನು ಈ ರೀತಿಯಾಗಿ ಪೂತನಿಗೆ ಹೇಳಿ ಸುಮ್ಮನಾದನು.

ಜಗಾಮ ಪೂತನಾ ಕಂಸಂ ಪ್ರಣಮ್ಯ ಕಾಮಚಾರಿಣೀ ।
ತಪ್ತಕಾಂಚನವರ್ಣಾಭಾ ನಾನಾಲಂಕಾರಭೂಷಿತಾ ॥ ೧೩ ॥

ಬಿಭ್ರತೀ ಕಬರೀಭಾರಂ ಮಾಲತೀಮಾಲ್ಯಸಂಯುತಂ ।
ಕಸ್ತೂರೀಬಿಂದುನಾ ಯುಕ್ತಂ ಸಿಂದೂರಂ ದಧತೀ ಮುದಾ ॥ ೧೪ ॥

ಮಂಜೀರರಶನಾಭ್ಯಾಂ ಚ ಕಲಶಬ್ದಂ ಪ್ರಕುರ್ವತೀ ।
ಸಂಪ್ರಾಪ್ಯ ಗೋಷ್ಠಂ ದುರ್ದರ್ಶಂ ನಂದಾಲಯಮನೋಹರಂ ॥ ೧೫ ॥

ಪರಿಖಾಭಿರ್ಗಭೀರಾಭಿರ್ದುರ್ಲಂಘ್ಯಾಭಿಶ್ಚ ವೇಷ್ಟಿತಂ ।
ರಚಿತಂ ಪ್ರಸ್ತರೈರ್ದಿವ್ಯೈರ್ನಿರ್ಮಿತಂ ವಿಶ್ವಕರ್ಮಣಾ ॥ ೧೬ ॥

ಇಂದ್ರನೀಲೈರ್ಮರಕತೈಃ ಪದ್ಮರಾಗೈಶ್ಚ ಭೂಷಿತಂ ।
ಸುವರ್ಣಕಲಶೈರ್ದಿವ್ಯೈಶ್ಚಿತ್ರಿತೈಃ ಶೇಖರೋಜ್ಜ್ವಲೈಃ ॥ ೧೭ ॥

---

೧೩. ಕಾಮರೂಪಿಣಿಯಾದ ಪೂತನಿಯು ಕೂಡಲೇ ಪುಟಕ್ಕೆ ಹಾಕಿದ ಚಿನ್ನದಂತೆ ತೇಜೋಮಯವಾದ ರೂಪವನ್ನು ಧರಿಸಿ ನಾನಾಲಂಕಾರಗಳನ್ನು ತೊಟ್ಟು, ಕಂಸನಿಗೆ ನಮಿಸಿ ಗೋಕುಲಕ್ಕೆ ಹೋದಳು.

೧೪. ಕೇಶಪಾಶಗಳಲ್ಲಿ ಮಾಲತೀ ಹೂಮಾಲೆಯನ್ನು ಧರಿಸಿ ಹಣೆಯಲ್ಲಿ ಕಸ್ತೂರಿ ಮತ್ತು ಸಿಂದೂರದ ತಿಲಕಗಳನ್ನು ಧರಿಸಿದ್ದಳು.

೧೫. ಕಲರವದಿಂದ ಮನೋಹರವಾಗಿರುವ ನೂಪುರ ಮತ್ತು ಡಾಬುಗಳನ್ನು ಧರಿಸಿ ಗೋಕುಲದಲ್ಲಿ ಮನೋಹರವಾದ ನಂದಗೋಪನ ಮನೆಗೆ ಹೋದಳು

೧೬. ಅತ್ಯಂತ ಗಂಭೀರವೂ, ದಾಟಲಸಾಧ್ಯವೂ ಆದ ಆ ನಂದಗೋಪನ ಮನೆಯನ್ನು ವಿಶ್ವಕರ್ಮನು ಕಲ್ಲುಚಪ್ಪಡಿಗಳಿಂದಲೇ ನಿರ್ಮಿಸಿದ್ದನು.

೧೭. ಇಂದ್ರನೀಲ, ಮರಕತ, ಮತ್ತು ಪದ್ಮರಾಗಮಣಿಗಳನ್ನು ಮೆಟ್ಟಿರುವ ಆ ಗೃಹದ್ವಾರವು ಮನೋಹರವಾದ ಸುವರ್ಣ ಕಲಶಗಳಿಂದ ಶೋಭಿಸುತ್ತಿದ್ದಿತು.

ಪ್ರಾಕಾರೈರ್ಗಗನಸ್ಪರ್ಶೈಶ್ಚತುರ್ದ್ವಾರಸಮನ್ವಿತೈಃ ।
ಯುಕ್ತಂ ಲೋಹಕಪಾಟೈಶ್ಚ ದ್ವಾರಪಾಲಸಮನ್ವಿತೈಃ ॥ ೧೮ ॥

ವೇಷ್ಟಿತಂ ಸುಂದರಂ ರಮ್ಯಂ ಸುಂದರೀಗಣವೇಷ್ಟಿತಂ ।
ಮುಕ್ತಾಮಾಣಿಕ್ಯಪರಶೈಃ ಪೂರ್ಣರತ್ನಾದಿಭಿರ್ಘನೈಃ ॥ ೧೯ ॥

ಸ್ವರ್ಣಪಾತ್ರಘಟಾಕೀರ್ಣಂ ಗವಾಂ ಕೋಟಿಭಿರನ್ವಿತಂ ।
ಭರಣೀಯೈಃ ಕಿಂಕರೈಶ್ಚ ಗೋಪಲಕ್ಷೈಃ ಸಮನ್ವಿತಂ ॥ ೨೦ ॥

ದಾಸೀನಾಂ ಚ ಸಹಸ್ರೈಶ್ಚ ಕರ್ಮವ್ಯಗ್ರೈಃ ಸಮನ್ವಿತಂ ।
ಪ್ರವಿವೇಶಾಶ್ರಮಂ ಸಾಧ್ವೀ ಸಸ್ಮಿತಾ ಸುಮನೋಹರಾ ॥ ೨೧ ॥

ದೃಷ್ಟ್ವಾ ತಾಂ ಪ್ರವಿಶಂತೀಂ ಚ ಗೋಪ್ಯೋ ದೃಷ್ಟ್ವಾನುಮೇನಿರೇ ।
ಕಿಂ ವಾ ಪದ್ಮಾಲಯಾ ದುರ್ಗಾ ಕೃಷ್ಣಂ ದ್ರಷ್ಟುಂ ಸಮಾಗತಾ ॥ ೨೨ ॥

---

೧೮. ಮುಗಿಲನ್ನು ಮುಟ್ಟುವ ಉಪ್ಪರಿಗೆಗಳಿಂದ ಶೋಭಿತವಾದ ಆ ಮಂದಿರಕ್ಕೆ ನಾಲ್ಕು ಪ್ರಧಾನ ದ್ವಾರಗಳೂ ಅವುಗಳಿಗೆ ಲೋಹದ ಬಾಗಿಲುಗಳೂ ಇದ್ದವು. ಪ್ರತಿಯೊಂದು ದ್ವಾರದಲ್ಲಿಯೂ ದ್ವಾರಪಾಲಕರಿದ್ದರು.

೧೯. ಸುಂದರಸ್ತ್ರೀಯರಿಂದಲೂ, ಮುತ್ತು, ಮಾಣಿಕ್ಯ, ರತ್ನ, ಮತ್ತು ಧನಕನಕಾದಿಗಳಿಂದಲೂ ಆ ಮಂದಿರವು ಪರಿಪೂರ್ಣವಾಗಿದ್ದಿತು.

೨೦. ಸುವರ್ಣಕಲಶಗಳಿಂದಲೂ, ಕೋಟ್ಯಾಂತರ ಗೋವುಗಳಿಂದಲೂ, ಕೂಡಿದ್ದ ಆ ಮಂದಿರದಲ್ಲಿ ಅನಜೀವಿಗಳಾದ ಸೇವಕರೂ, ಲಕ್ಷಾಂತರ ಗೋವರೂ ಇದ್ದರು

೨೧. ತಮ್ಮ ತಮ್ಮ ಕರ್ತವ್ಯದಲ್ಲಿ ಪರಾಯಣೆಯರಾದ ಸಾವಿರಾರು ದಾಸಿಯರಿಂದ ಪರಿಪೂರ್ಣವಾಗಿದ್ದ ಆ ನಂದಗೋಪನ ಆಶ್ರಮಕ್ಕೆ ಪೂತನಿಯು ಮನೋಹರ ರೂಪಧಾರಿಣಿಯಾಗಿ ತೆರಳಿದಳು.

೨೨. ಈ ರೀತಿ ತಮ್ಮ ಆಶ್ರಮಕ್ಕೆ ಬಂದ ಆ ದಿವ್ಯಸುಂದರಿಯನ್ನು ನೋಡಿ, ಶ್ರೀಕೃಷ್ಣನನ್ನು ನೋಡಲು ಸಾಕ್ಷಾತ್ ಲಕ್ಷ್ಮೀದೇವಿಯೋ ಅಥವಾ ದುರ್ಗಾದೇವಿಯೋ ಬಂದಿರಬಹುದೆಂದು ಗೋಪಿಯರು ಊಹಿಸಿದರು.

ಪ್ರಣೇಮುರ್ಗೋಪಿಕಾ ಗೋಪಾಃ ಪಪ್ರಚ್ಛುಃ ಕುಶಲಂ ಚ ತಾಂ ।
ದದೌ ಸಿಂಹಾಸನಂ ಪಾದ್ಯಂ ವಾಸಯಾಮಾಸ ತತ್ರ ವೈ ॥ ೨೩ ॥

ಪಪ್ರಚ್ಛ ಕುಶಲಂ ಸಾ ಚ ಗೋಪಾನಾಂ ಬಾಲಕಸ್ಯ ಚ ।
ಉವಾಸ ಸಸ್ಮಿತಾ ಸಾಧ್ವೀ ಪಾದ್ಯಂ ಜಗ್ರಾಹ ಸಾದರಂ ॥ ೨೪ ॥

ತಾಮೂಚುರ್ಗೋಪಿಕಾಃ ಸರ್ವಾಃ ಕಾ ತ್ವಮೀಶ್ವರಿ ಸಾಂಪ್ರತಂ ।
ವಾಸಸ್ತೇ ಕುತ್ರ ಕಿಂ ನಾಮ ಕಿಂ ವಾತ್ರೆ ಕರ್ಮ ನೋ ವದ ॥ ೨೫ ॥

ತಾಸಾಂ ಚ ವಚನಂ ಶ್ರುತ್ವಾ ಸಾಪ್ಯುವಾಚ ಮನೋಹರಂ
ಮಥುರಾವಾಸಿನೀ ಗೋಪೀ ಸಾಂಪ್ರತಂ ವಿಪ್ರಕಾಮಿನೀ ॥ ೨೬ ॥

ಶ್ರುತಂ ವಾಚಕವಕ್ತ್ರೇಣ ತತ್ವಂ ಮಂಗಲಸೂಚಕಂ ।
ಬಭೂವ ಸ್ಥವಿರೇ ಕಾಲೇ ನಂದಪುತ್ರೋ ಮಹಾನಿತಿ ॥ ೨೭ ॥

---

೨೩. ಕೂಡಲೇ ಅಲ್ಲಿದ್ದ ಗೋಪಗೋಪಿಯರೆಲ್ಲರೂ ಆಕೆಗೆ ನಮಸ್ಕರಿಸಿ ಕುಶಲಪ್ರಶ್ನೆ ಮಾಡಿದರು. ಅಲ್ಲದೆ ಪಾದೋದಕವನ್ನು ಕೊಟ್ಟು ಆಕೆಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದರು.

೨೪. ಆ ಪ್ರೌತಸಿಯೂ ಕೂಡ ಗೋಪಾಲಕರ ಮತ್ತು ಗೋಪಶಿಶುವಿನ ಯೋಗಕ್ಷೇಮವನ್ನು ಕೇಳಿ, ಆದರದಿಂದ, ಅರ್ಘ್ಯಪಾದ್ಯಾದಿಸತ್ಕಾರಗಳನ್ನು ಸ್ವೀಕರಿಸಿ ಆಸನದಲ್ಲಿ ಮಂಡಿಸಿದಳು.

೨೫. ಅನಂತರ ಸಕಲಗೋಪಿಯರೂ ಆಕೆಯನ್ನು ಕುರಿತು, ಎಲೌ ತಾಯಿ ನೀನಾರು? ನಿನ್ನ ವಾಸಸ್ಥಾನವಾವುದು? ನಿನ್ನ ಹೆಸರೇನು? ಇಲ್ಲಿಗೆ ಬಂದ ಕಾರ್ಯವೇನು? ಹೇಳೆಂದು ಕೇಳಿದರು.

೨೬. ಅವರ ಮಾತನ್ನು ಕೇಳಿ ಆಕೆಯೂ ಕೂಡ ಇಂತು ಮನೋಹರ ನುಡಿಗಳನ್ನಾಡಿದಳು. ನಾನು ಮಧುರಾನಿವಾಸಿಯೂ, ವಿಪ್ರಪತ್ನಿಯೂ ಆದ ಒಬ್ಬ ಗೋಪಿಯು.

೨೭. ನಂದಗೋಪನಿಗೆ ವೃದ್ಧಾಪ್ಯದಲ್ಲಿ ಮಹಾತ್ಮನಾದ ಶಿಶುವು ಜನಿಸಿರುವ ನೆಂಪು ಹೋಗಿ ಬರುವವರ ಮುಖದಿಂದ ನಾನು ಕೇಳಿದೆನು.

ಶ್ರುತ್ವಾಗತಾಹಂ ತಂ ದ್ರಷ್ಟುಮಾಶಿಷಂ ಕರ್ತುಮೀಪ್ಸಿತಾಂ ।
ಪುತ್ರಮಾನಯ ತಂ ದೃಷ್ಟ್ವಾ ಯಾಮಿ ಕೃತ್ವಾ ತಮಾಶಿಷಂ ॥ ೨೮ ॥

ಬ್ರಾಹ್ಮಣೀವಚನಂ ಶ್ರುತ್ವಾ ಯಶೋದಾ ಹೃಷ್ಟಮಾನಸಾ ।
ಪ್ರಣಮಯ್ಯ ಸುತಂ ಕ್ರೋಡೇ ದದೌ ಬ್ರಾಹ್ಮಣಯೋಷಿತಃ ॥ ೨೯ ॥

ಕೃತ್ವಾ ಕ್ರೋಡೇ ತು ತಂ ಸಾಧ್ವೀ ಚುಚುಂಬ ಚ ಪುನಃಪುನಃ ।
ಸ್ತನಂ ದದೌ ಸುಖಾಸೀನಾ ಹರಿಂ ಪುಣ್ಯವತೀ ಸತೀ ॥ ೩೦ ॥

ಅಹೋಽದ್ಭುತೋಽಯಂ ಬಾಲಸ್ತೇ ಸುಂದರೋ ಗೋಪಸುಂದರಿ ।
ಗುಣೈರ್ನಾರಾಯಣಸಮೋ ಬಾಲೋಯಮಿತ್ಯುವಾಚ ಹ ॥ ೩೧ ॥

ಕೃಷ್ಣೋ ವಿಷಸ್ತನಂ ಪೀತ್ವಾ ಜಹಾಸ ವಕ್ಷಸಿ ಸ್ಥಿತಃ ।
ತಸ್ಯಾಃ ಪ್ರಾಣೈಃ ಸಹ ಪಪೌ ವಿಷಕ್ಷೀರಂ ಸುಧಾಮಿವ ॥ ೩೨ ॥

---

೨೮. ಅದನ್ನು ಕೇಳಿ, ಆ ಶಿಶುವನ್ನು ನೋಡಿ ಆಶೀರ್ವದಿಸಿ ಹೋಗೋಣವೆಂದು ನಾನಿಲ್ಲಿಗೆ ಬಂದೆ. ಆ ಮಗುವನ್ನು ಕರೆತನ್ನಿ. ಅದಕ್ಕೆ ಆಶೀರ್ವದಿಸಿ ನಾನು ಹಿಂತಿರುಗುವೆನು.

೨೯. ಆ ಮಹಾತಪಸ್ವಿನಿಯ (ಬ್ರಾಹ್ಮಣ ವೃದ್ಧೆಯ) ಮಾತನ್ನು ಕೇಳಿ ಯಶೋದೆಯು ಸಂತೋಷಗೊಂಡು ತನ್ನ ಶಿಶುವನ್ನು ಕರೆತಂದು ಆಕೆಯ ಕೈಗೆ ಕೊಟ್ಟಳು.

೩೦. ಸಾಧ್ವೀಶಿರೋಮಣಿಯಂತಿದ್ದ ಆಕೆಯು ಆ ಮಗುವನ್ನೆತ್ತಿಕೊಂಡು ಮತ್ತೆಮತ್ತೆ ಮುದ್ದಿಟ್ಟು, ಸರಿಯಾಗಿ ಕುಳಿತುಕೊಂಡು ಆ ಶಿಶುವಿಗೆ ಸ್ತನ್ಯಪಾನ ಮಾಡಿಸಿದಳು.

೩೧. ಅಲ್ಲದೆ ಯಶೋದೆಯನ್ನು ಕುರಿತು ಎಲೌ ಗೋಪಸುಂದರಿಯೇ, ಈ ನಿನ್ನ ಬಾಲಕನು ಅತ್ಯದ್ಭುತಸ್ವರೂಪನು. ಇವನು ಗುಣಗಳಿಂದ ಸಾಕ್ಷಾತ್ ನಾರಾಯಣನಿಗೆ ಸಮನಾಗಿರುವನು ’ ಎಂದು ಹೇಳಿದಳು.

೩೨ ಇತ್ತ ಶ್ರೀಕೃಷ್ಣನು ಆಕೆಯ ವಕ್ಷಃಸ್ಥಳದಲ್ಲಿ ಕುಳಿತು ವಿಷಸ್ತನ್ಯವನ್ನು ಪಾನಮಾಡಿದನು. ಆ ವಿಷದ ಹಾಲನ್ನು ಆಕೆಯ ಪ್ರಾಣದೊಡನೆ ಅಮೃತದಂತೆ ಸುಖವಾಗಿ ಪಾನಮಾಡಿದನು.

ತತ್ಯಾಜ ಬಾಲಕಂ ಸಾಧ್ವೀ ಪ್ರಾಣಾಂ ಸ್ತ್ಯಕ್ತ್ವಾ ಪಪಾತ ಹ।
ವಿಕೃತಾಕಾರವದನಾ ಚೋಚ್ಛ್ವಾನವದನಾ ಮುನೇ || ೩೩ ||

ಸ್ಥೂಲದೇಹಂ ಪರಿತ್ಯಜ್ಯ ಸೂಕ್ಷ್ಮದೇಹಂ ವಿವೇಶ ಸಾ।
ಆರುರೋಹ ರಥಂ ಶೀಘ್ರಂ ರತ್ನಸಾರವಿನಿರ್ಮಿತಂ || ೩೪ ||

ಪಾರ್ಷದಪ್ರವರೈರ್ದಿವ್ಯೈರ್ವೇಷ್ಟಿತಂ ಸುಮನೋಹರೈಃ।
ಶ್ವೇತಚಾಮರಲಕ್ಷೇಣ ಶೋಭಿತಂ ಲಕ್ಷದರ್ಪಣೈಃ || ೩೫ ||

ವಹ್ನಿಶೌಚೇನ ವಸ್ತ್ರೇಣ ಸೂಕ್ಷ್ಮೇಣ ಭೂಷಿತಂ ವರಂ।
ನಾನಾಚಿತ್ರವಿಚಿತ್ರೈಶ್ಚ ಸದ್ರತ್ನಕಲಶೈರ್ಯುತಂ || ೩೬ ||

ಸುಂದರಂ ಶತಚಂದ್ರಂ ಚ ಜ್ವಲಿತಂ ರತ್ನತೇಜಸಾ।
ಪಾರ್ಷದಾಸ್ತಾಂ ರಥೇ ಕೃತ್ವಾ ಜಗ್ಮುರ್ಗೋಲೋಕಮುತ್ತಮಂ || ೩೭ ||

---

೩೩. ಎಲೈ ನಾರದಮುನಿಯೇ, ಆಗ ಆ ಪೂತನಿಯು ಶಿಶುವನ್ನು ಕೆಳಕ್ಕೆ ಕೆಡವಿ, ವಿಕೃತಮುಖಿಯಾಗಿ ಮೇಲುಮುಖಳಾಗಿ ಬಿದ್ದು ಪ್ರಾಣತ್ಯಾಗ ಮಾಡಿದಳು.

೩೪. ಈ ರೀತಿಯಾಗಿ ಸ್ಥೂಲದೇಹವನ್ನು ಬಿಟ್ಟು ಸೂಕ್ಷ್ಮದೇಹವನ್ನು ಸ್ವೀಕರಿಸಿ, ಶ್ರೇಷ್ಠರತ್ನಗಳಿಂದ ನಿರ್ಮಿತವಾದ ರಥದಲ್ಲಿ ಕುಳಿತಳು

೩೫. ಆ ದಿವ್ಯರಥವು ಅನೇಕ ಪಾರ್ಷದರಿಂದಲೂ, ಮನೋಹರವಾದ ಲಕ್ಷ ಚಾಮರಗಳಿಂದಲೂ, ಲಕ್ಷರತ್ನಗನ್ನಡಿಗಳಿಂದಲೂ ಶೋಭಿತವಾಗಿದ್ದಿತು

೩೬. ಅಗ್ನಿಯಂತೆ ಪರಿಶುದ್ಧವಾದ ಸೂಕ್ಷ್ಮವಸ್ತ್ರದಿಂದಲೂ, ನಾನಾವಿಧವಾದ ಚಿತ್ರವಿಚಿತ್ರಗಳಿಂದಲೂ ಶೋಭಿತವಾದ ಆ ರಥದಲ್ಲಿ ರತ್ನಕಲಶಗಳು ಶೋಭಿಸುತ್ತಿದ್ದವು.

೩೭. ನೂರು ಚಕ್ರಗಳಿಂದ ಮನೋಹರವೂ, ರತ್ನಗಳ ತೇಜಸ್ಸಿನಿಂದ ಪ್ರಜ್ವಲಿತವೂ ಆದ ಆ ರಥದಲ್ಲಿ ಆಕೆಯನ್ನು ಕುಳ್ಳಿರಿಸಿಕೊಂಡು ಪಾರ್ಷದರು ಗೋಲೋಕಕ್ಕೆ ತೆರಳಿದರು.

ದೃಷ್ಟ್ವಾ ತಮದ್ಭುತಂ ಲೋಕಾ ಗೋಪಿಕಾಶ್ಚಾತಿವಿಸ್ಮಿತಾಃ ।
ಕಂಸಃ ಶ್ರುತ್ವಾ ಚ ತತ್ಸರ್ವಂ ವಿಸ್ಮಿತಶ್ಚ ಬಭೂವ ಹ ॥ ೩೮ ॥

ಯಶೋದಾ ಬಾಲಕಂ ನೀತ್ವಾ ಕ್ರೋಡೇ ಕೃತ್ವಾ ಸ್ತನಂ ದದೌ ।
ಮಂಗಲಂ ಕಾರಯಾಮಾಸ ವಿಪ್ರದ್ವಾರಾ ಶಿಶೋರ್ಮುನೇ ॥ ೩೯ ॥

ದದಾಹ ದೇಹಂ ತಸ್ಯಾಶ್ಚ ನಂದಃ ಸಾನಂದಪೂರ್ವಕಂ ।
ಚಂದನಾಗುರುಕಸ್ತೂರೀಸಮಂ ಸಂಪ್ರಾಪ್ಯ ಸೌರಭಂ ॥ ೪೦ ॥

॥ ನಾರದ ಉವಾಚ ॥

ಸಾ ವಾ ಕಾ ರಾಕ್ಷಸೀರೂಪಾ ಕಥಂ ಪುಣ್ಯವತೀ ಸತೀ ।
ಕೇನ ಪುಣ್ಯೇನ ತಂ ದೃಷ್ಟ್ವಾ ಜಗಾಮ ಕೃಷ್ಣಮಂದಿರಂ ॥ ೪೧ ॥

॥ ಶ್ರೀ ನಾರಾಯಣ ಉವಾಚ ॥

ಬಲಿಯಜ್ಞೇ ವಾಮನಸ್ಯ ದೃಷ್ಟ್ವಾ ರೂಪಂ ಮನೋಹರಂ ।
ಬಲಿಕನ್ಯಾ ರತ್ನಮಾಲಾ ಪುತ್ರಸ್ನೇಹಂ ಚಕಾರ ತಂ ॥ ೪೨ ॥

---

೩೮. ಅತ್ಯಾಶ್ಚರ್ಯಕರವಾದ ಈ ಸಂಗತಿಯನ್ನು ನೋಡಿ ಗೋಲೋಕದಲ್ಲಿದ್ದ ಸಕಲರೂ ವಿಸ್ಮಯಗೊಂಡರು ಕಂಸನೂ ಕೂಡ ಆ ಸಮಾಚಾರವನ್ನು ಕೇಳಿ ಅತಿ ವಿಸ್ಮಯಗೊಂಡನು.

೩೯. ಇತ್ತ ಯಶೋದೆಯು, ಬಾಲಕನನ್ನೆತ್ತಿಕೊಂಡು ಸ್ತನ್ಯಪಾನಮಾಡಿಸಿ, ಬ್ರಾಹ್ಮಣರಿಂದ ಆ ಶಿಶುವಿಗೆ ಮಂಗಳಮಾಡಿಸಿದಳು.

೪೦. ನಂದನೂ ಕೂಡ ಆ ಪೂತನಿಯ ಶರೀರವನ್ನು ಚಂದನ, ಅಗುರು ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದಲೇ ಸುಡಿಸಿದನು

೪೧. ನಾರದ:— ರಾಕ್ಷಸೀರೂಪಧಾರಿಣಿಯಾದ ಆ ಪೂತನಿ ಯಾರು ? ಯಾವ ಪುಣ್ಯಬಲದಿಂದ ಆಕೆಯು ಶ್ರೀಕೃಷ್ಣಪರಮಾತ್ಮನ ದರ್ಶನವನ್ನು ಪಡೆದಳು ?

೪೨. ಶ್ರೀ ನಾರಾಯಣ :—ಬಲಿಚಕ್ರವರ್ತಿಯನ್ನು ಸಂಹಾರಮಾಡಲು ಬಂದಿದ್ದ ವಾಮನಾವತಾರಿಯಾದ ಪರಮಾತ್ಮನ ಸುಂದರರೂಪವನ್ನು ನೋಡಿ, ಬಲಿಯ ಕನ್ಯೆಯಾದ ರತ್ನಮಾಲೆಯೆಂಬುವಳು ಆತನಲ್ಲಿ ಪುತ್ರವಾತ್ಸಲ್ಯವನ್ನಿಟ್ಟಳು.

ಮನಸಾ ಮಾನಸಂ ಚಕ್ರೇ ಪುತ್ರಸ್ಯ ಸದೃಶೋ ಮಮ ।
ಪಿಬೇದ್ಯದಿ ಸ್ತನಂ ಕೃಷ್ಣಃ ಕರೋಮಿ ತಂ ಚ ವಕ್ಷಸಿ ॥ ೪೩ ॥

ಹರಿಸ್ತನ್ಮಾನಸಂ ಜ್ಞಾತ್ವಾ ಪಪೌ ಜನ್ಮಾಂತರೇ ಸ್ತನಂ ।
ದದೌ ಮಾತೃಗತಿಂ ತಸ್ಯೈ ಕಾಮಪೂರಃ ಕೃಪಾನಿಧಿಃ ॥ ೪೪ ॥

ದತ್ವಾ ವಿಷಸ್ತನಂ ಕೃಷ್ಣಂ ಪೂತನಾ ರಾಕ್ಷಸೀ ಮುನೇ ।
ಭಕ್ತ್ಯಾ ಮಾತೃಗತಿಂ ಪ್ರಾಪ ಕಂ ಭಜಾಮ ವಿನಾ ಹರಿಂ ॥ ೪೫ ॥

ಇತ್ಯೇವಂ ಕಥಿತಂ ವಿಪ್ರ ಶ್ರೀಕೃಷ್ಣಗುಣಕೀರ್ತನಂ ।
ಪದೇ ಪದೇ ಸುಮಧುರಂ ಪ್ರವರಂ ಕಥಯಾಮಿ ತೇ ॥ ೪೬ ॥

ಇತಿ ಶ್ರೀ ಬ್ರಹ್ಮವೈವರ್ತಪುರಾಣೇ ಶ್ರೀಕೃಷ್ಣಜನ್ಮಖಂಡೇ
ಪೂತನಾಮೋಕ್ಷೋ ನಾಮ
ದಶಮೋಽಧ್ಯಾಯಃ

---

೪೩. ಅಲ್ಲದೆ 'ಶ್ರೀಕೃಷ್ಣಪರಮಾತ್ಮನು ನನಗೆ ಪುತ್ರನಮನಾಗಿ ಜನಿಸಿದಲ್ಲಿ ಅವನನ್ನೆತ್ತಿಕೊಂಡು ಅವನಿಗೆ ಸ್ತನ್ಯಪಾನಮಾಡಿಸುವೆನು' ಎಂದು ಮನಸ್ಸಿನಲ್ಲಿಯೇ ಭಾವಿಸಿದಳು.

೪೪ ಶ್ರೀಹರಿಯು ಅವಳ ಮನೋಽಭಿಪ್ರಾಯವನ್ನು ತಿಳಿದು, ದಯಾಪರನಾಗಿ, ಜನ್ಮಾಂತರದಲ್ಲಿ ಆಕೆಗೆ ಮಾತೃಭಾವವನ್ನು ದಯಪಾಲಿಸಿ ಸ್ತನ್ಯಪಾನ ಮಾಡಿದನು.

೪೫. ರಾಕ್ಷಸಿಯಾದ ಪೂತನಿಯು ಶ್ರೀಕೃಷ್ಣನಿಗೆ ವಿಷಸ್ತನ್ಯವನ್ನು ಪಾನ ಮಾಡಿಸಿ ಅವನಿಗೆ ಮಾತೆಯೆನಿಸಿದಳು. ಶ್ರೀಹರಿಯನ್ನುಳಿದು ಯಾರುತಾನೇ ಭಕ್ತರಿಗೆ ಮುಕ್ತಿ ಕೊಡಬಲ್ಲರು?

೪೬. ಎಲೈ ವಿಪ್ರೋತ್ತಮನೇ, ಈ ರೀತಿಯಾಗಿ ಶ್ರೀಕೃಷ್ಣನ ಅತ್ಯಂತ ಮಧುರವಾದ ಗುಣಗಳನ್ನು ವರ್ಣಿಸಿದೆನು. ಮುಂದೆಯೂ ವರ್ಣಿಸುವೆನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ಪೂತನಾಮೋಕ್ಷವೆಂಬ ಹತ್ತನೆಯ ಅಧ್ಯಾಯವು ಮುಗಿದುದು.



## ಹತ್ತನೆಯ ಅಧ್ಯಾಯದ ಸಾರಾಂಶ



ದೇವಕಿಯ ಸಹೋದರನಾದ ಕಂಸನು ಆಕೆಯ ಅಷ್ಟಮ ಗರ್ಭದಲ್ಲಿ ಅವತರಿಸುವ ಶಿಶುವನ್ನು ಸಂಹರಿಸಬೇಕೆಂದು ಕಾದಿದ್ದಂತೆಯೇ ಆ ಶಿಶುವು ತನ್ನ ಮಹಿಮೆಯಿಂದ ನಂದಗೋಕುಲಕ್ಕೆ ಬಂದು ಬೆಳೆಯುತ್ತಿರಲು, ಆ ಸಮಾಚಾರವನ್ನು ಅಶರೀರವಾಣಿಯ ಮೂಲಕ ಕೇಳಿದ ಕಂಸನು ಅದರ ಸಂಹಾರಕ್ಕಾಗಿ ತನ್ನ ತಂಗಿಯಾದ ಪೂತನಿಯನ್ನು ಕಳುಹಿಸಿದನು. ಆ ರಾಕ್ಷಸಿಯು ತನ್ನ ಮಾಯಾಶಕ್ತಿಯಿಂದ ದಿವ್ಯ ಸುಂದರರೂಪವನ್ನು ಧರಿಸಿ, ನಂದಗೋಕುಲಕ್ಕೆ ಬಂದು, ತಾನು ಮಥುರಾನಗರಿಯ ವಿಪ್ರನೊಬ್ಬನ ಪತ್ನಿಯೆಂದೂ ಶಿಶುವಾದ ಶ್ರೀಕೃಷ್ಣನನ್ನು ದರ್ಶನಮಾಡಿ ಆಶೀರ್ವದಿಸಿ ಹೋಗಲು ಬಂದಿರುವೆನೆಂದೂ ಹೇಳಿದಳು ಅದರಂತೆ ಯಶೋದೆಯು ಆಕೆಯ ಕೈಗೆ ಶಿಶುವನ್ನು ತಂದುಕೊಡಲು, ಆಕೆಯು ಆ ಶಿಶುವಿಗೆ ವಿಷಲಿಪ್ತವಾದ ತನ್ನ ಸ್ತನ್ಯವನ್ನು ಪಾನಮಾಡಿಸಿದಳು. ಮಹಾಮಹಿಮನಾದ ಆ ಶಿಶುವು ಆಕೆಯ ಸ್ತನ್ಯದೊಡನೆ ಪ್ರಾಣಗಳನ್ನೂ ಹೀರಿ ಆಕೆಯನ್ನು ಸಂಹರಿಸಿದನು.

(ಬಲಿಚಕ್ರವರ್ತಿಯ ಕನ್ಯೆಯಾದ ರತ್ನಮಾಲೆಯು ವಾಮನಾವತಾರಿಯಾದ ಪರಮಾತ್ಮನ ದಿವ್ಯಸುಂದರರೂಪವನ್ನು ನೋಡಿ ಆತನಲ್ಲಿ ಪುತ್ರವಾತ್ಸಲ್ಯವನ್ನಿಟ್ಟದ್ದರಿಂದ ಆಕೆಯೇ ಮುಂದೆ ಪೂತನಿಯಾಗಿ ಜನಿಸಿ, ಪರಮಾತ್ಮನಿಗೆ ಸ್ತನ್ಯಪಾನಮಾಡಿಸಿ ಮಾತೃಸದೃಶಳಾದಳು).



— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ಏಕಾದಶೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಏಕದಾ ಗೋಕುಲೇ ಸಾಧ್ವೀ ಯಶೋದಾ ನಂದಗೇಹಿನೀ ।
ಗೃಹಕರ್ಮಣಿ ಸಂಸಕ್ತಾ ಕೃತ್ವಾ ಬಾಲಂ ಸ್ವವಕ್ಷಸಿ ॥ ೧ ॥

ವಾತ್ಯಾರೂಪಂ ತೃಣಾವರ್ತಮಾಗಚ್ಛಂತಂ ಚ ಗೋಕುಲಂ ।
ಶ್ರೀಹರಿರ್ಮನಸಾ ಜ್ಞಾತ್ವಾ ಭಾರಯುಕ್ತೋ ಬಭೂವ ಹ ॥ ೨ ॥

ಭಾರಾಕ್ರಾಂತಾ ಯಶೋಧಾ ಚ ತತ್ಯಾಜ ಬಾಲಕಂ ತದಾ ।
ಶಯನಂ ಕಾರಯಿತ್ವಾ ಚ ಜಗಾಮ ಯಮುನಾಂ ಮುನೇ ॥ ೩ ॥

### ಹನ್ನೊಂದನೆಯ ಅಧ್ಯಾಯವು

೧. ಶ್ರೀನಾರಾಯಣ :—ಒಮ್ಮೆ ಸಾಧ್ವೀಶಿರೋಮಣಿಯೂ, ನಂದನ ಪತ್ನಿಯೂ ಆದ ಯಶೋದೆಯು ಗೋಕುಲದಲ್ಲಿ ಬಾಲಕನಾದ ಶ್ರೀಕೃಷ್ಣನನ್ನೆತ್ತಿಕೊಂಡು ಮನೆಗೆಲಸ ಮಾಡುತ್ತಿದ್ದಳು

೨. ಆಗ ಬಿರುಗಾಳಿಯಿಂದ ಹುಲ್ಲು ಸುತ್ತಿ ಸುತ್ತಿಕೊಂಡು ಬರುತ್ತಿದ್ದುದನ್ನು ಶ್ರೀಕೃಷ್ಣನು ಮನಸ್ಸಿನಲ್ಲಿಯೇ ತಿಳಿದು ಯಶೋದೆಯು ಎತ್ತಲಾರದಷ್ಟು ಭಾರವಾದನು

೩. ಅವನನ್ನು ಎತ್ತಲಾರದೆ ಯಶೋದೆಯು ಕೆಳಕ್ಕಿಳಿಸಿ ತೊಟ್ಟಿಲಿನಲ್ಲಿ ಮಲಗಿಸಿ, ಯಮುನಾನದಿಯ ಕಡೆಗೆ ಹೋದಳು.

ಏತಸ್ಮಿನ್ನಂತರೇ ತತ್ರವಾತ್ಯಾರೂಪಧರೋಽಸುರಃ ।
ಆದಾಯ ತಂ ಭ್ರಾಮಯಿತ್ವಾ ಗತ್ವಾ ಚ ಶತಯೋಜನಂ ॥ ೪ ॥

ಬಭಂಜ ವೃಕ್ಷಶಾಖಾಶ್ಚ ಹ್ಯಂಧೀಭೂತಂ ಚ ಗೋಕುಲಂ ।
ಚಕಾರ ಸದ್ಯೋ ಮಾಯಾವೀ ಪುನಸ್ತತ್ರ ಪಪಾತ ಹ ॥ ೫ ॥

ಅಸುರೋಽಪಿ ಹರಿಸ್ಪರ್ಶಾಜ್ಜಗಾಮ ಹರಿಮಂದಿರಂ ।
ಸುಂದರಂ ರಥಮಾರುಹ್ಯ ಕೃತ್ವಾ ಕರ್ಮಕ್ಷಯಂ ಸ್ವಕಂ ॥ ೬ ॥

ಪಾಂಡ್ಯದೇಶೋದ್ಭವೋ ರಾಜಾ ಶಾಪಾದ್ದುರ್ವಾಸಸೋಽಸುರಃ ।
ಶ್ರೀಕೃಷ್ಣಚರಣಸ್ಪರ್ಶಾದ್ಗೋಲೋಕಂ ಸ ಜಗಾಮ ಹ ॥ ೭ ॥

ವಾತ್ಯಾರೂಪೇ ಗತೇ ಗೋಪಾ ಗೋಪ್ಯಶ್ಚ ಭಯವಿಹ್ವಲಾಃ ।
ನ ದೃಷ್ಟ್ವಾ ಬಾಲಕಂ ತತ್ರ ಶಯಾನಂ ಶಯನೇ ಮುನೇ ॥ ೮ ॥

---

೪ ಆ ಸಮಯದಲ್ಲಿ ಬಿರುಗಾಳಿಯ ರೂಪವನ್ನು ಧರಿಸಿದ್ದ ಆ ರಾಕ್ಷಸನು, ಆ ಶಿಶುವನ್ನೆತ್ತಿಕೊಂಡು ನೂರು ಯೋಜನದೂರ ಹೊರಟುಹೋದನು.

೫. ಆ ಬಿರುಗಾಳಿಯಿಂದ ಮರದ ರೆಂಬೆಗಳೆಲ್ಲವೂ ಮುರಿದು ಬೀಳುತ್ತಿರಲು ಗೋಕುಲವು ಅಂಧಕಾರಮಯವಾಯಿತು. ಈ ರೀತಿಯಾಗಿ ಆ ಮಾಯಾವಿಯು ಆ ಶಿಶುವನ್ನು ಭ್ರಮಣಮಾಡಿಸಿ ಕೆಳಕ್ಕೆ ಕೆಡವಿದನು.

೬. ಅನಂತರ ಆ ರಾಕ್ಷಸನು ಶ್ರೀಹರಿಯ ಸಂಸ್ಪರ್ಶದಿಂದ ತನ್ನ ಪಾಪ ಕರ್ಮಗಳನ್ನು ಕಳೆದುಕೊಂಡು ಸುಂದರವಾದ ರಥವನ್ನೇರಿ ಶ್ರೀಹರಿಯ ಮಂದಿರಕ್ಕೆ ತೆರಳಿದನು

೭ ಪಾಂಡ್ಯದೇಶದ ರಾಜನು ದೂರ್ವಾಸಮಹರ್ಷಿಯ ಶಾಪದಿಂದ ಈ ರೀತಿ ಅಸುರನಾಗಿ ಜನಿಸಿ, ಶ್ರೀಕೃಷ್ಣಪರಮಾತ್ಮನ ಚರಣಸ್ಪರ್ಶದಿಂದ ಗೋಲೋಕಕ್ಕೆ ತೆರಳಿದನು.

೮ ಇತ್ತ ಬಿರುಗಾಳಿಯು ಶಾಂತವಾಗಲು, ಗೋಪಗೋಪಿಯರೆಲ್ಲರೂ ಭಯವಿಹ್ವಲರಾಗಿ, ತೊಟ್ಟಿಲಿನಲ್ಲಿ ಮಲಗಿದ್ದ ಶಿಶುವನ್ನು ಕಾಣದೆ ಚಿಂತಾಕ್ರಾಂತರಾದರು.

ಸರ್ವೇ ನಿಜಘ್ನುಃ ಸ್ವಂ ವಕ್ಷಃಸ್ಥಲಂ ಶೋಕಾಕುಲಾ ಭಯಾತ್ ।
ಕೇಚಿನ್ಮೂರ್ಛಾಮವಾಪುಶ್ಚ ರುರುದುಶ್ಚಾಪಿ ಕೇಚನ ॥ ೯ ॥

ಅನ್ವೇಷಣಂ ಪ್ರಕುರ್ವಂತೋ ದದೃಶುರ್ಬಾಲಕಂ ವ್ರಜೇ ।
ಧೂಲಿಧೂಸರಸರ್ವಾಂಗಂ ಪುಷ್ಪೋದ್ಯಾನಾಂತರಸ್ಥಿತಂ ॥ ೧೦ ॥

ಬಾಹ್ಯೈಕದೇಶೇ ಸರಸಸ್ತೀರೇ ನೀರಸಮನ್ವಿತೇ ।
ಪಶ್ಯಂತಂ ಗಗನಂ ಶಶ್ವದ್ವದಂತಂ ಭಯಕಾತರಂ ॥ ೧೧ ॥

ಗೃಹೀತ್ವಾ ಬಾಲಕಂ ನಂದಃ ಕೃತ್ವಾ ವಕ್ಷಸಿ ಸತ್ವರಂ ।
ದರ್ಶಂ ದರ್ಶಂ ಮುಖಂ ತಸ್ಯ ರುರೋದ ಚ ಶುಚಾನ್ವಿತಃ ॥ ೧೨ ॥

ಯಶೋದಾ ರೋಹಿಣೀ ಶೀಘ್ರಂ ದೃಷ್ಟ್ವಾ ಬಾಲಂ ರುರೋದ ಚ ।
ಕೃತ್ವಾ ವಕ್ಷಸಿ ತದ್ವಕ್ತ್ರಂ ಚುಚುಂಬ ಚ ಮುಹುರ್ಮುಹುಃ ॥ ೧೩ ॥

---

೯. ಎಲ್ಲರೂ ಶೋಕಪೀಡಿತರಾಗಿ ಎದೆ ಬಡಿದುಕೊಂಡು ಅಳಲಾರಂಭಿಸಿದರು. ಕೆಲವರು ಮೂರ್ಛೆಗೊಂಡರು. ಮತ್ತೆ ಕೆಲವರು ಬಿಕ್ಕಿಬಿಕ್ಕಿ ಅಳಲಾರಂಭಿಸಿದರು.

೧೦. ಅಲ್ಲಿ ಇಲ್ಲಿ ಹುಡುಕುತ್ತಾ ಬಂದು ಬಾಲಕನು ಗೋಕುಲದ ಪುಷ್ಪೋದ್ಯಾನದೊಳಗೆ ಧೂಳಿನಲ್ಲಿ ಹೊರಳಾಡುತ್ತಾ ಬಿದ್ದಿರುವುದನ್ನು ನೋಡಿದರು.

೧೧. ಕೆಸರಾಗಿರುವ ಸರಸ್ತೀರದ ಒಂದು ಭಾಗದಲ್ಲಿ ಮೇಲು ಮುಖನಾಗಿ ಆಕಾಶವನ್ನು ನೋಡುತ್ತಾ ಆ ಶಿಶುವು ಭಯಭ್ರಾಂತವಾಗಿ ಬಿದ್ದಿದ್ದಿತು.

೧೨. ಆಗ ನಂದಗೋಪನು ಆ ಶಿಶುವನ್ನೆತ್ತಿಕೊಂಡು ಎದೆಗಪ್ಪಿಕೊಂಡು ಅದರ ಮುಖವನ್ನು ಮತ್ತೆಮತ್ತೆ ನೋಡುತ್ತ ಅಳಲಾರಂಭಿಸಿದನು.

೧೩. ಯಶೋದೆ ಮತ್ತು ರೋಹಿಣಿಯರು ಕೂಡ ಅಳುತ್ತಾ ಓಡಿಬಂದು ಬಾಲಕನನ್ನು ಅಪ್ಪಿಕೊಂಡು ಮುದ್ದಾಡಿದರು.

ಮಂಗಲಂ ಕಾರಯಾಮಾಸ ಸ್ನಾಪಯಾಮಾಸ ಬಾಲಕಂ ।
ಸ್ತನಂ ದದೌ ಯಶೋದಾ ಚ ಪ್ರಸನ್ನವದನೇಕ್ಷಣಾ ॥ ೧೪ ॥

॥ ನಾರದ ಉವಾಚ ॥

ಕಥಂ ಶಶಾಪ ದುರ್ವಾಸಾಃ ಪಾಂಡ್ಯದೇಶೋದ್ಭವಂ ನೃಪಂ ।
ಸುವಿಚಾರ್ಯ ವದ ಬ್ರಹ್ಮನ್ನಿತಿಹಾಸಂ ಪುರಾತನಂ ॥ ೧೫ ॥

॥ ಶ್ರೀ ನಾರಾಯಣ ಉವಾಚ ॥

ಪಾಂಡ್ಯದೇಶಾಧಿಪೋ ರಾಜಾ ಸಹಸ್ರಾಕ್ಷಃ ಪ್ರತಾಪವಾನ್ ।
ಸ್ತ್ರೀಸಹಸ್ರಂ ಸಮಾದಾಯ ಕಾಮಬಾಣಪ್ರಪೀಡಿತಃ ॥ ೧೬ ॥

ಮನೋಹರೇ ನಿರ್ಜನೇ ಚ ಪರ್ವತೇ ಗಂಧಮಾದನೇ ।
ವಿಜಹಾರ ನದೀತೀರೇ ಪುಷ್ಪೋದ್ಯಾನೇ ಮನೋರಮೇ ॥ ೧೭ ॥

ನಾನಾಪ್ರಕಾರಶೃಂಗಾರಂ ವಿಪರೀತಾದಿಕಂ ನೃಪಃ
ನಖದಂತಕ್ಷತಾಂಗಂ ಚ ಕಾಮಿನೀನಾಂ ಚಕಾರ ಸಃ ॥ ೧೮ ॥

---

೧೪. ಅನಂತರ ಶಿಶುವಿಗೆ ಸ್ನಾನಮಾಡಿಸಿ ಮಂಗಳಕಾರ್ಯಗಳನ್ನು ಮಾಡಿಸಿ ಯಶೋದೆಯು ಪ್ರಸನ್ನಮುಖಿಯಾಗಿ ಶಿಶುವಿಗೆ ಸ್ತನ್ಯಪಾನಮಾಡಿಸಿದಳು.

೧೫. ನಾರದ :— ಎಲೈ ನಾರಾಯಣಮಹರ್ಷಿಯೇ, ಪಾಂಡ್ಯದೇಶದ ರಾಜನಿಗೆ ದೂರ್ವಾಸಮಹರ್ಷಿಯು ಶಾಪಕೊಡಲು ಕಾರಣವೇನು, ಪುರಾತನವಾದ ಈ ಇತಿಹಾಸವನ್ನು ಸಾವಧಾನದಿಂದ ನನಗೆ ಹೇಳು.

೧೬-೧೭. ಶ್ರೀನಾರಾಯಣ :—ಪಾಂಡ್ಯದೇಶದ ರಾಜನೂ ಪ್ರತಾಪಶಾಲಿಯೂ ಆದ ಸಹಸ್ರಾಕ್ಷನೆಂಬುವನು, ಕಾಮಬಾಣಪೀಡಿತನಾಗಿ, ಸಾವಿರಾರು ಸ್ತ್ರೀಯರೊಡಗೂಡಿ, ಮನೋಹರವೂ ನಿರ್ಜನವೂ ಆದ ಗಂಧಮಾದನ ಪರ್ವತದ, ನದೀ ತೀರದಲ್ಲಿದ್ದ ಪುಷ್ಪೋದ್ಯಾನದಲ್ಲಿ ಕ್ರೀಡಿಸುತ್ತಿದ್ದನು.

೧೮. ರಾಜನು ಆ ಸ್ತ್ರೀಯರೊಡನೆ ದಂತಕ್ಷತನಖಕ್ಷತಗಳಿಂದ ಕೂಡಿದ ವಿಪರೀತ ರತವೇ ಮುಂತಾದ ನಾನಾವಿಧ ಶೃಂಗಾರಕ್ರೀಡೆಗಳನ್ನಾಡಿದನು

ಕೃತ್ವಾ ಮೂರ್ತಿಸಹಸ್ರಂ ಚ ಯೋಗೀಂದ್ರೋ ನೃಪತೀಶ್ವರಃ ।
ಕೃತ್ವಾ ಸ್ಥಲವಿಹಾರಂಚ ಜಲಕ್ರೀಡಾಂ ಚಕಾರ ಹ ॥ ೧೯ ॥

ನಾರ್ಯೋ ವಿವಸನಾಃ ಸರ್ವಾ ನಗ್ನಾಶ್ಚ ನೃಪಯೋಷಿತಃ
ವಿಜಹುಶ್ಚ ಪುಷ್ಪಭದ್ರಾನದೀತೀರೇ ಮನೋಹರೇ ॥ ೨೦ ॥

ಏತಸ್ಮಿನ್ನಂತರೇ ತತ್ರ ಸಮಾಯಾತೋ ಮಹಾಮುನಿಃ ।
ಶಿಷ್ಯಲಕ್ಷ್ಯೈಃ ಪರಿವೃತೋ ಗಚ್ಛನ್ ಶೈಂಕರಂ ಪ್ರತಿ ॥ ೨೧ ॥

ದೃಷ್ಟ್ವಾ ಮುನಿಂ ಮಹಾಮತ್ತೋ ನೋತಸ್ಥೌ ನ ನನಾಮ ಹ ।
ವಾಚಾ ಹಸ್ತೇನ ರಾಜಾ ಚ ಸಂಭಾಷಾಂ ನ ಚಕಾರ ಹ ॥ ೨೨ ॥

ದೃಷ್ಟ್ವಾ ಚುಕೋಪ ನೃಪತಿಂ ಶಶಾಪ ಸ್ಫುರಿತಾಧರಃ ।
ಅಸುರೋ ಭವ ಪಾಪಿಷ ಯೋಗಾದ್ಭ್ರಷ್ಟೋ ಭುವಂ ವ್ರಜ ॥ ೨೩ ॥

---

೧೯. ಯೋಗಿಶ್ರೇಷ್ಠನಾದ ಆ ರಾಜನು ಸಾವಿರಾರು ಶರೀರಗಳನ್ನು ಧರಿಸಿ ಸ್ಥಲವಿಹಾರಕ್ಕೆ ಮೊದಲು ಮಾಡಿದನು.

೨೦. ಆಗ ಅವನ ಅಂತಃಪುರದ ಸ್ತ್ರೀಯರೆಲ್ಲರೂ, ಉಟ್ಟ ಬಟ್ಟೆಯನ್ನ ಳಿದು, ಮನೋಹರವಾದ ಪುಷ್ಪಭದ್ರಾನದಿಗಿಳಿದು ಜಲಕ್ರೀಡೆಯಾಡುತ್ತಿದ್ದರು

೨೧. ಅಷ್ಟು ಹೊತ್ತಿಗೆ ಸರಿಯಾಗಿ ಮಹರ್ಷಿಯಾದ ದೂರ್ವಾಸನು ಲಕ್ಷ ಶಿಷ್ಯರೊಡಗೂಡಿ ಶಂಕರನಾಲಯಕ್ಕೆ ಹೋಗಲು ಆ ಮಾರ್ಗವಾಗಿ ಬಂದನು.

೨೨. ಶೃಂಗಾರಮದದಿಂದ ಭರಿತನಾದ ಆ ರಾಜನು ಮುನಿಯನ್ನು ನೋಡಿಯೂ ಪ್ರತ್ಯುತ್ಥಾನಮಾಡಿ ನಮಸ್ಕರಿಸಲಿಲ್ಲ. ಅಷ್ಟೇಕೆ ಆ ರಾಜನು ದೂರ್ವಾಸ ಮಹರ್ಷಿಯನ್ನು ಮಾತಿನಿಂದಲೂ ಗೌರವಿಸಲಿಲ್ಲ.

೨೩. ಈ ರೀತಿಯಾದ ರಾಜನನ್ನು ನೋಡಿ ಕುಪಿತನಾದ ದೂರ್ವಾಸನು 'ಎಲೈ ಪಾಪಿಷ್ಠನೇ, ನೀನು ಯೋಗಭ್ರಷ್ಟನಾಗಿ ಭೂಮಿಯಲ್ಲಿ ರಾಕ್ಷಸನಾಗಿ ಹುಟ್ಟು' ಎಂದು ಶಪಿಸಿದನು.

ಭಾರತೇ ಲಕ್ಷವರ್ಷಂ ಚ ಸ್ಥಾತವ್ಯಂ ತೇ ನರಾಧಮ ।
ತತೋ ಹರಿಪದಸ್ಪರ್ಶಾದ್ಗೋಲೋಕಂ ಯಾಸ್ಯಸಿ ಧ್ರುವಂ ॥ ೨೪ ॥

ಸ್ಥಾನೇ ಸ್ಥಾನೇ ಹೇ ಮಹಿಷ್ಯೋ ಜನಿಂ ಲಭತ ಭಾರತೇ ।
ರಾಜೇಂದ್ರಗೇಹೇ ರಾಜೇಂದ್ರಾದ್ಭವಿಷ್ಯಥ ಮನೋಹರಾಃ ॥ ೨೫ ॥

ಇತ್ಯುಕ್ತ್ವಾ ತು ಮುನೀಂದ್ರಸ್ತು ಜಗಾಮ ಶಂಕರಾಲಯಂ ।
ಹಾ ಹಾ ಶಬ್ದಂ ವಿಚಕ್ರುಶ್ಚ ಶಿಷ್ಯಸಂಘಾಃ ಕೃಪಾಲವಃ ॥ ೨೬ ॥

ಗತೇ ಮುನೀಂದ್ರೇ ರಾಜೇಂದ್ರೋ ರುರೋದ ಚ ಸರಿತ್ತಟೇ ।
ರುರೂದೂ ರಮಣೀಯಾಶ್ಚ ರಮಣ್ಯೋ ವಿರಹಾತುರಾಃ ॥ ೨೭ ॥

ಹೇ ನಾಥ ರಮಣಶ್ರೇಷ್ಠೇತ್ಯುಚ್ಚಾರ್ಯ ಚ ಪುನಃ ಪುನಃ ।
ತ್ವಾಂ ವಿನಾ ವಾ ಕ್ವ ಯಾಸ್ಯಾಮೋ ವಯಂ ತ್ವಂ ವಾ ಕ್ವ ಯಾಸ್ಯಸಿ ॥ ೨೮ ॥

---

೨೪. 'ಎಲೈ ನರಾಧಮನೇ, ಈ ರೀತಿ ರಾಕ್ಷಸನಾಗಿ ಹುಟ್ಟುವ ನೀನು ಭಾರತದಲ್ಲಿ ಲಕ್ಷವರ್ಷಗಳ ಕಾಲ ಇದ್ದು ಶ್ರೀಹರಿಯ ಪಾದಸ್ಪರ್ಶದಿಂದ ಗೋಲೋಕಕ್ಕೆ ತೆರಳುವೆ.'

೨೫ 'ಎಲೌ ರಾಣಿಯರೇ, ನೀವೂ ಕೂಡ, ನಿಮನಿಮಗೆ ಯೋಗ್ಯವಾದ ರಾಜಮಂದಿರದಲ್ಲಿ ರಾಜಕನ್ನಿಕೆಯರಾಗಿ ಜನ್ಮವೆತ್ತುವಿರಿ.'

೨೬. ಹೀಗೆ ಹೇಳಿ ಮುನಿಶ್ರೇಷ್ಠನಾದ ದೂರ್ವಾಸನು ಶಂಕರನಾಲಯಕ್ಕೆ ತೆರಳಲು, ದಯಾಮಯರಾದ ಅವನ ಶಿಷ್ಯಂದಿರು ಬಹಳವಾಗಿ ವ್ಯಥೆಪಟ್ಟರು.

೨೭. ಮುನಿಶ್ರೇಷ್ಠನು ಹೊರಟುಹೋದನಂತರ ಆ ರಾಜನು ತನ್ನ ಅವಿವೇಕವನ್ನು ಅರಿತುಕೊಂಡು ಆ ಹೊಳೆಯ ದಡದಲ್ಲಿ ಗೋಳಾಡಿದನು ಆ ಮಹಿಷಿಯರೂ ಕೂಡ ವಿರಹಾತುರರಾಗಿ ಗೋಳಾಡಲಾರಂಭಿಸಿದರು.

೨೮. 'ಎಲೈ ರತಿಕ್ರೀಡಾಚತುರನಾದ ಪತಿದೇವನೇ, ನಿನ್ನನ್ನಗಲಿ ನಾವೆಲ್ಲಿಗೆ ಹೋಗೋಣ. ನೀನು ತಾನೆ ನಮ್ಮನ್ನು ಬಿಟ್ಟು ಎಲ್ಲಿಗೆ ಹೋಗುವೆ?

ವಯಂ ನೋ ವಿಹರಿಷ್ಯಾಮಸ್ತ್ವಯಾ ಸಾರ್ಧಂ ಸುನಿರ್ಜನೇ ।
ನ ಕರಿಷ್ಯಸಿ ರಾಜ್ಯಂ ತ್ವಂ ನ ಯಾಸ್ಯಾಮೋ ಗೃಹಂ ವಯಂ ॥ ೨೯ ॥

ಶರಚ್ಚಂದ್ರಪ್ರಭಾಮುಷ್ಟಂ ನ ದ್ರಕ್ಷ್ಯಾಮೋ ಮುಖಂ ತವ ।
ಪ್ರಸಾರಿತಾಭ್ಯಾಂ ಬಾಹುಭ್ಯಾಂ ನಾನಯಿಷ್ಯಾಮ ಇತ್ಯತಃ ॥ ೩೦ ॥

ಇತ್ಯುಕ್ತ್ವಾ ರುರುದುಃ ಸರ್ವಾಃ ಪುರಸ್ಕೃತ್ಯ ನರಾಧಿಪಂ ।
ಮೂರ್ಛಾಮವಾಪುಶ್ಚರಣಂ ದೃತ್ವಾ ರಾಜ್ಞಃ ಸರಿತ್ತಟೇ ॥ ೩೧ ॥

ರಾಜಾಗ್ನಿಕುಂಡಮಾಧಾಯ ನಾರೀಭಿಃ ಸಹ ನಾರದ ।
ಸ್ಮೃತ್ವಾ ಹರಿಪದಾಂಭೋಜಂ ಜ್ವಲದಗ್ನಿಂ ವಿವೇಶ ಹ ॥ ೩೨ ॥

ಹಾಹಾಕಾರಂ ಸುರಾಃ ಸರ್ವೇ ವಿಚಕ್ರುರ್ಗಗನೇ ಸ್ಥಿತಾಃ ।
ಇತ್ಯೂಚುರ್ಮುನಯಶ್ಚೈವಂ ದೈವಂ ಚ ಬಲವತ್ತರಂ ॥ ೩೩ ॥

---

೨೯. ಇನ್ನು ಮೇಲೆ ನಾವು ನಿನ್ನೊಡನೆ ನಿರ್ಜನಪ್ರದೇಶದಲ್ಲಿ ಕ್ರೀಡಿಸುವಂತಿಲ್ಲ. ನೀನೂ ರಾಜ್ಯವನ್ನಾಳುವಂತಿಲ್ಲ. ನಾವೂ ನಮ್ಮ ಮನೆಗೆ ಹಿಂತಿರುಗುವಂತಿಲ್ಲ.

೩೦. ಶರಚ್ಚಂದ್ರನ ಕಾಂತಿಯನ್ನಲ್ಲಗಳೆಯುವ ನಿನ್ನ ಮುಖವನ್ನು ನಾವು ನೋಡುವಂತಿಲ್ಲ. ಇನ್ನು ಮುಂದೆ ನಮ್ಮ ಬಾಹುಗಳನ್ನು ನೀಡಿ ನಿನ್ನನ್ನು ಆಲಂಗಿಸಿಕೊಳ್ಳುವಂತೆಯೂ ಇಲ್ಲ?

೩೧. ಈ ರೀತಿಯಾಗಿ ಆ ರಾಣಿಯರು ರಾಜನ ಮುಂದೆ ಗೋಳಾಡಿ, ಅವನ ಕಾಲುಗಳನ್ನು ಹಿಡಿದುಕೊಂಡು ಆ ನದಿಯ ತೀರದಲ್ಲಿಯೇ ಮೂರ್ಛೆಗೊಂಡರು.

೩೨. ಎಲೈ ನಾರದನೇ, ಇತ್ತ ರಾಜನೂ ಕೂಡ ಅಗ್ನಿಕುಂಡವನ್ನು ಸಿದ್ಧಗೊಳಿಸಿ, ತನ್ನ ರಾಣಿಯರೊಡನೆ, ಶ್ರೀಹರಿಯ ಪಾದಗಳನ್ನು ಸ್ಮರಿಸುತ್ತ ಅಗ್ನಿಪ್ರವೇಶಮಾಡಿದನು.

೩೩. ಆಗ ಅಂತರಿಕ್ಷದಲ್ಲಿ ನೋಡುತ್ತಿದ್ದ ದೇವತೆಗಳೆಲ್ಲರೂ ಹಾಹಾಕಾರ ಮಾಡಿದರು. ಮುನಿಗಳೆಲ್ಲರೂ ಮಾನುಷಶಕ್ತಿಗಿಂತ ದೈವಶಕ್ತಿಯೇ ಬಲಿಷ್ಠವಾದುದೆಂದರು.

ಸ ಚ ರಾಜಾ ತೃಣಾವರ್ತೋ ಜಗಾಮ ಹರಿಮಂದಿರಂ ।
ಮಹಿಷ್ಯೋ ಭಾರತೇ ವರ್ಷೇ ಲೇಭಿರೇ ಜನ್ಮ ವಾಂಛಿತಂ ॥ ೩೪ ॥

ಇತ್ಯೇವಂ ಕಥಿತಂ ಸರ್ವಂ ಹರೇರ್ಮಾಹಾತ್ಮ್ಯಮುತ್ತಮಂ ।
ಮೋಕ್ಷಣಂ ನೃಪತೇಶ್ಚೈವ ಮುನೀಂದ್ರಶಾಪಹೇತುಕಂ ॥ ೩೫ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣ ನಾರದಸಂವಾದೇ ತೃಣಾವರ್ತವಧೋ ನಾಮ
ಏಕಾದಶೋಽಧ್ಯಾಯಃ

---

೩೪ ಆ ರಾಜನೇ ತೃಣಾವರ್ತರೂಪವನ್ನು ತಾಳಿ ಶ್ರೀಹರಿಯ ಮಂದಿರಕ್ಕೆ ಹೋದನು. ಅವನ ಮಹಿಷಿಯರೂ ಕೂಡ ಭಾರತವರ್ಷದಲ್ಲಿ ತಮಗಭಿಲಷಿತವಾದ ಜನ್ಮವನ್ನು ಪಡೆದರು.

೩೫. ಈ ರೀತಿಯಾಗಿ ಆ ರಾಜನಿಗೆ ಮುನಿಶಾಪ ಬಂದುದನ್ನೂ ಶ್ರೀಹರಿಯ ಸಂಪರ್ಕದ ಮಹಿಮೆಯಿಂದ ಅವನಿಗೆ ಶಾಪ ವಿಮೋಚನೆಯಾದುದನ್ನೂ ನಿನಗೆ ಹೇಳಿದೆನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ತೃಣಾವರ್ತವಧವೆಂಬ ಹನ್ನೊಂದನೆಯ ಅಧ್ಯಾಯವು
ಮುಗಿದುದು.



## ಹನ್ನೊಂದನೆಯ ಅಧ್ಯಾಯದ ಸಾರಾಂಶ

ಪಾಂಡ್ಯದೇಶದ ರಾಜನಾದ ಸಹಸ್ರಾಕ್ಷನೆಂಬುವನು ಗಂಧಮಾದನ ಪರ್ವತದ ತಪ್ಪಲಿನಲ್ಲಿದ್ದ ಪುಷ್ಪೋದ್ಯಾನದಲ್ಲಿ ತನ್ನ ಸಾವಿರಾರು ಪತ್ನಿಯರೊಡನೆ ರತಿಕ್ರೀಡೆ ಯಾಡಿ ತೃಪ್ತನಾಗದೆ, ಸಮೀಪದಲ್ಲಿದ್ದ ಪುಷ್ಪಭದ್ರಾನದಿಯಲ್ಲಿ ಜಲಕ್ರೀಡೆಯಾಡು ತ್ತಿದ್ದಾಗ, ದೂರ್ವಾಸಮಹರ್ಷಿಯು ತನ್ನ ಶಿಷ್ಯರೊಡನೆ ಶಿವನಮಂದಿರಕ್ಕೆ ಹೋಗಲು ಆ ಮಾರ್ಗವಾಗಿ ಬಂದನು. ಕಾಮಾಂಧನಾದ ಆ ರಾಜನು ದೂರ್ವಾಸಮಹರ್ಷಿ ಯನ್ನು ಸತ್ಕರಿಸದಿರಲು ಕುಪಿತನಾದ ಮಹರ್ಷಿಯು ಅವನನ್ನು ಕುರಿತು 'ನೀನು ಯೋಗಭ್ರಷ್ಟನಾಗಿ ರಾಕ್ಷಸನಾಗಿ ಹುಟ್ಟು' ಎಂದು ಶಪಿಸಿದನು. ಕೂಡಲೇ ಆ ರಾಜನು ಅಗ್ನಿಪ್ರವೇಶಮಾಡಿ ತೃಣಾವರ್ತನೆಂಬ ರಾಕ್ಷಸನಾಗಿ ಹುಟ್ಟಿದನು

ಒಮ್ಮೆ ಯಶೋದೆಯು ಶಿಶುವಾದ ಶ್ರೀಕೃಷ್ಣನನ್ನು ಎತ್ತಿಕೊಂಡಿದ್ದಾಗ, ಆ ಶಿಶುವು ಮಾಯಾಶಕ್ತಿಯಿಂದ ಬಹಳ ಭಾರವಾಗಲು ಅವನ್ನು ತೊಟ್ಟಿಲಿನಲ್ಲಿ ಮಲಗಿಸಿ ಯಶೋದೆಯು ಗೃಹಕಾರ್ಯದಲ್ಲಿ ತೊಡಗಿದಳು. ಆಗ ತೃಣಾವರ್ತನು ಬಿರುಗಾಳಿಯ ರೂಪದಲ್ಲಿ ಬಂದು ಆ ಶಿಶುವನ್ನು ಹಾರಿಸಿಕೊಂಡು ಹೋಗಿ ಪುಷ್ಪೋದ್ಯಾನದಲ್ಲಿ ಕೆಡವಿ, ತಾನು ಶ್ರೀಹರಿಯ ಸ್ಪರ್ಶದಿಂದ ಶಾಪವಿಮುಕ್ತನಾಗಿ, ಹರಿಚರಣಸ್ಪರ್ಶದಿಂದ ಮೋಕ್ಷವನ್ನು ಹೊಂದಿದನು. ಇತ್ತ ನಂದಯಶೋದೆಯರು ಶಿಶುವನ್ನು ಹುಡುಕಿ ಮನೆಗೆ ಕರೆತಂದು ಮಂಗಳ ಕಾರ್ಯಗಳನ್ನು ಮಾಡಿದರು.



— ॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ದ್ವಾದಶೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಏಕದಾ ಮಂದಿರೇ ನಂದಪತ್ನೀ ಸಾಽऽನಂದಪೂರ್ವಕಂ ।
ಕೃತ್ವಾ ವಕ್ಷಸಿ ಗೋವಿಂದಂ ಕ್ಷುಧಿತಂ ಚ ಸ್ತನಂ ದದೌ ॥ ೧ ॥

ಏತಸ್ಮಿನ್ನಂತರೇ ಗೋಪ್ಯ ಆಜಗ್ಮುರ್ನಂದಮಂದಿರಂ ।
ಸ್ಥವಿರಾಶ್ಚ ವಯಸ್ಯಾಶ್ಚ ಬಾಲಿಕಾ ಬಾಲಕಾನ್ವಿತಾಃ ॥ ೨ ॥

ಅತೃಪ್ತಂ ಬಾಲಕಂ ಶೀಘ್ರಂ ಸಂನ್ಯಸ್ಯ ಶಯನೇ ಸತೀ ।
ಪ್ರಣನಾಮ ಸಮುತ್ಥಾಯ ಕರ್ಮಣ್ಯೌತ್ಥಾನಿಕೇ ಮುದಾ ॥ ೩ ॥

---

### ಹನ್ನೆರಡನೆಯ ಅಧ್ಯಾಯವು

೧. ಶ್ರೀನಾರಾಯಣ :— ಒಮ್ಮೆ ನಂದಪತ್ನಿಯಾದ ಯಶೋದೆಯು ಮನೆಯಲ್ಲಿ ಹಸಿವುಗೊಂಡ ಶಿಶುವನ್ನು ಸಂತೋಷದಿಂದೆತ್ತಿಕೊಂಡು ಸ್ತನ್ಯಪಾನಮಾಡಿಸುತ್ತಿದ್ದಳು.

೨. ಅಷ್ಟುಹೊತ್ತಿಗೆ ಅನೇಕ ಗೋಪಿಯರು ವೃದ್ಧಸ್ತ್ರೀಯರು ಮತ್ತು ಹುಡುಗ ಹುಡುಗಿಯರೂ ನಂದನ ಮಂದಿರಕ್ಕೆ ಬಂದರು.

೩. ಕೂಡಲೇ ಸ್ತನ್ಯಪಾನದಿಂದ ಸಂತೃಪ್ತನಾಗದಿರುವ ಶಿಶುವನ್ನು ಹಾಗೆಯೇ ಹಾಸಿಗೆಯ ಮೇಲೆ ಮಲಗಿಸಿ ಯಶೋದೆಯು ಪ್ರತ್ಯುತ್ಥಾನಮಾಡಿ ಅವರೆಲ್ಲರಿಗೂ ನಮಸ್ಕರಿಸಿದಳು.

ತೈಲಸಿಂದೂರತಾಂಬೂಲಂ ದದೌ ತಾಭ್ಯೋ ಮುದಾನ್ವಿತಾ ।
ಮಿಷ್ಟವಸ್ತೂನಿ ವಸ್ತ್ರಾಣಿ ಭೂಷಣಾನಿ ಚ ಗೋಪಿಕಾ ॥ ೪ ॥

ಏತಸ್ಮಿನ್ನಂತರೇ ಕೃಷ್ಣೋ ರುರೋದ ಕ್ಷುಧಿತಸ್ತದಾ ।
ಪ್ರೇರಯಿತ್ವಾ ಸ ಚರಣಂ ಮಾಯೇಶೋ ಮಾಯಯಾ ವಿಭುಃ ॥ ೫ ॥

ಪಪಾತ ಚರಣಂ ತಸ್ಯ ಪ್ರವೀಣೇ ಶಕಟೇ ಮುನೇ ।
ವಿಶ್ವಂಭರಪದಾಘಾತಾತ್ತಚ್ಚ ಚೂರ್ಣಂ ಬಭೂವ ಹ ॥ ೬ ॥

ಬಭಂಜ ಶಕಟಂ ಪೇತುರ್ಭಗ್ನಕಾಷ್ಠಾನಿ ತತ್ರ ವೈ ।
ಪಪಾತ ದಧಿ ದುಗ್ಧಂ ಚ ನವನೀತಂ ಘೃತಂ ಮಧು ॥ ೭ ॥

ದೃಷ್ಟ್ವಾಽಽಶ್ಚರ್ಯಂ ಗೋಪಿಕಾಶ್ಚ ದುದ್ರುವುರ್ಬಾಲಕಂ ಭಯಾತ್ ।
ದದೃಶುರ್ಭಗ್ನಶಕಟಮಿಂಧನಾಭ್ಯಂತರೇ ಶಿಶುಂ ॥ ೮ ॥

---

೪. ಅವರೆಲ್ಲರಿಗೂ ಸಂತೋಷದಿಂದ ಅರಿಸಿನ, ಎಣ್ಣೆ, ತಾಂಬೂಲಗಳನ್ನು ಕೊಟ್ಟು, ಮಿಷ್ಟಾಹಾರದಿಂದಲೂ, ವಸ್ತ್ರಾಲಂಕಾರಗಳಿಂದಲೂ ಸಂತೋಷಪಡಿಸಿದಳು.

೫. ಇತ್ತ ಮಾಯೆಗೊಡೆಯನಾದ ಶ್ರೀಕೃಷ್ಣನು ಹಸಿವಿನಿಂದ ಕೈಕಾಲುಗಳನ್ನು ಬಡಿಯುತ್ತಾ ಅಳಲಾರಂಭಿಸಿದನು.

೬. ಎಲೈ ಮುನಿಯೇ, ಆ ಕಾಲುಗಳ ಏಟು ಶಕಟ (ಬಂಡಿ) ರೂಪದಿಂದ ಶಿಶುವನ್ನು ಸಂಹರಿಸಲು ಬಂದಿದ್ದ ರಾಕ್ಷಸನಿಗೆ ಬಿದ್ದಿತು. ವಿಶ್ವಂಭರನ ಕಾಲಿನೇಟಿನಿಂದ ಅದು ಭಗ್ನವಾಯಿತು.

೭. ಗಾಡಿಯು ಮುರಿದು, ಅದರ ಮರವೆಲ್ಲ ಚೂರುಚೂರಾಗಲು ಅದರಲ್ಲಿದ್ದ ಹಾಲು, ಮೊಸರು, ಬೆಣ್ಣೆ, ತುಪ್ಪ, ಜೇನು, ಮುಂತಾದುವೆಲ್ಲವೂ ಚೆಲ್ಲಿಹೋದವು.

೮ ಈ ಆಶ್ಚರ್ಯವನ್ನು ನೋಡಿ ಗೋಪಿಯರೆಲ್ಲರೂ ಭಯಗೊಂಡು ಆ ಬಾಲಕನಿದ್ದೆಡೆಗೆ ಓಡಿಬಂದು ಮುರಿದ ಗಾಡಿಯ ಮರದ ಸಂದಿಯಲ್ಲಿ ಆ ಶಿಶುವಿರುವುದನ್ನು ನೋಡಿದರು.

ಭಗ್ನಭಾಂಡಸಮೂಹಂ ಚ ಪತಿತಂ ಬಹುಗೋರಸಂ ।
ಪ್ರೇರಯಿತ್ವಾ ತು ಕಾಷ್ಠಾನಿ ಜಗ್ರಾಹ ಬಾಲಕಂ ಭಿಯಾ ॥ ೯ ॥

ಮಾಯಾರಕ್ಷಿತಸರ್ವಾಂಗಂ ರುದಿತಂ ಕ್ಷುಧಿತಂ ಕ್ಷುಧಾ ।
ಸ್ತನಂ ದದೌ ಯಶೋದಾ ತಂ ರುರೋದ ಚ ಭೃಶಂ ಶುಚಾ ॥ ೧೦ ॥

ಪಪ್ರಚ್ಛುರ್ಬಾಲಕಾನ್ಗೋಪಾ ಬಭಂಜ ಶಕಟಂ ಕಥಂ ।
ಕೇಚಿದ್ಧೇತುಂ ನ ಪಶ್ಯಾಮಃ ಸಹಸೇತಿ ಕಿಮದ್ಭುತಂ ॥ ೧೧ ॥

ಇತ್ಯೂಚುರ್ಬಾಲಕಾಃ ಸರ್ವೇ ಗೋಪಾಃ ಶೃಣುತ ಮದ್ವಚಃ ।
ಶ್ರೀಕೃಷ್ಣಸ್ಯ ಪದಾಘಾತಾದ್ಬಭಂಜ ಶಕಟಂ ಧ್ರುವಂ ॥ ೧೨ ॥

ಶ್ರುತ್ವಾ ತದ್ವಚನಂ ಗೋಪಾ ಗೋಪ್ಯಶ್ಚ ಜಹಸುರ್ಮುದಾ ।
ನ ಹಿ ಜಗ್ಮುಃ ಪ್ರತೀತಿಂ ಚ ಮಿಥ್ಯೇತ್ಯೂಚುರ್ವ್ರಜೇ ಪ್ರಜಾಃ ॥ ೧೩ ॥

---

೯. ಒಡೆದ ಮಡಕೆಗಳ ಚೂರೂ, ಹಾಲೂ ಎರಚಾಡಿದ್ದಿತು. ಗಾಡಿಯ ಮರದ ಚೂರುಗಳನ್ನೆಲ್ಲ ತೆಗೆದುಹಾಕಿ ಯಶೋದೆಯು ಬಾಲಕನನ್ನು ಎತ್ತಿಕೊಂಡಳು.

೧೦. ಮಾಯಾಮಹಿಮೆಯಿಂದ ಆ ಬಾಲಕನ ಅವಯವಗಳಿಗೇನೂ ಘಾಯವಾಗಿರಲಿಲ್ಲ. ಹಸಿವಿನಿಂದ ಅಳುತ್ತಿರುವ ಶಿಶುವನ್ನೆತ್ತಿಕೊಂಡು ಸ್ತನ್ಯವನ್ನೂಡಿಸಿ ಯಶೋದೆಯು ತನ್ನ ಔದಾಸೀನ್ಯಕ್ಕಾಗಿ ಬಹಳ ಮರುಗಿದಳು.

೧೧. ಆ ಸಮಯದಲ್ಲಿ ಗೋಪಾಲಕರೆಲ್ಲರೂ ಅಲ್ಲಿಗೆ ಬಂದು ಅಲ್ಲಿದ್ದ ಬಾಲಕರನ್ನು ಕುರಿತು ಶಿಶುವಾದ ಕೃಷ್ಣನು ಬಂಡಿಯನ್ನು ಮುರಿದುದೆಂತು ? ಯಾವ ಕಾರಣವೂ ಇಲ್ಲದೆ ಇದ್ದಕ್ಕಿದ್ದಂತೆಯೇ ಮುರಿದಿರುವುದು ಆಶ್ಚರ್ಯವಲ್ಲವೇ ? ಎಂದು ಕೇಳಿದರು.

೧೨. ಅದಕ್ಕೆ 'ಎಲೈ ಗೋಪರೇ, ನಮ್ಮ ನುಡಿಗಳನ್ನು ಕೇಳಿ. ಶ್ರೀಕೃಷ್ಣನ ಪಾದಘಾತದಿಂದ ಬಂಡಿಯು ಮುರಿಯಿತು' ಎಂದು ಆ ಬಾಲಕರು ಉತ್ತರವಿತ್ತರು.

೧೩. ಆ ಮಾತನ್ನು ಕೇಳಿದ ಗೋಪಗೋಪಿಯರೆಲ್ಲರೂ ಸಂತೋಷದಿಂದ ನಕ್ಕು ನಲಿದಾಡಿದರು. ಗೋಕುಲದಲ್ಲಿದ್ದ ಜನರೆಲ್ಲರೂ ಈ ವಿಷಯವನ್ನು ನಂಬದೆ 'ಇದು ಸುಳ್ಳು' ಎಂದು ಹೇಳಿದರು.

ಶಿಶೋಃ ಸ್ವಸ್ತ್ಯಯನಂ ಕಾರ್ಯಂ ಚಕ್ರುರ್ಬ್ರಾಹ್ಮಣಪುಂಗವಾಃ ।
ಹಸ್ತಂ ದತ್ವಾ ಶಿಶೋರ್ಗಾತ್ರೇ ಪಪಾಠ ಕವಚಂ ದ್ವಿಜಃ ॥ ೧೪ ॥

ವದಾಮಿ ತತ್ತೇ ವಿಪ್ರೇಂದ್ರ ಕವಚಂ ಸರ್ವರಕ್ಷಣಂ ।
ಯದ್ದತ್ತಂ ಮಾಯಯಾ ಪೂರ್ವಂ ಬ್ರಹ್ಮಣೇ ನಾಭಿಪಂಕಜೇ ॥ ೧೫ ॥

ನಿದ್ರಿತೇ ಜಗತೀನಾಥೇ ಜಲೇ ಚ ಜಲಶಾಯಿನಿ ।
ಭೀತಾಯ ಸ್ತುತಿಕರ್ತ್ರೇ ಚ ಮಧುಕೈಟಭಯೋರ್ಭಯಾತ್ ॥ ೧೬ ॥

॥ ಯೋಗನಿದ್ರೋವಾಚ ॥

ದೂರೀಭೂತಂ ಕುರು ಭಯಂ ಭಯಂ ಕಿಂ ತೇ ಹರೌ ಸ್ಥಿತೇ ।
ಸ್ಥಿತಾಯಾಂ ಮಯಿ ಚ ಬ್ರಹ್ಮನ್ಸುಖೀ ತಿಷ್ಠ ಜಗತ್ಪತೇ ॥ ೧೭ ॥

ಶ್ರೀಹರಿಃ ಪಾತು ತೇ ವಕ್ತ್ರಂ ಮಸ್ತಕಂ ಮಧುಸೂಧನಃ ।
ಶ್ರೀಕೃಷ್ಣಶ್ಚಕ್ಷುಷೀ ಪಾತು ನಾಸಿಕಾಂ ರಾಧಿಕಾಪತಿಃ ॥ ೧೮ ॥

---

೧೪. ಬ್ರಾಹ್ಮಣೋತ್ತಮರೆಲ್ಲರೂ ಜಾಗ್ರತೆಯಾಗಿ ಆ ಶಿಶುವಿಗೆ ಮಂಗಳ ಕಾರ್ಯವನ್ನು ಮಾಡಿದರು. ಒಬ್ಬ ಬಾಹ್ಮಣನು ತನ್ನ ಕೈಯಲ್ಲಿ ಶಿಶುವನ್ನು ಹಿಡಿದು ಕೊಂಡು ಕವಚಪಠನಮಾಡಿದನು.

೧೫—೧೬. ಎಲೈ ವಿಪ್ರೋತ್ತಮನೇ, ಸರ್ವರಕ್ಷಕವಾದ ಆ ಕವಚವನ್ನು ನಿನಗೆ ಹೇಳುವೆನು ಕೇಳು ಆ ಕವಚವನ್ನು ಪೂರ್ವದಲ್ಲಿ ಮಹಾಸಮುದ್ರದಲ್ಲಿ ಯೋಗ ನಿದ್ರಾಸಕ್ತನಾದ ಮಹಾವಿಷ್ಣುವಿನ ನಾಭಿಕಮಲದಲ್ಲಿ ಕುಳಿತು ಮಧುಕೈಟಭರ ಭಯದಿಂದ ಸ್ತುತಿಮಾಡುತ್ತಿದ್ದ ಬ್ರಹ್ಮನಿಗೆ ಯೋಗಮಾಯೆಯು ಉಪದೇಶಿಸಿದಳು.

೧೭. ಯೋಗಮಾಯೆ :— ಎಲೈ ಜಗತ್ಪತಿಯಾದ ಬ್ರಹ್ಮನೇ, ಭಯವನ್ನು ದೂರಮಾಡು, ಶ್ರೀಹರಿಯೂ ಮತ್ತು ನಾನೂ ಇರುವಾಗ ನಿನಗೇತರ ಭಯ? ಸುಖವಾಗಿರು.

೧೮. ನಿನ್ನ ಮುಖವನ್ನು ಶ್ರೀಹರಿಯೂ, ತಲೆಯನ್ನು ಮಧುಸೂದನನೂ ಕಾಪಾಡಲಿ. ಶ್ರೀಕೃಷ್ಣನು ಎರಡು ಕಣ್ಣುಗಳನ್ನೂ ರಾಧಾಪತಿಯು ನಾಸಿಕವನ್ನೂ ಕಾಪಾಡಲಿ.

**ಕರ್ಣಯುಗ್ಮಂ ಚ ಕಂಠಂ ಚ ಕಪಾಲಂ ಪಾತು ಮಾಧವಃ ।**
**ಕಪೋಲಂ ಪಾತು ಗೋವಿಂದಃ ಕೇಶಾಂಶ್ಚ ಕೇಶವಃ ಸ್ವಯಂ ॥ ೧೯ ॥**

**ಅಧರೋಷ್ಠಂ ಹೃಷೀಕೇಶೋ ದಂತಪಂಕ್ತಿಂ ಗದಾಗ್ರಜಃ ।**
**ರಾಸೇಶ್ವರಶ್ಚ ರಸನಾಂ ತಾಲುಕಂ ವಾಮನೋ ವಿಭುಃ ॥ ೨೦ ॥**

**ವಕ್ಷಃ ಪಾತು ಮುಕುಂದಶ್ಚ ಜಠರಂ ಪಾತು ದೈತ್ಯಹಾ ।**
**ಜನಾರ್ದನಃ ಪಾತು ನಾಭಿಂ ಪಾತು ವಿಷ್ಣುಶ್ಚ ಮೇಹನಂ ॥ ೨೧ ॥**

**ನಿತಂಬಯುಗ್ಮಂ ಗುಹ್ಯಂ ಚ ಪಾತು ತೇ ಪುರುಷೋತ್ತಮಃ ।**
**ಜಾನುಯುಗ್ಮಂ ಜಾನಕೀಶಃ ಪಾತು ತೇ ಸರ್ವದಾ ವಿಭುಃ ॥ ೨೨ ॥**

**ಹಸ್ತಯುಗ್ಮಂ ನೃಸಿಂಹಶ್ಚ ಪಾತು ಸರ್ವತ್ರ ಸಂಕಟೇ ।**
**ಪಾದಯುಗ್ಮಂ ವರಾಹಶ್ಚ ಪಾತು ತೇ ಕಮಲೋದ್ಭವಃ ॥ ೨೩ ॥**

---

೧೯. ಮಾಧವನು ನಿನ್ನ ಎರಡು ಕಿವಿಗಳನ್ನೂ, ಕಂಠ ಮತ್ತು ಶಿರಃಕಪಾಲವನ್ನು ರಕ್ಷಿಸಲಿ. ಗೋವಿಂದನು ಕಪೋಲಗಳನ್ನೂ, ಕೇಶವನು ತಲೆಗೂದಲುಗಳನ್ನೂ ರಕ್ಷಿಸಲಿ.

೨೦. ಹೃಷೀಕೇಶನು ಕೆಳತುಟಿಯನ್ನೂ, ಗದಾಗ್ರಜನು ದಂತಪಂಕ್ತಿಗಳನ್ನೂ, ರಾಸೇಶ್ವರನು ನಾಲಿಗೆಯನ್ನೂ, ವಿಶ್ವವ್ಯಾಪಕನು ಕಾಲನ್ನೂ ಕಾಪಾಡಲಿ.

೨೧. ಮುಕುಂದನು ವಕ್ಷಃಸ್ಥಳವನ್ನೂ, ದೈತ್ಯಸಂಹಾರಕನು ಜಠರವನ್ನೂ ಜನಾರ್ದನನು ನಾಭಿಯನ್ನೂ, ವಿಷ್ಣುವು ಗಲ್ಲವನ್ನೂ ಕಾಪಾಡಲಿ.

೨೨. ನಿತಂಬಯುಗವನ್ನೂ ಗುಹ್ಯಪ್ರದೇಶವನ್ನೂ ಪುರುಷೋತ್ತಮನು ಕಾಪಾಡಲಿ. ನಿನ್ನ ಎರಡು ಮಂಡಿಗಳನ್ನೂ ಜಾನಕೀಪತಿಯಾದ ವಿಭುವು ರಕ್ಷಿಸಲಿ.

೨೩. ಸಂಕಟಕಾಲದಲ್ಲೆಲ್ಲ ನರಸಿಂಹನು ನಿನ್ನ ಎರಡು ಕೈಯ್ಯನ್ನೂ, ಆದಿವರಾಹನು ಎರಡು ಕಾಲುಗಳನ್ನೂ ಕಾಪಾಡಲಿ

ಊರ್ಧ್ವಂ ನಾರಾಯಣಃ ಪಾತು ಹ್ಯಧಸ್ತಾತ್ಕಮಲಾಪತಿಃ ।
ಪೂರ್ವಸ್ಯಾಂ ಪಾತು ಗೋಪಾಲಃ ಪಾತು ವಹ್ನೌ ದಶಾಸ್ಯಹಾ ॥ ೨೪ ॥

ವನಮಾಲೀ ಪಾತು ಯಾಮ್ಯಾಂ ವೈಕುಂಠಃ ಪಾತು ನೈರ್ಋತೌ ।
ವಾರುಣ್ಯಾಂ ವಾಸುದೇವಶ್ಚ ಸತೋ ರಕ್ಷಾಕರಃ ಸ್ವಯಂ ॥ ೨೫ ॥

ಪಾತು ತೇ ಸಂತತಮಜೋ ವಾಯವ್ಯಾಂ ವಿಷ್ಟರಶ್ರವಾಃ ।
ಉತ್ತರೇ ಚ ಸದಾ ಪಾತು ತೇಜಸಾ ಜಲಜಾಸನಃ ॥ ೨೬ ॥

ಐಶಾನ್ಯಾಮೀಶ್ವರಃ ಪಾತು ಪಾತು ಸರ್ವತ್ರ ಶತ್ರುಜಿತ್ ।
ಜಲೇ ಸ್ಥಲೇ ಚಾಂತರಿಕ್ಷೇ ನಿದ್ರಾಯಾಂ ಪಾತು ರಾಘವಃ ॥ ೨೭ ॥

ಇತ್ಯೇವಂ ಕಥಿತಂ ಬ್ರಹ್ಮನ್ಕವಚಂ ಪರಮಾದ್ಭುತಂ ।
ಕೃಷ್ಣೇನ ಕೃಪಯಾ ದತ್ತಂ ಸ್ಮೃತೇನೈವ ಪುರಾ ಮಯಾ ॥ ೨೮ ॥

---

೨೪. ಮೇಲುಭಾಗದಲ್ಲಿ ನಾರಾಯಣನೂ, ಕೆಳಗಡೆ ಕಮಲಾಪತಿಯೂ, ಪೂರ್ವದಿಕ್ಕಿನಲ್ಲಿ ಗೋಪಾಲನೂ, ಆಗ್ನೇಯದಲ್ಲಿ ದಶಕಂಠಹರನೂ, ನಿನ್ನನ್ನು ಕಾಪಾಡಲಿ.

೨೫. ದಕ್ಷಿಣದಿಕ್ಕಿನಲ್ಲಿ ವನಮಾಲಿಯೂ, ನೈಋತ್ಯದಲ್ಲಿ ವೈಕುಂಠನೂ, ಪಶ್ಚಿಮದಲ್ಲಿ ವಾಸುದೇವನೂ, ಸರ್ವದಾ ರಕ್ಷಿಸಲಿ.

೨೬. ವಾಯವ್ಯದಿಕ್ಕಿನಲ್ಲಿ ಅನಾದಿಯಾದ ವಿಷ್ಟರಶ್ರವನೂ, ಉತ್ತರದಲ್ಲಿ ಜಲಜಾಸನನೂ ತಮ್ಮ ತೇಜಸ್ಸಿನಿಂದ ಸರ್ವದಾ ಕಾಪಾಡಲಿ.

೨೭. ಈಶಾನ್ಯದಿಕ್ಕಿನಲ್ಲಿ ಈಶ್ವರನೂ, ಜಲ, ಸ್ಥಳಮತ್ತು ಅಂತರಿಕ್ಷದಲ್ಲಿಯೂ, ನಿದ್ರಾಕಾಲನಲ್ಲಿಯೂ, ರಾಘವನೂ ನಿನ್ನನ್ನು ಕಾಪಾಡಲಿ.

೨೮. ಎಲೈ ಬ್ರಾಹ್ಮಣೋತ್ತಮನೇ, ಪೂರ್ವದಲ್ಲಿ ನಾನು ಸ್ಮರಣೆಮಾಡಿದ ಮಾತ್ರದಿಂದಲೇ ಶ್ರೀಕೃಷ್ಣಪರಮಾತ್ಮನು ದಯೆಯಿಂದ ಅನುಗ್ರಹಮಾಡಿದ ಅತ್ಯಾಶ್ಚರ್ಯಕರವಾದ ಕವಚದ ಮಹಿಮೆಯನ್ನು ನಿನಗೆ ಹೇಳಿದೆನು.

ಶುಂಭೇನ ಸಹ ಸ ಗ್ರಾಮೋ ನಿರ್ಲಕ್ಷ್ಯೋ ಘೋರದಾರುಣೇ ।
ಗಗನೇ ಸ್ಥಿತಯೋ ಸದ್ಯಃ ಪ್ರಾಪ್ತಿಮಾತ್ರೇಣ ಸೋ ಜಿತಃ ॥ ೨೯ ॥

ಕವಚಸ್ಯ ಪ್ರಭಾವೇಣ ಧರಣ್ಯಾಂ ಪತಿತೋ ಮೃತಃ ।
ಪೂರ್ವಂ ವರ್ಷಶತಂ ಖೇ ಚ ಕೃತ್ವಾ ಯುದ್ಧಂ ಭಯಾವಹಂ ॥ ೩೦ ॥

ಮೃತೇ ಶುಂಭೇ ಚ ಗೋವಿಂದಃ ಕೃಪಾಲುರ್ಗಗನಸ್ಥಿತಃ ।
ಮಾಲಾಂ ಚ ಕವಚಂ ದತ್ವಾ ಗೋಲೋಕಂ ಸ ಜಗಾಮ ಹ ॥ ೩೧ ॥

ಕಲ್ಪಾಂತರಸ್ಯ ವೃತ್ತಾಂತಂ ಕೃಪಯಾ ಕಥಿತಂ ಮುನೇ ।
ಅಭ್ಯಂತರಭಯಂ ನಾಸ್ತಿ ಕವಚಸ್ಯ ಪ್ರಭಾವತಃ ॥ ೩೨ ॥

---

೨೯. ಶುಂಭಾಸುರನೊಡನೆ ಘೋರಯುದ್ಧಮಾಡುತ್ತಿದ್ದಾಗ ದಿಕ್ಕುತೋಚದೆ ನಾನು ಯೋಚಿಸುತ್ತಿರಲು, ಈ ಕವಚಪ್ರಾಪ್ತಿ ಮಾತ್ರದಿಂದಲೇ ಅವನನ್ನು ಗೆಲ್ಲಲು ಸಾಧ್ಯವಾಯಿತು.

೩೦. ಆ ಶುಂಭಾಸುರನು ನೂರುವರ್ಷಗಳ ಕಾಲ ಅಂತರಿಕ್ಷದಲ್ಲಿ ಭಯಂಕರ ನಾದ ಯುದ್ಧಮಾಡಿ ಕೊನೆಗೆ ಈ ಕವಚದ ಪ್ರಭಾವದಿಂದ ಭೂಮಿಗೆ ಬಿದ್ದು ಮೃತನಾದನು.

೩೧. ಶುಂಭಾಸುರನು ಮೃತನಾಗಲು ಗಗನದಲ್ಲಿದ್ದ ದಯಾಮಯನಾದ ಗೋವಿಂದನು ಒಂದು ಹೂಮಾಲೆಯನ್ನೂ, ಕವಚವನ್ನೂ ನನಗೆ ಕೊಟ್ಟು ಗೋಲೋಕಕ್ಕೆ ಹಿಂತಿರುಗಿದನು.

೩೨. ಎಲೈ ಮುನಿಯೇ, ಕಲ್ಪಾಂತರದ ವೃತ್ತಾಂತವನ್ನೂ ದಯೆಯಿಂದ ಹೇಳಿದ್ದೇನೆ. ಈ ಕವಚದ ಪ್ರಭಾವದಿಂದ ಯಾವ ಭಯವೂ ಉಂಟಾಗುವುದಿಲ್ಲ.

ಶುಂಭೇನ ಸಹ ಸ ಗ್ರಾಮೇ ನಿರ್ಲಕ್ಷ್ಯೇ ಘೋರದಾರುಣೇ ।
ಗಗನೇ ಸ್ಥಿತಯಾ ಸದ್ಯಃ ಪ್ರಾಪ್ತಿಮಾತ್ರೇಣ ಸೋ ಜಿತಃ ॥ ೨೯ ॥

ಕವಚಸ್ಯ ಪ್ರಭಾವೇಣ ಧರಣ್ಯಾಂ ಪತಿತೋ ಮೃತಃ ।
ಪೂರ್ವಂ ವರ್ಷಶತಂ ಖೇ ಚ ಕೃತ್ವಾ ಯುದ್ಧಂ ಭಯಾವಹಂ ॥ ೩೦ ॥

ಮೃತೇ ಶುಂಭೇ ಚ ಗೋವಿಂದಃ ಕೃಪಾಲುರ್ಗಗನಸ್ಥಿತಃ ।
ಮಾಲಾಂ ಚ ಕವಚಂ ದತ್ವಾ ಗೋಲೋಕಂ ಸ ಜಗಾಮ ಹ ॥ ೩೧ ॥

ಕಲ್ಪಾಂತರಸ್ಯ ವೃತ್ತಾಂತಂ ಕೃಪಯಾ ಕಥಿತಂ ಮುನೇ ।
ಅಭ್ಯಂತರಭಯಂ ನಾಸ್ತಿ ಕವಚಸ್ಯ ಪ್ರಭಾವತಃ ॥ ೩೨ ॥

---

೨೯. ಶುಂಭಾಸುರನೊಡನೆ ಘೋರಯುದ್ಧಮಾಡುತ್ತಿದ್ದಾಗ ದಿಕ್ಕುತೋಚದೆ ನಾನು ಯೋಚಿಸುತ್ತಿರಲು, ಈ ಕವಚಪ್ರಾಪ್ತಿ ಮಾತ್ರದಿಂದಲೇ ಅವನನ್ನು ಗೆಲ್ಲಲು ಸಾಧ್ಯವಾಯಿತು.

೩೦. ಆ ಶುಂಭಾಸುರನು ನೂರುವರ್ಷಗಳ ಕಾಲ ಅಂತರಿಕ್ಷದಲ್ಲಿ ಭಯಂಕರ ನಾದ ಯುದ್ಧಮಾಡಿ ಕೊನೆಗೆ ಈ ಕವಚದ ಪ್ರಭಾವದಿಂದ ಭೂಮಿಗೆ ಬಿದ್ದು ಮೃತನಾದನು.

೩೧. ಶುಂಭಾಸುರನು ಮೃತನಾಗಲು ಗಗನದಲ್ಲಿದ್ದ ದಯಾಮಯನಾದ ಗೋವಿಂದನು ಒಂದು ಹೂಮಾಲೆಯನ್ನೂ, ಕವಚವನ್ನೂ ನನಗೆ ಕೊಟ್ಟು ಗೋಲೋಕಕ್ಕೆ ಹಿಂತಿರುಗಿದನು.

೩೨. ಎಲೈ ಮುನಿಯೇ, ಕಲ್ಪಾಂತರದ ವೃತ್ತಾಂತವನ್ನೂ ದಯೆಯಿಂದ ಹೇಳಿದ್ದೇನೆ. ಈ ಕವಚದ ಪ್ರಭಾವದಿಂದ ಯಾವ ಭಯವೂ ಉಂಟಾಗುವುದಿಲ್ಲ.

ಕೋಟಿಶಃ ಕೋಟಿಶೋ ನಷ್ಟಾ ಮಯಾ ದೃಷ್ಟಾಶ್ಚ ವೇಧಸಃ ।
ಅಹಂ ಚ ಹರಿಣಾ ಸಾರ್ಧಂ ಕಲ್ಪೇಕಲ್ಪೇ ಸ್ಥಿರಾ ಸದಾ ॥ ೩೩ ॥

ಇತ್ಯುಕ್ತ್ವಾ ಕವಚಂ ದತ್ವಾ ಸಾಂತರ್ಧಾನಂ ಚಕಾರ ಹ ।
ನಿಃಶಂಕೋ ನಾಭಿಕಮಲೇ ತಸ್ಥೌ ಸ ಕಮಲೋದ್ಭವಃ ॥ ೩೪ ॥

ಸುವರ್ಣಗುಟಿಕಾಯಾಂ ಚ ಕೃತ್ವೇದಂ ಕವಚಂ ಪರಂ ।
ಕಂಠೇ ವಾ ದಕ್ಷಿಣೇ ಬಾಹೌ ಬಧ್ನೀಯಾದ್ಯಃ ಸುಧೀಃ ಸದಾ ॥ ೩೫ ॥

ವಿಷಾಗ್ನಿ ಜಲಶತ್ರುಭ್ಯೋ ಭಯಂ ತಸ್ಯ ನ ಜಾಯತೇ ।
ಜಲೇ ಸ್ಥಲೇ ಚಾಂತರಿಕ್ಷೇ ನಿದ್ರಾಯಾಂ ರಕ್ಷತೀಶ್ವರಃ ॥ ೩೬ ॥

ಸಂಗ್ರಾಮೇ ವಜ್ರಪಾತೇ ಚ ವಿಪತ್ತೌ ಪ್ರಾಣಸಂಕಟೇ ।
ಕವಚಸ್ಮರಣಾದೇವ ಸದ್ಯೋ ನಿಃಶಂಕತಾಂ ವ್ರಜೇತ್ ॥ ೩೭ ॥

---

೩೩. ಕೋಟಿಗಟ್ಟಲೆ ವಿನಷ್ಟರಾದ ಬ್ರಹ್ಮರನ್ನು ನಾನು ನನ್ನ ಕಣ್ಣೆದುರಿನಲ್ಲೇ ನೋಡಿದ್ದೇನೆ. ನಾನು ಶ್ರೀಹರಿಯೊಡನೆ ಪ್ರತಿಕಲ್ಪದಲ್ಲಿಯೂ ಶಾಶ್ವತವಾಗಿರುವೆನು.

೩೪. ಈ ರೀತಿಯಾಗಿ ಹೇಳಿ ಕವಚವನ್ನು ಅನುಗ್ರಹಿಸಿ ಆ ಮಾಯೆಯು ಅಂತರ್ಧಾನಳಾದಳು. ಚತುರ್ಮುಖಬ್ರಹ್ಮನು ಅನಂತರ. ನಿರ್ಭೀತನಾಗಿ ವಿಷ್ಣುವಿನ ನಾಭಿಕಮಲದಲ್ಲಿ ಕುಳಿತಿದ್ದನು

೩೫-೩೬ ಯಾವ ಜ್ಞಾನಿಯು ಈ ಕವಚವನ್ನು ಚಿನ್ನದ ತಾಯಿತಿಯಲ್ಲಿ ಮಾಡಿಸಿ ಕಂಠದಲ್ಲಾಗಲೀ, ಬಲಭುಜದಲ್ಲಾಗಲೀ ಕಟ್ಟಿಕೊಳ್ಳುವನೋ, ಅವನಿಗೆ ವಿಷ, ಅಗ್ನಿ, ಜಲ ಮತ್ತು ಶತ್ರುಗಳಿಂದ ಭಯಸಂಭವಿಸುವುದಿಲ್ಲ. ಜಲ, ಸ್ಥಳ, ಅಂತರಿಕ್ಷ ಮತ್ತು ನಿದ್ರಾಕಾಲದಲ್ಲೆಲ್ಲ ಈಶ್ವರನು ಅವನನ್ನು ರಕ್ಷಿಸುವನು.

೩೭. ಯುದ್ಧಕಾಲದಲ್ಲಾಗಲೀ, ವಜ್ರಾಯುಧದ ಪೆಟ್ಟು ಬಿದ್ದಾಗಲಾಗಲೀ, ವಿಪತ್ಸಮಯದಲ್ಲಾಗಲೀ, ಈ ಕವಚವನ್ನು ಸ್ಮರಿಸಿದ ಮಾತ್ರದಿಂದಲೇ ನಿರ್ಭೀತರಾಗಿರಬಹುದು.

ಬದ್ಧ್ವೇದಂ ಕವಚಂ ಕಂಠೇ ಶಂಕರಸ್ತ್ರಿಪುರಂ ಪುರಾ ।
ಜಘಾನ ಲೀಲಾಮಾತ್ರೇಣ ದುರಂತಮಸುರೇಶ್ವರಂ ॥ ೩೮ ॥

ಬದ್ಧ್ವೇದಂ ಕವಚಂ ಕಾಲೀ ರಕ್ತಬೀಜಂ ಚಖಾದ ಸಾ ।
ಸಹಸ್ರಶೀರ್ಷಾ ಧೃತ್ವೇದಂ ವಿಶ್ವಂ ಧತ್ತೇ ತಿಲಂ ಯಥಾ ॥ ೩೯ ॥

ಆವಾಂ ಸನತ್ಕುಮಾರಶ್ಚ ಧರ್ಮಸಾಕ್ಷೀ ಚ ಕರ್ಮಣಾಂ ।
ಕವಚಸ್ಯ ಪ್ರಭಾವೇಣ ಸರ್ವತ್ರ ಜಯಿನೋ ವಯಂ ॥ ೪೦ ॥

ತಸ್ಯ ನಂದಶಿಶೋಃ ಕಂಠೇ ಚಕಾರ ಕವಚಂ ದ್ವಿಜಃ ।
ಆತ್ಮನಃ ಕವಚಂ ಕಂಠೇ ದಧಾರ ಚ ಸ್ವಯಂ ಹರಿಃ ॥ ೪೧ ॥

---

೩೮. ಪೂರ್ವದಲ್ಲಿ ಶಂಕರನು ಈ ಕವಚವನ್ನು ಕಂಠದಲ್ಲಿ ಧರಿಸಿ ರಾಕ್ಷಸೇಶ್ವರನೂ, ದುರ್ದಮ್ಯನೂ ಆದ ತ್ರಿಪುರನನ್ನು ಲೀಲಾಜಾಲವಾಗಿ ಸಂಹರಿಸಿದನು.

೩೯. ಈ ಕವಚವನ್ನೇ ಧರಿಸಿ ಕಾಳಿಕಾದೇವಿಯು ರಕ್ತಬೀಜಾಸುರನನ್ನು ನುಂಗಿಬಿಟ್ಟಳು. ಸಾವಿರತಲೆಯುಳ್ಳ ಆದಿಶೇಷನು ಈ ಕವಚವನ್ನು ಧರಿಸಿರುವುದರಿಂದಲೇ ನಿಖಿಲ ಪ್ರಪಂಚವನ್ನು ತಿಲಮಾತ್ರದಂತೆ ಲೀಲಾಜಾಲವಾಗಿ ಧರಿಸಿದ್ದಾನೆ.

೪೦. ನರನಾರಾಯಣರಾದ ನಾವೂ, ಸನತ್ಕುಮಾರನೂ, ಕರ್ಮಗಳಿಗೆ ಸಾಕ್ಷಿಯಾದ ಧರ್ಮನೂ ಈ ಕವಚದ ಪ್ರಭಾವದಿಂದ ಎಲ್ಲ ಕಡೆಯಲ್ಲಿಯೂ ಜಯಶೀಲರಾಗಿದ್ದೇವೆ.

೪೧. ಇಂಥ ಕವಚವನ್ನು ನಂದಗೋಪನ ಶಿಶುವಿನ ಕಂಠದಲ್ಲಿ ಬ್ರಾಹ್ಮಣನು ಕಟ್ಟಿದನು. ಸ್ವಯಂ ಶ್ರೀಹರಿಯು ತನ್ನ ಕವಚವನ್ನೇ ತನ್ನ ಕಂಠದಲ್ಲಿ ಧಾರಣೆ ಮಾಡಿದನು.

ಪ್ರಭಾವಃ ಕಥಿತಃ ಸರ್ವಃ ಕವಚಸ್ಯ ಹರೇಸ್ತಥಾ ।
ಅನಂತಸ್ಯಾಚ್ಯುತಸ್ಯೈವ ಪ್ರಭಾವಮತುಲಂ ಮುನೇ ॥ ೪೨ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣನಾರದಸಂವಾದೇ ಶಕಟಭಂಜನ-ಯೋಗ-
ನಿದ್ರೋಕ್ತಕವಚನ್ಯಾಸೋ ನಾಮ
ದ್ವಾದಶೋಽಧ್ಯಾಯಃ

---

೪೨ ಶ್ರೀಹರಿಯ ಮತ್ತು ಈ ಕವಚದ ಮಹಿಮೆಯನ್ನು ಅಲ್ಪಸ್ವಲ್ಪ ಹೇಳಿದುದಾಯಿತು. ಅನಂತನೂ ಅಚ್ಯುತನೂ ಆದ ಶ್ರೀಕೃಷ್ಣನ ಪ್ರಭಾವವು ಅಸದೃಶವಾದುದು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ಶಕಟಭಂಜನ
ಮತ್ತು ಯೋಗನಿದ್ರೋಕ್ತಕವಚವೆಂಬ ಹನ್ನೆರಡನೆಯ
ಅಧ್ಯಾಯವು ಮುಗಿದುದು.



## ಹನ್ನೆರಡನೆಯ ಅಧ್ಯಾಯದ ಸಾರಾಂಶ

ಒಮ್ಮೆ ಯಶೋದೆಯು ಬಾಲಕನಾದ ಕೃಷ್ಣನಿಗೆ ಸ್ತನ್ಯಪಾನಮಾಡಿಸುತ್ತಿದ್ದಾಗ ಅನೇಕ ಗೋಪಸ್ತ್ರೀಯರೂ, ವೃದ್ಧಮಾತೆಯರೂ ಅಲ್ಲಿಗೆ ಬರಲಾಗಿ, ಯಶೋದೆಯು ಶಿಶುವನ್ನು ಅಲ್ಲಿಯೇ ಮಲಗಿಸಿ ಅವರುಗಳನ್ನು ಸ್ವಾಗತಿಸಲು ಹೋದಳು. ಸ್ತನ್ಯಪಾನದಿಂದ ಅತೃಪ್ತನಾಗಿದ್ದ ಆ ಬಾಲಕನು ಕಾಲುಗಳನ್ನು ಒದರುತ್ತ ಅಳುತ್ತಿರಲು ಆ ಸಮಯಕ್ಕೆ ಸರಿಯಾಗಿ ಕಂಸನಿಂದ ಪ್ರೇರಿತನಾದ ಶಕಟನೆಂಬ ಅಸುರನು ಬಂಡಿಯ ರೂಪದಲ್ಲಿ ಉರಳಿಕೊಂಡು ಶಿಶುವಿನ ಸಮೀಪಕ್ಕೆ ಬಂದನು ಸರ್ವಜ್ಞನಾದ ಆ ಬಾಲಕೃಷ್ಣನು ತನ್ನ ಪಾದಘಾತದಿಂದಲೇ ಬಂಡಿಯನ್ನು ಪುಡಿಪುಡಿಮಾಡಿ ಆ ರಾಕ್ಷಸನನ್ನು ಸಂಹರಿಸಿದನು. ಈ ವೃತ್ತಾಂತವನ್ನು ತಿಳಿದ ಗೋಪಗೋಪಿಯರೆಲ್ಲರೂ ಅತ್ಯಾಶ್ಚರ್ಯಗೊಂಡರು. ವೇದಜ್ಞರಾದ ಬ್ರಾಹ್ಮಣರು ಆ ಶಿಶುವಿಗೆ ವಿಷ್ಣುಕವಚವನ್ನು ಧಾರಣೆಮಾಡಿ ಮಂಗಳಕಾರ್ಯಗಳನ್ನೆಸಗಿದರು. ಕವಚಧಾರಣೆಯ ಪ್ರಭಾವದಿಂದ ಶಿಶುವು ಸುಕ್ಷೇಮವಾಗಿದ್ದಿತು.



॥ ಓಂ ॥

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### ॥ ತ್ರಯೋದಶೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಅಪರಂ ಕೃಷ್ಣಮಾಹಾತ್ಮ್ಯಂ ಶೃಣು ಕಿಂಚಿನ್ಮಹಾಮುನೇ ।
ವಿಘ್ನನಿಘ್ನಂ ಪಾಪಹರಂ ಮಹಾಪುಣ್ಯಕರಂ ಪರಂ ॥ ೧ ॥

ಏಕದಾ ನಂದಪತ್ನೀ ಚ ಕೃತ್ವಾ ಕೃಷ್ಣಂ ಸ್ವವಕ್ಷಸಿ ।
ಸ್ವರ್ಣಸಿಂಹಾಸನಸ್ಥಾ ಚ ಕ್ಷುಧಿತಂ ತಂ ಸ್ತನಂ ದದೌ ॥ ೨ ॥

ಏತಸ್ಮಿನ್ನಂತರೇ ತತ್ರ ವಿಪ್ರೇಂದ್ರ್ರೈಕಃ ಸಮಾಗತಃ ।
ವೃತಃ ಶಿಷ್ಯಸಮೂಹೈಶ್ಚ ಪ್ರಜ್ವಲನ್ಬ್ರಹ್ಮತೇಜಸಾ ॥ ೩ ॥

---

### ಹದಿಮೂರನೆಯ ಅಧ್ಯಾಯವು

೧. ಶ್ರೀನಾರಾಯಣ :—ಎಲೈ ಮಹಾಮುನಿಯೇ, ವಿಘ್ನವಿನಾಶಕವೂ, ಪಾಪಪರಿಹಾರಕವೂ, ಮಹಾಪುಣ್ಯಕರವೂ ಆದ ಶ್ರೀಕೃಷ್ಣನ ಮತ್ತೊಂದು ಮಾಹಾತ್ಮ್ಯವನ್ನು ಹೇಳುವೆನು ಕೇಳು

೨. ಒಮ್ಮೆ ನಂದನ ಪತ್ನಿಯಾದ ಯಶೋದೆಯು ಸ್ವರ್ಣಸಿಂಹಾಸನದಲ್ಲಿ ಕುಳಿತು ಶ್ರೀಕೃಷ್ಣನನ್ನು ಎತ್ತಿಕೊಂಡು ಹಸಿದ ಆ ಬಾಲಕನಿಗೆ ಸ್ತನ್ಯಪಾನ ಮಾಡಿಸುತ್ತಿದ್ದಳು.

೩. ಆ ಸಮಯಕ್ಕೆ ಸರಿಯಾಗಿ ತೇಜಸ್ವಿಯಾದ ಒಬ್ಬ ಬ್ರಾಹ್ಮಣನು ಶಿಷ್ಯಪರಿವಾರದೊಡಗೂಡಿ ಅಲ್ಲಿಗೆ ಬಂದನು.

ಪ್ರಜಪಸ್ಪರಮಂ ಬ್ರಹ್ಮ ಶುದ್ಧಸ್ಫಟಿಕಮಾಲಯಾ ।
ದಂಡೀ ಛತ್ರೀ ಶುಕ್ಲವಾಸಾ ದಂತಪಂಕ್ತಿವಿರಾಜಿತಃ ॥ ೪ ॥

ಜ್ಯೋತಿರ್ಗ್ರಂಥೋ ಮೂರ್ತಿಮಾಂಶ್ಚ ವೇದವೇದಾಂಗಪಾರಗಃ ।
ಪರಿಬಿಭ್ರಜ್ಜಟಾಜಾಲಂ ತಪ್ತಕಾಂಚನಸನ್ನಿಭಂ ॥ ೫ ॥

ಶರತ್ಪಾರ್ವಣಚಂದ್ರಾಸ್ಯೋ ಗೌರಾಂಗಃ ಪದ್ಮಲೋಚನಃ ।
ಯೋಗೀಂದ್ರೋ ಧೂರ್ಜಟೇಃ ಶಿಷ್ಯಃ ಶುದ್ಧಭಕ್ತೋ ಗದಾಭೃತಃ ॥ ೬ ॥

ವ್ಯಾಖ್ಯಾಮುದ್ರಾಕರಃ ಶ್ರೀಮಾನ್ಶಿಷ್ಯಾನಧ್ಯಾಪಯನ್ಮುದಾ ।
ವೇದವ್ಯಾಖ್ಯಾಂ ಕತಿವಿಧಾಂ ಪ್ರಕುರ್ವನ್ನಿವ ಲೀಲಯಾ ॥ ೭ ॥

ಏಕೀಭೂಯ ಚತುರ್ವೇದಾಸ್ತೇಜಸಾ ಮೂರ್ತಿಮಾನಿವ ।
ಸಾಕ್ಷಾತ್ಸರಸ್ವತೀಕಂಠಃ ಸಿದ್ಧಾಂತೈಕವಿಶಾರದಃ ॥ ೮ ॥

---

೪. ಶುಕ್ಲಾಂಬರದಿಂದಲೂ, ಶುಭ್ರವಾದ ದಂತಪಂಕ್ತಿಗಳಿಂದಲೂ ಶೋಭಿಸುತ್ತಿದ್ದ ಆ ಬ್ರಾಹ್ಮಣನು ದಂಡ ಮತ್ತು ಛತ್ರಿಗಳನ್ನು ಧರಿಸಿ, ಕರದಲ್ಲಿ ಶುದ್ಧವಾದ ಸ್ಫಟಿಕಮಾಲೆಯನ್ನು ಹಿಡಿದು ಪರಬ್ರಹ್ಮವನ್ನು ಜಪಿಸುತ್ತಿದ್ದನು.

೫. ಮೂರ್ತಿಮತ್ತಾದ ದಿವ್ಯಜ್ಯೋತಿಯಂತಿರುವ ಆ ಬ್ರಾಹ್ಮಣನು ವೇದವೇದಾಂಗ ಪಾರಂಗತನಾಗಿ ಪುಟವಿಟ್ಟ ಚಿನ್ನದಂತೆ ಹೊಂಬಣ್ಣವಾದ ಜಟೆಗಳನ್ನು ಧರಿಸಿದ್ದನು.

೬. ಶರತ್ಪೂರ್ಣಿಮಾಚಂದ್ರನಂತೆ ಮುಖವುಳ್ಳವನೂ, ಗೌರವರ್ಣನೂ, ಕಮಲಲೋಚನನೂ, ಆದ ಆ ಯೋಗಿಶ್ರೇಷ್ಠನು ಧೂರ್ಜಟಿಯ ಶಿಷ್ಯನೂ ಗದಾಧರನ ಭಕ್ತನೂ ಆಗಿದ್ದನು.

೭. ಅನೇಕ ರೀತಿಯಾಗಿ ವೇದಕ್ಕೆ ವ್ಯಾಖ್ಯಾನಮಾಡಲು ಸಮರ್ಥನಾದ ಆ ದ್ವಿಜನು ದಕ್ಷಿಣಹಸ್ತದಲ್ಲಿ ವ್ಯಾಖ್ಯಾಮುದ್ರೆಯನ್ನು ಧರಿಸಿ, ಶಿಷ್ಯರಿಗೆ ಅಧ್ಯಾಪನ ಮಾಡಿಸುತ್ತಿದ್ದನು.

೮. ಚತುರ್ವೇದಗಳೂ ಒಟ್ಟಾಗಿ ಸೇರಿ ಮೂರ್ತಿವೆತ್ತು ಬಂದಂತಿರುವ ಆತನ ಕಂಠದಿಂದ ಸಾಕ್ಷಾತ್ ಸರಸ್ವತಿಯೇ ಹೊರಟುಬರುತ್ತಿದ್ದಂತೆ ಸಿದ್ಧಾಂತಗಳು ವ್ಯಕ್ತವಾಗತೊಡಗಿದವು.

ಧ್ಯಾನೈಕನಿಷ್ಠಃ ಶ್ರೀಕೃಷ್ಣ ಪಾದಾಂಭೋಜೇ ದಿವಾನಿಶಂ ।
ಜೀವನ್ಮುಕ್ತೋ ಹಿ ಸಿದ್ಧೇಶಃ ಸರ್ವಜ್ಞಃ ಸರ್ವದರ್ಶನಃ ॥ ೯ ॥

ತಂ ದೃಷ್ಟ್ವಾ ಸಾ ಸಮುತ್ತಸ್ಥೌ ಯಶೋದಾ ಪ್ರಣನಾಮ ಚ ।
ಪಾದ್ಯಂ ಗಾಂ ಮಧುಪರ್ಕಂ ಚ ಸ್ವರ್ಣಸಿಂಹಾಸನಂ ದದೌ ॥ ೧೦ ॥

ಬಾಲಕಂ ವಂದಯಾಮಾಸ ಮುನೀಂದ್ರಂ ಸಸ್ಮಿತಂ ಮುದಾ ।
ಮುನಿಶ್ಚ ಮನಸಾ ಚಕ್ರೇ ಪ್ರಣಾಮಶತಕಂ ಹರಿಂ ॥ ೧೧ ॥

ಆಶಿಷಂ ಪ್ರದದೌ ಪ್ರೀತ್ಯಾ ವೇದಮಂತ್ರೋಪಯೋಗಿಕಂ ।
ಪ್ರಣನಾಮ ಚ ಶಿಷ್ಯಾಂಶ್ಚ ತೇ ತಾಂ ಯುಯುಜುರಾಶಿಷಂ ॥ ೧೨ ॥

ಶಿಷ್ಯಾನ್ಪಾದ್ಯಾದಿಕಂ ಭಕ್ತ್ಯಾ ಪ್ರದದೌ ಚ ಪೃಥಕ್ಪೃಥಕ್ ।
ಸಾ ಶಿಷ್ಯಾಂಶ್ಚೈ ಚ ಪ್ರಕ್ಷಾಲ್ಯ ಸಮುವಾಸ ಸುಖಾಸನೇ ॥ ೧೩ ॥

---

೯. ಹಗಲೂರಾತ್ರಿ ಶ್ರೀಕೃಷ್ಣನ ಪಾದಕಮಲಗಳನ್ನು ಧ್ಯಾನಮಾಡುತ್ತಿದ್ದ ಆ ಸರ್ವಜ್ಞನು ಜೀವನ್ಮುಕ್ತನೂ, ಸರ್ವಸಮದೃಷ್ಟಿಯುಳ್ಳವನೂ ಆಗಿದ್ದನು.

೧೦. ಆ ಬ್ರಾಹ್ಮಣನನ್ನು ನೋಡಿ ಯಶೋದೆಯು ಪ್ರತ್ಯುತ್ಥಾನಮಾಡಿ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳನ್ನೂ, ಮಧುಪರ್ಕವನ್ನೂ ಸಮರ್ಪಿಸಿ, ರತ್ನ ಸಿಂಹಾಸನವನ್ನು ಕೊಟ್ಟಳು.

೧೧ ಅನಂತರ ಆ ಮುನೀಂದ್ರನಿಗೆ ಬಾಲಕನಾದ ಕೃಷ್ಣನಿಂದ ನಮಸ್ಕಾರ ಮಾಡಿಸಿದಳು ಆ ಮುನಿಯೂ ಕೂಡ ಮನಸ್ಸಿನಲ್ಲಿಯೇ ಶ್ರೀಹರಿಗೆ ನೂರು ನಮಸ್ಕಾರ ಮಾಡಿದನು.

೧೨. ವೇದಮಂತ್ರೋಚ್ಚಾರಣಪೂರ್ವಕವಾಗಿ ಪ್ರೀತಿಯಿಂದ ಶಿಶುವಿಗೆ ಆಶೀರ್ವದಿಸಿದನು. ಯಶೋದೆಯು ಮುನೀಂದ್ರನ ಶಿಷ್ಯರಿಗೆ ನಮಸ್ಕರಿಸಲು ಅವರೂ ಕೂಡ ಅವಳಿಗೆ ಆಶೀರ್ವಾದ ಮಾಡಿದರು.

೧೩. ಯಶೋದೆಯು ಮುನಿಯ ಶಿಷ್ಯರಿಗೂ ಕೂಡ ಬೇರೆಬೇರೆಯಾಗಿ ಪಾದ್ಯಾದಿ ಸತ್ಕಾರಗಳನ್ನು ಭಕ್ತಿಯಿಂದರ್ಪಿಸಿದಳು. ಮುನಿಯು ಶಿಷ್ಯರೊಡನೆ ಪಾದಪ್ರಕ್ಷಾಳನೆಮಾಡಿಕೊಂಡು ಸುಖಾಸನದಲ್ಲಿ ಮಂಡಿಸಿದನು.

ಸಮುದ್ಯತಾ ಸಾ ಪ್ರಷ್ಟುಂ ಚ ಪುಟಾಂಜಲಿಯುತಾ ಸತೀ ।
ಸ್ವಕ್ರೋಡೇ ಬಾಲಕಂ ಕೃತ್ವಾ ಭಕ್ತಿನಮ್ರಾತ್ಮಕಂಧರಾ ॥ ೧೪ ॥

ಸ್ವಾತ್ಮಾರಾಮಂ ಮಂಗಲಂ ಚ ಪ್ರಷ್ಟುಂ ಯದ್ಯಪಿ ನ ಕ್ಷಮಾ ।
ತಥಾಽಪಿ ಭವತೋ ನಾಮ ಶಿವಂ ಪೃಚ್ಛಾಮಿ ಸಾಂಪ್ರತಂ ॥ ೧೫ ॥

ಅಬಲಾಬುದ್ಧಿಹೀನಾಯಾ ದೋಷಂ ಕ್ಷಂತುಂ ಸದಾಽರ್ಹಸಿ ।
ಮೂಢಸ್ಯ ಸತತಂ ದೋಷಂ ಕ್ಷಮಾಂ ಕುರ್ವಂತಿ ಸಾಧವಃ ॥ ೧೬ ॥

ಅಂಗಿರಾ ವಾಽಥ ವಾಽತ್ರಿರ್ವಾ ಮರೀಚಿರ್ಗೌತಮೋಽಥ ವಾ ।
ಕ್ರತುಃ ಕಿಂ ವಾ ಪ್ರಚೇತಾ ವಾ ಪುಲಸ್ತ್ಯಃ ಪುಲಹೋಽಥ ವಾ ॥ ೧೭ ॥

ದುರ್ವಾಸಾಃ ಕರ್ದಮಸ್ತ್ವಂ ವಾ ವಸಿಷ್ಠೋ ಗರ್ಗ ಏವ ವಾ ।
ಜೈಗೀಷವ್ಯೋ ದೇವಲೋ ವಾ ಕಪಿಲೋ ವಾ ಸ್ವಯಂ ವಿಭುಃ ॥ ೧೮ ॥

---

೧೪. ಆನಂತರ ಯಶೋದೆಯು ಮಗುವನ್ನು ತನ್ನ ಕಂಕುಳಲ್ಲಿಟ್ಟುಕೊಂಡು ಭಕ್ತಿಯಿಂದ ತಲೆಬಾಗಿ ಮುನಿಯನ್ನು ಪ್ರಶ್ನಿಸಲಾರಂಭಿಸಿದಳು.

೧೫. ಸ್ವಾತ್ಮಾರಾಮರಾದ ನಿಮ್ಮನ್ನು ಕುಶಲಪ್ರಶ್ನೆ ಮಾಡಲು ನಾನು ಶಕ್ತಳಲ್ಲ. ಆದರೂ ಈಗ ನಿಮ್ಮ ಹೆಸರೇನೆಂದು ನಾನು ಕೇಳ ಬಯಸುತ್ತೇನೆ

೧೬. ಅಬಲೆಯೂ, ಬುದ್ಧಿಹೀನಳೂ ಆದ ನನ್ನ ದೋಷವನ್ನು ನೀವು ಕ್ಷಮಿಸಬೇಕು. ಸತ್ಪುರುಷರು ಮೂಢರ ದೋಷವನ್ನು ಸರ್ವದಾ ಕ್ಷಮಿಸುವರು.

೧೭. ಅಂಗಿರಸ್ಸು, ಅತ್ರಿ, ಮರೀಚಿ, ಮತ್ತು ಗೌತಮ ಮಹರ್ಷಿಗಳಲ್ಲಿ ನೀನಾರು? ನೀನು ಕ್ರತುವೇ? ಪ್ರಚೇತಸನೇ? ಪುಲಸ್ತ್ಯನೇ? ಅಥವಾ ಪುಲಹನೇ?

೧೮. ನೀನು ದೂರ್ವಾಸನೇ? ಅಥವಾ ಕರ್ದಮನೇ? ವಸಿಷ್ಠ ಮತ್ತು ಗರ್ಗ ಮಹರ್ಷಿಗಳಲ್ಲಿ ನೀನೊಬ್ಬನೇ? ಜೈಗೀಷವ್ಯ, ದೇವಲ ಮತ್ತು ಕಪಿಲ ಮಹರ್ಷಿಗಳಲ್ಲಿ ನೀನಾರು?

ಸನತ್ಕುಮಾರಃ ಸನಕಃ ಸನಂದೋ ವಾ ಸನಾತನಃ ।
ವೋಢುಃ ಪಂಚಶಿಖೋ ವಾ ತ್ವಮಾಸುರಿಃ ಸೌಭರಿಃ ಕಿಮು ॥ ೧೯ ॥

ವಿಶ್ವಾಮಿತ್ರೋಽಥ ವಾಲ್ಮೀಕೋ ವಾಮದೇವೋಽಥ ಕಶ್ಯಪಃ ।
ಸಂವರ್ತಃ ಕಿಮುತಥ್ಯೋ ವಾ ಕಿಂ ಕಚೋ ವಾ ಬೃಹಸ್ಪತಿಃ ॥ ೨೦ ॥

ಭೃಗುಃ ಶುಕ್ರಶ್ಚ ಚ್ಯವನೋ ನರನಾರಾಯಣೋಽಥ ವಾ ।
ಸಕ್ಥ್ನಿಃ ಪರಾಶರೋ ವ್ಯಾಸಃ ಶುಕದೇವೋಽಥ ಜೈಮಿನಿಃ ॥ ೨೧ ॥

ಮಾರ್ಕಂಡೇಯೋ ಲೋಮಶಶ್ಚ ಕಣ್ವಃ ಕಾತ್ಯಾಯನಸ್ತಥಾ ।
ಆಸ್ತೀಕೋ ವಾ ಜರತ್ಕಾರುಋಷ್ಯಶೃಂಗೋ ವಿಭಾಂಡಕಃ ॥ ೨೨ ॥

ಪೌಲಸ್ತ್ಯ ಸ್ತ್ವಮಗಸ್ತ್ಯೋ ವಾ ಶರದ್ವಾಂಗಿರಿರೇವ ಚ ।
ಶಮೀಕೋಽರಿಷ್ಟನೇಮಿಶ್ಚ ಮಾಂಡವ್ಯಃ ಪೈಲ ಏವ ಚ ॥ ೨೩ ॥

---

೧೯. ಸನತ್ಕುಮಾರ, ಸನಕ, ಸನಂದ ಮತ್ತು ಸನಾತನರಲ್ಲಿ ನೀನೊಬ್ಬ ನಾಗಿರಬೇಕು ಅಥವಾ ಪಂಚಶಿಖ, ಆಸುರಿ ಮತ್ತು ಸೌಭರಿಗಳಲ್ಲಿ ನೀನೊಬ್ಬ ನಾಗಿರಬೇಕು.

೨೦. ನೀನು ವಿಶ್ವಾಮಿತ್ರನೋ, ವಾಲ್ಮೀಕಿಯೋ, ವಾಮದೇವನೋ, ಕಶ್ಯಪನೋ, ಸಂವರ್ತನೋ, ಉತಥ್ಯನೋ, ಕಚನೋ ಅಥವಾ ಬೃಹಸ್ಪತಿಯೋ? ನೀನಾರು ?

೨೧. ಭೃಗು, ಶುಕ್ರ, ಚ್ಯವನರಲ್ಲಿ ನೀನೊಬ್ಬನಿರಬಹುದೇ? ಅಥವಾ ನರನಾರಾಯಣರಲ್ಲೊಬ್ಬನೇ? ಸಕ್ಥ್ನಿ, ಪರಾಶರ, ವ್ಯಾಸ, ಶುಕದೇವ, ಜೈಮಿನಿ ಇವರುಗಳಲ್ಲಿ ನೀನಾರು?

೨೨. ಮಾರ್ಕಂಡೇಯ, ಲೋಮಶ, ಕಣ್ವ, ಕಾತ್ಯಾಯನ, ಆಸ್ತಿಕ, ಜರತ್ಕಾರು, ಋಷ್ಯಶೃಂಗ ಮತ್ತು ವಿಭಾಂಡಕ ಮುಂತಾದ ಮಹರ್ಷಿಗಳಲ್ಲಿ ನೀನಾರು?

೨೩. ನೀನು ಪೌಲಸ್ತ್ಯನೇ, ಅಗಸ್ತ್ಯನೇ, ಶರದ್ವಂತನೇ ಅಥವಾ ಗಿರಿಯೆಂಬ ಮಹರ್ಷಿಯೋ ? ಶಮೀಕ, ಅರಿಷ್ಟನೇಮಿ, ಮಾಂಡವ್ಯ ಮತ್ತು ಪೈಲ ಇವರುಗಳಲ್ಲಿ ನೀನಾರು ?

ಪಾಣಿನಿರ್ವಾ ಕಣಾದೋ ವಾ ಶಾಕಲ್ಯಃ ಶಾಕಟಾಯನಃ ।
ಅಷ್ಟಾವಕ್ರೋ ಭಾಗುರಿರ್ವಾ ಸುಮಂತುರ್ವತ್ಸ ಏವ ವಾ ॥ ೨೪ ॥

ಜಾಬಾಲೋ ಯಾಜ್ಞವಲ್ಕ್ಯಶ್ಚ ವೈಶಂಪಾಯನ ಏವ ಚ ।
ಯತಿರ್ಹಂಸಃ ಪಿಪ್ಪಲಾದೋ ಮೈತ್ರೇಯಃ ಕರುಷಸ್ತಥಾ ॥ ೨೫ ॥

ಉಪಮನ್ಯುರ್ಗೌರಮುಖೋಽರುಣಿರೌರ್ವೋಽಥ ಕಕ್ಷಿವಾನ್ ।
ಭರದ್ವಾಜೋ ವೇದಶಿರಾಃ ಶಂಕುಕರ್ಣೋಽಥ ಶೌನಕಃ ॥ ೨೬ ॥

ಏತೇಷಾಂ ಪುಣ್ಯಶ್ಲೋಕಾನಾಂ ಕೋ ಭವಾನ್ವದ ಮೇ ಪ್ರಭೋ ।
ಪ್ರತ್ಯುತ್ತರಾರ್ಹಾ ನಾಹಂ ಚೇತ್ತಥಾಽಪಿ ವಕ್ತುಮರ್ಹಸಿ ॥ ೨೭ ॥

ಕಿಂಕರಃ ಕಿಂಕರೀ ವಾಽಪಿ ಸಮರ್ಥಾ ಪ್ರಷ್ಟುಮೀಶ್ವರಂ ।
ಯೋ ಯಸ್ಯ ಸೇವಾನಿಯತಃ ಸ ಕಂ ಪೃಚ್ಛತಿ ತಂ ವಿನಾ ॥ ೨೮ ॥

---

೨೪ ಪಾಣಿನಿ ಕಣಾದರಲ್ಲಾಗಲೀ, ಶಾಕಲ್ಯ ಶಾಕಟಾಯನರಲ್ಲಾಗಲೀ, ಅಷ್ಟಾವಕ್ರ ಭಾಗುರಿಗಳಲ್ಲಾಗಲೀ, ಸುಮಂತು ಮತ್ತು ವತ್ಸರಲ್ಲಾಗಲೀ ನೀನೊಬ್ಬನಹುದೇ ?

೨೫ ಜಾಬಾಲ, ಯಾಜ್ಞವಲ್ಕ್ಯ, ವೈಶಂಪಾಯನ, ಯತಿ, ಹಂಸ, ಪಿಪ್ಪಲಾದ, ಮೈತ್ರೇಯ ಮತ್ತು ಕರುಷ ಮುಂತಾದ ಮಹರ್ಷಿಗಳಲ್ಲಿ ನೀನಾರು ?

೨೬–೨೭ ಉಪಮನ್ಯು, ಗೌರಮುಖ, ಆರುಣಿ, ಔರ್ವ, ಕಕ್ಷಿವಾನ್, ಭರದ್ವಾಜ, ವೇದಶಿರ, ಶಂಕುಕರ್ಣ, ಶೌನಕ ಇವರೇ ಮುಂತಾದ ಪುಣ್ಯಶ್ಲೋಕರಲ್ಲಿ ನೀನಾರೆಂಬುದನ್ನು ನನಗೆ ದಯವಿಟ್ಟು ಹೇಳು. ಪ್ರತ್ಯುತ್ತರಕ್ಕೆ ನಾನು ಅನರ್ಹಳಾದರೂ ದಯವಿಟ್ಟು ನನಗೆ ಉತ್ತರಕೊಡು.

೨೮. ಸೇವಕನಾಗಲೀ ಸೇವಕಿಯಾಗಲಿ, ತನ್ನ ಒಡೆಯನನ್ನು ಪ್ರಶ್ನಿಸಲು ಅರ್ಹರಾಗಿರುವರು. ಯಾರು ಯಾರ ಸೇವೆಯನ್ನು ಮಾಡುತ್ತಿರುವರೋ ಅವರು ತಮ್ಮ ಒಡೆಯರನ್ನು ಬಿಟ್ಟು ಮತ್ತಾರನ್ನು ಕೇಳುವರು?

**ಧನ್ಯಾಽಹಂ ಕೃತಕೃತ್ಯಾಽಹಂ ಸಫಲಂ ಜೀವಿತಂ ಮಮ ।**
**ತ್ವತ್ಪಾದಾಬ್ಜ ರಜಃ ಸ್ಪರ್ಶಾಜ್ಜನ್ಮಕೋಟ್ಯಂಹಸಾಂ ಕ್ಷಯಃ ॥ ೨೯ ॥**

**ತ್ವತ್ಪಾದೋದಕಸಂಸ್ಪರ್ಶಾತ್ಸದ್ಯಃ ಪೂತಾ ವಸುಂಧರಾ ।**
**ತವಾಗಮನಮಾತ್ರೇಣ ತೀರ್ಥೀಭೂತೋಽಽ ಮಮಾಶ್ರಮಃ ॥ ೩೦ ॥**

**ಯೇ ಯೇ ಶ್ರುತಾಃ ಶ್ರುತೌ ಬ್ರಹ್ಮನ್ಸುಪ್ರತಿಸಾರಾ ಮಹಾಜನಾಃ ।**
**ತೇಷಾಮೇಕೋ ಮಯಾ ದೃಷ್ಟಃ ಪೂರ್ವಪುಣ್ಯಫಲೋದಯಾತ್ ॥ ೩೧ ॥**

**ಶಿಷ್ಯಾ ವೇದಾ ಮೂರ್ತಿಮಂತೋ ಗ್ರೀಷ್ಮಮಧ್ಯಾಹ್ನಭಾಸ್ಕರಾಃ ।**
**ಗೋಕುಲಂ ಮತ್ಕುಲಂ ಸದ್ಯಃ ಪುನಂತಿ ಪಾದರೇಣುನಾ ॥ ೩೨ ॥**

**ಆಶಿಷಂ ಕರ್ತುಮರ್ಹಂತಿ ಪ್ರಸನ್ನಮನಸಾ ಶಿಶುಂ ।**
**ಪೂರ್ಣಸ್ವಸ್ತ್ಯಯನಂ ಸದ್ಯೋ ವಿಪ್ರಾಶೀರ್ವಚನಂ ಧ್ರುವಂ ॥ ೩೩ ॥**

---

೨೯. ಇಂದು ನಾನು ಧನ್ಯಳು. ಕೃತಕೃತ್ಯಳು. ನನ್ನ ಜೀವಿತವು ಇಂದು ಸಫಲವಾಯಿತು. ನಿನ್ನ ಪಾದಕಮಲದ ಧೂಳಿಯಸ್ಪರ್ಶದಿಂದ ಕೋಟಿಜನ್ಮಗಳ ಪಾಪವು ಪರಿಹಾರವಾಗುವುದು.

೩೦. ನಿನ್ನ ಪಾದೋದಕ ಸ್ಪರ್ಶದಿಂದ ವಸುಂಧರೆಯು ಪವಿತ್ರಳಾದಳು. ನೀನು ಹೆಜ್ಜೆಯಿಟ್ಟ ಮಾತ್ರದಿಂದಲೇ ನನ್ನ ಆಶ್ರಮವು ಪುಣ್ಯಕ್ಷೇತ್ರವೆನಿಸಿತು.

೩೧. ಎಲೈ ಬ್ರಾಹ್ಮಣೋತ್ತಮನೇ, ವೇದದಲ್ಲಿ ಪ್ರಸಿದ್ಧರಾದ ಯಾವ ಯಾವ ಮಹಾಜನಗಳ ಹೆಸರನ್ನು ನಾವು ಕೇಳಿದ್ದೇವೋ ಅವರಲ್ಲಿ ಒಬ್ಬರನ್ನು ಇಂದು ನನ್ನ ಪೂರ್ವಪುಣ್ಯಫಲದಿಂದ ನೋಡಿದೆನು.

೩೨. ವೇದಮೂರ್ತಿಗಳೂ, ಗ್ರೀಷ್ಮಮಧ್ಯಾಹ್ನ ಸೂರ್ಯನಂತೆ ತೇಜಸ್ವಿಗಳೂ ಆದ ನಿಮ್ಮ ಶಿಷ್ಯರು ತಮ್ಮ ಪಾದಧೂಳಿಯಿಂದ ಗೋಕುಲವನ್ನೂ, ನಮ್ಮ ಕುಲವನ್ನೂ ಪಾವನಗೊಳಿಸಿದರು.

೩೩. ನೀವು ಪ್ರಸನ್ನವಾದ ಮನಸ್ಸಿನಿಂದ ಶಿಶುವಿಗೆ ಆಶೀರ್ವಾದ ಮಾಡಬೇಕಾಗಿ ಬೇಡುತ್ತೇನೆ. ವಿಪ್ರರ ಆಶೀರ್ವಾದದಿಂದ ಖಂಡಿತವಾಗಿಯೂ ಮಂಗಳವುಂಟಾಗುವುದು.

ಇತ್ಯೇವಮುಕ್ತ್ವಾ ನಂದಸ್ತ್ರೀ ಭಕ್ತ್ಯಾ ತಸ್ಥೌ ಮುನೇಃ ಪುರಃ ।
ನರಂ ಪ್ರಸ್ಥಾಪಯಾಮಾಸ ನಂದಮಾನಯಿತುಂ ಸತೀ ॥ ೩೪ ॥

ಯಶೋದಾವಚನಂ ಶ್ರುತ್ವಾ ಜಹಾಸ ಮುನಿಪುಂಗವಃ ।
ಜಹಸುಃ ಶಿಷ್ಯಸಂಘಾಶ್ಚ ಭಾಸಯಂತೋ ದಿಶೋ ದಶ ॥ ೩೫ ॥

ಹಿತಂ ತಥ್ಯಂ ನೀತಿಯುಕ್ತಂ ಮಹತ್ಪುಣ್ಯಕರಂ ಪರಂ ।
ತಾಮುವಾಚ ಮುದಾ ಯುಕ್ತಃ ಶುದ್ಧಬುದ್ಧಿರ್ಮಹಾಮುನಿಃ ॥ ೩೬ ॥

॥ ಶ್ರೀಗರ್ಗ ಉವಾಚ ॥

ಸುಧಾಮಯಂ ತೇ ವಚನಂ ಲೌಕಿಕಂ ಚ ಕುಲೋಚಿತಂ ।
ಯಸ್ಯ ಯತ್ರ ಕುಲೇ ಜನ್ಮ ಸ ಏವ ತಾದೃಶೋ ಭವೇತ್ ॥ ೩೭ ॥

---

೩೪. ಈ ರೀತಿಯಾಗಿ ಹೇಳಿ ನಂದಪತ್ನಿಯಾದ ಯಶೋದೆಯು ಆ ಮುನಿಯ ಮುಂದೆ ಭಕ್ತಿಯಿಂದ ನಿಂತಳು. ಮತ್ತು ನಂದಗೋಪನನ್ನು ಕರೆತರಲು ಸೇವಕನೊಬ್ಬನನ್ನು ಕಳುಹಿಸಿದಳು.

೩೫. ಯಶೋದೆಯ ಮಾತನ್ನು ಕೇಳಿ ಆ ಮುನಿಶ್ರೇಷ್ಠನು ನಕ್ಕನು. ಅವನ ಶಿಷ್ಯರೆಲ್ಲರೂ ನಕ್ಕು ಹತ್ತುದಿಕ್ಕುಗಳನ್ನೂ ಬೆಳಗಿದರು

೩೬. ಅತ್ಯಂತ ಮೇಧಾವಿಯಾದ ಆ ಮುನಿಯು ಹಿತವೂ, ಸತ್ಯವೂ, ನೀತಿಯುತವೂ, ಮಹಾಪುಣ್ಯಕರವೂ ಆದ ಹಿತನುಡಿಗಳನ್ನು ಆ ಯಶೋದೆಗೆ ಹೇಳಿದನು.

೩೭. ಶ್ರೀಗರ್ಗಮಹರ್ಷಿ :—ಎಲೌ ಯಶೋದೆಯೇ ನೀನಾಡಿದ ಮಾತು ಲೌಕಿಕವೂ, ಸತ್ಕುಲೋಚಿತವೂ, ಅಮೃತಸಮವೂ ಆಗಿದೆ. ಯಾರು ಯಾವ ಕುಲದಲ್ಲಿ ಹುಟ್ಟುವರೋ ಅವರು ಅದಕ್ಕನುಗುಣವಾಗಿಯೇ ಇರುವರು.

ಸರ್ವೇಷಾಂ ಗೋಪಪದ್ಮಾನಾಂ ಗಿರಿಭಾನುಶ್ಚ ಭಾಸ್ಕರಃ ।
ಪತ್ನೀ ಪದ್ಮಾಸಮಾ ತಸ್ಯ ನಾಮ್ನಾ ಪದ್ಮಾವತೀ ಸತೀ ॥ ೩೮ ॥

ತಸ್ಯಾಃ ಕನ್ಯಾ ಯಶೋದಾ ತ್ವಂ ಯಶೋವರ್ಧನಕಾರಿಣೀ ।
ಬಲ್ಲವಾನಾಂ ಚ ಪ್ರವರೋ ಲಬ್ಧೋ ನಂದಶ್ಚ ವಲ್ಲಭಃ ॥ ೩೯ ॥

ನಂದೋ ಯಶ್ಚ ತ್ವಂ ಚ ಕಾ ವಾ ಕಶ್ಚ ಬಾಲೋ ಯೋ ಯೇನ ವಾಽಽಗತಃ ।
ಜಾನಾಮಿ ನಿರ್ಜನೇ ಸರ್ವಂ ವಕ್ಷ್ಯಾಮಿ ನಂದಸನ್ನಿಧಿಂ ॥ ೪೦ ॥

ಗರ್ಗೋಽಹಂ ಯದುವಂಶಾನಾಂ ಚಿರಕಾಲಂ ಪುರೋಹಿತಃ ।
ಪ್ರಸ್ಥಾಪಿತೋಽಹಂ ವಸುನಾ ನಾನ್ಯಸಾಧ್ಯೇ ಚ ಕರ್ಮಣಿ ॥ ೪೧ ॥

ಏತಸ್ಮಿನ್ನಂತರೇ ನಂದಃ ಶ್ರುತಮಾತ್ರಂ ಜಗಾಮ ಹ ।
ನನಾಮ ದಂಡವದ್ಭೂಮೌ ಮೂರ್ಧ್ನಾ ತಂ ಮುನಿಪುಂಗವಂ ॥ ೪೨ ॥

---

೩೮. ಪದ್ಮಸ್ವರೂಪರಾದ ಗೋಪರಿಗೆಲ್ಲ, ಗಿರಿಭಾನುವೆಂಬುವನು ಸೂರ್ಯ ಸದೃಶನಾಗಿದ್ದಾನೆ. ಅವನಿಗೆ ಲಕ್ಷ್ಮೀದೇವಿಗೆ ಸಮಾನಳಾದ ಪದ್ಮಾವತಿಯು ಪತ್ನಿಯಾಗಿದ್ದಾಳೆ.

೩೯. ಅವರ ಮಗಳಾದ ನೀನು ಯಶೋದೆಯೆಂಬ ಹೆಸರಿಗನುಗುಣವಾಗಿ ಅವರ ಯಶಸ್ಸನ್ನು ಬೆಳಗುತ್ತಿದ್ದೀಯೆ. ಯಾದವರಲ್ಲೆಲ್ಲ ಶ್ರೇಷ್ಠನಾದ ನಂದನು ನಿನಗೆ ಪತಿಯಾಗಿ ಲಭಿಸಿರುವನು.

೪೦. ನಂದನಾರು? ನೀನಾರು? ಈ ಬಾಲಕನಾರು? ಏತಕ್ಕಾಗಿ ಇಲ್ಲಿಗೆ ಬಂದನು? ಎಲ್ಲವನ್ನೂ ನಾನು ಬಲ್ಲೆ. ಏಕಾಂತದಲ್ಲಿ ನಂದನಿಗೆ ಇದೆಲ್ಲವನ್ನೂ ಹೇಳುವೆನು.

೪೧. ನಾನು ಯದುವಂಶಕ್ಕೆ ಬಹಳ ಕಾಲದಿಂದಲೂ ಪುರೋಹಿತನಾಗಿರುವ ಗರ್ಗನೆಂಬುವನು. ಇತರರಿಂದ ಅಸಾಧ್ಯವಾದ ಕೆಲಸವನ್ನು ಮಾಡುವುದಕ್ಕಾಗಿ ವಸುವು ನನ್ನನ್ನು ಕಳುಹಿಸಿರುವನು.

೪೨. ಇಷ್ಟುಹೊತ್ತಿಗೆ ನಂದನು ಗರ್ಗಮಹರ್ಷಿಯು ಬಂದಿರುವುದನ್ನು ತಿಳಿದು ಅಲ್ಲಿಗೆ ಬಂದು ಭೂಮಿಯ ಮೇಲೆ ದಂಡಪ್ರಣಾಮಮಾಡಿ ಆ ಮುನಿಗೆ ತಲೆಬಾಗಿ ನಮಿಸಿದನು.

ಶಿಷ್ಯಾನ್ನನಾಮ ಮೂರ್ಧ್ನಾ ಚ ತೇ ತಂ ಯುಯುಜುರಾಶಿಷಂ ।
ಸಮುತ್ಥಾಯಾಸನಾತ್ತೂರ್ಣಂ ಯಶೋದಾನಂದ ಏವ ಚ ॥ ೪೩ ॥

ಗೃಹೀತ್ವಾಽಭ್ಯಂತರಂ ರಮ್ಯಂ ಜಗಾಮ ವಿದುಷಾಂ ವರಃ ।
ಗರ್ಗೋ ನಂದೋ ಯಶೋದಾ ಚ ಸಪುತ್ರಾ ಸಾ ಮುದಾನ್ವಿತಾ ।
ವಾಕ್ಯಂ ಗರ್ಗಸ್ತದೋವಾಚ ನಿಗೂಢಂ ನಿರ್ಜನೇ ಮುನೇ ॥ ೪೪ ॥

॥ ಶ್ರೀ ಗರ್ಗ ಉವಾಚ ॥

ಅಯಿ ನಂದ ಪ್ರವಕ್ಷ್ಯಾಮಿ ವಚನಂ ತೇ ಸುಖಾವಹಂ ।
ಪ್ರಸ್ಥಾಪಿತೋಽಹಂ ವಸುನಾ ಯೇನ ತಚ್ಛ್ರೂಯತಾಮಿತಿ ॥ ೪೫ ॥

ವಸುನಾ ಸೂತಿಕಾಗಾರೇ ಶಿಶುಃ ಪ್ರತ್ಯರ್ಪಣಂ ಕೃತಃ ।
ಪುತ್ರೋಽಯಂ ವಸುದೇವಸ್ಯ ಜ್ಯೇಷ್ಠಶ್ಚ ತಸ್ಯ ಚ ಧ್ರುವಂ ॥ ೪೬ ॥

---

೪೩. ಅನಂತರ ಅವನ ಶಿಷ್ಯರಿಗೂ ತಲೆಬಾಗಿ ವಂದಿಸಲು ಅವರೆಲ್ಲರೂ ಅವನಿಗೆ ಆಶೀರ್ವಾದಮಾಡಿದರು. ಅನಂತರ ಗರ್ಗಮಹರ್ಷಿಯು ಪೀಠದಿಂದೆದ್ದು ಯಶೋದಾನಂದರನ್ನು ಕರೆದುಕೊಂಡು ಮನೆಯ ಒಳಭಾಗಕ್ಕೆ ತೆರಳಿದರು.

೪೪. ನಂದ ಯಶೋದೆಯರು ಪುತ್ರನೊಡನೆ ಸಂತೋಷದಿಂದ ಕುಳಿತಿದ್ದಾಗ ಗರ್ಗಮಹರ್ಷಿಯು ಆ ನಿರ್ಜನಪ್ರದೇಶದಲ್ಲಿ ಅವರನ್ನು ಕುರಿತು ಗುಟ್ಟಾದ ಈ ಮಾತುಗಳನ್ನಾಡಿದನು.

೪೫. ಶ್ರೀಗರ್ಗಮಹರ್ಷಿ —ಎಲೈ ನಂದನೇ ನಿನಗೆ ಹಿತಕರವಾದ ಮಾತುಗಳನ್ನು ಹೇಳುವೆನು ಕೇಳು. ವಸುವು ನನ್ನನ್ನೇತಕ್ಕೆ ಕಳುಹಿಸಿರುವನೆಂಬುದನ್ನು ಕೇಳುವವನಾಗು.

೪೬. ಈ ಶಿಶುವು ಸೂತಿಕಾಗೃಹದಲ್ಲಿದ್ದಾಗಲೇ ವಸುದೇವನು ನಿನಗೆ ತಂದರ್ಪಿಸಿದನು. ನ್ಯಾಯವಾಗಿ ಈ ಶಿಶುವೇ ವಸುದೇವನಿಗೆ ಜ್ಯೇಷ್ಠಪುತ್ರನಾಗಿರುವನು.

ಕನ್ಯಾ ತೇ ತೇನ ಯಾ ನೀತಾ ಮಥುರಾಂ ಕಂಸಭೀರುಣಾ ।
ಅಸ್ಯಾನ್ನ ಪ್ರಾಶನಾಯಾಹಂ ನಾಮಾನುಕರಣಾಯ ಚ ।
ಗೂಢೇನ ಪ್ರೇಷಿತಸ್ತೇನ ತಸ್ಯೋದ್ಯೋಗಂ ಕುರು ದ್ವಿಜ ॥ ೪೭ ॥

ಪೂರ್ಣ ಬ್ರಹ್ಮಸ್ವರೂಪೋಽಯಂ ಶಿಶುಸ್ತೇ ಮಾಯಯಾ ಮಹೀಂ ।
ಆಗತ್ಯ ಭಾರಹರಣಂ ಕರ್ತಾ ಧಾತ್ರಾ ಚ ಸೇವಿತಃ ।
ಗೋಲೋಕನಾಥೋ ಭಗವಾನ್ ಶ್ರೀಕೃಷ್ಣೋ ರಾಧಿಕಾಪತಿಃ ॥ ೪೮ ॥

ನಾರಾಯಣೋ ಯೋ ವೈಕುಂಠೇ ಕಮಲಾಕಾಂತ ಏವ ಚ ।
ಶ್ವೇತದ್ವೀಪನಿವಾಸೀ ಯಃ ಪಿತಾ ವಿಷ್ಣುಶ್ಚ ಸೋಽಸ್ಯ ಜಃ ॥ ೪೯ ॥

ಕಪಿಲೋಽನ್ಯೇ ತದಂಶಾಶ್ಚ ನರನಾರಾಯಣಾವೃಷೀ ।
ಸರ್ವೇಷಾಂ ತೇಜಸಾಂ ರಾಶಿರ್ಮೂರ್ತಿಮಾನಾಗತಃ ಕಿಮು ॥ ೫೦ ॥

---

೪೭. ಆ ವಸುದೇವನು ಕಂಸನಿಗೆ ಹೆದರಿಕೊಂಡು ನಿನ್ನ ಸ್ತ್ರೀಶಿಷುವನ್ನು ಮಥುರೆಗೆ ಕರೆದೊಯ್ದನು. ಈಗ ಈ ಶಿಶುವಿಗೆ ನಾಮಕರಣ ಮತ್ತು ಅನ್ನಪ್ರಾಶನ ಮಾಡಿಸಲು ಆ ವಸುದೇವನೇ ಗುಟ್ಟಾಗಿ ನನ್ನನ್ನು ಕಳುಹಿಸಿದನು. ಆದುದರಿಂದ ಅದಕ್ಕೆ ಸಿದ್ಧಗೊಳಿಸು

೪೮ ಪೂರ್ಣಬ್ರಹ್ಮಸ್ವರೂಪನಾದ ಈ ಶಿಶುವು ಮಾಯಾಮಹಿಮೆಯಿಂದ ಭೂಮಿಯಲ್ಲಿ ಅವತರಿಸಿದ್ದಾನೆ. ಈ ಮಹಾತ್ಮನೇ ರಾಧಾಪತಿಯೂ, ಗೋಲೋಕಾಧಿಪತಿಯೂ, ಚತುರ್ಮುಖಬ್ರಹ್ಮನಿಂದ ಸೇವಿತನೂ ಆದ ಶ್ರೀಕೃಷ್ಣಪರಮಾತ್ಮನು.

೪೯. ಯಾರು ವೈಕುಂಠದಲ್ಲಿ ಕಮಲಾಪತಿಯಾದ ನಾರಾಯಣನೆನಿಸಿರುವನೋ, ಯಾರು ಶ್ವೇತದ್ವೀಪದಲ್ಲಿ ವಿಷ್ಣುವೆನಿಸಿಕೊಂಡು ಜಗತ್ಪಾಲಕನಾಗಿರುವನೋ ಅಂಥ ಜನನಮರಣಾರಹಿತನಾದ ಪರಮಾತ್ಮನೇ ಇವನು.

೫೦. ಕಪಿಲನೇ ಮುಂತಾದ ಇತರ ಮಹರ್ಷಿಗಳೂ, ನರನಾರಾಯಣ ಋಷಿಗಳೂ ಇವನ ಅಂಶದಿಂದಲೇ ಜನಿಸಿರುವರು. ಎಲ್ಲ ತೇಜಸ್ಸಿಗೂ ಆಕರನಾದ ಈ ತೇಜೋಮಯನು ಮೂರ್ತಿಮತ್ತಾಗಿ ಅವತರಿಸಿರುವನು.

ವಸುಂ ದರ್ಶಯಿತ್ವಾ ಚ ಶಿಶುರೂಪೋ ಬಭೂವ ಹ ।
ಂಪ್ರತಂ ಸೂತಿಕಾಗಾರಾದಾಜಗಾಮ ತವಾಲಯಂ ॥ ೫೧ ॥

ಯೋನಿಸಂಭವಶ್ಚಾಯಮಾವಿರ್ಭೂತೋ ಮಹೀತಲೇ ।
ಯುಪೂರ್ಣಂ ಮಾತೃಗರ್ಭಂ ಕೃತ್ವಾ ಚ ಮಾಯಯಾ ಹರಿಃ ॥ ೫೨ ॥

ವಿರ್ಭೂಯ ವಸುಂ ಮೂರ್ತಿಂ ದರ್ಶಯಿತ್ವಾ ಜಗಾಮ ಹ ।
ುಗೇ ಯುಗೇ ವರ್ಣಭೇದೋ ನಾಮಭೇದೋಽಸ್ಯ ಬಲ್ಲವ ॥ ೫೩ ॥

ಕ್ಲಃ ಪೀತಸ್ತಥಾ ರಕ್ತ ಇದಾನೀಂ ಕೃಷ್ಣತಾಂ ಗತಃ ।
ಕ್ಲವರ್ಣಃ ಸತ್ಯಯುಗೇ ಸುತೀವ್ರತೇಜಸಾ ವೃತಃ ॥ ೫೪ ॥

ೇತಾಯಾಂ ರಕ್ತವರ್ಣೋಽಯಂ ಪೀತೋಽಯಂ ದ್ವಾಪರೇ ವಿಭುಃ ।
ಷ್ಣವರ್ಣಃ ಕಲೌ ಶ್ರೀಮಾಂಸ್ತೇಜಸಾಂ ರಾಶಿರೇವ ಚ ॥ ೫೫ ॥

---

೫೧. ತನ್ನ ವಿಶ್ವರೂಪವನ್ನು ವಸುದೇವನಿಗೆ ತೋರಿಸಿ ಶಿಶುರೂಪನಾದನು. ಗ ಸೂತಿಕಾಗೃಹದಿಂದ ನಿನ್ನ ಮಂದಿರಕ್ಕೆ ಬಂದಿರುವನು

೫೨ ಇವನು ಅಯೋನಿಜನಾಗಿ ಭೂಮಿಯಲ್ಲಿ ಅವತರಿಸಿರುವನು. ೀಹರಿಯು ಮಾತೃಗರ್ಭವನ್ನು ಮಾಯೆಯಿಂದ ವಾಯುಪೂರ್ಣವಾಡಿದನು.

೫೩. ಆ ವಾಯುವು ಹೊರಕ್ಕೆ ಬರುವಾಗ ಅದರಲ್ಲಿ ತಾನು ಆವಿರ್ಭವಿಸಿ ಸುದೇವನಿಗೆ ತನ್ನ ವಿಶ್ವರೂಪವನ್ನು ತೋರಿಸಿ ಇಲ್ಲಿಗೆ ಬಂದನು. ಎಲೈ ನಂದನೇ ್ರತಿಯುಗದಲ್ಲಿಯೂ ಇವನು ಬೇರೆಬೇರೆ ಬಣ್ಣವುಳ್ಳವನಾಗಿ ಭಿನ್ನ ನಾಮದಿಂದ ವತರಿಸುವನು.

೫೪. ಬಿಳುಪು, ಕೆಂಪು, ಹಳದಿ, ಬಣ್ಣಗಳಲ್ಲಿದ್ದವನು ಈಗ ಕೃಷ್ಣವರ್ಣದಿಂದ ವತರಿಸಿರುವನು. ಸತ್ಯಯುಗದಲ್ಲಿ ಶ್ವೇತವರ್ಣನಾಗಿ ತೇಜೋಮಯನಾಗಿದ್ದನು

೫೫ ತೇಜೋರಾಶಿಯಾದ ಈ ವಿಭುವು ತ್ರೇತಾಯುಗದಲ್ಲಿ ರಕ್ತವರ್ಣ ನಾಗಿಯೂ, ದ್ವಾಪರಯುಗದಲ್ಲಿ ಪೀತವರ್ಣನಾಗಿಯೂ, ಕಲಿಯುಗದಲ್ಲಿ ಕೃಷ್ಣವರ್ಣ ನಾಗಿಯೂ ಅವತರಿಸಿರುವನು

ಪರಿಪೂರ್ಣತಮಂ ಬ್ರಹ್ಮ ತೇನ ಕೃಷ್ಣ ಇತಿ ಸ್ಮೃತಃ ।
ಬ್ರಹ್ಮಣೋ ವಾಚಕಃ ಕೋಽಯಮೃಕಾರೋಽನಂತವಾಚಕಃ ॥ ೫೬ ॥

ಶಿವಸ್ಯ ವಾಚಕಃ ಷಶ್ಚ ನಕಾರೋ ಧರ್ಮವಾಚಕಃ ।
ಅಕಾರೋ ವಿಷ್ಣುವಚನಃ ಶ್ವೇತದ್ವೀಪನಿವಾಸಿನಃ ॥ ೫೭ ॥

ನರನಾರಾಯಣಾರ್ಥಸ್ಯ ವಿಸರ್ಗೋ ವಾಚಕಸ್ಮೃತಃ ।
ಸರ್ವೇಷಾಂ ತೇಜಸಾಂ ರಾಶಿಃ ಸರ್ವಮೂರ್ತಿಸ್ವರೂಪಕಃ ॥ ೫೮ ॥

ಸರ್ವಾಧಾರಃ ಸರ್ವಬೀಜಸ್ತೇನ ಕೃಷ್ಣ ಇತಿ ಸ್ಮೃತಃ ।
ಕರ್ಮನಿರ್ಮೂಲವಚನಃ ಕೃಷಿರ್ನೋ ದಾಸ್ಯವಾಚಕಃ ॥ ೫೯ ॥

ಅಕಾರೋ ದಾತೃವಚನಸ್ತೇನ ಕೃಷ್ಣ ಇತಿ ಸ್ಮೃತಃ ।
ಕೃಷಿರ್ನಿಶ್ಚೇಷ್ಟವಚನೋ ನಕಾರೋ ಭಕ್ತಿವಾಚಕಃ ॥ ೬೦ ॥

---

೫೬. ಪರಿಪೂರ್ಣಸ್ವರೂಪವಾದ ಪರಬ್ರಹ್ಮವು ಕೃಷ್ಣನೆನಿಸುವುದು. 'ಕ' ಎಂದರೆ ಬ್ರಹ್ಮನೆಂದೂ 'ಋ' ಎಂದರೆ ಅನಂತವೆಂದೂ ಅರ್ಥವಾಗುವುದು.

೫೭. 'ಷ' ಎಂದರೆ ಶಿವನೆಂದೂ 'ನ' ಎಂದರೆ ಧರ್ಮವೆಂದೂ ಅರ್ಥವಾಗುವುದು. 'ಅ' ಎಂದರೆ ಶ್ವೇತದ್ವೀಪನಿವಾಸಿಯಾದ ವಿಷ್ಣುವೆಂದರ್ಥವಾಗುವುದು.

೫೮–೫೯. ವಿಸರ್ಗವು ನರನಾರಾಯಣರೆಂಬ ಅರ್ಥವನ್ನು ಕೊಡುವುದು. ಸರ್ವತೇಜಃಸಮೂಹನೂ, ಸರ್ವಮೂರ್ತಿಧರನೂ, ಸರ್ವಾಧಾರನೂ, ಸರ್ವಕಾರಣನೂ, ಆದವನೇ ಕೃಷ್ಣನೆನಿಸುವನು. 'ಕೃಷ್' ಎಂದರೆ ಕರ್ಮನಿರ್ಮೂಲಕನೆಂದೂ, 'ನ್' ಎಂದರೆ ದಾಸ್ಯವೆಂದೂ ಅರ್ಥವಾಗುವುದು

೬೦–೬೧. 'ಅ' ಎಂದರೆ ಕೊಡುವವನೆಂದೂ ಅರ್ಥವಾಗುವುದರಿಂದ ಕರ್ಮಪಾಶವನ್ನು ಪರಿಹರಿಸಿ ಹರಿದಾಸ್ಯವನ್ನು ಕೊಡುವವನೇ ಕೃಷ್ಣನೆನಿಸುವನು. 'ಕೃಷ್' ಎಂದರೆ ಚೇಷ್ಟಾರಹಿತನೆಂದೂ 'ನ್' ಎಂದರೆ ಭಕ್ತಿಯೆಂದೂ, 'ಅ' ಎಂದರೆ ಕೊಡು

ಅಕಾರಃ ಪ್ರಾಪ್ತಿವಚನಸ್ತೇನ ಕೃಷ್ಣ ಇತಿ ಸ್ಮೃತಃ ।
ಕೃಷಿರ್ನಿರ್ವಾಣವಚನೋ ನಕಾರೋ ಮೋಕ್ಷವಾಚಕಃ ॥ ೬೧ ॥

ಅಕಾರೋ ದಾತೃವಚನಸ್ತೇನ ಕೃಷ್ಣ ಇತಿ ಸ್ಮೃತಃ ।
ನಾಮ್ನಾಂ ಭಗವತೋ ನಂದ ಕೋಟೀನಾಂ ಸ್ಮರಣೇನ ಯತ್ ॥ ೬೨ ॥

ತತ್ಫಲಂ ಲಭತೇ ನೂನಂ ಕೃಷ್ಣೇತಿ ಸ್ಮರಣೇ ನರಃ ।
ಯದ್ವಿಧಂ ಸ್ಮರಣಾತ್ಪುಣ್ಯಂ ವಚನಾಚ್ಛ್ರವಣಾತ್ತಥಾ ॥ ೬೩ ॥

ಕೋಟಿಜನ್ಮಾಂಹಸೋ ನಾಶೋ ಭವೇದ್ಯತ್ಸ್ಮರಣಾದಿಕಾತ್ ।
ವಿಷ್ಣೋರ್ನಾಮ್ನಾಂ ಚ ಸರ್ವೇಷಾಂ ಸಾರಾತ್ಸಾರಂ ಪರಾತ್ಪರಂ ॥ ೬೪ ॥

ಕೃಷ್ಣೇತಿ ಸುಂದರಂ ನಾಮ ಮಂಗಲಂ ಭಕ್ತಿದಾಯಕಂ ।
ಕಕಾರೋಚ್ಚಾರಣಾದ್ಭಕ್ತಃ ಕೈವಲ್ಯಂ ಮೃತ್ಯುಜನ್ಮಹಂ ॥ ೬೫ ॥

---

ವವನೆಂದೂ ಅರ್ಥವಾಗುವುದರಿಂದ ಅಚಲನೂ ಭಕ್ತಿದಾತೃವೂ ಆದವನೇ 'ಕೃಷ್ಣ' ನೆನಿಸುವನು. 'ಕೃಷ್' ಎಂದರೆ ನಿರ್ವಾಣವೆಂದೂ 'ನ್' ಎಂದರೆ ಮೋಕ್ಷವೆಂದೂ ಅರ್ಥವಾಗುವುದು.

೬೨–೬೩. 'ಅ' ಎಂದರೆ ದಾತೃವೆಂದೂ ಅರ್ಥವಾಗುವುದರಿಂದ ನಿರ್ವಾಣ ಮತ್ತು ಮೋಕ್ಷವನ್ನು ಕೊಡುವವನೇ 'ಕೃಷ್ಣ'ನೆನಿಸುವನು. ಎಲೈ ನಂದನೇ, ಭಗವಂತನ ಕೋಟಿದಿವ್ಯನಾಮಗಳ ಸ್ಮರಣೆಯಿಂದ ಲಭಿಸುವ ಫಲವು 'ಕೃಷ್ಣ' ಎಂಬ ನಾಮಸ್ಮರಣಮಾತ್ರದಿಂದ ಲಭಿಸುವುದು. ಪರಮಾತ್ಮನ ಸಕಲ ದಿವ್ಯನಾಮಗಳ ಶ್ರವಣಸ್ಮರಣ ಮತ್ತು ಪಠನಗಳಿಂದ ಲಭಿಸುವ ಪುಣ್ಯವೆಲ್ಲವೂ ಕೃಷ್ಣನಾಮಸ್ಮರಣೆಯಿಂದ ಲಭಿಸುವುದು.

೬೪. ವಿಷ್ಣುವಿನ ಸಕಲ ನಾಮಗಳಿಗಿಂತಲೂ ಅತ್ಯಂತಸಾರಭೂತವೂ, ಪರಾತ್ಪರವೂ ಆದ ಕೃಷ್ಣ ಎಂಬ ದಿವ್ಯನಾಮಸ್ಮರಣೆಯಿಂದ ಕೋಟಿಜನ್ಮಗಳ ಪಾಪವು ಪರಿಹಾರವಾಗುವುದು.

೬೫. 'ಕೃಷ್ಣ' ನೆಂಬ ಸುಂದರನಾಮವು ಮಂಗಳಕರವೂ ಭಕ್ತಿದಾಯಕವೂ ಆಗಿರುವುದು. ಕಕಾರೋಚ್ಚಾರಣ ಮಾತ್ರದಿಂದ ಭಕ್ತನು ಜನನ ಮರಣಗಳನ್ನು ಪರಿಹರಿಸಿಕೊಂಡು ಮುಕ್ತನಾಗುವನು.

ಋಕಾರಾದ್ದಾಸ್ಯಮತುಲಂ ಷಕಾರಾದ್ಭಕ್ತಿಮೀಪ್ಸಿತಾಂ ।
ನಕಾರಾತ್ಸಹವಾಸಂ ಚ ತೆತ್ಸಮಂ ಕಾಲಮೇವ ಚ ॥ ೬೬ ॥

ತತ್ಸಾರೂಪ್ಯಂ ವಿಸರ್ಗಾಚ್ಚ ಲಭತೇ ನಾತ್ರ ಸಂಶಯಃ ।
ಕಕಾರೋಚ್ಚಾರಣಾದೇವ ವೇಪಂತೇ ಯಮಕಿಂಕರಾಃ ॥ ೬೭ ॥

ಋಕಾರೋಕ್ತೇರ್ನ ತಿಷ್ಠಂತಿ ಷಕಾರಾತ್ಪಾತಕಾನಿ ಚ ।
ನಕಾರೋಚ್ಚಾರಣಾದ್ರೋಗಾ ಅಕಾರಾನ್ಮೃತ್ಯುರೇವ ಚ ॥ ೬೮ ॥

ಧ್ರುವಂ ಸರ್ವೇ ಪಲಾಯಂತೇ ನಾಮೋಚ್ಚಾರಣಭೀರವಃ ।
ಸ್ಮೃತ್ಯುಕ್ತಿಶ್ರವಣೋದ್ಯೋಗಾತ್ಕೃಷ್ಣನಾಮ್ನೋ ವ್ರಜೇಶ್ವರ ॥ ೬೯ ॥

---

೬೬. ಋಕಾರೋಚ್ಚಾರಣಮಾತ್ರದಿಂದ ಅತುಲವಾದ ದಾಸ್ಯವನ್ನೂ 'ಷ' ಕಾರೋಚ್ಚಾರಣದಿಂದ ಅಭೀಪ್ಸಿತವಾದ ಭಕ್ತಿಯನ್ನೂ 'ನ' ಕಾರೋಚ್ಚಾರಣ ಮಾತ್ರದಿಂದ ಪರಮಾತ್ಮನ ಸನ್ನಿಧಿಯಲ್ಲಿ ಅಖಂಡ ಕಾಲದವರೆಗೆ ಸಹವಾಸವನ್ನೂ ಪಡೆಯುವನು.

೬೭. ವಿಸರ್ಗವನ್ನುಚ್ಚರಿಸಿದ ಮಾತ್ರದಿಂದ ಪರಮಾತ್ಮನ ಸಾರೂಪ್ಯ ವುಂಟಾಗುವುದರಲ್ಲಿ ಸಂದೇಹವಿಲ್ಲ. 'ಕ' ಕಾರೋಚ್ಚಾರಣಮಾತ್ರದಿಂದ ಯಮನ ಕಿಂಕರರೆಲ್ಲರೂ ನಡುಗುವರು.

೬೮. ಋಕಾರೋಚ್ಚಾರಣದಿಂದ ಯಮನ ಕಿಂಕರರು ಹತ್ತಿರ ಬರುವುದಿಲ್ಲ. ಷಕಾರೋಚ್ಚಾರಣೆಯಿಂದ ಪಾಪಗಳೂ, ನಕಾರೋಚ್ಚಾರಣೆಯಿಂದ ರೋಗಗಳೂ ಅಕಾರೋಚ್ಚಾರಣೆಯಿಂದ ಮೃತ್ಯುವೂ ದೂರಹೋಗುವುವು.

೬೯. ಎಲೈ ಗೋಕುಲಾಧಿಪತಿಯಾದ ನಂದನೇ, ಶ್ರೀಕೃಷ್ಣನೆಂಬ ದಿವ್ಯ ನಾಮದ ಸ್ಮರಣೆ ಪಠನ ಮತ್ತು ಶ್ರವಣಗಳಿಂದ ಎಲ್ಲ ಪಾಪಕರ್ಮಗಳೂ ಹೆದರಿ ದೂರವಾಗುವುವು.

ರಥಂ ಗೃಹೀತ್ವಾ ಧಾವಂತಿ ಗೋಲೋಕಾತ್ಕೃಷ್ಣಕಿಂಕರಾಃ ।
ಪೃಥಿವ್ಯಾ ರಜಸಃ ಸಂಖ್ಯಾಂ ಕರ್ತುಂ ಶಕ್ತಾ ವಿಪಶ್ಚಿತಃ ॥ ೭೦ ॥

ನಾಮ್ನಃ ಪ್ರಭಾವಸಂಖ್ಯಾನಂ ಸಂತೋ ವಕ್ತುಂ ನ ಚ ಕ್ಷಮಾಃ ।
ಪುರಾ ಶಂಕರವಕ್ತ್ರೇಣ ನಾಮ್ನೋಽಸ್ಯ ಮಹಿಮಾ ಶ್ರುತಃ ॥ ೭೧ ॥

ಗುಣಾನ್ನಾಮಪ್ರಭಾವಂ ಚ ಕಿಂಚಿಜ್ಜಾನಾತಿ ಮದ್ಗುರುಃ ।
ಬ್ರಹ್ಮಾಽನಂತಶ್ಚ ಧರ್ಮಶ್ಚ ಸುರರ್ಷಿಮನುಮಾನವಾಃ ॥ ೭೨ ॥

ವೇದಾಃ ಸಂತೋ ನ ಜಾನಂತಿ ಮಹಿಮ್ನಃ ಷೋಡಶೀಂ ಕಲಾಂ ।
ಇತ್ಯೇವಂ ಕಥಿತೋ ನಂದ ಮಹಿಮಾ ಚ ಸುತಸ್ಯ ಚ ॥ ೭೩ ॥

ಯಥಾಮತಿ ಯಥಾಜ್ಞಾನಂ ಗುರುವಕ್ತ್ರಾದ್ಯಥಾ ಶ್ರುತಂ ।
ಕೃಷ್ಣಃ ಪೀತಾಂಬರಃ ಕಂಸಧ್ವಂಸೀ ಚ ವಿಷ್ಟರಶ್ರವಾಃ ॥ ೭೪ ॥

---

೭೦-೭೧ ಅಂಥ ಮಹಾತ್ಮನನ್ನು ಕರೆದೊಯ್ಯಲು ಗೋಲೋಕದಿಂದ ಶ್ರೀಕೃಷ್ಣನ ಕಿಂಕರರು ರಥವನ್ನು ತೆಗೆದುಕೊಂಡು ಬರುವರು. ಭೂಮಿಯಲ್ಲಿರುವ ರಜಃಕಣಗಳೆಲ್ಲವನ್ನೂ ಎಣಿಸಲು ಸಮರ್ಥರಾದ ವಿದ್ವಾಂಸರೂ ಕೂಡ, ಪರಮಾತ್ಮನ ದಿವ್ಯನಾಮಸ್ಮರಣೆಯ ಮಹಿಮೆಯನ್ನು ಬಣ್ಣಿಸಲಾರರು. ಪೂರ್ವದಲ್ಲಿ ಶಂಕರನ ಬಾಯಿನಿಂದ ಈ ದಿವ್ಯನಾಮದ ಮಹಿಮೆಯನ್ನು ನಾನು ಕೇಳಿದೆನು.

೭೨-೭೩. ನನ್ನ ಗುರುವು ಶ್ರೀಕೃಷ್ಣಪರಮಾತ್ಮನ ಗುಣಗಳನ್ನೂ, ನಾಮದ ಮಹಿಮೆಯನ್ನೂ ಬಲ್ಲನು. ಬ್ರಹ್ಮನೂ, ಅನಂತನೂ, ಧರ್ಮನೂ, ಸುರರ್ಷಿಗಳೂ ಮನುಮಾನವರೂ, ಚತುರ್ವೇದಗಳೂ ಮತ್ತು ಸಂತರೂ ಶ್ರೀಕೃಷ್ಣನೆಂಬ ನಾಮದ ಮಹಿಮೆಯ ಹದಿನಾರನೆಯ ಒಂದುಭಾಗವನ್ನೂ ಅರಿಯರು. ಎಲೈ ನಂದನೇ ಈ ರೀತಿಯಾಗಿ ಶಿಶುವಾದ ಶ್ರೀಕೃಷ್ಣನ ಮಹಿಮೆಯನ್ನು ಕೇಳಿರುತ್ತೇನೆ.

೭೪-೮೦. ಗುರುಮುಖದಿಂದ ನಾನು ಕೇಳಿದುದನ್ನು ನನಗೆ ತಿಳಿದಮಟ್ಟಿಗೆ ಹೇಳಿರುತ್ತೇನೆ. ಕೃಷ್ಣ, ಪೀತಾಂಬರ, ಕಂಸಧ್ವಂಸಿ, ವಿಷ್ಟರಶ್ರವ, ದೇವಕೀನಂದನ,

ದೇವಕೀನಂದನಃ ಶ್ರೀಶೋ ಯಶೋದಾನಂದನೋ ಹರಿಃ ।
ಸನಾತನೋಽಚ್ಯುತೋಽನಂತಃ ಸರ್ವೇಶಃ ಸರ್ವರೂಪಧೃಕ್ ॥ ೭೫ ॥

ಸರ್ವಾಧಾರಃ ಸರ್ವಗತಿಃ ಸರ್ವಕಾರಣಕಾರಣಂ ।
ರಾಧಾಬಂಧೂ ರಾಧಿಕಾತ್ಮಾ ರಾಧಿಕಾಜೀವನಂ ಸ್ವಯಂ ॥ ೭೬ ॥

ರಾಧಾಪ್ರಾಣೋ ರಾಧಿಕೇಶೋ ರಾಧಿಕಾರಮಣಃ ಸ್ವಯಂ ।
ರಾಧಿಕಾಸಹಚಾರೀ ಚ ರಾಧಾಮಾನಸಪೂರಣಃ ॥ ೭೭ ॥

ರಾಧಾಧನೋ ರಾಧಿಕಾಂಗೋ ರಾಧಿಕಾಸಕ್ತಮಾನಸಃ ।
ರಾಧಿಕಾಚಿತ್ತಚೋರಶ್ಚ ರಾಧಾಪ್ರಾಣಾಧಿಕಃ ಪ್ರಭುಃ ॥ ೭೮ ॥

ಪರಿಪೂರ್ಣತಮಂ ಬ್ರಹ್ಮ ಗೋವಿಂದೋ ಗರುಡಧ್ವಜಃ ।
ನಾಮಾನ್ಯೇತಾನಿ ಕೃಷ್ಣಸ್ಯ ಶ್ರುತಾನಿ ಮನ್ಮುಖಾದ್ಧ್ರುವಿ ॥ ೭೯ ॥

ಜನ್ಮಮೃತ್ಯುಜರಾಹರಾಣ್ಯೇವ ರಕ್ಷ ನಂದ ಶುಭೇಕ್ಷಣ ।
ಕೃತಂ ನಿರೂಪಣಂ ನಾಮ್ನಾಂ ಕನಿಷ್ಠಸ್ಯ ಯಥಾ ಶ್ರುತಂ ॥ ೮೦ ॥

ಜ್ಯೇಷ್ಠಸ್ಯ ಹಲಿನೋ ನಾಮ್ನಃ ಸಂಕೇತಂ ಶೃಣು ಮನ್ಮುಖಾತ್ ।
ಗರ್ಭಸಂಕರ್ಷಣಾದೇವ ನಾಮ್ನಾ ಸಂಕರ್ಷಣಃ ಸ್ಮೃತಃ ॥ ೮೧ ॥

---

ಶ್ರೀಶ ಯಶೋದಾನಂದನ, ಹರಿ, ಸನಾತನ, ಅಚ್ಯುತ, ಅನಂತ, ಸರ್ವೇಶ, ಸರ್ವರೂಪಧೃಕ್, ಸರ್ವಾಧಾರ, ಸರ್ವಗತಿ, ಸರ್ವಕಾರಣಕಾರಣ, ರಾಧಾಬಂಧು, ರಾಧಿಕಾತ್ಮಾ, ರಾಧಿಕಾಜೀವನ, ರಾಧಾಪ್ರಾಣ, ರಾಧಿಕೇಶ, ರಾಧಿಕಾರಮಣ, ರಾಧಿಕಾಸಹಚಾರಿ, ರಾಧಾಮಾನಸಪೂರಣ, ರಾಧಾಧನ, ರಾಧಿಕಾಂಗ, ರಾಧಿಕಾ ಸಕ್ತಮಾನಸ, ರಾಧಿಕಾಚಿತ್ತಚೋರ, ರಾಧಾಪ್ರಾಣಾಧಿಕಪ್ರಭು, ಪರಿಪೂರ್ಣತಮ ಬ್ರಹ್ಮ, ಗೋವಿಂದ, ಗರುಡಧ್ವಜ ಈ ಮುವತ್ತೆರಡು ದಿವ್ಯನಾಮಗಳನ್ನು ನೆನಪಿನಲ್ಲಿಟ್ಟುಕೊಂಡು ಪದೇಪದೇ ಸ್ಮರಿಸುತ್ತಾ ಜನ್ಮ ಜರಾಮರಣಗಳನ್ನು ದಾಟುತ್ತೀಯೆ ವಸುದೇವನ ಕನಿಷ್ಟ ಪುತ್ರನಾದ ಶ್ರೀಕೃಷ್ಣನ ದಿವ್ಯನಾಮಗಳನ್ನು ಹೇಳಿದುದಾಯಿತು.

೮೧. ಈಗ ಹಿರಿಯವನಾದ ಬಲರಾಮನ ಹೆಸರುಗಳ ಅನ್ವರ್ಥತೆಯನ್ನು ಹೇಳುವೆನು ಕೇಳು ದೇವಕಿಯ ಗರ್ಭದಿಂದ ರೋಹಿಣಿಯ ಗರ್ಭಕ್ಕೆ ಸಂಕ್ರಮ ಮಾಡಿದ್ದರಿಂದ ಅವನಿಗೆ ಸಂಕರ್ಷಣನೆಂಬ ಹೆಸರಾಯಿತು.

**ನಾಸ್ತ್ಯಂತೋಽಸ್ಯೈವ ವೇದೇಷು ತೇನಾನಂತ ಇತಿ ಸ್ಮೃತಃ ।**
**ಬಲದೇವೋ ಬಲೋದ್ರೇಕಾದ್ಧಲೀ ಚ ಹಲಧಾರಣಾತ್ ॥ ೮೨ ॥**

**ಶಿತಿವಾಸಾ ನೀಲವಾಸಾನ್ಮುಸಲೀ ಮುಸಲಾಯುಧಾತ್ ।**
**ರೇವತ್ಯಾ ಸಹ ಸಂಭೋಗಾದ್ರೇವತೀರಮಣಃ ಸ್ವಯಂ ॥ ೮೩ ॥**

**ರೋಹಿಣೀಗರ್ಭವಾಸಾತ್ತು ರೌಹಿಣೇಯೋ ಮಹಾಮತಿಃ ।**
**ಇತ್ಯೇವಂ ಜ್ಯೇಷ್ಠಪುತ್ರಸ್ಯ ಶ್ರುತಂ ನಾಮ ನಿವೇದಿತಂ ॥ ೮೪ ॥**

**ಯಾಸ್ಯಾಮ್ಯಹಂ ಗೃಹಂ ನಂದ ಸುಖಂ ತಿಷ್ಠ ಸ್ವಮಂದಿರೇ ।**
**ಬ್ರಾಹ್ಮಣಸ್ಯ ವಚಃ ಶ್ರುತ್ವಾ ನಂದಃ ಸ್ತಬ್ಧೋ ಬಭೂವ ಹ ॥ ೮೫ ॥**

**ನಿಶ್ಚೇಷ್ಟಾ ನಂದಪತ್ನೀ ಚ ಜಹಾಸ ಬಾಲಕಃ ಸ್ವಯಂ ।**
**ಪ್ರಣಮ್ಯೋವಾಚ ನಂದಸ್ತಂ ವಾಕ್ಯಂ ವಿನಯಪೂರ್ವಕಂ ॥ ೮೬ ॥**

---

೮೨. ವೇದಗಳಲ್ಲಿ ನಾಶರಹಿತನೆಂದು ಉಕ್ತವಾಗಿರುವುದರಿಂದ ಇವನು ಅನಂತನೆಂದೂ, ಹೆಚ್ಚು ಬಲಶಾಲಿಯಾದುದರಿಂದ ಬಲದೇವನೆಂದೂ, ನೇಗಿಲನ್ನು ಧರಿಸಿರುವುದರಿಂದ ಹಲೀ ಎಂದೂ ಪ್ರಸಿದ್ಧನಾಗಿರುವನು.

೮೩. ಕಪ್ಪುವಸ್ತ್ರವನ್ನು ಧರಿಸಿರುವುದರಿಂದ ಶಿತಿವಾಸನೆಂದೂ, ಮುಸಲ (ಒನಕೆ) ವನ್ನು ಧರಿಸಿರುವುದರಿಂದ ಮುಸಲೀಯೆಂದೂ, ರೇವತೀದೇವಿಯೊಡನೆ ಸಹವಾಸ ಮಾಡಿ ರೇವತೀರಮಣನೆಂದೂ ಖ್ಯಾತನಾಗಿರುವನು.

೮೪. ಮಹಾಬುದ್ಧಿಶಾಲಿಯಾದ ಬಲದೇವನು ರೋಹಿಣೀ ಗರ್ಭದಲ್ಲಿದ್ದುದರಿಂದ ರೌಹಿಣೇಯನೆಂದೂ ಹೆಸರಾಂತನು. ಈ ರೀತಿಯಾಗಿ ಜ್ಯೇಷ್ಠ ಪುತ್ರನ ಹೆಸರನ್ನು ವಿಶದ ಪಡಿಸಿಯಾಯಿತು

೮೫. ಎಲೈ ನಂದಗೋಪನೇ, ನಾನು ಮನೆಗೆ ಹೋಗುವೆನು. ನೀನು ಇಲ್ಲಿಯೇ ಸುಖವಾಗಿರು. ಬ್ರಾಹ್ಮಣನ ಈ ನುಡಿಗಳನ್ನು ಕೇಳಿ ನಂದನು ಚಲಿಸದೆ ನಿಂತನು.

೮೬. ನಂದನ ಪತ್ನಿಯೂ, ನಿಶ್ಚೇಷ್ಟಳಾಗಿರಲು, ಬಾಲಕನಾದ ಶ್ರೀಕೃಷ್ಣನು ಮಂದಹಾಸ ಬೀರಿದನು. ಆಗ ನಂದನು ಆ ಬ್ರಾಹ್ಮಣನಿಗೆ ನಮಸ್ಕರಿಸಿ ವಿನಯದಿಂದ ಈ ಮಾತುಗಳನ್ನು ಹೇಳಿದನು.

ಪುಟಾಂಜಲಿಯುತೋ ಭೂತ್ವಾ ಭಕ್ತಿನಮ್ರಾತ್ಮಕಂಧರಃ ।

॥ ನಂದ ಉವಾಚ ॥

ಗತಶ್ಚೇತ್ತ್ವಂ ತದಾ ಕರ್ಮ ಕರಿಷ್ಯತ್ಯೇವ ಕೋ ಮಹಾನ್ ॥ ೮೭ ॥

ಸ್ವಯಂ ಶುಭೇಕ್ಷಣಂ ಕೃತ್ವಾ ಕುರು ನಾಮಾನ್ನಪ್ರಾಶನಂ ।
ಯನ್ನಾಮ ಶೌಘ್ರಶ್ಚ ಕಥಿತೋ ರಾಧಾಪ್ರಾಣಾದಿಕೋ ದಶ ॥ ೮೮ ॥

ತಸ್ಯಾಪಿ ಕಾ ವಾ ರಾಧೇತಿ ಕನ್ಯಕಾ ಕಸ್ಯ ಚ ಧ್ರುವಂ ।
ನಂದಸ್ಯ ವಚನಂ ಶ್ರುತ್ವಾ ಜಹಾಸ ಮುನಿಪುಂಗವಃ ॥
ನಿಗೂಢಂ ಪರಮಂ ತತ್ತ್ವಂ ರಹಸ್ಯಂ ಕಥಯಾಮಿ ತೇ ॥ ೮೯ ॥

॥ ಶ್ರೀಗರ್ಗ ಉವಾಚ ॥

ಶೃಣು ನಂದ ಪ್ರವಕ್ಷ್ಯಾಮಿ ಇತಿಹಾಸಂ ಪುರಾತನಂ ॥ ೯೦ ॥

---

೮೭. ಭಕ್ತಿಯಿಂದ ತಲೆಬಾಗಿ ಕೈಮುಗಿದುಕೊಂಡು ನಂದನಿಂತೆಂದನು. ಎಲೈ ವಿಪ್ರೋತ್ತಮನೇ, ನೀನು ಹೊರಟುಹೋದರೆ ಈ ಶಿಶುವಿಗೆ ಮುಂದೆ ಜಾತ ಕರ್ಮಾದಿಗಳನ್ನು ನಡೆಸುವವರಾರು ?

೮೮. ನೀನೇ ಒಂದು ಕ್ಷಣಕಾಲ ಕೃಪೆಮಾಡಿ ಈ ಶಿಶುವಿಗೆ ಅನ್ನಪ್ರಾಶನಾದಿ ಕರ್ಮಗಳನ್ನು ಮಾಡಿಸು. ರಾಧಾಪ್ರಾಣವಲ್ಲಭ ಮುಂತಾದ ಹತ್ತಾರು ಹೆಸರುಗಳನ್ನು ಶ್ರೀಕೃಷ್ಣನಿಗೆ ನೀನು ಈಗ ಹೇಳಿದೆಯಲ್ಲವೇ ?

೮೯. ಆ ರಾಧೆಯೆಂಬ ಕನ್ನಿಕೆಯು ಯಾರ ಮಗಳು ? ಶ್ರೀಕೃಷ್ಣನಿಗೆ ಹೇಗೆ ಪ್ರೀತಿಪಾತ್ರಳು ? ನಂದನಾಡಿದ ಈ ಮಾತುಗಳನ್ನು ಕೇಳಿ ಆ ಮುನಿಶ್ರೇಷ್ಠನು ನಕ್ಕು ಗೋಪ್ಯವೂ, ಪರಮತತ್ತ್ವವೂ ಆದ ಆ ರಹಸ್ಯವನ್ನು ಹೇಳಲಾರಂಭಿಸಿದನು

೯೦. ಶ್ರೀಗರ್ಗಮಹರ್ಷಿ :—ಎಲೈ ನಂದನೇ, ಪುರಾತನವಾದ ಇತಿಹಾಸ ವನ್ನು ಹೇಳುವೆನು ಕೇಳು.

ಪುರಾ ಗೋಲೋಕವೃತ್ತಾಂತಂ ಶ್ರುತಂ ಶಂಕರವಕ್ತ್ರತಃ।
ಶ್ರೀದಾಮ್ನೋ ರಾಧಯಾ ಸಾರ್ದ್ಧಂ ಬಭೂವ ಕಲಹೋ ಮಹಾನ್ ॥ ೯೧ ॥

ಶ್ರೀದಾಮಶಾಪಾದ್ದೈವೇನ ಗೋಪೀ ರಾಧಾ ಚ ಗೋಕುಲೇ।
ವೃಷಭಾನುಸುತಾ ಸಾ ಚ ಮಾತಾ ತಸ್ಯಾಃ ಕಲಾವತೀ ॥ ೯೨ ॥

ಕೃಷ್ಣಸ್ಯಾರ್ದ್ಧಾಂಗಸಂಭೂತಾ ನಾಥಸ್ಯ ಸದೃಶೀ ಸತೀ।
ಗೋಲೋಕವಾಸಿನೀ ಸೇಯಮತ್ರ ಕೃಷ್ಣಾಽಜ್ಞಯಾಧುನಾ ॥ ೯೩ ॥

ಅಯೋನಿಸಂಭವಾ ದೇವೀ ಮೂಲಪ್ರಕೃತಿರೀಶ್ವರೀ।
ಮಾತುರ್ಗರ್ಭಂ ವಾಯುಪೂರ್ಣಂ ಕೃತ್ವಾ ಚ ಮಾಯಯಾ ಸತೀ ॥ ೯೪ ॥

ವಾಯುನಿಃಸರಣೇ ಕಾಲೇ ಧೃತ್ವಾ ಚ ಶಿಶುವಿಗ್ರಹಂ।
ಆವಿರ್ಬಭೂವ ಮಾಯೇಯಂ ಪೃಥ್ವ್ಯಾಂ ಕೃಷ್ಣೋಪದೇಶತಃ ॥ ೯೫ ॥

---

೯೧. ಹಿಂದೆ ಗೋಕುಲದಲ್ಲಿ ಶ್ರೀದಾಮನಿಗೂ ರಾಧಾದೇವಿಗೂ ಕಲಹವುಂಟಾಯಿತೆಂಬುದನ್ನು ಶಂಕರನಬಾಯಿನಿಂದ ಕೇಳಿದ್ದೀಯೆ.

೯೨. ದೈವಪ್ರೇರಿತವಾದ ಶ್ರೀದಾಮನ ಶಾಪದಿಂದ ರಾಧೆಯು ಈ ನಂದಗೋಕುಲದಲ್ಲಿ ವೃಷಭಾನುವೆಂಬ ಗೊಲ್ಲನ ಮಗಳಾಗಿ ಜನಿಸಿರುವಳು. ಅವಳ ತಾಯಿಯ ಹೆಸರು ಕಲಾವತಿ.

೯೩. ಶ್ರೀಕೃಷ್ಣನ ಅರ್ಧಾಂಗದಿಂದ ಅವತರಿಸಿ ಪತಿಗೆ ತಕ್ಕ ಸತಿಯೆನಿಸಿ, ಈಗ ಶ್ರೀಕೃಷ್ಣನ ಆಜ್ಞೆಯಿಂದಲೇ ಆಕೆಯು ಗೋಲೋಕದಿಂದ ಇಲ್ಲಿಗೆ ಅವತರಿಸಿದ್ದಾಳೆ.

೯೪. ಅಯೋನಿಜೆಯೂ, ಮೂಲಪ್ರಕೃತಿಯೂ ಆದ ಆ ದೇವಿಯು, ತನ್ನ ಮಾಯಾಶಕ್ತಿಯಿಂದ ತಾಯಿಯ ಗರ್ಭವನ್ನು ವಾಯುವಿನಿಂದ ತುಂಬಿದಳು.

೯೫. ಆ ವಾಯುವು ಹೊರಕ್ಕೆ ಬರುವ ಕಾಲದಲ್ಲಿ ತಾನು ಶಿಶುರೂಪವನ್ನು ಧರಿಸಿ ಶ್ರೀಕೃಷ್ಣನ ಉಪದೇಶದಿಂದ ಪೃಥ್ವಿಯಲ್ಲಿ ಆವಿರ್ಭವಿಸಿದಳು.

ವರ್ಧತೇ ಸಾ ವ್ರಜೇ ರಾಧಾ ಶುಕ್ಲೇ ಚಂದ್ರಕಲಾ ಯಥಾ ।
ಶ್ರೀಕೃಷ್ಣತೇಜಸೋಽರ್ಧೇನ ಸಾ ಚ ಮೂರ್ತಿಮತೀ ಸತೀ ॥ ೯೬ ॥

ಏಕಾ ಮೂರ್ತಿರ್ದ್ವಿಧಾಭೂತಾ ಭೇದೋ ವೇದೇ ನಿರೂಪಿತಃ ।
ಇಯಂ ಸ್ತ್ರೀ ಸೋ ಪುಮಾನ್ ಕಿಂವಾ ಸಾ ವಾ ಕಾಂತಾ ಪುಮಾನಯಂ ॥ ೯೭ ॥

ದ್ವೇ ರೂಪೇ ತೇಜಸಾ ತುಲ್ಯೇ ರೂಪೇಣ ಚ ಗುಣೇನ ಚ ।
ಪರಾಕ್ರಮೇಣ ಬುದ್ಧ್ಯಾ ವಾ ಜ್ಞಾನೇನ ಸಂಪದಾಽಪಿ ಚ ॥ ೯೮ ॥

ಪುರತೋ ಗಮನೇನ್ನೈವ ಕಿಂತು ಸಾ ವಯಸಾಧಿಕಾ ।
ಧ್ಯಾಯತೇ ತಾಮಯಂ ಶಶ್ವದಿಮಂ ಸಾ ಸ್ಮರತಿ ಪ್ರಿಯಂ ॥ ೯೯ ॥

ರಚಿತಾ ಸಾಽಸ್ಯ ಪ್ರಾಣೈಶ್ಚ ತತ್ಪ್ರಾಣೈರ್ಮೂರ್ತಿಮಾನಯಂ ।
ಅಸ್ಯ ರಾಧಾನುಸಾರೇಣ ಗೋಕುಲಾಗಮನಂ ಪರಂ ॥ ೧೦೦ ॥

---

೯೬. ಆ ರಾಧಾದೇವಿಯು ಈಗ ನಂದಗೋಕುಲದಲ್ಲಿ ಶುಕ್ಲಪಕ್ಷದ ಚಂದ್ರನ ಕಲೆಯಂತೆ ಅಭಿವೃದ್ಧಿಗೊಳ್ಳುತ್ತಿದ್ದಾಳೆ. ಶ್ರೀಕೃಷ್ಣನ ಅರ್ಧತೇಜಸ್ಸಿನಿಂದ ಆಕೆಯೂ ಮೂರ್ತಿಮತ್ತಾಗಿದ್ದಾಳೆ.

೯೭. ಒಂದೇ ಮೂರ್ತಿಯು ಎರಡು ರೂಪವಾಗಿ ಭಿನ್ನವಾಗಿದೆಯೆಂದು ವೇದದಲ್ಲಿ ನಿರೂಪಿತವಾಗಿದೆ. ಇವಳು ಸ್ತ್ರೀ, ಅವನು ಪುರುಷ ಅಥವಾ ಅವಳು ಸ್ತ್ರೀ, ಇವನು ಪುರುಷ ಹೇಗೆಬೇಕಾದರೂ ಆಗಬಹುದು.

೯೮. ಈ ಎರಡುರೂಪಗಳೂ, ಗುಣರೂಪಗಳಲ್ಲಿಯೂ, ಬುದ್ಧಿ ಜ್ಞಾನಗಳಲ್ಲಿಯೂ, ಪರಾಕ್ರಮ ಸಂಪತ್ತುಗಳಲ್ಲಿಯೂ ಒಂದೇ ಸಮನಾಗಿವೆ.

೯೯. ಆದರೆ ಅವಳು ಮುಂದಾಗಿಯೇ ಭೂಮಿಯಲ್ಲಿ ಅವತರಿಸಿರುವುದರಿಂದ ವಯಸ್ಸಿನಲ್ಲಿ ಶ್ರೀಕೃಷ್ಣನಿಗಿಂತ ದೊಡ್ಡವಳಾಗಿದ್ದಾಳೆ. ಆದರೂ ಕ್ಷಣಕಾಲವೂ ಎಡಬಿಡದೆ ಅವಳು ಇವನನ್ನೂ, ಇವನು ಅವಳನ್ನೂ ಧ್ಯಾನಿಸುತ್ತಿದ್ದಾರೆ.

೧೦೦. ಇವನ ಪ್ರಾಣಗಳಿಂದ ಆ ರಾಧೆಯೂ, ಅವಳ ಪ್ರಾಣಗಳಿಂದ ಇವನೂ ಮೂರ್ತಿವಂತರಾಗಿದ್ದಾರೆ. ರಾಧೆಯನ್ನು ಅನುಸರಿಸಿಯೇ ಇವನು ಗೋಕುಲಕ್ಕೆ ಬಂದಿದ್ದಾನೆ.

ಸ್ವೀಕಾರಂ ಸಾರ್ಥಕಂ ಕರ್ತುಂ ಗೋಕುಲೇ ಯತ್ಕೃತಂ ಪುರಾ ।
ಕಂಸಭೀತಿಚ್ಛಲೇನೈವ ಗೋಕುಲಾಗಮನಂ ಹರೇಃ ॥ ೧೦೧ ॥

ಪ್ರತಿಜ್ಞಾಪಾಲನಾರ್ಥಾಯ ಭಯೇಶಸ್ಯ ಭಯಂ ಕುತಃ ।
ರಾಧಾಶಬ್ದಸ್ಯ ವ್ಯುತ್ಪತ್ತಿಃ ಸಾಮವೇದೇ ನಿರೂಪಿತಾ ॥ ೧೦೨ ॥

ನಾರಾಯಣಸ್ತಾಮುವಾಚ ಬ್ರಹ್ಮಾಣಂ ನಾಭಿಪಂಕಜೇ ।
ಬ್ರಹ್ಮಾ ತಾಂ ಕಥಯಾಮಾಸ ಬ್ರಹ್ಮಲೋಕೇ ಚ ಶಂಕರಂ ॥ ೧೦೩ ॥

ಪುರಾ ಕೈಲಾಸಶಿಖರೇ ಮಾಮುವಾಚ ಮಹೇಶ್ವರಃ ।
ದೇವಾನಾಂ ದುರ್ಲಭಂ ನಂದ ನಿಶಾಮಯ ವದಾಮಿ ತೇ ॥ ೧೦೪ ॥

---

೧೦೧. ಹಿಂದೆ ತಾನು ಗೋಲೋಕದಲ್ಲಿದ್ದಾಗ 'ರಾಧೆಯನ್ನು ಸ್ವೀಕರಿಸುವುದಾಗಿ' ತಾನು ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸುವುದಕ್ಕಾಗಿ ಈಗ ಕಂಸ ಭಯವೆಂಬ ನೆಪದಿಂದ ಶ್ರೀಹರಿಯು ಗೋಕುಲಕ್ಕೆ ಬಂದಿದ್ದಾನೆ.

೧೦೨. ಪ್ರತಿಜ್ಞಾಪರಿಪಾಲನೆಗಾಗಿ ಶ್ರೀಕೃಷ್ಣನು ಅವತರಿಸಿರುವನೇ ಹೊರತು ಭಯನಿವಾರಕನಾದ ಅವನಿಗೆ ಭಯವೇತರದು ? ಸಾಮವೇದದಲ್ಲಿ 'ರಾಧಾ' ಎಂಬ ಶಬ್ದಕ್ಕೆ ಈ ರೀತಿ ವ್ಯುತ್ಪತ್ತಿ ಹೇಳಿದೆ.

೧೦೩. ಆ ವ್ಯುತ್ಪತ್ತಿಯನ್ನು ಶ್ರೀಮನ್ನಾರಾಯಣನು ತನ್ನ ನಾಭಿಕಮಲದಲ್ಲಿರುವ ಬ್ರಹ್ಮನಿಗೂ, ಬ್ರಹ್ಮನು ತನ್ನ ಲೋಕದಲ್ಲಿ ಶ್ರೀಶಂಕರನಿಗೂ ವಿಸ್ತರಿಸಿ ಹೇಳಿದನು.

೧೦೪. ಪೂರ್ವದಲ್ಲಿ ಮಹೇಶ್ವರನು ಕೈಲಾಸಪರ್ವತದಲ್ಲಿ ನನಗೆ ಹೇಳಿದನು. ಎಲೈ ನಂದನೇ, ದೇವತೆಗಳಿಗೂ ದುರ್ಲಭವಾದ ಆ 'ರಾಧಾ' ಶಬ್ದವ್ಯುತ್ಪತ್ತಿಯನ್ನು ಈಗ ನಿನಗೆ ಹೇಳುವೆನು. ಕೇಳು.

ಸುರಾಸುರಮುನೀಂದ್ರಾಣಾಂ ವಾಂಛಿತಾಂ ಮುಕ್ತಿದಾಂ ಪರಾಂ ।
ರೇಫೋ ಹಿ ಕೋಟಿಜನ್ಮಾಘಂ ಕರ್ಮಭೋಗಂ ಶುಭಾಶುಭಂ ॥ ೧೦೫ ॥

ಆಕಾರೋ ಗರ್ಭವಾಸಂ ಚ ಮೃತ್ಯುಂ ಚ ರೋಗಮುತ್ಸೃಜೇತ್ ।
ಧಕಾರ ಆಯುಷೋ ಹಾನಿಮಾಕಾರೋ ಭವಬಂಧನಂ ॥ ೧೦೬ ॥

ಶ್ರವಣಸ್ಮರಣೋಕ್ತಿಭ್ಯಃ ಪ್ರಣಶ್ಯತಿ ನ ಸಂಶಯಃ ।
ರೇಫೋ ಹಿ ನಿಶ್ಚಲಾಂ ಭಕ್ತಿಂ ದಾಸ್ಯಂ ಕೃಷ್ಣಪದಾಂಬುಜೇ ॥ ೧೦೭ ॥

ಸರ್ವೇಪ್ಸಿತಂ ಸದಾನಂದಂ ಸರ್ವಸಿದ್ಧೌಘಮೀಶ್ವರಂ ।
ಧಕಾರಃ ಸಹವಾಸಂ ಚ ತತ್ತುಲ್ಯಕಾಲಮೇವ ಚ ॥ ೧೦೮ ॥

---

೧೦೫. ಆ ವ್ಯುತ್ಪತ್ತಿಯು ಸುರಾಸುರ ಮುನೀಂದ್ರರಿಗೆ ಅಭಿಲಷಿತವೂ, ಮುಕ್ತಿದಾಯಕವೂ ಆಗಿದೆ. ‘ ರಾಧಾ ’ ಶಬ್ದದಲ್ಲಿರುವ ರೇಫವು ಕೋಟಿಜನ್ಮಗಳ ಪಾಪವನ್ನೂ, ಶುಭಾಶುಭಕರ್ಮಗಳ ಫಲವನ್ನೂ ನಾಶಮಾಡುವುದು.

೧೦೬. ‘ ಆ ’ ಕಾರವು ಮಾತೃಗರ್ಭವಾಸವನ್ನೂ, ರೋಗಮೃತ್ಯುಗಳನ್ನೂ ನಾಶಗೊಳಿಸುವುದು ‘ ಧ ’ ಕಾರವು (ಆಯುಃಕ್ಷೀಣತೆಯನ್ನೂ) ಅಲ್ಪಾಯುಸ್ಸನ್ನೂ, ಆ ’ಕಾರವು ಸಂಸಾರಬಂಧನವನ್ನೂ ನಾಶಗೊಳಿಸುವುದು.

೧೦೭. ‘ರಾಧಾ’ ಶಬ್ದವನ್ನು ಶ್ರವಣಮಾಡುವುದರಿಂದಲೂ, ಸ್ಮರಿಸುವುದರಿಂದಲೂ, ಬಾಯಿನಲ್ಲಿ ಹೇಳುವುದರಿಂದಲೂ, ಸಮಸ್ತ ಕಿಲ್ಬಿಷಗಳೂ ಪರಿಹಾರವಾಗುವುವು ‘ರೇಫ’ವು ಶ್ರೀಕೃಷ್ಣನ ಪಾದಕಮಲಗಳಲ್ಲಿ ನಿಶ್ಚಲವಾದ ಭಕ್ತಿಯನ್ನೂ ದಾಸ್ಯವನ್ನೂ ಕೊಡುವುದು

೧೦೮. ಅಲ್ಲದೆ ಸರ್ವರಿಗೂ ಅಭೀಪ್ಸಿತವೂ, ದುರ್ಲಭವೂ ಆದ ಸದಾನಂದವನ್ನು ಕೊಡುವುದು. ‘ಧ’ಕಾರವು ಆ ಪರಮಾತ್ಮನೊಡನೆ ಸರ್ವದಾ ವಾಸಮಾಡುವ ಸೌಭಾಗ್ಯವನ್ನು ಕೊಡುವುದು.

ದದಾತಿ ಸಾಷ್ಟಿರ್ಸಾರೂಪ್ಯಂ ತತ್ವಜ್ಞಾನಂ ಹರೇಃ ಸಮಂ ।
ಆಕಾರಸ್ತೇಜಸಾಂ ರಾಶಿಂ ದಾನಶಕ್ತಿಂ ಹರೌ ಯಥಾ ॥ ೧೦೯ ॥

ಯೋಗಶಕ್ತಿಂ ಯೋಗಮತಿಂ ಸರ್ವಕಾಲಂ ಹರಿಸ್ಮೃತಿಂ ।
ಶ್ರುತ್ಯುಕ್ತಿಸ್ಮರಣಾದ್ಯೋಗಾನ್ಮೋಹಜಾಲಂ ಚ ಕಿಲ್ಬಿಶಂ ॥ ೧೧೦ ॥

ರೋಗಶೋಕಮೃತ್ಯುಯಮಾ ವೇಪಂತೇ ನಾತ್ರ ಸಂಶಯಃ ।
ರಾಧಾಮಾಧವಯೋಃ ಕಿಂಚಿದ್ವ್ಯಾಖ್ಯಾನಂ ಚ ಯತಃ ಶ್ರುತಂ ॥ ೧೧೧ ॥

ತದುಕ್ತಂ ಚ ಯಥಾಜ್ಞಾನಂ ಸಾಕಲ್ಯಂ ವಕ್ತುಮಕ್ಷಮಃ ।
ಆರಾದ್ ವೃಂದಾವನೇ ನಂದ ವಿವಾಹೋ ಭವಿತಾಽನಯೋಃ ॥ ೧೧೨ ॥

---

೧೦೯. ಮತ್ತು ಶ್ರೀಹರಿಯ ತತ್ವಜ್ಞಾನವನ್ನೂ, ಸಾಷ್ಟಿರ್ ಸಾರೂಪ್ಯಗಳನ್ನೂ ಕೊಡುವುದು. 'ಆ'ಕಾರವು ದಿವ್ಯತೇಜಸ್ಸನ್ನೂ ಶ್ರೀಹರಿಯಂತೆ ಔದಾರ್ಯವನ್ನೂ ಕೊಡುವುದು.

೧೧೦. ಅಲ್ಲದೆ ಯೋಗಶಕ್ತಿಯನ್ನೂ, ಯೋಗಬುದ್ಧಿಯನ್ನೂ, ಸರ್ವದಾ ಶ್ರೀಹರಿಸ್ಮರಣೆಯನ್ನೂ, ಕೊಡುವುದು. ಒಟ್ಟಿನಲ್ಲಿ ರಾಧಾ ಶಬ್ದದ ಶ್ರವಣಸ್ಮರಣೆಗಳಿಂದಲೂ, ನಿರ್ವಚನದಿಂದಲೂ ಸಕಲ ಮಾಯಾಜಾಲವೂ, ಪಾಪವೂ ನಾಶವಾಗುವುದು.

೧೧೧. 'ರಾಧಾಮಾಧವ' ಶಬ್ದಗಳಿಗೆ ವ್ಯಾಖ್ಯಾನವನ್ನು ಯಾರು ಕೇಳುವರೋ ಅವರದೆಸೆಯಿಂದ, ರೋಗ, ಶೋಕ, ಮೃತ್ಯು ಮತ್ತು ಯಮ ಎಲ್ಲರೂ ಹೆದರಿ ಓಡಿ ಹೋಗುವರು.

೧೧೨. ಸಂಪೂರ್ಣವಾಗಿ ವರ್ಣಿಸಲು ಸಾಧ್ಯವಿಲ್ಲದೆ ನನಗೆ ತಿಳಿದಷ್ಟನ್ನು ವಿವರಿಸಿದ್ದೇನೆ. ಎಲೈ ನಂದನೇ, ಶೀಘ್ರದಲ್ಲೇ ವೃಂದಾವನದಲ್ಲಿ ಶ್ರೀರಾಧಾಕೃಷ್ಣರಿಗೆ ವಿವಾಹವಾಗುವುದು.

ಪುರೋಹಿತೋ ಜಗದ್ಧಾತಾ ಕೃತ್ವಾಽಗ್ನಿಂ ಸಾಕ್ಷಿಣಂ ಮುದಾ।
ಕುಬೇರಪುತ್ರಮೋಕ್ಷಂ ಚ ಗವ್ಯಸ್ಯಾಽಽಹೃತ್ಯ ಭಕ್ಷಣಂ ॥ ೧೧೩ ॥

ಹಿಂಸನಂ ಧೇನುಕಸ್ಯೈವ ಕಾನನೇ ತಾಲಭೋಜನಂ।
ಬಕಕೇಶಿಪ್ರಲಂಬಾನಾಂ ಹಿಂಸನಂ ಚಾಥ ಲೀಲಯಾ ॥ ೧೧೪ ॥

ಮೋಕ್ಷಣಂ ದ್ವಿಜಪತ್ನೀನಾಂ ಮಿಷ್ಟಾನ್ನಪಾನಭೋಜನಂ।
ಭಂಜನಂ ಶಕ್ರಯಾಗಸ್ಯ ಶಕ್ರಾದ್ಗೋಕುಲರಕ್ಷಣಂ ॥ ೧೧೫ ॥

ಗೋಪೀನಾಂ ವಸ್ತ್ರಹರಣಂ ವ್ರತಸಂಪಾದನಂ ತಥಾ।
ತಾಭ್ಯಃ ಪುನರ್ವಸ್ತ್ರದಾನಂ ವರದಾನಂ ಯಥೇಪ್ಸಿತಂ ॥ ೧೧೬ ॥

ಚೇತಸಾಂ ಹರಣಂ ತಾಸಾಮುಯಂ ವಶ್ಯಾಃ ಕರಿಷ್ಯತಿ।
ರಾಸೋತ್ಸವಂ ಮಹಾರಮ್ಯಂ ಸರ್ವೇಷಾಂ ಹರ್ಷವರ್ಧನಂ ॥ ೧೧೭ ॥

---

೧೧೩. ಜಗತ್ಸೃಷ್ಟಿಕರ್ತನಾದ ಬ್ರಹ್ಮನು ಅಗ್ನಿಸಾಕ್ಷಿಕವಾಗಿ ಆ ವಿವಾಹವನ್ನು ನೆರವೇರಿಸುವನು. ಅಲ್ಲದೆ ಶ್ರೀಕೃಷ್ಣನು ನಾರದನ ಶಾಪದಿಂದ ಮತ್ತಿ ಮರದ ರೂಪದಲ್ಲಿರುವ ಕುಬೇರನ ಮಕ್ಕಳ ಶಾಪವನ್ನು ಪರಿಹರಿಸಿ, ಗವ್ಯಭಕ್ಷಣೆಮಾಡುವನು.

೧೧೪. ಧೇನುಕಾಸುರನನ್ನು ಸಂಹಾರಮಾಡಿ, ಕಾನನದಲ್ಲಿ ತಾಳವೃಕ್ಷದ ಕೆಳಗೆ ಭೋಜನಮಾಡುವನು. ಅಲ್ಲದೆ ಬಕಾಸುರ, ಕೇಶಿ ಮತ್ತು ಪ್ರಲಂಬ ಮುಂತಾದ ರಾಕ್ಷಸರನ್ನು ಲೀಲಾಮಾತ್ರದಿಂದ ಸಂಹರಿಸುವನು.

೧೧೫. ದ್ವಿಜಪತ್ನಿಯರ ಬಂಧನವನ್ನು ಬಿಡಿಸಿ, ಮಿಷ್ಟಾನ್ನಪಾನಾದಿಗಳನ್ನು ಸವಿದು, ಇಂದ್ರನ ಯಾಗವನ್ನು ನಾಶಗೊಳಿಸಿ ಗೋವರ್ಧನ ಪರ್ವತವನ್ನೆತ್ತಿ ಗೋವುಗಳನ್ನು ರಕ್ಷಿಸುವನು.

೧೧೬. ಗೋಪಿಕಾಸ್ತ್ರೀಯರ ವಸ್ತ್ರಗಳನ್ನು ಅಪಹರಿಸಿ ಪುನಃ ಅವರಿಗೆ ವಸ್ತ್ರದಾನಮಾಡುವನು. ಮತ್ತು ಅವರಿಗೆ ಅಭೀಪ್ಸಿತವಾದ ವರಗಳನ್ನು ಕೊಡುವನು.

೧೧೭. ಅಲ್ಲದೆ ಅವರ ಮನಸ್ಸನ್ನು ಆಕರ್ಷಿಸಿ ತನ್ನ ವಶಮಾಡಿಕೊಳ್ಳುವನು. ಅವರೆಲ್ಲರೊಡನೆ ಅತ್ಯಂತ ಮನೋಹರವೂ, ಹರ್ಷದಾಯಕವೂ ಆದ ರಾಸೋತ್ಸವವನ್ನೂ ನಡೆಸುವನು.

**ಪೂರ್ಣಚಂದ್ರೋದಯೇ ನಕ್ತಂ ವಸಂತೇ ರಾಸಮಂಡಲೇ ।**
**ಗೋಪೀನಾಂ ನವಸಂಭೋಗಾತ್ಕೃತ್ವಾ ಪೂರ್ಣಂ ಮನೋರಥಂ** ॥ ೧೦೮ ॥

**ತಾಭಿಃ ಸಹ ಜಲಕ್ರೀಡಾಂ ಕರಿಷ್ಯತಿ ಕುತೂಹಲಾತ್ ।**
**ವಿಚ್ಛೇದೋಽಸ್ಯ ವರ್ಷಶತಂ ಶ್ರೀದಾಮಶಾಪಹೇತುಕಂ** ॥ ೧೦೯ ॥

**ಗೋಪಾಲೈರ್ಗೋಪಿಕಾಭಿಶ್ಚ ಭವಿತಾ ರಾಧಯಾ ಸಹ ।**
**ಮಥುರಾಗಮನಂ ತತ್ರ ಗೋಪೀನಾಂ ಶೋಕವರ್ಧನಂ** ॥ ೧೧೦ ॥

**ಪುನಃ ಪ್ರಬೋಧನಂ ತಾಸಾಂ ದಾನಮಾಧ್ಯಾತ್ಮಿಕಸ್ಯ ಚ ।**
**ಸ್ಯಂದನಾಕ್ರೂರಯೋ ರಕ್ಷಾಂ ಸದ್ಯಸ್ತಾಭ್ಯಾಂ ಕರಿಷ್ಯತಿ** ॥ ೧೧೧ ॥

**ರಥಮಾರೋಹಣಂ ಕೃತ್ವಾ ಮಥುರಾಗಮನಂ ಪುನಃ ।**
**ಪಿತೃಭ್ರಾತೃವ್ರಜೈಃ ಸಾರ್ಧಂ ವಿಲಂಘ್ಯ ಯಮುನಾಂ ವ್ರಜೇ** ॥ ೧೧೨ ॥

---

೧೦೮ ರಾಸಮಂಡಲದಲ್ಲಿ ವಸಂತಋತುವಿನ ಪೂರ್ಣಚಂದ್ರೋದಯವುಳ್ಳ ರಾತ್ರಿಯಲ್ಲಿ ಎಲ್ಲ ಗೋಪಿಯರೊಡನೆ ಸಂಭೋಗಮಾಡಿ ಅವರ ಮನೋರಥವನ್ನು ಪೂರ್ಣಗೊಳಿಸುವನು.

೧೦೯. ಅವರೊಡನೆ ಕುತೂಹಲದಿಂದ ಜಲಕ್ರೀಡೆಯನ್ನಾಡುವನು. ಶ್ರೀದಾಮನ ಶಾಪದ ಕಾರಣವಾಗಿ ನೂರು ವರ್ಷಗಳ ಕಾಲ ಅವರಿಗೆ ಇವನ ವಿರಹ ಉಂಟಾಗುವುದು

೧೧೦. ಗೋಪಗೋಪಿಯರೂ ರಾಧಾದೇವಿಯೂ ಮಥುರೆಗೆ ಹೋಗುವ ಶ್ರೀಕೃಷ್ಣನ ವಿರಹದಿಂದ ಶೋಕಗೊಳ್ಳುವರು.

೧೧೧. ಅನಂತರ ಅವರಿಗೆಲ್ಲ ಆಧ್ಯಾತ್ಮಿಕ ತತ್ವವನ್ನು ಬೋಧಿಸಿ ಜ್ಞಾನದಾನ ಮಾಡುವನು. ಆಗಲೇ ಸ್ಯಂದನ ಮತ್ತು ಅಕ್ರೂರರನ್ನು ರಕ್ಷಿಸುವನು

೧೧೨ ರಥವನ್ನೇರಿ ಪಿತೃಭ್ರಾತೃಗಳೊಡನೆಯೂ, ಗೋಪರೊಡನೆಯೂ, ಯಮುನಾನದಿಯನ್ನು ದಾಟಿ ಪುನಃ ಮಥುರಾನಗರಿಗೆ ಬರುವನು.

ಅಕ್ರೂರಾಯ ಜ್ಞಾನದಾನಂ ದರ್ಶಯಿತ್ವಾ ಸ್ವಕಂ ಜಲೇ |
ಕೌತುಕೇನ ಚ ಸಾಯಾಹ್ನೇ ನಗರಾತ್ಸರ್ವದರ್ಶನಂ ॥ ೧೨೩ ॥

ಮಾಲಾಕಾರಿತಂತುವಾಯಕುಬ್ಜಾನಾಂ ಬಂಧಮೋಕ್ಷಣಂ |
ಧನುರ್ಭಂಗಂ ಶಂಕರಸ್ಯ ಯಾಗಸ್ಥಾನಪ್ರದರ್ಶನಂ ॥ ೧೨೪ ॥

ಹಿಂಸನಂ ಗಜಮಲ್ಲಾನಾಂ ದರ್ಶನಂ ನೃಪತೇಃ ಪುರಃ |
ಕಂಸಸ್ಯ ಹಿಂಸನಂ ಸದ್ಯಃ ಪಿತ್ರೋರ್ನಿಗಡಮೋಕ್ಷಣಂ ॥ ೧೨೫ ॥

ಪ್ರಬೋಧನಂ ಚ ಯುಷ್ಮಾಕಮುಗ್ರಸೇನಾಭಿಷೇಚನಂ |
ತಸ್ಯ ತಸ್ಯ ವಧೂನಾಂ ಚ ಜ್ಞಾನಾಚ್ಛೋಕಾಪನೋದನಂ ॥ ೧೨೬ ॥

---

೧೨೩. ಅಕ್ರೂರನೊಡನೆ ಪ್ರಯಾಣಮಾಡುವಾಗ, ಯಮುನೆಯಲ್ಲಿ ಸ್ನಾನಮಾಡುತ್ತಿದ್ದ ಅಕ್ರೂರನಿಗೆ ನೀರಿನಲ್ಲಿ ತನ್ನ ದಿವ್ಯಸ್ವರೂಪವನ್ನು ತೋರಿ ಜ್ಞಾನೋದಯವನ್ನುಂಟುಮಾಡುವನು. ಸಾಯಂಕಾಲದಲ್ಲಿ ಕುತೂಹಲದಿಂದ ತನ್ನ ಬಂಧುಗಳಿಗೆಲ್ಲ ದರ್ಶನವನ್ನು ಕೊಡುವನು.

೧೨೪ ಹೂವಾಡಿಗ, ನೆಯ್ಗೆಯವ ಮತ್ತುಕುಬ್ಜ ಮುಂತಾದವರ ಬಂಧನವನ್ನು ಬಿಡಿಸಿ, ಧನುರ್ಯಾಗಮಹೋತ್ಸವದಲ್ಲಿ ಶಂಕರನ ಧನಸ್ಸನ್ನು ಭಂಗ ಮಾಡುವನು.

೧೨೫. ಕಂಸನ ಎದುರಿನಲ್ಲೇ ಮುಷ್ಟಿಕ ಚಾಣೂರರನ್ನು ಸಂಹರಿಸಿ ಅನಂತರ ಕಂಸನನ್ನು ಸಂಹಾರಮಾಡಿ, ತಂದೆತಾಯಿಗಳ ಬಂಧನವನ್ನು ಬಿಡಿಸುವನು.

೧೨೬. ನಿಮಗೆಲ್ಲ ದಿವ್ಯ ಜ್ಞಾನವನ್ನು ಉಪದೇಶಿಸಿ, ಉಗ್ರಸೇನನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಿ, ಆಯಾಯ ಗೋಪಸ್ತ್ರೀಯರಿಗೆಲ್ಲ ಜ್ಞಾನೋಪದೇಶಮಾಡಿ ಶೋಕಪರಿಹಾರ ಮಾಡುವನು.

ಭ್ರಾತುಃ ಸ್ವಸ್ಯೋಪನಯನಂ ವಿದ್ಯಾದಾನಂ ಗುರೋರ್ಮುಖಾತ್ ।
ಗುರುಪುತ್ರಪ್ರದಾನಂ ಚ ಪುನರಾಗಮನಂ ಗೃಹೇ ॥ ೧೨೭ ॥

ಛಲನಂ ನೃಪಸೈನ್ಯಾನಾಂ ಯವನಸ್ಯ ದುರಾತ್ಮನಃ ।
ನಿರ್ಮಾಣಂ ದ್ವಾರಕಾಯಾಶ್ಚ ಮುಚುಕುಂದಸ್ಯ ಮೋಕ್ಷಣಂ ॥ ೧೨೮ ॥

ದ್ವಾರಕಾಗಮನಂ ಚೈವ ಯಾದವೈಃ ಸಹ ಕೌತುಕಾತ್ ।
ಸ್ತ್ರೀಸಂಘಾನಾಂ ವಿಹರಣಂ ತಾಭಿಃ ಸಾರ್ದ್ಧಂ ಚ ಕ್ರೀಡನಂ ॥ ೧೨೯ ॥

ಸೌಭಾಗ್ಯವರ್ಧನಂ ತಾಸಾಂ ಪುತ್ರಪೌತ್ರಾದಿಕಸ್ಯ ಚ ।
ಮಣಿಸಂಬಂಧಿನೋ ಮಿಥ್ಯಾಕಲಂಕಸ್ಯ ಚ ಮೋಕ್ಷಣಂ ॥ ೧೩೦ ॥

ಸಾಹಾಯ್ಯಂ ಪಾಂಡವಾನಾಂ ಚ ಭಾರಾವತರಣಾದಿಕಂ ।
ನಿಷ್ಪನ್ನಂ ರಾಜಸೂಯಸ್ಯ ಧರ್ಮಪುತ್ರಸ್ಯ ಲೀಲಯಾ ॥ ೧೩೧ ॥

---

೧೨೭. ಕೃಷ್ಣನೂ ಅವನ ಸಹೋದರನಾದ ಬಲರಾಮನೂ ಉಪನೀತರಾಗಿ ಗುರುಮುಖದಿಂದ ವಿದ್ಯಾದಾನಹೊಂದಿ, ಗುರುವಿಗೆ ಪುತ್ರೋತ್ಪತ್ತಿಯಾಗುವಂತೆ ಅನುಗ್ರಹಮಾಡಿ ತಮ್ಮ ಮನೆಗೆ ಹಿಂತಿರುಗುವರು.

೧೨೮. ಅನಂತರ ಶ್ರೀಕೃಷ್ಣನು ದುರಾತ್ಮನಾದ ಕಾಲಯವನನ ಸೈನ್ಯವನ್ನೆಲ್ಲ ನಾಶಗೊಳಿಸಿ, ದ್ವಾರಕೆಯನ್ನು ನಿರ್ಮಾಣಮಾಡಿ ಮುಚುಕುಂದನನ್ನು ಬಂಧನದಿಂದ ಬಿಡಿಸುವನು.

೧೨೯. ಯಾದವರೊಡನೆ ಕುತೂಹಲದಿಂದ ದ್ವಾರಕೆಗೆ ಹೋಗಿ ಅಲ್ಲಿ ಸ್ತ್ರೀಯರ ಸಮೂಹದೊಡಗೂಡಿ ಕ್ರೀಡಿಸುವನು.

೧೩೦. ಅವರ ಸೌಭಾಗ್ಯವನ್ನು ಅಭಿವೃದ್ಧಿಗೊಳಿಸಿ, ಪುತ್ರ ಪೌತ್ರರನ್ನು ರಕ್ಷಿಸುವನು. ಆಗ ಸ್ಯಮಂತಕ ಮಣಿಯ ಸಂಬಂಧವಾಗಿ ಬರುವ ಕಳಂಕವನ್ನು ಪರಿಹರಿಸಿಕೊಳ್ಳುವನು.

೧೩೧. ಅನಂತರ ಪಾಂಡವರಿಗೆ ಸಹಾಯಮಾಡಿ ಭೂಭಾರವನ್ನಿಳುಹುವನು. ಆಗ ಧರ್ಮಪುತ್ರನಿಂದ ರಾಜಸೂಯಯಾಗವನ್ನು ಲೀಲಾಮಾತ್ರದಿಂದ ಮಾಡಿಸುವನು.

ಪಾರಿಜಾತಸ್ಯ ಹರಣಂ ಶಕ್ರಾಹಂಕಾರಮರ್ದನಂ ।
ವ್ರತಪೂರ್ಣಂ ಚ ಸತ್ಯಾಯಾ ಬಾಣಸ್ಯ ಭುಜಕೃಂತನಂ　　॥ ೧೩೨ ॥

ಮರ್ದನಂ ಶಿವಸೈನ್ಯಾನಾಂ ಹರಸ್ಯ ಜೃಂಭಣಂ ಪರಂ ।
ಹರಣಂ ಬಾಣಪುತ್ರ್ಯಾಶ್ಚೈವಾನಿರುದ್ಧಸ್ಯ ಮೋಕ್ಷಣಂ　　॥ ೧೩೩ ॥

ವಾರಾಣಸ್ಯಾಶ್ಚ ದಹನಂ ವಿಪ್ರದಾರಿದ್ರ್ಯಭಂಜನಂ ।
ವಿಪ್ರಪುತ್ರಪ್ರದಾನಂ ಚ ದುಷ್ಟಾನಾಂ ದಮನಾದಿಕಂ　　॥ ೧೩೪ ॥

ತೀರ್ಥಯಾತ್ರಾಪ್ರಸಂಗೇನ ಯುಷ್ಮಾಭಿಃ ಸಹ ದರ್ಶನಂ ।
ಕೃತ್ವಾ ಚ ರಾಧಯಾ ಸಾರ್ಧಂ ವ್ರಜಮಾಗಮಿತಾ ಪುನಃ　　॥ ೧೩೫ ॥

ಪ್ರಸ್ಥಾಪಯಿತ್ವಾ ದ್ವಾರಾಂ ಚ ಪರಂ ನಾರಾಯಣಾಂಶಕಂ ।
ಸರ್ವಂ ನಿಷ್ಪಾದನಂ ಕೃತ್ವಾ ಗೋಲೋಕಂ ರಾಧಯಾ ಸಹ　　॥ ೧೩೬ ॥

---

೧೩೨. ಪಾರಿಜಾತವೃಕ್ಷವನ್ನು ಅಪಹರಿಸಿ ಇಂದ್ರನ ಅಹಂಕಾರವನ್ನು ಮುರಿಯುವನು. ಸತ್ಯಭಾಮೆಯ ವ್ರತವನ್ನು ಪೂರ್ಣಗೊಳಿಸುವನು ಮತ್ತು ಬಾಣಾಸುರನ ಭುಜಗಳನ್ನು ಕತ್ತರಿಸುವನು.

೧೩೩. ಆ ಸಂದರ್ಭದಲ್ಲಿ ಶಿವನ ಸೈನ್ಯವನ್ನೆಲ್ಲ ಮರ್ದನ ಮಾಡುವುದರಿಂದ ಶಿವನು ಬಹಳಕೋಪಗೊಳ್ಳುವನು. ಅನಂತರ ಬಾಣಪುತ್ರಿಯಾದ ಉಷೆಯನ್ನು ಅನಿರುದ್ಧನಿಗೆ ವಿವಾಹಮಾಡಿಸಿ ಮೋಕ್ಷಗೊಳಿಸುವನು.

೧೩೪. ವಾರಾಣಸಿಯನ್ನು ದಾಹಮಾಡಿ ವಿಪ್ರರ ದಾರಿದ್ರ್ಯವನ್ನು ಪರಿಹರಿಸುವುದಲ್ಲದೆ, ವಿಪ್ರರಿಗೆ ಪುತ್ರಾನುಗ್ರಹಮಾಡಿ, ದುಷ್ಟರನ್ನು ದಮನಮಾಡುವನು.

೧೩೫. ತೀರ್ಥಯಾತ್ರೆಯ ಪ್ರಸಂಗದಿಂದ ನಿಮ್ಮೆಲ್ಲರಿಗೂ ತನ್ನ ದರ್ಶನವನ್ನು ಕೊಟ್ಟು ರಾಧಾದೇವಿಯೊಡನೆ ಪುನಃ ಗೋಕುಲಕ್ಕೆ ಹಿಂತಿರುಗುವನು.

೧೩೬. ಅನಂತರ ದ್ವಾರಕಿಗೆ ಹೋಗಿ ತನ್ನ ನಾರಾಯಣಾಂಶದ ಕಾರ್ಯವನ್ನೆಲ್ಲ ಮುಗಿಸಿ, ರಾಧಾದೇವಿಯೊಡನೆ ಪುನಃ ಗೋಲೋಕಕ್ಕೆ ತೆರಳುವನು.

ಗಮಿಷ್ಯತ್ಯೇವ ಗೋಲೋಕಂ ನಾಥೋಽಯಂ ಜಗತಾಂ ಪತಿಃ ।
ನಾರಾಯಣಶ್ಚ ವೈಕುಂಠಂ ಗಮಿತಾ ಸ್ಮ ತ್ವಯಾ ಸಹ ॥ ೧೩೭ ॥

ಧರ್ಮಗೇಹಮೃಷೀ ದ್ವೌ ಚ ವಿಷ್ಣುಃ ಕ್ಷೀರೋದಮೇವ ಚ ।
ಇತ್ಯೇವಂ ಕಥಿತಂ ನಂದ ಭವಿಷ್ಯಂ ವೇದನಿರ್ಣಯಂ ॥ ೧೩೮ ॥

ಶ್ರೂಯತಾಂ ಸಾಪ್ರತಂ ಕರ್ಮ ಯದರ್ಥಂ ಗಮನಂ ಮಮ ।
ಮಾಘಶುಕ್ಲಚತುರ್ದಶ್ಯಾಂ ಕುರು ಕರ್ಮ ಶುಭೇ ಕ್ಷಣೇ ॥ ೧೩೯ ॥

ಗುರುವಾರೇ ಚ ರೇವತ್ಯಾಂ ವಿಶುದ್ಧೇ ಚಂದ್ರತಾರಕೇ ।
ಚಂದ್ರಸ್ಥೇ ಮೀನಲಗ್ನೇ ಚ ಲಗ್ನೇಶಪೂರ್ಣದರ್ಶನೇ ॥ ೧೪೦ ॥

---

೧೩೭. ಜಗತ್ಪತಿಯಾದ ಶ್ರೀಕೃಷ್ಣನು ಗೋಲೋಕಕ್ಕೂ, ನಾರಾಯಣಾಂಶ ಸಂಭೂತನಾದ ಶ್ರೀಹರಿಯು ವೈಕುಂಠಕ್ಕೂ ಹಿಂತಿರುಗಿ ಹೋಗುವರು ಅನಂತರ ನೀನೂ ಮುಕ್ತನಾಗುವೆ.

೧೩೮. ನರನಾರಾಯಣರು ಧರ್ಮನ ಮಂದಿರಕ್ಕೂ, ವಿಷ್ಣುವು ಕ್ಷೀರ ಸಾಗರಕ್ಕೂ ತೆರಳುವರು. ಎಲೈ ನಂದನೇ ವೇದದಲ್ಲಿ ನಿರ್ಣೀತವಾಗಿರುವ ಭವಿಷ್ಯ ವನ್ನು ಈ ರೀತಿಯಾಗಿ ನಿನಗೆ ಮೊದಲೇ ತಿಳಿಸಿದ್ದೇನೆ.

೧೩೯. ಈಗ ನಾನು ಯಾವ ಕರ್ಮೋಪದೇಶಕ್ಕಾಗಿ ಬಂದೆನೋ ಅದನ್ನು ವಿವರಿಸುವೆನು ಕೇಳು. ಮಾಘ ಶುಕ್ಲ ಚತುರ್ದಶಿಯ ದಿವಸ ಶುಭಕ್ಷಣದಲ್ಲಿ ನಾನು ಹೇಳುವ, (ಜಾತಕರ್ಮ ಮತ್ತು ಅನ್ನಪ್ರಾಶನ) ಕರ್ಮವನ್ನು ಮಾಡು.

೧೪೦. ಗುರವಾರ ರೇವತೀ ನಕ್ಷತ್ರದಲ್ಲಿ ಚಂದ್ರತಾರಾಬಲವು ಪೂರ್ಣ ವಾಗಿರುವಾಗ, ಚಂದ್ರನು ಮೀನಲಗ್ನದಲ್ಲಿದ್ದು ಪೂರ್ಣಬಿಂಬದಿಂದ ಕೂಡಿರುವಾಗ ಈ ಕರ್ಮವನ್ನಾಚರಿಸಬೇಕು.

ವಣಿಜೇ ಕರಣೋತ್ಕೃಷ್ಟೇ ಶುಭಯೋಗೇ ಮನೋಹರೇ ।
ಸುದುರ್ಲಭೇ ದಿನೇ ತತ್ರ ಸರ್ವೋತ್ಕೃಷ್ಟೋಪಯೋಗಿಕೇ　　॥ ೧೪೧ ॥

ಆಲೋಚ್ಯ ಪಂಡಿತೈಃ ಸಾರ್ಧಂ ಕುರು ಕರ್ಮ ಮುದಾನ್ವಿತಃ ।
ಇತ್ಯುಕ್ತ್ವಾ ಬಹಿರಾಗತ್ಯ ಸ ಉವಾಚ ಮುನೀಶ್ವರಃ　　॥ ೧೪೨ ॥

ಹೃಷ್ಟೋ ನಂದೋ ಯಶೋದಾ ಚ ಕರ್ಮೋದ್ಯೋಗಂ ಚಕಾರ ಹ ।
ಏತಸ್ಮಿನ್ನಂತರೇ ದ್ರಷ್ಟುಂ ಗರ್ಗಂ ಗೋಪಾಶ್ಚ ಗೋಪಿಕಾಃ　　॥ ೧೪೩ ॥

ಬಾಲಕಾ ಬಾಲಿಕಾಶ್ಚೈವ ಆಜಗ್ಮುರ್ನಂದಮಂದಿರಂ ।
ದದೃಶುಸ್ತೇ ಮುನಿಶ್ರೇಷ್ಠಂ ಗ್ರೀಷ್ಮಮಧ್ಯಾಹ್ನಭಾಸ್ಕರಂ　　॥ ೧೪೪ ॥

ಶಿಷ್ಯಸಂಘೈಃ ಪರಿವೃತಂ ಜ್ವಲಂತಂ ಬ್ರಹ್ಮತೇಜಸಾ ।
ಗೂಢಯೋಗಂ ಪ್ರರೋಚಂತಂ ಸಿದ್ಧಾಯ ಪೃಚ್ಛತೇ ಮುದಾ　　॥ ೧೪೫ ॥

---

೧೪೧. ಬುಧಗ್ರಹವೂ, ಕರಣಗಳೂ ಉತ್ಕೃಷ್ಟವಾಗಿ ಮನೋಹರವಾದ ಶುಭಯೋಗವಿರುವಾಗ, ಸರ್ವೋತ್ಕೃಷ್ಟವೂ, ಸುದುರ್ಲಭವೂ ಆದ ಶುಭದಿನದಲ್ಲಿ ಈ ಕರ್ಮವನ್ನಾಚರಿಸಬೇಕು.

೧೪೨. ಪಂಡಿತರೊಡನೆ ಯೋಚಿಸಿ ಈ ಕರ್ಮವನ್ನು ಮಾಡು ಹೀಗೆ ಹೇಳಿ ಆ ಮುನೀಶ್ವರನು ಹೊರಗೆ ಬಂದು ಕುಳಿತುಕೊಂಡನು.

೧೪೩. ಸಂತುಷ್ಟರಾದ ಯಶೋದೆ ಮತ್ತು ನಂದರು ಕರ್ಮಮಾಡಲು ಉದ್ಯುಕ್ತರಾದರು. ಈ ಮಧ್ಯೆ ಆ ಗರ್ಗಮಹರ್ಷಿಯನ್ನು ನೋಡಲು ಗೋಪ ಗೋಪಿಯರೆಲ್ಲರೂ ಅಲ್ಲಿಗೆ ಬಂದರು.

೧೪೪. ಬಾಲಬಾಲಿಕೆಯರೂ ಕೂಡ ನಂದನ ಮಂದಿರಕ್ಕೆ ಬಂದು, ಗ್ರೀಷ್ಮ ಮಧ್ಯಾಹ್ನದ ಸೂರ್ಯನಂತೆ ತೇಜಸ್ವಿಯಾದ ಆ ಮುನೀಶ್ವರನನ್ನು ಕಂಡರು.

೧೪೫. ಶಿಷ್ಯಸಂಘದಿಂದ ಪರಿವೃತನಾಗಿ ಬ್ರಹ್ಮ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಆ ಮುನಿಯು, ತನ್ನನ್ನು ಪ್ರಶ್ನಿಸುತ್ತಿದ್ದ ಸಿದ್ಧಪುರುಷರಿಗೆ ಗೂಢವಾದ ಯೋಗಜ್ಞಾನವನ್ನು ಉಪದೇಶಿಸುತ್ತಿದ್ದನು.

ಪಶ್ಯಂತಂ ಸಸ್ಮಿತಂ ನಂದಭವನಾನಾಂ ಪರಿಚ್ಛದಂ ।
ಸ್ವರ್ಣಸಿಂಹಾಸನಸ್ಥಂ ಚ ಯೋಗಮುದ್ರಾಧರಂ ವರಂ ॥ ೧೪೬ ॥

ಭೂತಂ ಭವ್ಯಂ ಭವಿಷ್ಯಂ ಚ ಪಶ್ಯಂತಂ ಜ್ಞಾನಚಕ್ಷುಷಾ ।
ಹೃದೀಶ್ವರಂ ಪ್ರಪಶ್ಯಂತಂ ಸಿದ್ಧಂ ಮಂತ್ರಪ್ರಭಾವತಃ ॥ ೧೪೭ ॥

ಬಹಿರ್ಯಶೋದಾಕ್ರೋಡಸ್ಥಂ ತಾದೃಶಂ ಸಸ್ಮಿತಂ ಶಿಶುಂ ।
ಮಹೇಶದತ್ತಧ್ಯಾನೇನ ಯದ್ರೂಪಂ ಚ ನಿರೂಪಿತಂ ॥ ೧೪೮ ॥

ತಂ ದೃಷ್ಟ್ವಾ ಪರಮಪ್ರೀತ್ಯಾ ಪೂರ್ಣಭೂತಮನೋರಥಂ ।
ಸಾಶ್ರುನೇತ್ರಂ ಪುಲಕಿತಂ ನಿಮಗ್ನಂ ಭಕ್ತಿಸಾಗರೇ ॥ ೧೪೯ ॥

ಹೃದಿ ಪೂಜಾಂ ಪ್ರಣಾಮಂ ಚ ಕುರ್ವಂತಂ ಯೋಗಚರ್ಯಯಾ ।
ಮೂರ್ಧ್ನಾ ಪ್ರಣೇಮುಸ್ತೇ ತಂ ಚ ಸ ಚ ತಾನಾಶಿಷಂ ದದೌ ॥ ೧೫೦ ॥

---

೧೪೬. ಅಲ್ಲದೆ ಸುವರ್ಣಸಿಂಹಾಸನದಲ್ಲಿ ಕುಳಿತು ಯೋಗಮುದ್ರೆಯನ್ನು ಧಾರಣೆಮಾಡಿ, ನಂದನ ಮನೆಯ ವೈಭವವನ್ನೆಲ್ಲ ನಗುಮುಖದಿಂದ ನೋಡುತ್ತಿದ್ದನು

೧೪೭. ಆ ಮುನಿಯು ಜ್ಞಾನದೃಷ್ಟಿಯಿಂದ ಭೂತ, ವರ್ತಮಾನ, ಮತ್ತು ಭವಿಷ್ಯಗಳನ್ನು ತಿಳಿಯುತ್ತಿದ್ದನಲ್ಲದೆ, ಮಂತ್ರಶಕ್ತಿಯಿಂದ ತನ್ನ ಹೃದಯಸ್ಥನಾದ ಈಶ್ವರನ ಸಾಕ್ಷಾತ್ಕಾರ ಮಾಡುತ್ತಿದ್ದನು.

೧೪೮ ಹೊರಗೆ ಯಶೋದೆಯ ತೊಡೆಯಮೇಲೆ ಶಿಶುರೂಪದಲ್ಲಿ ನಗುತ್ತ ಪವಡಿಸಿದ್ದ ಪರಮಾತ್ಮನನ್ನು ಮಹೇಶ್ವರನು ಉಪದೇಶಿಸಿದ ಧ್ಯಾನಕ್ರಮದಿಂದ ಧ್ಯಾನಿಸುತ್ತಿದ್ದನು.

೧೪೯. ಆ ಪರಮಾತ್ಮನ ದರ್ಶನದಿಂದ ಪರಿಪೂರ್ಣಮನೋರಥನಾಗಿ, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ ಭಕ್ತಿಸಾಗರದಲ್ಲಿ ಮುಳುಗಿದ್ದನು.

೧೫೦. ಈ ರೀತಿಯಾಗಿ ಯೋಗಮಾರ್ಗದಿಂದ ಮನಸ್ಸಿನಲ್ಲಿಯೇ ಪರಮಾತ್ಮನ ಪೂಜಾಪ್ರಣಾಮಗಳನ್ನು ಮಾಡುತ್ತಿದ್ದ ಆ ಮುನಿವರನಿಗೆ ಅವರೆಲ್ಲರೂ ನಮಸ್ಕರಿಸಲು, ಅವನು ಎಲ್ಲರಿಗೂ ಆಶೀರ್ವದಿಸಿದನು.

ಆಸನಸ್ಥೋ ಮುನಿಸ್ತಸ್ಥೌ ತೇ ಜಗ್ಮುಃ ಸ್ವಾಲಯಂ ಮುದಾ ।
ನಂದಃ ಸ್ವಾನಂದಯುಕ್ತಶ್ಚ ಬಂಧೂನ್ಮಂಗಲಪತ್ರಿಕಾಃ　　॥ ೧೫೧ ॥

ಪ್ರಸ್ಥಾಪಯಾಮಾಸ ಶೀಘ್ರಮಾರಾದೂರಸ್ಥಿತಾನ್ಮುದಾ ।
ದಧಿಕುಲ್ಯಾಂ ದುಗ್ಧಕುಲ್ಯಾಂ ಘೃತಕುಲ್ಯಾಂ ಪ್ರಪೂರಿತಾಂ　　॥ ೧೫೨ ॥

ಗುಡಕುಲ್ಯಾಂ ತೈಲಕುಲ್ಯಾಂ ಮಧುಕುಲ್ಯಾಂ ಚ ವಿಸ್ತೃತಾಂ ।
ನವನೀತಕುಲ್ಯಾಂ ಪೂರ್ಣಾಂ ಚ ತಕ್ರಕುಲ್ಯಾಂ ಯದೃಚ್ಛಯಾ　　॥ ೧೫೩ ॥

ಶರ್ಕರೋದಕಕುಲ್ಯಾಂ ಚ ಪರಿಪೂರ್ಣಾಂ ಚ ಲೀಲಯಾ ।
ತಂಡುಲಾನಾಂ ಚ ಶಾಲೀನಾಮುಚ್ಚೈಶ್ಚ ಶತಪರ್ವತಾನ್　　॥ ೧೫೪ ॥

ಪೃಥುಕಾನಾಂ ಶೈಲಶತಂ ಲವಣಾನಾಂ ಚ ಸಪ್ತ ಚ ।
ಸಪ್ತಶೈಲಾಂಶ್ಚರ್ಕರಾಣಾಂ ಲಡ್ಡುಕಾನಾಂ ಚ ಸಪ್ತ ಚ　　॥ ೧೫೫ ॥

---

೧೫೧. ಅನಂತರ ಮುನಿಯು ಪೀಠದಲ್ಲಿ ಯೋಗಾಸಕ್ತನಾಗಿರಲು ಎಲ್ಲರೂ ಸಂತೋಷದಿಂದ ಹಿಂತಿರುಗಿದರು. ಇತ್ತ ನಂದನು ಆನಂದತುಂದಿಲನಾಗಿ ತನ್ನ ಬಂಧುಗಳಿಗೆಲ್ಲ ಲಗ್ನಪತ್ರಿಕೆಯನ್ನು ಕಳುಹಿಸಿದನು

೧೫೨. ದೂರದಲ್ಲಿ ಇರುವವರಿಗೂ, ಹತ್ತಿರದಲ್ಲಿರುವವರಿಗೂ ಆಹ್ವಾನ ಪತ್ರಿಕೆಯನ್ನು ಕಳುಹಿ, ಮೊಸರು ಹಾಲು ಮತ್ತು ತುಪ್ಪಗಳಿಂದ ಪರಿಪೂರ್ಣವಾದ ಕಡಾಯಿ (ಕೊಳಾಯಿಗಳನ್ನು) ಗಳನ್ನು ದಾನಕ್ಕೆ ಸಿದ್ಧಗೊಳಿಸಿದನು.

೧೫೩. ವಿಸ್ತಾರವಾದ ಬೆಲ್ಲ, ಎಣ್ಣೆ, ಮತ್ತು ಜೇನುತುಪ್ಪಗಳ ಕಾಲುವೆಯನ್ನೂ, ಬೆಣ್ಣೆ ಮತ್ತು ಮಜ್ಜಿಗೆ ತುಂಬಿರುವ ಕಡಾಯಿಗಳನ್ನು ಸಿದ್ಧಗೊಳಿಸಿದನು.

೧೫೪. ಸಕ್ಕರೆ ಪಾನಕದ ಕಾಲುವೆಯನ್ನು ಸಿದ್ಧಪಡಿಸಿದ್ದಲ್ಲದೆ ಭತ್ತ, ಅಕ್ಕಿ ಮುಂತಾದ ಧಾನ್ಯಗಳ ರಾಶಿಯನ್ನು ಪರ್ವತದಂತೆ ಎತ್ತರವಾಗಿ ಸುರಿಸಿದನು.

೧೫೫. ಅವಲಕ್ಕಿಗಳ ನೂರಾರು ರಾಶಿಯನ್ನೂ, ಏಳು ಉಪ್ಪಿನರಾಶಿಯನ್ನೂ, ಏಳು ಸಕ್ಕರೆಯ ಪರ್ವತವನ್ನೂ ಏಳು ಲಡ್ಡುಗಳ ರಾಶಿಯನ್ನೂ ಕಲ್ಪಿಸಿದನು.

ಪರಿಪಕ್ವಫಲಾನಾಂ ಚ ತತ್ರ ಷೋಡಶಪರ್ವತಾನ್ ।
ಯವಗೋಧೂಮಚೂರ್ಣಾನಾಂ ಪಕ್ವಲಡ್ಡುಕಪಿಂಡಕಾನ್ ॥ ೧೫೬ ॥

ಮೋದಕಾನಾಂ ಚ ಶೈಲಂ ಚ ಸ್ವಸ್ತಿಕಾನಾಂ ಚ ಪರ್ವತಾನ್ ।
ಕಪರ್ದಕಾನಾಮತ್ಯುಚ್ಚೈಃ ಶೈಲಾನ್ಸಪ್ತ ಚ ನಾರದ ॥ ೧೫೭ ॥

ಕರ್ಪೂರಾದಿಕಯುಕ್ತಾನಾಂ ತಾಂಬೂಲಾನಾಂ ಚ ಮಂದಿರಂ ।
ವಿಸ್ತೃತಂ ದ್ವಾರಹೀನಂ ಚ ವಾಸಿತೋದಕಸಂಯುತಂ ॥ ೧೫೮ ॥

ಚಂದನಾಗುರುಕಸ್ತೂರೀಕುಂಕುಮೇನ ಸಮನ್ವಿತಂ ।
ನಾನಾವಿಧಾನಿ ರತ್ನಾನಿ ಸ್ವರ್ಣಾನಿ ವಿವಿಧಾನಿ ಚ ॥ ೧೫೯ ॥

ಮುಕ್ತಾಫಲಾನಿ ರಮ್ಯಾಣಿ ಪ್ರವಾಲಾನಿ ಮುದಾನ್ವಿತಃ ।
ನಾನಾವಿಧಾನಿ ಚಾರೂಣಿ ವಾಸಾಂಸಿ ಭೂಷಣಾನಿ ಚ ॥ ೧೬೦ ॥

---

೧೫೬. ಮಾಗಿದ ಹಣ್ಣುಗಳ ಹದಿನಾರು ರಾಶಿಯನ್ನೂ, ಅಕ್ಕಿ ಮತ್ತು ಗೋಧಿಯ ಹಿಟ್ಟಿನಿಂದ ಮಾಡಿ ಬೇಯಿಸಿರುವ ಲಾಡುಉಂಡೆಗಳ ರಾಶಿಯನ್ನೂ ಸಿದ್ಧಗೊಳಿಸಿದನು.

೧೫೭. ಮೋದಕ ಮತ್ತು ಸ್ವಸ್ತಿಕಗಳ ಪರ್ವತವನ್ನೂ, ಕಪರ್ದಕಗಳ ಅತ್ಯುನ್ನತವಾದ ಏಳು ಪರ್ವತಗಳನ್ನೂ ಆ ನಂದನು ವಿರಚಿಸಿದನು.

೧೫೮ ಅಲ್ಲದೆ ಅನೇಕ ವಿಸ್ತಾರವಾದ ಕೊಠಡಿಗಳೊಳಗೆ ಸುಗಂಧೋದಕವನ್ನು ಚಿಮುಕಿಸಿ, ಬಾಗಿಲುಗಳನ್ನು ತೆರೆದನು. ಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲಗಳನ್ನು ಸಿದ್ಧಪಡಿಸಿದನು.

೧೫೯. ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮಕೇಸರಿಗಳನ್ನೂ, ನಾನಾವಿಧ ಸುವರ್ಣ ಮತ್ತು ರತ್ನಗಳನ್ನು ದಾನಕ್ಕಾಗಿ ಶೇಖರಿಸಿಟ್ಟನು.

೧೬೦. ಮನೋಹರವಾದ ಮುತ್ತು ಮತ್ತು ಹವಳಗಳನ್ನೂ ಅನೇಕ ವಿಧವಾದ ವಸ್ತ್ರಾಭರಣಗಳನ್ನೂ ದಾನಕ್ಕಾಗಿ ಸಂಗ್ರಹಿಸಿಟ್ಟನು.

ಪುತ್ರಾನ್ನಪ್ರಾಶನೇ ನಂದಃ ಕಾರಯಾಮಾಸ ಕೌತುಕಾತ್ ।
ಸಂಸ್ಕಾರಯುಕ್ತಂ ರುಚಿರಂ ಚಂದನದ್ರವಚರ್ಚಿತಂ ॥ ೧೬೧ ॥

ಪ್ರಾಂಗಣಂ ಕದಲೀಸ್ತಂಭೈ ರಸಾಲನವಪಲ್ಲವೈಃ ।
ಗ್ರಥಿತೈಃ ಸೂಕ್ಷ್ಮವಸ್ತ್ರೇಣ ವೇಷ್ಟಯಾಮಾಸ ಕೌತುಕಾತ್ ॥ ೧೬೨ ॥

ಯುಕ್ತಂ ಮಂಗಲಕುಂಭೈಶ್ಚ ಫಲಪಲ್ಲವಸಂಯುತೈಃ ।
ಚಂದನಾಗುರುಕಸ್ತೂರೀಪುಷ್ಪಮಾಲಾ ವಿರಾಜಿತೈಃ ॥ ೧೬೩ ॥

ಮಾಲ್ಯಾನಾಂ ವರವಸ್ತ್ರಾಣಾಂ ರಾಶಿಭಿಶ್ಚ ವಿರಾಜಿತಂ ।
ಗವಾಂ ಚ ಮಧುಪರ್ಕಾಣಾಮಾಸನಾನಾಂ ಚ ನಾರದ ॥ ೧೬೪ ॥

ಫಲಾನಾಂ ಜಲಕುಂಭಾನಾಂ ಸಮೂಹೈಶ್ಚ ಸಮನ್ವಿತಂ ।
ನಾನಾಪ್ರಕಾರೈರ್ವಾದ್ಯೈಶ್ಚ ದುರ್ಲಭೈಃ ಸುಮನೋಹರೈಃ ॥ ೧೬೫ ॥

---

೧೬೧. ಶಿಸುವಿನ ಅನ್ನಪ್ರಾಶನಕರ್ಮಕ್ಕಾಗಿ ನಂದನು ಇಷ್ಟು ಸಿದ್ಧಗೊಳಿಸಿದ್ದಲ್ಲದೆ, ಮನೆಯ ಅಂಗಣವನ್ನು ಸುವಾಸಿತವಾದ ಚಂದನೋದಕದಿಂದ ತೊಳೆಸಿದನು.

೧೬೨. ಅನಂತರ ದ್ವಾರದಲ್ಲಿ ಬಾಳೆಯಕಂಬಗಳನ್ನೂ ಮಾವಿನ ಚಿಗುರುಗಳನ್ನೂ ಸೂಕ್ಷ್ಮವಸ್ತ್ರದ ಬಾವುಟಗಳನ್ನೂ ಕಟ್ಟಿಸಿದನು

೧೬೩. ದ್ವಾರದ ಉಭಯ ಪಾರ್ಶ್ವಗಳಲ್ಲೂ ಚಿಗುರು ಮತ್ತು ಹಣ್ಣುಗಳಿಂದ ಕೂಡಿ, ಚಂದನ, ಅಗುರು, ಕಸ್ತೂರಿ ಮತ್ತು ಪುಷ್ಪಮಾಲೆಗಳಿಂದ ಶೋಭಿಸುತ್ತಲಿರುವ ಪೂರ್ಣಕುಂಭಗಳನ್ನು ಇಡಿಸಿದನು.

೧೬೪ ಎಲೈ ನಾರದನೇ, ಉತ್ತಮವಾದ ಮಾಲೆಗಳನ್ನೂ ಶ್ರೇಷ್ಠವಾದ ವಸ್ತ್ರಗಳನ್ನೂ ರಾಶಿರಾಶಿಯಾಗಿ ಇರಿಸಿದುದಲ್ಲದೆ, (ಹಸುವಿನ) ಪಂಚಾಮೃತವನ್ನೂ ಪೀಠಗಳನ್ನೂ ಸಿದ್ಧಗೊಳಿಸಿದನು.

೧೬೫ ಅನೇಕ ಫಲಗಳಿಂದಲೂ, ಜಲಕುಂಭಗಳಿಂದಲೂ ಪರಿಪೂರ್ಣವಾದ ಆ ಮಂದಿರದ ಬಾಗಿಲಿನಲ್ಲಿ ಮನೋಹರವಾದ ನಾನಾವಿಧ ವಾದ್ಯಗಳು ಭೋರ್ಗರೆಯುತ್ತಿದ್ದವು.

ಢಕ್ಕಾನಾಂ ದುಂದುಭೀನಾಂ ಚ ಪಟಹಾನಾಂ ತಥೈವ ಚ ।
ಮೃದಂಗಮುರಜಾದೀನಾಮಾನಕಾನಾಂ ಸಮೂಹಕೈಃ ॥ ೧೬೬ ॥

ವಂಶೀಸನ್ನಹನೀಕಾಂಸ್ಯಕರಯಂತ್ರೈಶ್ಚ ಶಬ್ದಿತಂ ।
ವಿದ್ಯಾಧರೀಣಾಂ ನೃತ್ಯೇನ ಭೃಂಗಿಮಾಭ್ರಮಣೇನ ಚ ॥ ೧೬೭ ॥

ಗಂಧರ್ವನಾಯಕಾನಾಂ ಚ ಸಂಗೀತೈಸ್ಸುರ್ಜಚ್ಛ್ರನಾಯುತೈಃ ।
ಸ್ವರ್ಣಸಿಂಹಾಸನಾನಾಂ ಚ ರಥಾನಾಂ ನಿಸ್ವನೈರ್ಯುತಂ ॥ ೧೬೮ ॥

ಏತಸ್ಮಿನ್ನಂತರೇ ನಂದಮುವಾಚ ವಾಚಕೋ ಮುದಾ ।
ಆಜಗ್ಮುರ್ಬಲ್ಲವೇಂದ್ರಾಶ್ಚ ಬಾಂಧವಾ ಬಲ್ಲವಾಸ್ತಥಾ ॥ ೧೬೯ ॥

ಅಶ್ವಸ್ಥಾಶ್ಚ ಗಜಸ್ಥಾಶ್ಚ ರಥಸ್ಥಾಶ್ಚೇತಿ ಸತ್ವರಂ ।
ಆಜಗ್ಮೂ ರಾಜಪುತ್ರಾಶ್ಚ ರತ್ನಾಲಂಕಾರಭೂಷಿತಾಃ ॥ ೧೭೦ ॥

---

೧೬೬. ಢಕ್ಕೆ, ನಗಾರಿ, ತಮಟೆ, ಮೃದಂಗ, ಮುರಜ, ಕಹಳೆ, ಮುಂತಾದ ಸಕಲ ವಾದ್ಯಗಳೂ ಮನೋಹರವಾಗಿ ಧ್ವನಿಗೈಯ್ಯುತ್ತಿದ್ದವು.

೧೬೭. ಕೊಳಲು, ತಂಬೂರಿ, ತಾಳ, ಮುಂತಾದ ಯಂತ್ರಗಳು ಧ್ವನಿಗೈಯ್ಯುತ್ತಿರಲು, ವಿದ್ಯಾಧರಸ್ತ್ರೀಯರು ನರ್ತನಮಾಡುತ್ತಲೂ, ಭೃಂಗಿಗಳು ಭ್ರಮಣ ಮಾಡುತ್ತಲೂ ಇದ್ದರು.

೧೬೮. ಗಂಧರ್ವನಾಯಕರೆಲ್ಲರೂ ಆರೋಹಣಾವರೋಹಣಗಳಿಂದ ಕೂಡಿದ ಸಂಗೀತವನ್ನು ಹಾಡುತ್ತಿರಲು, ಸ್ವರ್ಣಪೀಠಗಳುಳ್ಳ ರಥಗಳು ಮನೋಹರವಾಗಿ ಧ್ವನಿಗೈಯ್ಯುತ್ತಿದ್ದವು.

೧೬೯ ಇಷ್ಟರೊಳಗೆ ವಾಚಕನೊಬ್ಬನು ಬಂದು, ಯಾದವ ರಾಜರೂ, ಬಂಧುಗಳಾದ ಇತರ ಯಾದವರೂ ಬರುತ್ತಿದ್ದಾರೆಂದು ನಂದನಿಗೆ ತಿಳಿಸಿದನು.

೧೭೦. ಕೆಲವರು ಕುದುರೆಯ ಮೇಲೆ ಕುಳಿತೂ, ಮತ್ತೆ ಕೆಲವರು ಆನೆಯ ಮೇಲೆ ಕುಳಿತೂ, ಮತ್ತೆ ಕೆಲವರು ರಥದಲ್ಲಿ ಕುಳಿತೂ, ರತ್ನಾಲಂಕಾರಭೂಷಿತರಾದ ರಾಜಪುತ್ರರು ಬಂದರು.

ಆಗತೋ ಗಿರಿಭಾನುಶ್ಚ ಸಸ್ತ್ರೀಕಶ್ಚ ಸಕಿಂಕರಃ ।
ರಥಾನಾಂ ಚ ಚತುರ್ಲಕ್ಷಂ ಗಜಾನಾಂ ಚ ತಥೈವ ಚ ॥ ೧೭೧ ॥

ತುರಂಗಮಾಣಾಂ ಕೋಟಿಶ್ಚ ಶಿಬಿಕಾನಾಂ ತಥೈವ ಚ ।
ಋಷೀಂದ್ರಾಣಾಂ ಮುನೀಂದ್ರಾಣಾಂ ವಿಪ್ರಾಣಾಂ ಚ ವಿಪಶ್ಚಿತಾಂ ॥ ೧೭೨ ॥

ಬಂದಿನಾಂ ಭಿಕ್ಷುಕಾಣಾಂ ಚ ಸಮೂಹೈಶ್ಚ ಸಮಾಪತಃ ।
ಗೋಪಾನಾಂ ಗೋಪಿಕಾನಾಂ ಚ ಸಂಖ್ಯಾಂ ಕರ್ತುಂ ಚ ಕಃ ಕ್ಷಮಃ ॥೧೭೩॥

ಪಶ್ಯಾಽಽಗತ್ಯ ಬಹಿರ್ಭೂಯೇತ್ಯುವಾಚ ಪ್ರಾಂಗಣೇ ಸ್ಥಿತಃ ।
ಶ್ರುತ್ವೈವಂ ತಾನುಪವ್ರಜ್ಯ ಸಮಾನೀಯ ವ್ರಜೇಶ್ವರಃ ॥ ೧೭೪ ॥

ಪ್ರಾಂಗಣೇ ವಾಸಯಾಮಾಸ ಪೂಜಯಾಮಾಸ ಸತ್ವರಂ ।
ಋಷ್ಯಾದಿಕಸಮೂಹಂ ಚ ಪ್ರಣಮ್ಯ ಶಿರಸಾ ಭುವಿ ।
ಪಾದ್ಯಾದಿಕಂ ಚ ತೇಭ್ಯಶ್ಚ ಪ್ರದದೌ ಸುಸಮಾಹಿತಃ ॥ ೧೭೫ ॥

---

೧೭೧. ಆಗ ಗಿರಿಭಾನುವೂ ಕೂಡ ತನ್ನ ಕುಟುಂಬಪರಿವಾರದೊಡನೆ ನಂದನ ಮಂದಿರಕ್ಕೆ ಬಂದಿಳಿದನು. ಅವನ ಜತೆಯಲ್ಲಿ ನಾಲ್ಕುಲಕ್ಷ ರಥ ಮತ್ತು ಆನೆಗಳು ಬಂದವು.

೧೭೨. ಕೋಟ್ಯಾಂತರ ಕುದುರೆ ಮತ್ತು ಪಲ್ಲಕ್ಕಿಗಳು ಬಂದವು. ಋಷಿಗಳ ಮುನಿಗಳು, ಬ್ರಾಹ್ಮಣರು ಮತ್ತು ಪಂಡಿತರು ಅಸಂಖ್ಯಾತರಾಗಿ ಬಂದಿಳಿದರು.

೧೭೩. ಅಲ್ಲಿಗೆ ಬಂದ ವಂದಿಗಳು, ಭಿಕ್ಷುಕರು ಮತ್ತು ಗೋಪಗೋಪಿಯರು ಸಂಖ್ಯೆಯನ್ನು ಲೆಕ್ಕಿಸಲು ಯಾರಿಂದ ತಾನೇ ಸಾಧ್ಯ?

೧೭೪. ವಾಚಕನು ಹೊರಕ್ಕೆ ಬಂದು ಇವರೆಲ್ಲರನ್ನೂ ನೋಡೆಂದು ಹೇಳಿ ಬಾಗಿಲಿನಲ್ಲಿ ನಿಲ್ಲಲು, ನಂದನು ಎಲ್ಲರನ್ನೂ ಎದರುಗೊಂಡು ಒಳಕ್ಕೆ ಕರೆತಂದನು.

೧೭೫. ಎಲ್ಲರನ್ನೂ ಅಂಗಳದಲ್ಲಿ ಕುಳ್ಳಿರಿಸಿ ಉಚಿತವಾದ ಸತ್ಕಾರಮಾಡಿ, ಬಂದಿದ್ದ ಋಷಿಮುನಿಗಳಿಗೆಲ್ಲ ನಮಸ್ಕರಿಸಿ ಅವರಿಗೆಲ್ಲ ಅರ್ಘ್ಯಪಾದ್ಯಾದಿ ಸತ್ಕಾರ ಗಳನ್ನು ಸಮರ್ಪಿಸಿದನು.

ವಸ್ತ್ರಭಿರ್ಬಂಧುಭಿಃ ಪೂರ್ಣಂ ಬಭೂವ ನಂದಗೋಕುಲಂ ।
ನ ಕೋಽಪಿ ಕಸ್ಯ ಶಬ್ದಂ ಚ ಶ್ರೋತುಂ-ಶಕ್ತಶ್ಚ ತತ್ರ ವೈ ॥ ೧೭೬ ॥

ತ್ರಿಮುಹೂರ್ತಂ ಕುಬೇರಶ್ಚ ಶ್ರೀಕೃಷ್ಣಪ್ರೀತಯೇ ಮುದಾ ।
ಚಕಾರ ಸ್ವರ್ಣವೃಷ್ಟ್ಯಾ ಚ ಪರಿಪೂರ್ಣಂ ಚ ಗೋಕುಲಂ ॥ ೧೭೭ ॥

ಕೌತುಕಾಪಹ್ನವಂ ಚಕ್ರುರ್ಬಂಧುವರ್ಗಾಶ್ಚ ಕ್ರೀಡಯಾ ।
ಅನಮ್ರಕಂಧರಾಃ ಸರ್ವೇ ದೃಷ್ಟ್ವಾ ನಂದಸ್ಯ ಸಂಪದಂ ॥ ೧೭೮ ॥

ನಂದಃ ಕೃತಾಹ್ನಿಕಃ ಪೂತೋ ಧೃತ್ವಾ ಧೌತೇ ಚ ವಾಸಸೀ ।
ಚಂದನಾಗುರುಕಸ್ತೂರೀ ಕುಂಕುಮೇನೈವ ಭೂಷಿತಃ ॥ ೧೭೯ ॥

ಉವಾಸ ಪಾದೌ ಪ್ರಕ್ಷಾಲ್ಯ ಸ್ವರ್ಣಪೀಠೇ ಮನೋಹರೇ ।
ಗರ್ಗಸ್ಯ ಚ ಮುನೀಂದ್ರಾಣಾಂ ಗೃಹೀತ್ವಾಽಽಜ್ಞಾಂ ವ್ರಜೇಶ್ವರಃ ॥ ೧೮೦ ॥

---

೧೭೬. ಸಕಲ ಸಾಮಗ್ರಿಗಳಿಂದಲೂ, ನಂಟರಿಷ್ಟರಿಂದಲೂ, ನಂದ ಗೋಕುಲವು ಪರಿಪೂರ್ಣವಾಯಿತು. ಒಬ್ಬರ ಧ್ವನಿಯು ಮತ್ತೊಬ್ಬರಿಗೆ ಕೇಳಿಸ ಲಾರದಷ್ಟು ಕೋಲಾಹಲವುಂಟಾಯಿತು.

೧೭೭. ಕುಬೇರನೂ ಕೂಡ ಶ್ರೀಕೃಷ್ಣನಪ್ರೀತಿಗಾಗಿ ಬಂದು ಮುಹೂರ್ತ ಕಾಲ ಸುವರ್ಣವೃಷ್ಟಿಯನ್ನು ಕರೆದನು. ನಂದಗೋಕುಲವನ್ನು ಸುವರ್ಣದಿಂದ ಪೂರ್ಣಗೊಳಿಸಿದನು.

೧೭೮. ಬಂಧುವರ್ಗದವರೆಲ್ಲರೂ, ನಂದನ ಸಂಪತ್ತನ್ನು ನೋಡಿ ತಲೆಬಾಗಿ ತಮ್ಮ ಕುತೂಹಲವನ್ನು ವ್ಯಕ್ತಪಡಿಸಿದರು.

೧೭೯. ನಂದನು ಆಹ್ನಿಕವಮಾಡಿ ಪರಿಶುದ್ಧನಾಗಿ, ಶುಭ್ರವಾದ ಎರಡು ವಸ್ತ್ರಗಳನ್ನುಟ್ಟು, ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮಗಳನ್ನು ಲೇಪಿಸಿ ಕೊಂಡನು.

೧೮೦. ಪಾದಪ್ರಕ್ಷಾಲನೆ ಮಾಡಿಕೊಂಡು ಗರ್ಗಮಹರ್ಷಿಯ ಆಜ್ಞೆಯನ್ನು ಪಡೆದು ನಂದನು ಮನೋಹರವಾದ ಸುವರ್ಣ ಪೀಠದಲ್ಲಿ ಕುಳಿತನು.

ಸಂಸ್ಕೃತ್ಯ ವಿಷ್ಣುಮಾಚಾಂತೇಃ ಸ್ವಸ್ತಿವಾಚನಪೂರ್ವಕಂ ।
ಕೃತ್ವಾ ಕರ್ಮ ಚ ವೇದೋಕ್ತಂ ಭೋಜಯಾಮಾಸ ಬಾಲಕಂ　|| ೧೮೧ ||

ಗರ್ಗವಾಕ್ಯಾನುಸಾರೇಣ ಬಾಲಕಸ್ಯ ಮುದಾನ್ವಿತಃ ।
ಕೃಷ್ಣೇತಿ ಮಂಗಲಂ ನಾಮ ರರಕ್ಷ ಚ ಶುಭೇ ಕ್ಷಣೇ　|| ೧೮೨ ||

ಸಘೃತಂ ಭೋಜಯಿತ್ವಾ ಚ ಕೃತ್ವಾ ನಾಮ ಜಗತ್ಪತೇಃ ।
ವಾದ್ಯಾನಿ ವಾದಯಾಮಾಸ ಕಾರಯಾಮಾಸ ಮಂಗಲಂ　|| ೧೮೩ ||

ನಾನಾವಿಧಾನಿ ಸ್ವರ್ಣಾನಿ ಧನಾನಿ ವಿವಿಧಾನಿ ಚ ।
ಭಕ್ಷ್ಯದ್ರವ್ಯಾಣಿ ವಾಸಾಂಸಿ ಬ್ರಾಹ್ಮಣೇಭ್ಯೋ ದದೌ ಮುದಾ　|| ೧೮೪ ||

ಬಂದಿಭ್ಯೋ ಭಿಕ್ಷುಕೇಭ್ಯಶ್ಚ ಸುವರ್ಣಂ ವಿಪುಲಂ ದದೌ ।
ಭಾರಾಕ್ರಾಂತಾಶ್ಚ ತೇ ಸರ್ವೇ ನ ಶಕ್ತಾ ಗಂತುಮೇವ ಚ　|| ೧೮೫ ||

---

೧೮೧. ಆಚಮನಮಾಡಿ ವಿಷ್ಣುಸ್ಮರಣೆಮಾಡುತ್ತ ಸ್ವಸ್ತಿ ಮಂತ್ರಗಳನ್ನು ಹೇಳಿ, ವೇದೋಕ್ತವಾದ ಕರ್ಮವನ್ನು ನೆರವೇರಿಸಿ ಬಾಲಕನಿಗೆ ಅನ್ನಪ್ರಾಶನ ಮಾಡಿಸಿದನು

೧೮೨. ಗರ್ಗಮಹರ್ಷಿಯ ಆಜ್ಞಾನುಸಾರವಾಗಿ ಬಾಲಕನಿಗೆ ಸಂತೋಷ ದಿಂದ 'ಕೃಷ್ಣ' ಎಂಬ ಮಂಗಳನಾಮವನ್ನು ಶುಭಕ್ಷಣದಲ್ಲಿ ಅಂಕಿತಮಾಡಿದನು.

೧೮೩. ಈ ರೀತಿ ನಾಮಕರಣಮಾಡಿ, ಜಗತ್ಪತಿಗೆ ತುಪ್ಪದೂಟವನ್ನುಣಿಸಿ, ಮಂಗಳವಾದ್ಯಗಳನ್ನು ಮೊಳಗಿಸಿ, ಮಂಗಳಕಾರ್ಯವನ್ನು ಮಾಡಿಸಿದನು.

೧೮೪ ನಾನಾವಿಧ ಸುವರ್ಣಗಳನ್ನೂ, ಅನೇಕ ದ್ರವ್ಯರಾಶಿಗಳನ್ನೂ, ವಿವಿಧ ಭಕ್ಷ್ಯಗಳನ್ನೂ, ವಸ್ತ್ರಗಳನ್ನೂ ಬ್ರಾಹ್ಮಣರಿಗೆ ಸಂತೋಷದಿಂದ ದಾನ ಮಾಡಿದನು.

೧೮೫. ಬಂದಿಗಳಿಗೂ, ಭಿಕ್ಷುಕರಿಗೂ ಯಥೇಚ್ಛವಾಗಿ ಸುವರ್ಣರಾಶಿಯನ್ನು ದಾನಮಾಡಿದನು. ಅವರೆಲ್ಲರೂ ಆ ಭಾರವನ್ನು ಹೊತ್ತುಕೊಂಡು ಮನೆಗೆ ಹೋಗಲು ಅಸಮರ್ಥರಾದರು.

ಬ್ರಾಹ್ಮಣಾನ್ಬಂಧುವರ್ಗಾಂಶ್ಚ ಭಿಕ್ಷುಕಾಂಶ್ಚ ವಿಶೇಷತಃ ।
ಮಿಷ್ಟಾನ್ನಂ ಭೋಜಯಾಮಾಸ ಪರಿಪೂರ್ಣಂ ಮನೋಹರಂ ॥ ೧೮೬ ॥

ದೀಯತಾಂ ದೀಯತಾಂ ಚೈವ ಖಾದ್ಯತಾಂ ಖಾದ್ಯತಾಮಿತಿ ।
ಬಭೂವ ಶಬ್ದೋಽತ್ಯುಚ್ಚೈಶ್ಚ ಸತತಂ ನಂದಗೋಕುಲೇ ॥ ೧೮೭ ॥

ರತ್ನಾನಿ ಪರಿಪೂರ್ಣಾನಿ ವಾಸಾಂಸಿ ಭೂಷಣಾನಿ ಚ ।
ಪ್ರವಾಲಾನಿ ಸುಪರ್ಣಾನಿ ಮಣಿಸಾರಾಣಿ ಯಾನಿ ಚ ॥ ೧೮೮ ॥

ಚಾರೂಣಿ ಸ್ವರ್ಣಪಾತ್ರಾಣಿ ಕೃತಾನಿ ವಿಶ್ವಕರ್ಮಣಾ ।
ಗತ್ವಾ ಗರ್ಗಾಯ ವಿನಯಂ ಚಕಾರ ವ್ರಜಪುಂಗವಃ ॥ ೧೮೯ ।

ಶಿಷ್ಯೇಭ್ಯಃ ಸ್ವರ್ಣಭಾರಾಣಿ ಪ್ರದದೌ ವಿನಯಾನ್ವಿತಃ ।
ದ್ವಿಜೇಭ್ಯೋಽಪ್ಯವಶಿಷ್ಟೇಭ್ಯಃ ಪರಿಪೂರ್ಣಾನಿ ನಾರದ ॥ ೧೯೦ ॥

---

೧೮೬. ಬ್ರಾಹ್ಮಣರಿಗೂ, ಬಂಧುವರ್ಗದವರಿಗೂ, ಭಿಕ್ಷುಕರಿಗೂ ಪರಿಪೂರ್ಣವಾಗಿ ಮಿಷ್ಟಾನ್ನವನ್ನು ಭೋಜನಮಾಡಿಸಿದನು.

೧೮೭. ಆಗ ನಂದಗೋಕುಲದಲ್ಲಿ ' ಇನ್ನೂ ಬಡಿಸಿ, ಬಡಿಸಿ, ಊಟಮಾಡಿ ಊಟಮಾಡಿ ' ಎಂಬ ಧ್ವನಿಯೇ ಎಲ್ಲೆಲ್ಲೂ ಪೂರ್ಣವಾಯಿತು.

೧೮೮. ಯಥೇಚ್ಛವಾಗಿ ರತ್ನಗಳನ್ನೂ ವಸ್ತ್ರಾಲಂಕರಗಳನ್ನೂ, ಸುವರ್ಣ, ಹವಳ, ಮುತ್ತು ಮುಂತಾದ ಮಣಿಗಳನ್ನೂ ದಾನಮಾಡಿದನು.

೧೮೯. ವಿಶ್ವಕರ್ಮನುಮಾಡಿದ ಮನೋಹರವಾದ ಸುವರ್ಣಪಾತ್ರೆಗಳನ್ನೂ ದಾನಮಾಡಿ, ಗರ್ಗನ ಸಮೀಪಕ್ಕೆ ಹೋಗಿ ನಂದನು ವಿನಯದಿಂದ ತಲೆಬಾಗಿದನು.

೧೯೦. ಎಲೈ ನಾರದನೇ, ಅನಂತರ ಈ ರೀತಿಯಾಗಿ ಗರ್ಗಮಹರ್ಷಿಯ ಶಿಷ್ಯರಿಗೂ, ಉಳಿದ ಬ್ರಾಹ್ಮಣರಿಗೂ ಪರಿಪೂರ್ಣವಾಗಿ ಸುವರ್ಣವನ್ನು ದಾನಮಾಡಿದನು.

॥ ಶ್ರೀ ನಾರಾಯಣ ಉವಾಚ ॥

ಗೃಹೀತ್ವಾ ಶ್ರೀಹರಿಂ ಗರ್ಗೋ ಜಗಾಮ ನಿಭೃತಂ ಮುದಾ ।
ತುಷ್ಟಾವ ಪರಯಾ ಭಕ್ತ್ಯಾ ಪ್ರಣಮ್ಯ ಚ ತಮೀಶ್ವರಂ ॥ ೧೯೧ ॥

ಸಾಶ್ರುನೇತ್ರಃ ಸಪುಲಕೋ ಭಕ್ತಿನಮ್ರಾತ್ಮಕಂಧರಃ ।
ಪುಟಾಂಜಲಿಯುತೋ ಭೂತ್ವೋವಾಚ ಕೃಷ್ಣಪದಾಂಬುಜೇ ॥ ೧೯೨ ॥

॥ ಗರ್ಗ ಉವಾಚ ॥

ಹೇ ಕೃಷ್ಣ ಜಗತಾಂ ನಾಥ ಭಕ್ತಾನಾಂ ಭಯಭಂಜನ ।
ಪ್ರಸನ್ನೋ ಭವ ಮಾಮೀಶ ದೇಹಿ ದಾಸ್ಯಂ ಪದಾಂಬುಜೇ ॥ ೧೯೩ ॥

ತ್ವತ್ಪಿತ್ರಾ ಮೇ ಧನಂ ದತ್ತಂ ತೇನ ಮೇ ಕಿಂ ಪ್ರಯೋಜನಂ ।
ದೇಹಿ ಮೇ ನಿಶ್ಚಲಾಂ ಭಕ್ತಿಂ ಭಕ್ತಾನಾಮಭಯಪ್ರದ ॥ ೧೯೪ ॥

---

೧೯೧. ಶ್ರೀನಾರಾಯಣ :—ಅನಂತರ ಗರ್ಗಮಹರ್ಷಿಯು ಶಿಶುವಾದ ಶ್ರೀಕೃಷ್ಣನನ್ನೆತ್ತಿಕೊಂಡು ಏಕಾಂತ ಸ್ಥಳಕ್ಕೆ ಹೋಗಿ ಪರಮಭಕ್ತಿಯಿಂದ ಆ ಸರ್ವೇಶ್ವರನನ್ನು ಸ್ತುತಿಸಿ ನಮಿಸಿದನು.

೧೯೨. ರೋಮಾಂಚಿತನಾಗಿ, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ ಭಕ್ತಿಯಿಂದ ಶ್ರೀಕೃಷ್ಣನ ಪಾದಕಮಲಗಳಿಗೆ ತಲೆಬಾಗಿ ಕೈಮುಗಿದುಕೊಂಡು ಇಂತು ಸ್ತುತಿಸಲಾರಂಭಿಸಿದನು.

೧೯೩. ಗರ್ಗ :—ಜಗದೊಡೆಯನೂ, ಭಕ್ತರ ಭಯನಾಶಕನೂ ಆದ ಎಲೈ ಕೃಷ್ಣಪರಮಾತ್ಮನೇ, ನನ್ನಲ್ಲಿ ಪ್ರಸನ್ನನಾಗಿ ನಿನ್ನ ಪಾದಕಮಲಗಳ ದಾಸ್ಯವನ್ನು ನನಗೆ ಅನುಗ್ರಹಿಸು.

೧೯೪. ನಿನ್ನ ತಂದೆಯು ನನಗೆ ಯಥೇಚ್ಛವಾಗಿ ಹಣವನ್ನು ಕೊಟ್ಟನು. ಆದರೆ ಅದರಿಂದ ನನಗೇನೂ ಪ್ರಯೋಜನವಿಲ್ಲ. ಭಕ್ತರಿಗೆಲ್ಲ ಅಭಯದಾನಮಾಡುವ ಎಲೈ ಭಕ್ತವತ್ಸಲನೇ, ನನಗೆ ನಿಶ್ಚಲವಾದ ಭಕ್ತಿಯನ್ನು ಅನುಗ್ರಹಿಸು.

**ಅಣಿಮಾದಿಕಸಿದ್ಧಿಷು ಯೋಗೇಷು ಮುಕ್ತಿಷು ಪ್ರಭೋ ।**
**ಜ್ಞಾನತತ್ತ್ವೇಽಮರತ್ವೇ ವಾ ಕಿಂಚಿನ್ನಾಸ್ತಿ ಸ್ಪೃಹಾ ಮಮ** ॥ ೧೯೫ ॥

**ಇಂದ್ರತ್ವೇ ವಾ ಮನುತ್ವೇ ವಾ ಸ್ವರ್ಗಲೋಕಫಲೇ ಚಿರಂ ।**
**ನಾಸ್ತಿ ಮೇ ಮನಸೋ ವಾಂಛಾ ತ್ವತ್ಪಾದಸೇವನಂ ವಿನಾ** ॥ ೧೯೬ ॥

**ಸಾಲೋಕ್ಯಂ ಸಾರ್ಷ್ಟಿಸಾರೂಪ್ಯೇ ಸಾಮೀಪ್ಯೈಕತ್ವಮೀಪ್ಸಿತಂ ।**
**ನಾಹಂ ಗೃಹ್ಣಾಮಿ ತೇ ಬ್ರಹ್ಮಂಸ್ತ್ವತ್ಪಾದಸೇವನಂ ವಿನಾ** ॥ ೧೯೭ ॥

**ಗೋಲೋಕೇ ವಾಪಿ ಪಾತಾಲೇ ವಾಸೇ ನಾಸ್ತಿ ಮನೋರಥಃ ।**
**ಕಿಂತು ತೇ ಚರಣಾಂಭೋಜೇ ಸಂತತಂ ಸ್ಮೃತಿರಸ್ತು ಮೇ** ॥ ೧೯೮ ॥

---

೧೯೫. ಎಲೈ ಪ್ರಭುವೇ, ನನಗೆ ಅಣಿಮಾದ್ಯಷ್ಟಸಿದ್ಧಿಗಳಲ್ಲಾಗಲೀ, ಯೋಗದಲ್ಲಾಗಲೀ, ಮುಕ್ತಿಯಲ್ಲಾಗಲೀ, ತತ್ವಜ್ಞಾನದಲ್ಲಾಗಲೀ, ದೇವತ್ವದಲ್ಲಾಗಲೀ, ಸ್ವಲ್ಪವೂ ಇಚ್ಛೆಯಿಲ್ಲ

೧೯೬. ನಿನ್ನ ಪಾದಸೇವೆಯೊಂದನ್ನುಳಿದು, ಇಂದ್ರಪದವಿಯಲ್ಲಾಗಲೀ, ಮನುವಿನ ಅಧಿಕಾರದಲ್ಲಿಯಾಗಲೀ, ಸ್ವರ್ಗಲೋಕದಲ್ಲಿಯಾಗಲೀ, ನನ್ನ ಮನೋಭಿಲಾಷೆಯು ಖಂಡಿತವಾಗಿಯೂ ಇಲ್ಲ.

೧೯೭. ಎಲೈ ಪರಮಾತ್ಮನೇ ನಿನ್ನ ಪಾದಸೇವೆಯೊಂದನ್ನು ಬಿಟ್ಟು, ಸಾಲೋಕ್ಯ, ಸಾರ್ಷ್ಟಿ, ಸಾರೂಪ್ಯ, ಮತ್ತು ಸಾಮೀಪ್ಯರೂಪವಾದ ಚತುರ್ವಿಧ ಮುಕ್ತಿಗಳಲ್ಲೂ ನನಗೆ ಅಭಿಲಾಷೆಯಿಲ್ಲ.

೧೯೮. ಗೋಲೋಕದಲ್ಲಾಗಲೀ, ಪಾತಾಳಲೋಕದಲ್ಲಾಗಲೀ ವಾಸಮಾಡಬೇಕೆಂದು ನಾನು ಬಯಸುವುದಿಲ್ಲ. ಆದರೆ ಸರ್ವದಾ ನಿನ್ನ ಚರಣಕಮಲಗಳಲ್ಲಿ ಧ್ಯಾನಾಸಕ್ತನಾಗಿರಬೇಕೆಂಬುದೇ ನನ್ನ ಮನೋರಥ.

ತ್ವನ್ಮಂತ್ರಂ ಶಂಕರಾತ್ಪ್ರಾಪ್ಯ ಕತಿ ಜನ್ಮಫಲೋದಯಾತ್ ।
ಸರ್ವಜ್ಞೋಽಹಂ ಸರ್ವದರ್ಶೀ ಸರ್ವತ್ರ ಗತಿರಸ್ತು ಮೇ　　॥ ೧೯೯ ॥

ಕೃಪಾಂ ಕುರು ಕೃಪಾಸಿಂಧೋ ದೀನಬಂಧೋ ಪದಾಂಬುಜೇ ।
ರಕ್ಷ ಮಾಮಭಯಂ ದತ್ವಾ ಮೃತ್ಯುರ್ಮೇ ಕಿಂ ಕರಿಷ್ಯತಿ　　॥ ೨೦೦ ॥

ಸರ್ವೇಷಾಮೀಶ್ವರಃ ಸರ್ವಸ್ತ್ವತ್ಪಾದಾಂಭೋಜಸೇವಯಾ ।
ಮೃತ್ಯುಂಜಯೋಽಂತಕಾಲಶ್ಚ ಬಭೂವ ಯೋಗಿನಾಂ ಗುರುಃ　　॥ ೨೦೧ ॥

ಬ್ರಹ್ಮಾ ವಿಧಾತಾ ಜಗತಾಂ ತ್ವತ್ಪಾದಾಂಭೋಜಸೇವಯಾ ।
ಯಸ್ಯೈಕದಿವಸೇ ಬ್ರಹ್ಮನ್ಪತಂತೀಂದ್ರಾಶ್ಚತುರ್ದಶ　　॥ ೨೦೨ ॥

ತ್ವತ್ಪಾದಸೇವಯಾ ಧರ್ಮಃ ಸಾಕ್ಷೀ ಚ ಸರ್ವಕರ್ಮಣಾಂ ।
ಪಾತಾ ಚ ಫಲದಾತಾ ಚ ಜಿತ್ವಾ ಕಾಲಂ ಸುದುರ್ಜಯಂ　　॥ ೨೦೩ ॥

೧೯೯　ಎಷ್ಟೋ ಜನ್ಮದ ಪುಣ್ಯಕರ್ಮಗಳ ಫಲವಾಗಿ ಶಂಕರನ ಮುಖದಿಂದ ನಿನ್ನ ಮಂತ್ರೋಪದೇಶವನ್ನು ಪಡೆದು ನಾನು ಸರ್ವಜ್ಞನೂ, ಸರ್ವದರ್ಶಿಯೂ, ಸರ್ವಗತಿಯೂ ಆಗಿದ್ದೇನೆ.

೨೦೦. ಕೃಪಾಸಿಂಧುವಾದ ಎಲೈ ದೀನಬಂಧುವೇ, ದೀನನಾದ ನನ್ನಲ್ಲಿ ಕೃಪೆದೋರಿ, ಅಭಯಕೊಟ್ಟು ನಿನ್ನ ಪಾದಸೇವೆಯನ್ನು ಅನುಗ್ರಹಿಸು. ಆಗ ಮೃತ್ಯುವು ನನ್ನನ್ನು ಏನುಮಾಡಿಯಾನು?

೨೦೧. ಸರ್ವೇಶ್ವರನಾದ ಶಂಕರನು ನಿನ್ನ ಪಾದ ಕಮಲಗಳ ಸೇವೆಮಾಡಿ ಮೃತ್ಯುವನ್ನು ಜಯಿಸಿ, ಯೋಗಿಗಳ ಗುರುವೆನಿಸಿದ್ದಾನೆ.

೨೦೧. ಯಾರ ಒಂದು ದಿವಸ ಕಳೆಯುವುದರೊಳಗೆ ಚತುರ್ದಶೇಂದ್ರರ ಪತನವಾಗುವುದೋ, ಅಂಥ ಚತುರ್ಮುಖಬ್ರಹ್ಮನೂ ಕೂಡ ನಿನ್ನ ಪಾದಸೇವೆ ಮಾಡಿ ಜಗತ್ಸೃಷ್ಟಿಕರ್ತನಾಗಿದ್ದಾನೆ.

೨೦೩. ಧರ್ಮ ಪುರುಷನು ನಿನ್ನ ಪಾದಸೇವೆಯ ಫಲವಾಗಿ ದುರ್ಜಯನಾದ ಕಾಲನನ್ನು ಜಯಿಸಿ, ಸರ್ವಕರ್ಮಗಳಿಗೂ ಸಾಕ್ಷಿಯೆನಿಸಿ ಸರ್ವಫಲದಾಯಕನಾಗಿದ್ದಾನೆ.

ಸಹಸ್ರವದನಃ ಶೇಷೋ ಯತ್ಪಾದಾಂಬುಜಸೇವಯಾ ।
ಧತ್ತೇ ಸಿದ್ಧಾರ್ಥವಿದ್ವಿಶ್ವಂ ಶಿವಃ ಕಂಠೇ ವಿಷಂ ಯಥಾ ॥ ೨೦೪ ॥

ಸರ್ವಸಂಪದ್ವಿಧಾತ್ರೀ ಯಾ ದೇವೀನಾಂ ಚ ಪರಾತ್ಪರಾ ।
ಕರೋತಿ ಸತತಂ ಲಕ್ಷ್ಮೀಃ ಕೇಶೈಸ್ತ್ವತ್ಪಾದಮಾರ್ಜನಂ ॥ ೨೦೫ ॥

ಪ್ರಕೃತಿರ್ಬೀಜರೂಪಾ ಸಾ ಸರ್ವೇಷಾಂ ಶಕ್ತಿರೂಪಿಣೀ ।
ಸ್ಮಾರಂಸ್ಮಾರಂ ತ್ವತ್ಪದಾಬ್ಜಂ ಬಭೂವ ತತ್ಪರಾ ಪರಾ ॥ ೨೦೬ ॥

ಪಾರ್ವತೀ ಸರ್ವರೂಪಾ ಸಾ ಸರ್ವೇಷಾಂ ಬುದ್ಧಿರೂಪಿಣೀ ।
ತ್ವತ್ಪಾದಸೇವಯಾ ಕಾಂತಂ ಲಲಾಭ ಶಿವಮೀಶ್ವರಂ ॥ ೨೦೭ ॥

ವಿದ್ಯಾಧಿಷ್ಠಾತ್ರೀ ದೇವೀ ಯಾ ಜ್ಞಾನಮಾತಾ ಸರಸ್ವತೀ ।
ಪೂಜ್ಯಾ ಬಭೂವ ಸರ್ವೇಷಾಂ ಸಂಪೂಜ್ಯ ತ್ವತ್ಪದಾಂಬುಜಂ ॥ ೨೦೮ ॥

---

೨೦೪. ಸಹಸ್ರ ಮುಖವುಳ್ಳ ಆದಿಶೇಷನು ನಿನ್ನ ಪಾದಸೇವೆಯ ಪ್ರಭಾವದಿಂದ, ಶಿವನು ಕಂಠದಲ್ಲಿ ವಿಷವನ್ನು ಲೀಲಾಜಾಲವಾಗಿ ಧರಿಸುವಂತೆ, ನಿಖಿಲ ವಿಶ್ವವನ್ನೂ ಸಾಸಿವೆಕಾಳಿನಷ್ಟು ಸುಲಭವಾಗಿ ಧರಿಸಿರುವನು.

೨೦೫. ಸರ್ವಸಂಪತ್ಪ್ರದಾತ್ರಿಯೂ, ದೇವಿಯರಲ್ಲಿ ಶ್ರೇಷ್ಠಳೂ ಆದ ಲಕ್ಷ್ಮೀದೇವಿಯು ತನ್ನ ತಲೆಗೂದಲುಗಳಿಂದ ಸರ್ವದಾ ನಿನ್ನ ಪಾದಗಳನ್ನು ಮಾರ್ಜನ ಮಾಡುತ್ತಾಳೆ.

೨೦೬. ಬೀಜರೂಪಳೂ, ಆದಿಶಕ್ತಿಸ್ವರೂಪಿಣಿಯೂ ಆದ ಪ್ರಕೃತಿಯು ನಿನ್ನ ಪಾದಕಮಲಗಳ ಸತತಧ್ಯಾನದಿಂದಲೇ ಪರಾಶಕ್ತಿಯೆನಿಸಿರುವಳು.

೨೦೭. ಸರ್ವರೂಪಳೂ, ಸಕಲಬುದ್ಧಿಸ್ವರೂಪಿಣಿಯೂ ಆದ ಪಾರ್ವತಿಯು ನಿನ್ನ ಪಾದಸೇವೆಯ ಫಲವಾಗಿ ಸರ್ವೇಶ್ವರನಾದ ಶಿವನನ್ನು ಪತಿಯಾಗಿ ಪಡೆದಳು.

೨೦೮. ವಿದ್ಯಾಧಿಷ್ಠಾತ್ರಿಯೂ, ಜ್ಞಾನಮಾತೆಯೂ ಆದ ಸರಸ್ವತಿಯು ನಿನ್ನ ಪಾದಾಂಬುಜಗಳ ಸೇವೆಮಾಡಿ ಎಲ್ಲರಿಗೂ ಪೂಜ್ಯಳಾಗಿದ್ದಾಳೆ.

ಸಾವಿತ್ರೀ ವೇದಜನನೀ ಪುನಾತಿ ಭುವನತ್ರಯಂ ।
ಬ್ರಹ್ಮಣೋ ಬ್ರಾಹ್ಮಣಾನಾಂ ಚ ಗತಿಸ್ತ್ವತ್ಪಾದಸೇವಯಾ ॥ ೨೦೯ ॥

ಕ್ಷಮಾ ಜಗದ್ವಿಭರ್ತುಂ ಚ ರತ್ನಗರ್ಭಾ ವಸುಂಧರಾ ।
ಪ್ರಸೂತಿಃ ಸರ್ವಸಸ್ಯಾನಾಂ ತ್ವತ್ಪಾದಪದ್ಮಸೇವಯಾ ॥ ೨೧೦ ॥

ರಾಧಾ ಮಮಾಂಶಸಂಭೂತಾ ತವ ತುಲ್ಯಾ ಚ ತೇಜಸಾ ।
ಸ್ಥಿತ್ವಾ ವಕ್ಷಸಿ ತೇ ಪಾದಂ ಸೇವತೇಽನ್ಯಸ್ಯ ಕಾ ಕಥಾ ॥ ೨೧೧ ॥

ಯಥಾ ಶರ್ವಾದಯೋ ದೇವಾ ದೇವ್ಯಃ ಪದ್ಮಾದಯೋ ಯಥಾ ।
ಸನಾಥಂ ಕುರು ಮಾಮೀಶ ಈಶ್ವರಸ್ಯ ಸಮಾ ಕೃಪಾ ॥ ೨೧೨ ॥

ನ ಯಾಸ್ಯಾಮಿ ಗೃಹಂ ನಾಥ ನ ಗೃಹ್ಣಾಮಿ ಧನಂ ತವ ।
ಕೃತ್ವಾ ಮಾಂ ರಕ್ಷ ಪಾದಾಬ್ಜಸೇವಾಯಾಂ ಸೇವಕಂ ರತಂ ॥ ೨೧೩ ॥

---

೨೦೯. ವೇದಮಾತೆಯಾದ ಸಾವಿತ್ರಿಯು ನಿನ್ನ ಪಾದಸೇವೆಯ ಫಲದಿಂದ ಬ್ರಹ್ಮನಿಗೂ, ಬ್ರಾಹ್ಮಣರಿಗೂ ಗತಿಸ್ವರೂಪಿಣಿಯಾಗಿ ಭುವನತ್ರಯವನ್ನು ಪವಿತ್ರಗೊಳಿಸುತ್ತಿದ್ದಾಳೆ.

೨೧೦. ರತ್ನಗರ್ಭಳಾದ ವಸುಂಧರೆಯು ನಿನ್ನ ಪಾದಕಮಲಗಳ ಸೇವೆಯಿಂದ ಸಕಲಸಸ್ಯಗಳಿಗೆ ಆಧಾರಳೂ, ಜಗದ್ಭರಣ ಸಮರ್ಥಳೂ ಆಗಿದ್ದಾಳೆ.

೨೧೧. ನಿನ್ನ ಅಂಶಸಂಭೂತಳಾದ ರಾಧೆಯು ತೇಜಸ್ಸಿನಲ್ಲಿ ನಿನಗೆ ಸಮಳೆನಿಸಿ ನಿನ್ನ ವಕ್ಷಸ್ಥಳದಲ್ಲಿ ಕುಳಿತುಕೊಂಡು ನಿನ್ನ ಪಾದಗಳನ್ನು ಸೇವಿಸುತ್ತಿರುವಾಗ ಇತರರ ವಿಷಯವನ್ನೇನು ಹೇಳಬೇಕು.

೨೧೨. ಶಂಕರಾದಿದೇವತೆಗಳೂ, ಲಕ್ಷ್ಮೀಮುಂತಾದ ದೇವಿಯರೂ ನಿನ್ನ ಅನುಗ್ರಹಕ್ಕೆ ಪಾತ್ರರಾಗಿರುವಂತೆ ನನ್ನನ್ನೂ ನಿನ್ನ ಕೃಪೆಗೆ ಪಾತ್ರನನ್ನಾಗಿ ಮಾಡು.

೨೧೩. ಎಲೈ ಜಗನ್ನಾಥನೇ, ನಾನು ನಿನ್ನ ದ್ರವ್ಯರಾಶಿಯನ್ನೂ ತೆಗೆದುಕೊಳ್ಳುವುದಿಲ್ಲ. ಮನೆಗೂ ಹೋಗುವುದಿಲ್ಲ. ನನ್ನನ್ನು ನಿನ್ನ ಪಾದಕಮಲಗಳ ಸೇವಕನನ್ನಾಗಿಮಾಡಿ ಕಾಪಾಡು.

ಇತಿ ಸ್ತುತ್ವಾ ಸಾಶ್ರುನೇತ್ರಃ ಪಪಾತ ಚರಣೇ ಹರೇಃ ।
ರುರೋದ ಚ ಭೃಶಂ ಭಕ್ತ್ಯಾ ಪುಲಕಾಂಚಿತವಿಗ್ರಹಃ ॥ ೨೧೪ ॥

ಗರ್ಗಸ್ಯ ವಚನಂ ಶ್ರುತ್ವಾ ಜಹಾಸ ಭಕ್ತವತ್ಸಲಃ ।
ಉವಾಚ ತಂ ಸ್ವಯಂ ಕೃಷ್ಣೋ ಮಯಿ ತೇ ಭಕ್ತಿರಸ್ತ್ವಿತಿ ॥ ೨೧೫ ॥

ಇತಿ ಗರ್ಗಕೃತಂ ಸ್ತೋತ್ರಂ ತ್ರಿಸಂಧ್ಯಂ ಯಃ ಪಠೇನ್ನರಃ ।
ದೃಢಾಂ ಭಕ್ತಿಂ ಹರೇರ್ದಾಸ್ಯಂ ಸ್ಮೃತಿಂ ಚ ಲಭತೇ ಧ್ರುವಂ ॥ ೨೧೬ ॥

ಜನ್ಮಮೃತ್ಯುಜರಾರೋಗಶೋಕಮೋಹಾದಿಸಂಕಟಾತ್ ।
ತೀರ್ಣೋ ಭವತಿ ಶ್ರೀಕೃಷ್ಣದಾಸಸೇವನತತ್ಪರಃ ॥ ೨೧೭ ॥

ಕೃಷ್ಣಸ್ಯ ಸಹಕಾಲಂ ಚ ಕೃಷ್ಣಸಾರ್ಧಂಚ ಮೋದತೇ ।
ಕದಾಚಿನ್ನ ಭವೇತ್ತಸ್ಯ ವಿಚ್ಛೇದೋ ಹರಿಣಾ ಸಹ ॥ ೨೧೮ ॥

---

೨೧೪. ಗರ್ಗಮಹರ್ಷಿಯು ಈ ರೀತಿಯಾಗಿ ಸ್ತೋತ್ರಮಾಡಿ ಅಶ್ರುಪೂರಿತನಾಗಿ ಶ್ರೀಹರಿಯ ಚರಣಗಳಲ್ಲಿ ಬಿದ್ದನು. ಭಕ್ತ್ಯುದ್ರೇಕದಿಂದ ರೋಮಾಂಚಿತ ಶರೀರನಾಗಿ ಬಹಳವಾಗಿ ಅತ್ತನು.

೨೧೫. ಗರ್ಗಮಹರ್ಷಿಯ ನುಡಿಗಳನ್ನು ಕೇಳಿ ಭಕ್ತವತ್ಸಲನಾದ ಶ್ರೀಕೃಷ್ಣನು ನಕ್ಕು ನನ್ನಲ್ಲಿ ಭಕ್ತಿಯು ಸ್ಥಿರವಾಗಿರಲೆಂದು ಅನುಗ್ರಹಿಸಿದನು

೨೧೬. ಗರ್ಗಮಹರ್ಷಿಯು ಹೇಳಿದ ಈ ಸ್ತೋತ್ರವನ್ನು ಮೂರು ಸಂಧ್ಯಾ ಕಾಲದಲ್ಲೂ ಯಾರು ಪಠನಮಾಡುವರೋ ಅವರು ದೃಢಭಕ್ತಿಯನ್ನೂ ಶ್ರೀಹರಿಯ ದಾಸ್ಯವನ್ನೂ, ಸ್ಮರಣೆಯನ್ನೂ ಪಡೆಯುವುದರಲ್ಲಿ ಸಂಶಯವಿಲ್ಲ.

೨೧೭. ಶ್ರೀಕೃಷ್ಣಸೇವಾತತ್ಪರನಾದವನು ಜನ್ಮಜರಾಮರಣಗಳಿಂದಲೂ, ರೋಗಶೋಕಮೋಹಾದಿ ಸಂಕಟಗಳಿಂದಲೂ, ಮುಕ್ತನಾಗುವನು.

೨೧೮. ಅಲ್ಲದೆ ಶ್ರೀಕೃಷ್ಣನ ವ್ಯಕ್ತರೂಪವಿರುವವರೆಗೆ ಕೃಷ್ಣನ ಜೊತೆಯಲ್ಲಿ ಆನಂದದಿಂದಿರುತ್ತಾನೆ. ಯಾವಾಗಲೂ ಅವನಿಗೆ ಶ್ರೀಹರಿಯ ವಿರಹವುಂಟಾಗುವುದಿಲ್ಲ.

॥ ಶ್ರೀ ನಾರಾಯಣ ಉವಾಚ ॥

ಹರಿಂ ಮುನಿಃ ಸ್ತವಂ ಕೃತ್ವಾ ದದೌ ನಂದಾಯ ತಂ ಮುದಾ ।
ಉವಾಚ ತಂ ಗೃಹಂ ಯಾಮಿ ಕುರ್ವಾಜ್ಞಾಮಿತಿ ಬಲ್ಲವ ॥ ೨೧೯ ॥

ಅಹೋ ವಿಚಿತ್ರಃ ಸಂಸಾರೋ ಮೋಹಜಾಲೇನ ವೇಷ್ಟಿತಃ ।
ಸಂಮಿಲನಂ ಚ ವಿರಹೋ ನರಾಣಾಂ ಸಿಂಧುಫೇನವತ್ ॥ ೨೨೦ ॥

ಗರ್ಗಸ್ಯ ವಚನಂ ಶ್ರುತ್ವಾ ರುರೋದ ನಂದ ಏವ ಚ ।
ಸದ್ವಿಚ್ಛೇದೋ ಹಿ ಸಾಧೂನಾಂ ಮರಣಾದತಿರಿಚ್ಯತೇ ॥ ೨೨೧ ॥

ಸರ್ವಶಿಷ್ಯೈಃ ಪರಿವೃತಂ ಮುನೀಂದ್ರಂ ಗಂತುಮುದ್ಯತಂ ।
ಸರ್ವೇ ನಂದಾದಯೋ ಗೋಪಾ ರುರುದುಸ್ತೇ ಗೋಪಿಕಾಸ್ತದಾ ॥ ೨೨೨ ॥

---

೨೧೯. ಶ್ರೀನಾರಾಯಣ :— ಈ ರೀತಿಯಾಗಿ ಗರ್ಗಮಹರ್ಷಿಯು ಶ್ರೀಕೃಷ್ಣನ ಸ್ತೋತ್ರವನ್ನು ಮಾಡಿ ಆ ಶಿಶುವನ್ನು ನಂದನಿಗೆ ಅರ್ಪಿಸಿದನು. ಅನಂತರ ನಂದಗೋಪನನ್ನು ಕುರಿತು ಮನೆಗೆ ಹೋಗಲು ಅನುಮತಿಯನ್ನು ಬೇಡಿದನು.

೨೨೦. ಮೋಹದ ಬಲೆಗೆ ಸಿಕ್ಕಿರುವ ಈ ಸಂಸಾರದಲ್ಲಿರುವ ಮನುಜರಿಗೆ ಸಂಘಟನೆ ಮತ್ತು ವಿರಹವು ಸಮುದ್ರದ ನೊರೆಯಂತೆ ಚಂಚಲವಾದುದು.

೨೨೧ ಗರ್ಗಮಹರ್ಷಿಯ ಮಾತನ್ನು ಕೇಳಿ ನಂದನು ಗೋಳಾಡ ಲಾರಂಭಿಸಿದನು. ಸತ್ಪುರುಷರಿಗೆ ಸಾಧುಗಳ ವಿರಹವು ಮರಣಕ್ಕಿಂತಲೂ ದುಃಖಕರ ವಾದುದು.

೨೨೨. ಸಕಲ ಶಿಷ್ಯರೊಡನೆ ಕೂಡಿ ಗರ್ಗಮುನಿಯು ಪ್ರಯಾಣೋನ್ಮುಖ ನಾಗಲು, ನಂದನೇ ಮೊದಲಾದ ಗೋಪರೂ, ಯಶೋದೆ ಮುಂತಾದ ಗೋಪಿಯರೂ ಅವನ ವಿರಹಕಾತರರಾಗಿ ದುಃಖಗೊಂಡರು.

ಪ್ರಣೇಮುಃ ಪರಮಪ್ರೀತ್ಯಾ ಚಕ್ರುಸ್ತಂ ವಿನಯಂ ಮುನೇ ।
ದತ್ವಾಽಽಶಿಷಂ ಮುನಿಶ್ರೇಷ್ಠೋ ಜಗಾಮ ಮಥುರಾಂ ಮುದಾ ॥ ೨೨೩ ॥

ಋಷಯೋ ಮುನಯಶ್ಚೈವ ಬಂಧುವರ್ಗಾಶ್ಚ ಬಲ್ಲವಾಃ ।
ಸರ್ವೇ ಜಗ್ಮುರ್ಧನೈಃ ಪೂರ್ಣಾಃ ಸ್ವಾಲಯಂ ಹೃಷ್ಟಮಾನಸಾಃ ॥ ೨೨೪ ॥

ಪ್ರಜಗ್ಮುರ್ಬಂದಿನಃ ಸರ್ವೇ ಪರಿಪೂರ್ಣಮನೋರಥಾಃ ।
ಮಿಷ್ಟದ್ರವ್ಯಾಂಶುಕೋತ್ಕೃಷ್ಟತುರಗಸ್ವರ್ಣಭೂಷಣೈಃ ॥ ೨೨೫ ॥

ಆಕಂಠಪೂರ್ಣಾ ಭುಕ್ತ್ವಾ ಚ ಭಿಕ್ಷುಕಾ ಗಂತುಮಕ್ಷಮಾಃ ।
ಸ್ವರ್ಣವಸ್ತ್ರಭರೋದ್ರೇಕಪರಿಶ್ರಾಂತಾ ಮುದಾಽನ್ವಿತಾಃ ॥ ೨೨೬ ॥

ಸುಮಂದಗಾಮಿನಃ ಕೇಚಿತ್ಕೇಚಿದ್ಭೂಮೌ ಚ ಶೇರತೇ ।
ಕೇಚಿದ್ವರ್ತ್ಮನಿ ತಿಷ್ಠಂತಶ್ಚೋತ್ತಿಷ್ಠಂತಶ್ಚ ಕೇಚನ ॥ ೨೨೭ ॥

---

೨೨೩ ಎಲ್ಲರೂ ವಿನಯಪೂರ್ವಕವಾಗಿ ಆ ಗರ್ಗಮಹರ್ಷಿಗೆ ನಮಸ್ಕಾರ ಮಾಡಲು ಆ ಮುನಿವರ್ಯನು ಎಲ್ಲರಿಗೂ ಆಶೀರ್ವಾದಮಾಡಿ ಸಂತೋಷದಿಂದ ಮಥುರೆಗೆ ಹಿಂತಿರುಗಿದನು.

೨೨೪. ಇತ್ತ ನಂದಗೋಪನ ಮನೆಗೆ ಬಂದಿದ್ದ ಋಷಿಮುನಿಗಳೂ, ಬಂಧುಗಳೂ ಮತ್ತು ಗೋಪರೂ ಧನಧಾನ್ಯಸಮೃದ್ಧರಾಗಿ ಸಂತೋಷದಿಂದ ತಮ್ಮ ಮನೆಗೆ ಹಿಂತಿರುಗಿದರು.

೨೨೫ ಮಿಷ್ಟಾನ್ನದಿಂದಲೂ, ದಿವ್ಯವಾದ ವಸ್ತ್ರಾಲಂಕಾರಗಳಿಂದಲೂ. ಶ್ರೇಷ್ಠವಾದ ಕುದುರೆಗಳಿಂದಲೂ, ದ್ರವ್ಯರಾಶಿಗಳಿಂದಲೂ, ಪರಿಪೂರ್ಣಮನೋರಥರಾದ ಬಂದಿಗಳೆಲ್ಲರೂ ತಮ್ಮ ಮಂದಿರಕ್ಕೆ ಹಿಂತೆರಳಿದರು.

೨೨೬. ಭಿಕ್ಷುಕರು ಕಂಠಪೂರ್ತಿಯಾಗಿ ತಿಂದು ತೇಗಿದ್ದಲ್ಲದೆ ಸುವರ್ಣ ಮತ್ತು ವಸ್ತ್ರಗಳ ಭಾರವನ್ನು ಹೊರಲಾರದೆ ಪರಿಶ್ರಾಂತರಾಗಿದ್ದರು.

೨೨೭. ಕೆಲವರು ಮಂದಗಾಮಿಗಳಾಗಿಯೂ, ಮತ್ತೆ ಕೆಲವರು ನೆಲದ ಮೇಲೆ ಮಲಗುತ್ತಲೂ, ಇನ್ನು ಕೆಲವರು ದಾರಿಯಲ್ಲೇ ಕುಳಿತುಕೊಳ್ಳುತ್ತಲೂ, ಕೆಲವರು ಏಳಲಾರದೆ ತೆವಳುತ್ತಲೂ ಇದ್ದರು.

ಕೇಚಿದೂಷುಃ ಪ್ರಮುದಿತಾ ಹಸಂತಸ್ತತ್ರ ಕೇಚನ ।
ಕಪರ್ದಕಾನಾಂ ವಸ್ತೂನಾಂ ಶೇಷಾಂಶ್ಚೋರ್ವರಿತಾನ್ವಹೂನ್ ॥ ೨೨೮ ॥

ಕೇಚಿತ್ತಾನಾದದುಃ ಸ್ಥಿತ್ವಾ ದರ್ಶಯಂತಶ್ಚ ಕೇಚನ ।
ಕೇಚಿನ್ನೃತ್ಯಂ ಪ್ರಕುರ್ವಂತೋ ಗಾಯಂತಸ್ತತ್ರ ಕೇಚನ ॥ ೨೨೯ ॥

ಕೇಚಿದ್ಬಹುವಿಧಾ ಗಾಥಾಃ ಕಥಯಂತಃ ಪುರಾತನಾಃ ।
ಮರುತ್ತಶ್ವೇತಸಗರಮಾಂಧಾತೄಣಾಂ ಚ ಭೂಭೃತಾಂ ॥ ೨೩೦ ॥

ಉತ್ತಾನಪಾದನಹುಷನಲಾದೀನಾಂ ಚ ಯಾಃ ಕಥಾಃ ।
ಶ್ರೀರಾಮಸ್ಯಾಶ್ವಮೇಧಸ್ಯ ರಂತಿದೇವಸ್ಯ ಕರ್ಮಣಾಂ ॥ ೨೩೧ ॥

ಯೇಷಾಂ ಯೇಷಾಂ ನೃಪಾಣಾಂ ಚ ಶ್ರುತಾ ವೃದ್ಧಮುಖಾತ್ಕಥಾಃ ।
ಕಥಯಂತಶ್ಚ ತಾಃ ಕೇಚಿಚ್ಛೃತವಂತಶ್ಚ ಕೇಚನ ॥ ೨೩೨ ॥

---

೨೨೮. ಕೆಲವರು ಉಂಡು ಸಂತಸಗೊಂಡು ಅಲ್ಲಿಯೇ ಆನಂದಪರವಶರಾಗಿ ಕುಳಿತರು. ಕಪರ್ದಕಾದಿ ಸಮೃದ್ಧವಾದ ವಸ್ತುಗಳನ್ನೆಲ್ಲ ಕೆಲವರು ಹೊರಲಾರದೆ ಹೊತ್ತುಕೊಂಡು ಹೋದರು.

೨೨೯. ಕೆಲವರು ನರ್ತನಮಾಡುತ್ತಲೂ, ಮತ್ತೆ ಕೆಲವರು ಗಾನಮಾಡುತ್ತಲೂ, ಉಳಿದ ಕೆಲವರು ಅದನ್ನು ನೋಡಿ ಸಂತೋಷಪಡುತ್ತಲೂ, ಇದ್ದರು.

೨೩೦ ಕೆಲವರು ಪುರಾತನವಾದ ಅನೇಕವಿಧ ಗಾಥಗಳನ್ನು ಹಾಡುತ್ತಿದ್ದರು. ಆ ಗಾಥಗಳಲ್ಲಿ ಮರುತ್ತ, ಶ್ವೇತ, ಸಗರ ಮತ್ತು ಮಾಂಧಾತ ಮುಂತಾದ ಚಕ್ರವರ್ತಿಗಳ ಬಿರುದಾವಳಿಗಳು ಮೆರೆಯುತ್ತಿದ್ದವು.

೨೩೧. ಉತ್ತಾನಪಾದ, ನಹುಷ ಮತ್ತು ನಳ ಮುಂತಾದ ಚಕ್ರವರ್ತಿಗಳ ಕಥೆಯೂ, ಶ್ರೀರಾಮಾಶ್ವಮೇಧ ಮತ್ತು ರಂತಿದೇವನ ಗವಾಲಂಭನವೂ ವರ್ಣಿತವಾಗುತ್ತಿತ್ತು.

೨೩೨. ವೃದ್ಧರ ಬಾಯಿನಿಂದ ಯಾವ ಯಾವ ರಾಜರ ಕಥೆಗಳನ್ನು ಕೇಳಿದ್ದರೋ ಆಯಾಯ ರಾಜರ ಕಥೆಯನ್ನು ಕೆಲವರು ಹೇಳುತ್ತಲೂ ಮತ್ತೆ ಕೆಲವರು ಕೇಳುತ್ತಲೂ ಇದ್ದರು.

**ಸ್ಥಾಯಂ ಸ್ಥಾಯಂ ಗತಾಃ ಕೇಚಿತ್ಸ್ವಪಂಸ್ವಾಪಂ ಚ ಕೇಚನ ।**
**ಏವಂ ಸರ್ವೇ ಪ್ರಮುದಿತಾಃ ಪ್ರಜಗ್ಮುಃ ಸ್ವಾಲಯಂ ಮುದಾ ॥ ೨೩೩ ॥**

**ಹೃಷ್ಟೋ ನಂದೋ ಯಶೋದಾ ಚ ಬಾಲಂ ಕೃತ್ವಾ ಚ ವಕ್ಷಸಿ ।**
**ತಸ್ಥೌ ಸ್ವಮಂದಿರೇ ರಮ್ಯೇ ಕುಬೇರಭವನೋಪಮೇ ॥ ೨೩೪ ॥**

**ಏವಂ ಪ್ರವರ್ಧಿತೌ ಬಾಲೌ ಶುಕ್ಲಚಂದ್ರಕಲೋಪಮೌ ।**
**ಗವಾಂ ಪುಚ್ಛಂ ಚ ಭಿತ್ತಿಂ ಚ ಧೃತ್ವಾ ಚೋತ್ತಸ್ಥತುರ್ಮುದಾ ॥ ೨೩೫ ॥**

**ಶಬ್ದಾರ್ಧಂ ವಾ ತದರ್ಧಂ ವಾ ಕ್ಷಮೌ ವಕ್ತುಂ ದಿನೇ ದಿನೇ ।**
**ಪಿತ್ರೋರ್ಹರ್ಷಂ ಚ ವರ್ಧಂತೌ ಗಚ್ಛಂತೌ ಪ್ರಾಂಗಣೇ ಮುನೇ ॥ ೨೩೬ ॥**

**ಬಲೋ ದ್ವಿಪಾದಂ ಪಾದಂ ವಾ ಗಂತುಂ ಶಕ್ತೋ ಬಭೂವ ಹ ।**
**ಗಂತುಂ ಶಕ್ತೋ ಹಿ ಜಾನುಭ್ಯಾಂ ಪ್ರಾಂಗಣೇ ವಾ ಗೃಹೇ ಹರಿಃ ॥ ೨೩೭ ॥**

---

೨೩೩. ಕೆಲವರು ನಿಂತು ನಿಂತು ಪ್ರಯಾಣಮಾಡುತ್ತಲೂ ಇದ್ದರು. ಹೀಗೆ ಒಟ್ಟಿನಲ್ಲಿ ಎಲ್ಲರೂ ಸಂತೋಷಗೊಂಡು ತಮ್ಮ ತಮ್ಮ ಮಂದಿರಕ್ಕೆ ತೆರಳಿದರು.

೨೩೪. ಇತ್ತ ನಂದ ಮತ್ತು ಯಶೋದೆಯರು ಸಂತುಷ್ಟರಾಗಿ, ಬಾಲಕನನ್ನು ಎದೆಗಪ್ಪಿಕೊಂಡು ಕುಬೇರಮಂದಿರದಂತೆ ಮನೋಹರವಾದ ತಮ್ಮ ಮನೆಯಲ್ಲಿ ಸುಖವಾಗಿದ್ದರು.

೨೩೫. ಈ ರೀತಿಯಾಗಿ ಶುಕ್ಲಪಕ್ಷದ ಚಂದ್ರನಕಲೆಯಂತೆ ಅಭಿವೃದ್ಧಿ ಗೊಳ್ಳುತ್ತಿದ್ದ ಆ ಬಲರಾಮಕೃಷ್ಣರು, ಹಸುಗಳ ಬಾಲವನ್ನೂ, ಗೋಡೆ ಗಳನ್ನೂ ಹಿಡಿದುಕೊಂಡು ಎದ್ದು ತಿರುಗಾಡಲಾರಂಭಿಸಿದರು.

೨೩೬. ಕ್ರಮ ಕ್ರಮವಾಗಿ ಒಂದು ಶಬ್ದದಅರ್ಧವನ್ನೋ ಕಾಲುಭಾಗವನ್ನೋ ಉಚ್ಚರಿಸಲು ಶಕ್ತರಾಗಿ, ಅಂಗಳದಲ್ಲಿ ತಿರುಗಾಡುತ್ತ ತಾಯಿತಂದೆಗಳಿಗೆ ಸಂತೋಷ ವನ್ನುಂಟುಮಾಡುತ್ತಿದ್ದರು.

೨೩೭. ಬಲರಾಮನು ಒಂದೆರಡು ಹೆಜ್ಜೆ ನಡೆಯಲು ಶಕ್ತನಾದನು. ಶ್ರೀಕೃಷ್ಣನು ಅಂಗಳದಲ್ಲೋ ಅಥವಾ ಮನೆಯೊಳಗೋ ಅಂಬೆಗಾಲಿಡಲು ಮೊದಲು ಮಾಡಿದನು.

ವರ್ಷಾಧಿಕೋ ಹಿ ವಯಸಾ ಕೃಷ್ಣಾತ್ಸಂಕರ್ಷಣಃ ಸ್ವಯಂ।
ತತೋ ಮುದಂ ವರ್ದ್ಧಯಂತೌ ವರ್ದ್ಧಿತೌ ಚ ದಿನೇ ದಿನೇ　　॥ ೨೩೮ ॥

ವ್ರಜಂತೌ ಗೋಕುಲೇ ಬಾಲೌ ಪ್ರಹೃಷ್ಟಗಮನೇ ಕ್ಷಮೌ।
ಉಕ್ತವಂತೌ ಸ್ಫುಟಂ ವಾಕ್ಯಂ ಮಾಯಾಬಾಲಕವಿಗ್ರಹೌ　　॥ ೨೩೯ ॥

ಗರ್ಗೋ ಜಗಾಮ ಮಥುರಾಂ ವಸುದೇವಾಶ್ರಮಂ ಮುನೇ।
ಸ ತಂ ನನಾಮ ಪಪ್ರಚ್ಛ ಪುತ್ರಯೋಃ ಕುಶಲಂ ತಯೋಃ　　॥ ೨೪೦ ॥

ಮುನಿಸ್ತಂ ಕಥಯಾಮಾಸ ಕುಶಲಂ ಸುಮಹೋತ್ಸವಂ।
ಆನಂದಾಶ್ರುನಿಮಗ್ನಶ್ಚ ಶ್ರುತಮಾತ್ರಾದ್ಬಭೂವ ಹ　　॥ ೨೪೧ ॥

ದೇವಕೀ ಪರಮಪ್ರೀತ್ಯಾ ಪಪ್ರಚ್ಛ ಚ ಪುನಃಪುನಃ।
ಆನಂದಾಶ್ರುನಿಮಗ್ನಾ ಸಾ ರುರೋದ ಚ ಮುಹುರ್ಮುಹುಃ　　॥ ೨೪೨ ॥

---

೨೩೮. ವಯಸ್ಸಿನಲ್ಲಿ ಕೃಷ್ಣನಿಗಿಂತ ಬಲರಾಮನು ಒಂದುವರ್ಷ ದೊಡ್ಡವನು. ಅವರ ಅಭಿವೃದ್ಧಿಯನ್ನು ನೋಡಿ ತಂದೆ ತಾಯಿಗಳು ದಿನದಿನಕ್ಕೂ ಮುದಿತರಾದರು.

೨೩೯. ಮಾಯಾಮಹಿಮೆಯಿಂದ ಶಿಶುರೂಪಧಾರಿಗಳಾದ ಆ ಬಾಲಕರು ಕ್ರಮಕ್ರಮವಾಗಿ ಗೋಕುಲದಲ್ಲಿ ಓಡಾಡಲು ಶಕ್ತರೂ, ಮಾತುಗಳನ್ನು ಸ್ಫುಟವಾಗಿ ಆಡಲು ಸಮರ್ಥರೂ ಆದರು.

೨೪೦. ಎಲೈ ನಾರದನೇ, ಇತ್ತ ಗರ್ಗಮಹರ್ಷಿಯು ಮಥುರೆಯಲ್ಲಿ ವಸುದೇವನಿದ್ದೆಡೆಗೆ ಬಂದನು. ವಸುದೇವನು ಅವನಿಗೆ ಸಾಷ್ಟಾಂಗವೆರಗಿ ತನ್ನ ಮಕ್ಕಳಿಬ್ಬರ ಯೋಗಕ್ಷೇಮವನ್ನು ಕೇಳಿದನು.

೨೪೧. ಆ ಮುನಿಯು ಬಾಲಕರಿಗೆ ನಡೆಸಿದ ಮಹೋತ್ಸವವನ್ನೆಲ್ಲ ವಿವರಿಸಿದನು. ಅದನ್ನು ಕೇಳಿದ ಕೂಡಲೇ ವಸುದೇವನು ಆನಂದಾಶ್ರುಗಳಿಂದ ತೋಯ್ದುಹೋದನು

೨೪೨ ದೇವಕೀದೇವಿಯೂ ಪರಮಪ್ರೀತಿಯಿಂದ ಮಕ್ಕಳ ಅಭಿವೃದ್ಧಿಯನ್ನು ಮತ್ತೆ ಮತ್ತೆ ಕೇಳಿ ಆನಂದಾಶ್ರುಗಳಿಂದ ನೆನೆದಳು.

ಗರ್ಗಸ್ತ್ವಾಶಿಷಂ ದತ್ವಾ ಜಗಾಮ ಸ್ವಾಲಯಂ ಮುದಾ ।
ಸ್ವಗೃಹೇ ತಸ್ಥತುಸ್ತೌ ಚ ಕುಬೇರಭವನೋಪಮೇ ॥ ೨೪೩ ॥

॥ ಶ್ರೀ ನಾರಾಯಣ ಉವಾಚ ॥

ಯತ್ರ ಕಲ್ಪೇ ಕಥಾ ಚೇಯಂ ತತ್ರ ತ್ವಮುಪಬರ್ಹಣಃ ।
ಪಂಚಾಶತ್ಕಾಮಿನೀನಾಂ ಚ ಪತಿರ್ಗಂಧರ್ವಪುಂಗವಃ ॥ ೨೪೪ ॥

ತಾಸಾಂ ಪ್ರಾಣಾಧಿಕಸ್ತ್ವಂ ಚ ಶೃಂಗಾರನಿಪುಣೋ ಯುವಾ ।
ತತೋಽಭೂದ್ಬ್ರಹ್ಮಣಃ ಶಾಪಾದ್ದಾಸೀಪುತ್ರೋ ದ್ವಿಜಸ್ಯ ಚ ॥ ೨೪೫ ॥

ತತೋಽಧುನಾ ಬ್ರಹ್ಮಪುತ್ರೋ ವೈಷ್ಣವೋಚ್ಛಿಷ್ಟಭೋಜನಾತ್ ।
ಸರ್ವದರ್ಶೀ ಚ ಸರ್ವಜ್ಞಃ ಸ್ಮಾರಕೋ ಹರಿಸೇವಯಾ ॥ ೨೪೬ ॥

---

೨೪೩. ಅನಂತರ ಗರ್ಗಮಹರ್ಷಿಯು ಅವರಿಬ್ಬರಿಗೂ ಆಶೀರ್ವದಿಸಿ ತನ್ನ ಮಂದಿರಕ್ಕೆ ಹಿಂತಿರುಗಿದನು. ಆ ವಸುದೇವ ದೇವಕಿಯರು ತಮ್ಮ ಮಂದಿರದಲ್ಲಿ ಸುಖವಾಗಿದ್ದರು.

೨೪೪. ಶ್ರೀನಾರಾಯಣ :— ಎಲೈ ನಾರದನೇ, ಯಾವ ಯುಗದಲ್ಲಿ ಈ ಕಥೆ ನಡೆಯಿತೋ ಆ ಯುಗದಲ್ಲಿ ನೀನು ಉಪಬರ್ಹಣನೆಂಬ ಗಂಧರ್ವನಾಗಿ ಐವತ್ತು ಜನ ಗಂಧರ್ವಸ್ತ್ರೀಯರ ಪ್ರಾಣಕಾಂತನಾಗಿದ್ದೆ.

೨೪೫. ಅವರಿಗೆ ಪ್ರಾಣಪ್ರಿಯನೂ, ಶೃಂಗಾರನಿಪುಣನೂ ಯುವಕನೂ ಆಗಿದ್ದ ನೀನು ಪುನಃ ಬ್ರಹ್ಮನ ಶಾಪದಿಂದ ದಾಸೀಪುತ್ರನಾಗಿ ಜನಿಸಿದೆ.

೨೪೬. ಈಗ ವಿಷ್ಣುಭಕ್ತನ ಉಚ್ಛಿಷ್ಟಭೋಜನದಿಂದ ಪುನಃ ಬ್ರಹ್ಮಪುತ್ರನಾಗಿರುವುದಲ್ಲದೆ ಶ್ರೀಹರಿಯ ಸೇವಾಮಹಿಮೆಯಿಂದ ಸರ್ವಜ್ಞನೂ ಜಾತಿಸ್ಮರನೂ ಆಗಿದ್ದೀಯೆ.

ಕಥಿತಂ ಕೃಷ್ಣಚರಿತಂ ನಾಮಾನ್ನಪ್ರಾಶನಾದಿಕಂ ।
ಜನ್ಮಮೃತ್ಯುಜರಾತಿಘ್ನಮುಪರಂ ಕಥಯಾಮಿ ತೇ ॥ ೨೪೭ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣನಾರದಸಂವಾದೇ ಕೃಷ್ಣಾನ್ನಪ್ರಾಶನವರ್ಣನ
ನಾಮಕರಣಪ್ರಸ್ತಾವೋ ನಾಮ
ತ್ರಯೋದಶೋಽಧ್ಯಾಯಃ

---

೨೪೭. ಇದುವರೆಗೆ ಜನ್ಮಜರಾಮರಣನಾಶಕವಾದ, ಅನ್ನಪ್ರಾಶನವೆಂಬ ಶ್ರೀಕೃಷ್ಣನ ಚರಿತ್ರೆಯನ್ನು ಹೇಳಿದೆನು. ಮುಂದೆ ಹೇಳುವುದನ್ನು ಸಾವಧಾನದಿಂದ ಕೇಳು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ಶ್ರೀಕೃಷ್ಣನಿಗೆ ಅನ್ನಪ್ರಾಶನ ಮತ್ತು ನಾಮಕರಣವಾದುದನ್ನು
ತಿಳಿಸುವ ಹದಿಮೂರನೆಯ ಅಧ್ಯಾಯವು ಮುಗಿದುದು.



## ಹದಿಮೂರನೆಯ ಅಧ್ಯಾಯದ ಸಾರಾಂಶ



ಒಮ್ಮೆ ಯಶೋದೆಯು ಶ್ರೀಕೃಷ್ಣನಿಗೆ ಸ್ತನ್ಯಪಾನಮಾಡಿಸುತ್ತಿದ್ದಾಗ ದಿವ್ಯ ತೇಜಸ್ವಿಯಾದ ಬ್ರಾಹ್ಮಣನೊಬ್ಬನು ಅವರ ಮಂದಿರಕ್ಕೆ ಬರಲು ಯಶೋದೆಯು ಪ್ರತ್ಯುತ್ಥಾನಮಾಡಿ ಅರ್ಘ್ಯಪಾದ್ಯಾದಿಗಳಿಂದ ಆತನನ್ನು ಸತ್ಕರಿಸಿ ಕುಶಲಪ್ರಶ್ನೆ ಮಾಡಿದಳು. ಆತನು ಗರ್ಗಮಹರ್ಷಿಯೆಂದೂ ವಸುದೇವನಿಂದ ಪ್ರೇರಿತನಾಗಿ ಅಲ್ಲಿಗೆ ಬಂದಿರುವನೆಂದೂ ತಿಳಿದಕೂಡಲೇ ನಂದಗೋಪನಿಗೆ ಹೇಳಿ ಕಳುಹಿಸಿದಳು. ಆ ಕ್ಷಣವೇ ನಂದಗೋಪನು ಬಂದು ಮಹರ್ಷಿಗೆ ದಂಡಪ್ರಣಾಮಮಾಡಿ ಬಂದ ಕಾರ್ಯವೇನೆಂದು ಬಿನ್ನವಿಸಿಕೊಂಡನು. ಗರ್ಗಮಹರ್ಷಿಯು ಶಿಶುವಾದ ಶ್ರೀಕೃಷ್ಣನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಲು ತಾನು ಬಂದಿರುವುದಾಗಿ ತಿಳಿಸಿ ಶ್ರೀಕೃಷ್ಣಪರಮಾತ್ಮನ ದಿವ್ಯಮಹಿಮೆಯನ್ನು ವಿಸ್ತಾರವಾಗಿ ವರ್ಣಿಸಿದನು. ಅನಂತರ ನಂದಗೋಪನ ಪ್ರಾರ್ಥನೆಯಂತೆ ರಾಧಾದೇವಿಯ ಇತಿಹಾಸವನ್ನೂ, ಶ್ರೀಕೃಷ್ಣನ ಭವಿಷ್ಯಚ್ಚರಿತ್ರೆಯನ್ನೂ ವಿಸ್ತಾರವಾಗಿ ವರ್ಣಿಸಿದನು. ನಂದಗೋಪನೂ ಕೂಡ ಬಂಧುಗಳಿಗೆಲ್ಲ ಆಹ್ವಾನವಿತ್ತು ಬರಮಾಡಿಕೊಂಡು ಶುಭಮುಹೂರ್ತದಲ್ಲಿ ಗರ್ಗಮಹರ್ಷಿಯ ಅನುಜ್ಞೆಯನ್ನು ಪಡೆದು ಶಿಶುವಾದ ಶ್ರೀಕೃಷ್ಣನಿಗೆ ಜಾತಕರ್ಮ, ಅನ್ನಪ್ರಾಶನಾದಿ ಸತ್ಕರ್ಮಗಳನ್ನು ಮಾಡಿ ಅಸಂಖ್ಯ ಬ್ರಾಹ್ಮಣೋತ್ತಮರಿಗೆ ಯಥೇಚ್ಛವಾಗಿ ದ್ರವ್ಯದಾನಮಾಡಿ ತೃಪ್ತಿಪಡಿಸಿದನು. ಅನಂತರ ಗರ್ಗಮಹರ್ಷಿಯು ಏಕಾಂತದಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಭಕ್ತಿಯಿಂದ ಸ್ತೋತ್ರಮಾಡಿ ಅನುಗ್ರಹ ಪಡೆದು, ನಂದಯಶೋದೆಯರಿಗೆ ಆಶೀರ್ವದಿಸಿ ಮಥುರೆಗೆ ಹೋಗಿ ವಸುದೇವ ದೇವಕಿಯರಿಗೆ ಈ ಶುಭಸಮಾಚಾರವನ್ನು ತಿಳಿಸಿ, ಅವರನ್ನು ಸಂತೋಷ ಗೊಳಿಸಿದನು. ಇತ್ತ ಬಲರಾಮಕೃಷ್ಣರು ದಿನೇದಿನೇ ಶುಕ್ಲಪಕ್ಷದ ಚಂದ್ರನಂತೆ ಬೆಳಗುತ್ತಿದ್ದರು.



॥ ಓಂ ॥

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

॥ ಚತುರ್ದಶೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಏಕದಾ ನಂದಪತ್ನೀ ಚ ಸ್ನಾನಾರ್ಥಂ ಯಮುನಾಂ ಯಯೌ ।
ಗವ್ಯಪೂರ್ಣಂ ಗೃಹಂ ದೃಷ್ಟ್ವಾ ಜಹಾಸ ಮಧುಸೂದನಃ ॥ ೧ ॥

ದಧಿದುಗ್ಧಾಜ್ಯತಕ್ರಂ ಚ ನವನೀತಂ ಮನೋಹರಂ ।
ಗೃಹಸ್ಥಿತಂ ಚ ಯತ್ಕಿಂಚಿಚ್ಚ ಖಾದ ಮಧುಸೂದನಃ ॥ ೨ ॥

ಮಧು ಹೈಯಂಗವೀನಂ ಯತ್ಸ್ವಸ್ತಿಕಂ ಶಕಟೇಸ್ಥಿತಂ ।
ಭುಕ್ತ್ವಾ ಪೀತ್ವಾಂಽಶುಕೈರ್ವಕ್ತ್ರಸಂಸ್ಕಾರಂ ಕರ್ತುಮುದ್ಯತಂ ॥ ೩ ॥

---

### ಹದಿನಾಲ್ಕನೆಯ ಅಧ್ಯಾಯವು

೧. ನಾರಾಯಣ:—ಒಮ್ಮೆ ನಂದಗೋಪನ ಪತ್ನಿಯಾದ ಯಶೋದೆಯು ಯಮುನಾನದಿಗೆ ಸ್ನಾನಮಾಡಲು ಹೋಗಿದ್ದಳು. ಆಗ ಹಸುವಿನ ಹಾಲು, ಮೊಸರು, ಬೆಣ್ಣೆ ಮತ್ತು ತುಪ್ಪದಿಂದ ತನ್ನ ಮನೆಯು ಪರಿಪೂರ್ಣವಾಗಿರುವುದನ್ನು ಶ್ರೀಕೃಷ್ಣನು ನೋಡಿ ಆನಂದತುಂದಿಲನಾದನು.

೨. ಆ ಮನೋಹರವಾದ ಹಾಲು, ಮೊಸರು, ಬೆಣ್ಣೆತುಪ್ಪಗಳಲ್ಲಿ ತನಗೆ ಸಾಕಾಗುವಷ್ಟನ್ನು ಮಧುಸೂದನನು ತಿಂದು ತೇಗಿದನು.

೩. ಬಂಡಿಯ ಮೇಲಿರುವ, ಜೇನು, ಹೊಸದಾಗಿ ಬೆಣ್ಣೆಕಾಯಿಸಿದ ತುಪ್ಪ ಮತ್ತು ಸ್ವಸ್ತಿಕಾದಿ ಭಕ್ಷ್ಯಗಳನ್ನು ಯಥೇಚ್ಛವಾಗಿ ತಿಂದು ಬಟ್ಟೆಯಿಂದ ತನ್ನ ಬಾಯನ್ನು ಚೆನ್ನಾಗಿ ಒರಸಿಕೊಳ್ಳುತ್ತಿದ್ದನು.

ದದರ್ಶ ಬಾಲಕಂ ಗೋಪೀ ಸ್ನಾತ್ವಾಽಽಗತ್ಯ ಸ್ವಮಂದಿರಂ ।
ಗವ್ಯಶೂನ್ಯಂ ಭಗ್ನಭಾಂಡಂ ಮಧ್ವಾದಿರಿಕ್ತಭಾಜನಂ ॥ ೪ ॥

ದೃಷ್ಟ್ವಾ ಪಪ್ರಚ್ಛ ಬಾಲಾಂಶ್ಚ ಅಹೋ ಕರ್ಮೇದಮದ್ಭುತಂ ।
ಯೂಯಂ ವದತ ಸತ್ಯಂ ಚ ಕೃತಂ ಕೇನ ಸುದಾರುಣಂ ॥ ೫ ॥

ಯಶೋದಾವಚನಂ ಶ್ರುತ್ವಾ ಸರ್ವಮೂಚುಶ್ಚ ಬಾಲಕಾಃ ।
ಚಖಾದ ಸತ್ಯಂ ಬಾಲಸ್ತೇ ನಾಸ್ಮಭ್ಯಂ ದತ್ತಮೇವ ಚ ॥ ೬ ॥

ಬಾಲಾನಾಂ ವಚನಂ ಶ್ರುತ್ವಾ ಚುಕೋಪ ನಂದಗೇಹಿನೀ ।
ವೇತ್ರಂ ಗೃಹೀತ್ವಾ ದುದ್ರಾವ ರಕ್ತಪಂಕಜಲೋಚನಾ ॥ ೭ ॥

ಪಲಾಯಮಾನಂ ಗೋವಿಂದಂ ಗೃಹೀತುಂ ನ ಶಶಾಕ ಹ ।
ಧ್ಯಾನಾಸಾಧ್ಯಂ ಶಿವಾದೀನಾಂ ದುರಾಪಮಪಿ ಯೋಗಿನಾಂ ॥ ೮ ॥

---

೪. ಅಷ್ಟುಹೊತ್ತಿಗೆ ಯಶೋದೆಯು ಸ್ನಾನಮಾಡಿ ತನ್ನ ಮಂದಿರಕ್ಕೆ ಹಿಂತಿರುಗಿ, ಅಡಿಗೆಮನೆಯಲ್ಲಿ ಹಾಲು, ಮೊಸರು, ಬೆಣ್ಣೆ, ಜೇನು ಮುಂತಾದವುಗಳೆಲ್ಲ ಬರಿದಾಗಿ ಒಡೆದುಬಿದ್ದಿರುವ ಭಾಂಡಗಳನ್ನು ನೋಡಿದಳು.

೫. ಆಗ ಗೋಪಬಾಲಕರನ್ನೆಲ್ಲ ಕರೆಸಿ, 'ಈ ತುಂಟಕಾರ್ಯವನ್ನು ಮಾಡಿದವರಾರು? ಸತ್ಯವನ್ನು ಹೇಳಿರಿ' ಎಂದು ಆಶ್ಚರ್ಯದಿಂದ ಕೇಳಿದಳು.

೬. ಯಶೋದೆಯ ಮಾತನ್ನು ಕೇಳಿ ಆ ಬಾಲಕರೆಲ್ಲರೂ, ಸತ್ಯವಾಗಿಯೂ, ನಿನ್ನ ಮಗನೇ ಅದೆಲ್ಲವನ್ನೂ ತಿಂದಿರುವನು. ನಾವು ಯಾರೂ ಅದರ ಗೋಜಿಗೆ ಹೋಗಿಲ್ಲವೆಂದರು.

೭. ಆ ಮಕ್ಕಳ ಮಾತನ್ನು ಕೇಳಿ, ನಂದಪತ್ನಿಯಾದ ಯಶೋದೆಯು ಕುಪಿತಳಾಗಿ, ಕಣ್ಣುಗಳನ್ನು ಕೆಂಪುಮಾಡಿಕೊಂಡು, ಬೆತ್ತವನ್ನು ಹಿಡಿದು ಶ್ರೀಕೃಷ್ಣನನ್ನು ಅಟ್ಟಿಕೊಂಡು ಹೋದಳು.

೮ ಶಿವನೇ ಮುಂತಾದ ದೇವತೆಗಳ ಧ್ಯಾನಕ್ಕೆ ಸಿಲುಕದವನೂ, ಯೋಗಿಗಳಿಗೂ ದುರ್ಲಭನೂ ಆದ ಆ ಪರಮಾತ್ಮನನ್ನು ಓಡಿಸಿಕೊಂಡುಹೋದರೂ ಯಶೋದೆಯು ಹಿಡಿಯಲಾರದೆ ಹೋದಳು.

ಯಶೋದಾ ಭ್ರಮಣಂ ಕೃತ್ವಾ ವಿಶ್ರಾಂತಾ ಘರ್ಮಸಂಯುತಾ ।
ತಸ್ಥೌ ಕೋಪಪರೀತಾತ್ಮಾ ಶುಷ್ಕಕಂಠೌಷ್ಠತಾಲುಕಾ ॥ ೯ ॥

ವಿಶ್ರಾಂತಾಂ ಮಾತರಂ ದೃಷ್ಟ್ವಾ ಕೃಪಾಲುಃ ಪುರುಷೋತ್ತಮಃ ।
ಸಂತಸ್ಥೌ ಪುರತೋ ಮಾತುಃ ಸಸ್ಮಿತೋ ಜಗದೀಶ್ವರಃ ॥ ೧೦ ॥

ಕರೇ ಧೃತ್ವಾ ಚ ತಂ ದೇವೀ ಸಮಾನೀಯ ಸ್ವಮಾಲಯಂ ।
ಬದ್ಧ್ವಾ ವಸ್ತ್ರೇಣ ವೃಕ್ಷೇ ಚ ತತಾಡ ಮಧುಸೂದನಂ ॥ ೧೧ ॥

ಬದ್ಧ್ವಾ ಕೃಷ್ಣಂ ಯಶೋದಾ ಸಾ ಜಗಾಮ ಸ್ವಾಲಯಂ ಪ್ರತಿ ।
ಹರಿಸ್ತಸ್ಥೌ ವೃಕ್ಷಮೂಲೇ ಜಗತಾಂ ಪತಿರೀಶ್ವರಃ ॥ ೧೨ ॥

ಶ್ರೀಕೃಷ್ಣಸ್ಪರ್ಶಮಾತ್ರೇಣ ಸಹಸಾ ತತ್ರ ನಾರದ ।
ಪಪಾತ ವೃಕ್ಷಃ ಶೈಲಾಭಃ ಶಬ್ದಂ ಕೃತ್ವಾ ಭಯಾನಕಂ ॥ ೧೩ ॥

---

೯. ಯಶೋದೆಯು ಓಡಿ ಓಡಿ ಬಳಲಿ ಬೆವತುಹೋದಳು. ಕೋಪೋದ್ರೇಕದಿಂದ ಅವಳ ಗಂಟಲೆಲ್ಲವೂ ಒಣಗಿ ಮಾತಾಡದಂತಾಯಿತು.

೧೦. ಈ ರೀತಿ ಬಳಲಿದ ತಾಯಿಯನ್ನು ನೋಡಿ ದಯಾಮಯನಾದ ಪುರುಷೋತ್ತಮನು ತಾಯಿಯ ಮುಂದೆ ಬಂದು ಮುಗುಳುನಗುತ್ತ ನಿಂತುಕೊಂಡನು

೧೧ ಯಶೋದೆಯು ಅವನನ್ನು ಹಿಡಿದು ತನ್ನ ಮನೆಗೆ ಕರೆತಂದು ಸೊಂಟಕ್ಕೆ ಬಟ್ಟೆಯನ್ನು ಕಟ್ಟಿ ಅವನನ್ನು ಬಲವಾಗಿ ಹೊಡೆದಳು.

೧೨. ಈ ರೀತಿ ಹೊಡೆದು ಅವನನ್ನು ಕಟ್ಟಿಹಾಕಿ ಯಶೋದೆಯು ಮನೆಯೊಳಕ್ಕೆ ಹೋದಳು. ಜಗತ್ಪತಿಯಾದ ಶ್ರೀಹರಿಯು ತನ್ನನ್ನು ಕಟ್ಟಿದ್ದ ಮರದ ಬುಡದಲ್ಲಿ ಸುಮ್ಮನೆ ನಿಂತನು.

೧೩ ಎಲೈ ನಾರದನೇ, ಶ್ರೀಕೃಷ್ಣನ ಸ್ಪರ್ಶಮಾತ್ರದಿಂದಲೇ ಬೆಟ್ಟದಂತಿದ್ದ ಆ ಮರವು ಭಯಂಕರವಾದ ಶಬ್ದದೊಡನೆ ನೆಲಕ್ಕೆ ಬಿದ್ದಿತು.

ಸುವೇಷಃ ಪುರುಷೋ ದಿವ್ಯೋ ವೃಕ್ಷಾದಾವಿರ್ಬಭೂವ ಹ ।
ದಿವ್ಯಸ್ಯಂದನಮಾರುಹ್ಯ ಜಗಾಮ ಸ್ವಾಲಯಂ ಪುರಃ ॥ ೧೪ ॥

ಪ್ರಣಮ್ಯ ಜಗತೀನಾಥಂ ಶಾತಕೌಂಭಪರಿಚ್ಛದಂ ।
ಕಿಶೋರಃ ಸಸ್ಮಿತೋ ಗೌರೋ ರತ್ನಾಲಂಕಾರಭೂಷಿತಃ ॥ ೧೫ ॥

ಸಾ ವೃಕ್ಷಪತನಂ ದೃಷ್ಟ್ವಾ ಭಿಯಾ ತ್ರಸ್ತಾ ವ್ರಜೇಶ್ವರೀ ।
ಕ್ರೋಡೇ ಚಕಾರ ಬಾಲಂ ತಂ ರುದಂತಂ ಶ್ಯಾಮಸುಂದರಂ ॥ ೧೬ ॥

ಆಜಗ್ಮುರ್ಗೋಕುಲಸ್ಥಾಶ್ಚ ಗೋಪಾ ಗೋಪ್ಯಶ್ಚ ತದ್ಗೃಹಂ ।
ಯಶೋದಾಂ ಭರ್ತ್ಸಯಾಮಾಸುಃ ಶಾಂತಿಂ ಚಕ್ರುಃ ಶಿಶೋರ್ಮುದಾ ॥೧೭॥

ಅತ್ಯಂತಸ್ಥವಿರೇ ಕಾಲೇ ತನಯೋಽಯಂ ಬಭೂವ ಹ ।
ಧನಂ ಧಾನ್ಯಂ ಚ ರತ್ನಂ ವಾ ತತ್ಸರ್ವಂ ಪುತ್ರಹೇತುಕಂ ॥ ೧೮ ॥

---

೧೪. ಸುಂದರವೇಷಭೂಷಿತನಾದ ದಿವ್ಯ ಪುರುಷನೊಬ್ಬನು ಆ ಮರದಿಂದ ವ್ಯಕ್ತನಾದನು. ಮತ್ತು ದಿವ್ಯವಾದ ರಥವನ್ನೇರಿ ತನ್ನ ಮಂದಿರಕ್ಕೆ ತೆರಳಿದನು.

೧೫. ಸುವರ್ಣದಂತೆ ತೇಜಸ್ವಿಯಾದ ಜಗತ್ಪತಿಗೆ ನಮಸ್ಕರಿಸಿ ಪ್ರಯಾಣ ಮಾಡಲು, ರತ್ನಾಲಂಕಾರಭೂಷಿತನೂ ಗೋವಕಿಶೋರವೇಷಧಾರಿಯೂ ಆದ ಜಗದೊಡೆಯನು ಸ್ವಲ್ಪಕಾಲ ನಸುನಗುತ್ತ ನಿಂತುಕೊಂಡನು.

೧೬. ಇತ್ತ ವ್ರಜೇಶ್ವರಿಯಾದ ಯಶೋದೆಯು ಮರವು ಬಿದ್ದಿದ್ದನ್ನು ನೋಡಿ ಭಯದಿಂದ ಓಡಿಬಂದು ಅಷ್ಟುಹೊತ್ತಿಗೆ ಅಳುತ್ತಿರುವ ಶ್ಯಾಮಸುಂದರನನ್ನು ಎದೆಗಪ್ಪಿಕೊಂಡು ಕರೆದೊಯ್ದಳು.

೧೭ ಆಗ ಗೋಕುಲದಲ್ಲಿದ್ದ ಗೋವಗೋಪಿಯರೆಲ್ಲರೂ ಅವರ ಮನೆಗೆ ಬಂದು ಯಶೋದೆಯನ್ನು ದೂಷಿಸಿ, ಆ ಗೋಪಶಿಶುವಿಗೆ ಶಾಂತಿಕರ್ಮಗಳನ್ನು ಮಾಡಿದರು.

೧೮. ನಿಮ್ಮ ವೃದ್ಧಾಪ್ಯದಲ್ಲಿ ಈ ಬಾಲಕನು ನಿಮಗೆ ಜನಿಸಿರುವನು. ನೀವು ಸಂಪಾದಿಸುವ ಧನಧಾನ್ಯವೂ, ರತ್ನವೂ ಈ ಶಿಶುವಿನ ಏಳಿಗೆಗಾಗಿಯೇ.

ಸುಮತಿರ್ನಾಸ್ತಿ ತೇ ಸತ್ಯಂ ಜ್ಞಾತಂ ನಂದವ್ರಜೇಶ್ವರಿ ।
ನ ಭಕ್ಷಿತಂ ಯತ್ಪುತ್ರೇಣ ತತ್ಸರ್ವಂ ನಿಷ್ಫಲಂ ಭುವಿ ॥ ೧೯ ॥

ಪುತ್ರಂ ಬದ್ಧ್ವಾ ಗವ್ಯಹೇತೋರ್ವೃಕ್ಷಮೂಲೇ ಚ ನಿಷ್ಠುರೇ ।
ಗೃಹಕರ್ಮಣಿ ವ್ಯಗ್ರಾಯಾಂ ದೈವಾದ್ವೃಕ್ಷಃ ಪಪಾತ ಹ ॥ ೨೦ ॥

ವೃಕ್ಷಸ್ಯ ಪತನಾದ್ಗೋಪೀಭಾಗ್ಯಾದ್ಬಾಲೋಽಪಿ ಜೀವಿತಃ ।
ಪ್ರಣಷ್ಟೇ ಬಾಲಕೇ ಮೂಢೇ ವಸ್ತೂನಾಂ ಕಿಂ ಪ್ರಯೋಜನಂ ॥ ೨೧ ॥

ಆಶಿಷಂ ದದುಯುರ್ವಿಪ್ರಾ ಬಂದಿನಶ್ಚ ಶುಭಾವಹಾಂ ।
ದ್ವಿಜೇನ ಕಾರಯಾಮಾಸುರ್ನಾಮಸಂಕೀರ್ತನಂ ಹರೇಃ ॥ ೨೨ ॥

ಏವಂ ಕೃತ್ವಾ ಜನಾಃ ಸರ್ವೇ ಪ್ರಯಯುರ್ನಿಜಮಂದಿರಂ ।
ಉವಾಚ ಪತ್ನೀಂ ನಂದಶ್ಚ ರಕ್ತಪಂಕಜಲೋಚನಃ ॥ ೨೩ ॥

---

೧೯. ಎಲೈ ನಂದ ಯಶೋದೆಯರೇ ? ನಿಮಗೆ ನಿಜವಾಗಿಯೂ ಬುದ್ಧಿಯಿಲ್ಲ. ನಿಮ್ಮ ಮಗನು ತಿನ್ನಬಾರದ ಮೇಲೆ ಆ ಪದಾರ್ಥಗಳೆಲ್ಲ ನಿಮಗೆ ನಿಷ್ಫಲವಲ್ಲವೇ ?

೨೦. ಹಾಲು ಮೊಸರಿಗಾಗಿ ಮಗನನ್ನು ಆ ಭಯಂಕರವಾದ ಮರದ ಬುಡದಲ್ಲಿ ಕಟ್ಟಿಹೋದಿರಿ. ನಿಮ್ಮ ಮನೆಗೆಲಸದಲ್ಲಿ ನೀವು ವ್ಯಗ್ರರಾಗಿರುವಾಗ ಅಕಸ್ಮಾತ್ ಮರವು ಕೆಳಕ್ಕೆ ಬಿದ್ದಿತು.

೨೧. ಮರವು ಬಿದ್ದರೂ ಈ ಯಶೋದೆಯ ಭಾಗ್ಯದಿಂದ ಈ ಶಿಶುವು ಬದುಕಿದನು. ಎಲೌ ಮೂಢೆಯಾದ ಯಶೋದೆಯೇ, ಈ ಬಾಲಕನು ನಾಶವಾಗಿದ್ದರೆ ನಿನಗೆ ಆ ವಸ್ತುಗಳಿಂದ ಏನು ಪ್ರಯೋಜನವಿದ್ದಿತು? ಎಂದು ಕೇಳಿದರು.

೨೨. ಅನಂತರ ಅಲ್ಲಿಗೆ ಬಂದಿದ್ದ ಬ್ರಾಹ್ಮಣರೆಲ್ಲರೂ ಶಿಶುವಿಗೆ ಮಂಗಳಾಶೀರ್ವಾದ ಮಾಡಿದರು. ಸ್ತುತಿಪಾಠಕರು ಆ ಬಾಲಕನ ಮಹಿಮೆಯನ್ನು ಸ್ತುತಿಸಿದರು. ಪುರೋಹಿತರಿಂದ ಶ್ರೀಹರಿಯ ನಾಮಸಂಕೀರ್ತನೆಮಾಡಿಸಿದರು

೨೩. ಈ ರೀತಿಮಾಡಿ ಎಲ್ಲ ಜನರೂ ತಮ್ಮ ತಮ್ಮ ಮಂದಿರಕ್ಕೆ ಹಿಂತಿರುಗಿದರು. ಇತ್ತ ನಂದನು ಕಣ್ಣುಗಳನ್ನು ಕೆಂಪುಮಾಡಿಕೊಂಡು ಹೆಂಡತಿಯನ್ನು ಕುರಿತಿಂತೆಂದನು.

|| ನಂದ ಉವಾಚ ||

ಯಾಸ್ಯಾಮಿ ತೀರ್ಥಮದ್ಯೈವ ಕಂಠೇ ಕೃತ್ವಾ ತು ಬಾಲಕಂ |
ಅಥವಾ ತ್ವಂ ಗೃಹಾದ್ಗಚ್ಛ ತ್ವಯಾ ಮೇ ಕಿಂ ಪ್ರಯೋಜನಂ || ೨೪ ||

ಶತಕೂಪಾಧಿಕಾ ವಾಪೀ ಶತವಾಪೀಸಮಂ ಸರಃ |
ಸರಃಶತಾಧಿಕೋ ಯಜ್ಞಃ ಪುತ್ರೋ ಯಜ್ಞಶತಾಧಿಕಃ || ೨೫ ||

ತಪೋದಾನೋದ್ಭವಂ ಪುಣ್ಯಂ ಜನ್ಮಾಂತರಸುಖಪ್ರದಂ |
ಸುಖಪ್ರದೋಽಪಿ ಸತ್ಪುತ್ರ ಇಹೈವ ಚ ಪರತ್ರ ಚ || ೨೬ ||

ಪುತ್ರಾದಪಿ ಪರೋ ಬಂಧುರ್ನ ಭೂತೋ ನ ಭವಿಷ್ಯತಿ |
ಏವಮುಕ್ತ್ವಾ ಸ್ವಭಾರ್ಯಾಂ ಚ ತಸ್ಥೌ ನಂದಃ ಸ್ವಮಂದಿರೇ |
ಯಶೋದಾ ರೋಹಿಣೀ ಚೈವ ನಿಯುಕ್ತಾ ಗೃಹಕರ್ಮಣಿ || ೨೭ ||

---

೨೪. ನಂದ :—ನಾನು ಈ ದಿವಸವೇ ಈ ಶಿಶುವನ್ನೆತ್ತಿಕೊಂಡು ತೀರ್ಥ ಯಾತ್ರೆಗೆ ಹೋಗುವೆನು. ಅಥವಾ ನೀನೇ ಮನೆಯಿಂದ ಹೊರಕ್ಕೆ ಹೋಗು. ಈ ರೀತಿ ಶಿಶುವನ್ನು ಶಿಕ್ಷಿಸುವ ನಿನ್ನಿಂದ ನನಗೇನು ಪ್ರಯೋಜನ?

೨೫. ನೂರು ನೆಲಭಾವಿಗಳಿಗಿಂತ ಒಂದು ಕಪಿಲೆಭಾವಿತೋಡಿಸುವುದೂ, ನೂರು ಕಪಿಲೆ ಭಾವಿಗಳಿಗಿಂತ ಒಂದು ಸರೋವರವನ್ನು ತೋಡಿಸುವುದೂ, ನೂರು ಸರೋವರಗಳಿಗಿಂತ ಒಂದು ಯಾಗಮಾಡಿಸುವುದೂ, ನೂರು ಯಾಗಮಾಡಿಸುವುದಕ್ಕಿಂತ ಒಬ್ಬ ಸತ್ಪುತ್ರನನ್ನು ಪಡೆಯುವುದೂ ವಿಶೇಷ ಫಲಪ್ರದವಾದುದು.

೨೬. ತಪಸ್ಸು ಮತ್ತು ದಾನಗಳಿಂದ ಬಂದ ಪುಣ್ಯವು ಜನ್ಮಾಂತರದಲ್ಲಿ ಸುಖದಾಯಕವಾಗುವುದು. ಸತ್ಪುತ್ರನಾದರೋ ಈ ಲೋಕದಲ್ಲೂ, ಪರಲೋಕದಲ್ಲೂ ಸುಖಪ್ರದನಾಗಿರುವನು.

೨೭. ಸತ್ಪುತ್ರನಿಗಿಂತ ಆಪ್ತನಾದ ಬಂಧುವು ಯಾರೂ ಹುಟ್ಟಿಲ್ಲ ಮುಂದೆ ಹುಟ್ಟುವುದೂ ಇಲ್ಲ. ಹೀಗೆ ಹೇಳಿ ನಂದನು ಸುಮ್ಮನಾಗಲು, ಯಶೋದಾರೋಹಿಣಿಯರೂ ತಮ್ಮ ತಮ್ಮ ಮನೆಗೆಲಸದಲ್ಲಿ ನಿರತರಾದರು.

॥ ನಾರದ ಉವಾಚ ॥

ಸುವೇಷಃ ಪುರುಷಃ ಕೋ ವಾ ವೃಕ್ಷರೂಪೀ ಚ ಗೋಕುಲೇ ।
ಭಗವನ್ಕೇನ ಹೇತುನಾ ಕೇನ ವೃಕ್ಷತ್ವಂ ಸಮವಾಪ ಹ ॥ ೨೮ ॥

॥ ನಾರಾಯಣ ಉವಾಚ ॥

ಕುಬೇರತನಯಃ ಶ್ರೀಮಾನ್ನಾಮ್ನಾ ಯೋ ನಲಕೂಬರಃ ।
ಜಗಾಮ ನಂದನವನಂ ಕ್ರೀಡಾರ್ಥಂ ಸಹ ರಂಭಯಾ ॥ ೨೯ ॥

ನಿರ್ಜನೇ ಸರಸಸ್ತೀರೇ ಪುಷ್ಪೋದ್ಯಾನೇ ಮನೋಹರೇ ।
ವಟವೃಕ್ಷಸಮೀಪೇ ಚ ಸೌರಭೇ ಪುಷ್ಪವಾಯುನಾ ॥ ೩೦ ॥

ವಿಧಾಯ ಪುಷ್ಪಶಯನಂ ರತ್ನದೀಪೈಶ್ಚ ದೀಪಿತಂ ।
ಚಂದನಾಗುರುಕಸ್ತೂರೀ ಕುಂಕುಮದ್ರವಸಂಯುತಂ ॥ ೩೧ ॥

---

೨೮. ನಾರದ.—ಎಲೈ ಮಹರ್ಷಿಯೇ, ಗೋಕುಲದಲ್ಲಿ ವೃಕ್ಷರೂಪದಿಂದಿದ್ದ ಆ ಸುವೇಷಭೂಷಿತನಾದ ಪುರುಷನಾರು? ಯಾವ ಕಾರಣದಿಂದ ಅವನು ವೃಕ್ಷ ಸ್ವರೂಪವನ್ನು ಪಡೆದಿದ್ದನು?

೨೯. ನಾರಾಯಣ:—ಎಲೈ ನಾರದನೇ, ಹಿಂದೊಮ್ಮೆ ಕುಬೇರನಪುತ್ರನಾದ ನಲಕೂಬರನೆಂಬುವನು, ಅಪ್ಸರಸ್ತ್ರೀಯಾದ ರಂಭೆಯೊಡನೆ ಕ್ರೀಡಿಸಲು ನಂದನ ವನಕ್ಕೆ ಹೋದನು

೩೦ ಸರಸ್ತೀರದಲ್ಲಿ ನಿರ್ಜನವೂ, ಮನೋಹರವೂ ಆದ ಪುಷ್ಪೋದ್ಯಾನದ ವಟವೃಕ್ಷದ ಕೆಳಗೆ ಆಕೆಯೊಡನೆ ಪರಿಮಳವಾದ ವಾಯುವನ್ನು ಸೇವಿಸುತ್ತ ಕುಳಿತನು

೩೧. ಅಲ್ಲಿಯೇ ರತ್ನದೀಪಗಳಿಂದ ಪ್ರಜ್ವಲಿಸುತ್ತಲಿರುವ ಪುಷ್ಪಶಯನ ವೊಂದನ್ನು ರಚಿಸಿ ಚಂದನ, ಅಗುರು, ಕಸ್ತೂರಿ ಮುಂತಾದ ಸುಗಂಧದ್ರವ್ಯವನ್ನು ಲೇಪಿಸಿಕೊಂಡನು

ಪರಿತಃ ಪುಷ್ಪಮಾಲ್ಯೈಶ್ಚ ಕ್ಷೌಮವಸ್ತ್ರೈಶ್ಚ ವೇಷ್ಟಿತಂ ।
ತತ್ರ ರಂಭಾಂ ಸಮಾಸೀಯು ವಿಜಹಾರ ಯಥೇಚ್ಛಯಾ ॥ ೩೨ ॥

ಶೃಂಗಾರಾಷ್ಟಪ್ರಕಾರಂ ಚ ವಿಪರೀತಾದಿಕಂ ಸುಖಂ ।
ಚುಂಬನಂ ಷಟ್ಪ್ರಕಾರಂ ಚ ಯಥಾಸ್ಥಾನಂ ನಿರೂಪಿತಂ ॥ ೩೩ ॥

ಅಂಗಪ್ರತ್ಯಂಗಸಂಯೋಗತ್ರಿವಿಧಾಶ್ಲೇಷಣಂ ಮುದಾ ।
ನಖದಂತಕರಕ್ರೀಡಾಂ ಚಕಾರ ರಸಿಕೇಶ್ವರಃ ॥ ೩೪ ॥

ಜಲಾತ್ಸ್ಥಲೇ ಸ್ಥಲಾತ್ತೋಯೇ ಕಾಮಶಾಸ್ತ್ರವಿಶಾರದಃ ।
ಸತಿಭೋಗಂ ಪ್ರಕುರ್ವಂತಂ ದದರ್ಶ ದೇವಲೋಮುನಿಃ ॥ ೩೫ ॥

ನಗ್ನಾಂ ರಂಭಾಂ ಮುಕ್ತಕೇಶೀಂ ಪೀನಶ್ರೋಣಿಪಯೋಧರಾಂ ।
ನಖದಂತಕ್ಷತಾಂಗೀಂ ಚ ಪುಲಕಾಂಚಿತವಿಗ್ರಹಾಂ ॥ ೩೬ ॥

---

೩೨. ಸುತ್ತಲೂ ಹೂಮಾಲೆಗಳನ್ನೂ, ತೆಳುವಾದ ಬಟ್ಟೆಗಳನ್ನೂ ತೋರಣದಂತೆ ರಚಿಸಿ ಅಲ್ಲಿ ರಂಭೆಯೊಡನೆ ಯಥೇಚ್ಛವಾಗಿ ರಮಿಸಿದನು

೩೩. ವಿಪರೀತರತವೇ ಮುಂತಾದ, ಎಂಟುವಿಧ ಶೃಂಗಾರಸುಖವನ್ನೂ, ಉಕ್ತಸ್ಥಾನದಲ್ಲಿ ಆರು ವಿಧವಾದ ಚುಂಬನ ಸುಖವನ್ನೂ ಅವನು ಅನುಭವಿಸಿದನು.

೩೪. ಪ್ರತಿಯೊಂದು ಅವಯವಗಳ ಸಂಶ್ಲೇಷವುಂಟಾಗುವ ಮೂರು ಪ್ರಕಾರವಾದ ಆಲಿಂಗನಸುಖವನ್ನೂ, ನಖಕ್ಷತ ದಂತಕ್ಷತಾದಿ ಸುಖವನ್ನೂ ಆ ರಸಿಕೇಶ್ವರನು ಅನುಭವಿಸಿದನು.

೩೫. ಕಾಮಶಾಸ್ತ್ರನಿಪುಣನಾದ ಆತನು ನೀರಿನೊಳಗೂ, ನೆಲದಮೇಲೂ ಈ ರೀತಿ ರತಿಸುಖಾನುಭವ ಮಾಡುತ್ತಿರುವುದನ್ನು ದೇವಲನೆಂಬ ಮುನಿಯು ನೋಡಿದನು.

೩೬–೩೭. ಅತ್ಯುನ್ನತವಾದ ಸ್ತನಗಳಿಂದಲೂ, ದಪ್ಪವಾದ ನಿತಂಬಬಿಂಬಗಳಿಂದಲೂ ಕೂಡಿ, ದಂತಕ್ಷತ ನಖಕ್ಷತಗಳಿಂದ ರೋಮಾಂಚಿತ ಶರೀರಳಾಗಿ,

ಪಶ್ಯಂತೀಂ ಪ್ರಾಣನಾಥಂ ಚ ಪಶ್ಯಂತಂ ಸಸ್ಮಿತಂ ಮುದಾ ।
ವಕ್ರಭ್ರೂಭಂಗಸಂಯುಕ್ತಾಂ ಕಾಮುಕೀಂ ಚ ದದರ್ಶ ತಾಂ ॥ ೩೭ ॥

ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತಾಂ ।
ವಿಚಿತ್ರರತ್ನಮಾಲ್ಯೈಶ್ಚ ಪುಷ್ಪಮಾಲ್ಯೈಶ್ಚ ಭೂಷಿತಾಂ ॥ ೩೮ ॥

ಕಿಂಕಿಣೀಜಾಲಸಂಯುಕ್ತಾಂ ಸಿಂಧೂರಬಿಂದುಸಂಯುತಾಂ ।
ತಯಾ ಯುಕ್ತಂ ಪುಲಕಿತಂ ನೋತ್ತಿಷ್ಠಂತಂ ಸ್ಮರಾನ್ವಿತಂ ॥ ೩೯ ॥

ವೃಕ್ಷಸ್ತ್ವಂ ಯಾಹಿ ಪಾಪಿಷ್ಠೇತ್ಯುವಾಚ ಮುನಿಪುಂಗವಃ ।
ಶಶಾಪ ರಂಭಾಂ ಕಾಮಾರ್ತಾಂ ಮಾನುಷೀ ತ್ವಂ ಭವೇತಿ ಚ ॥ ೪೦ ॥

ಜನ್ಮೇಜಯಸ್ಯ ಸುಭಗಾ ಭವಿತಾ ಕಾಮಿನೀತಿ ಚ ।
ತ್ವಮೇವ ಗೋಕುಲಂ ಗಚ್ಛ ವೃಕ್ಷರೂಪೀ ಭವೇತಿ ಚ ॥ ೪೧ ॥

---

ತಲೆಗೆದರಿಕೊಂಡು, ಬೆತ್ತಲೆಯಾಗಿ ತನ್ನ ವಕ್ರ ಕಟಾಕ್ಷದಿಂದ ಪ್ರಾಣನಾಥನನ್ನು ನೋಡುತ್ತಾ ನಸುನಗುತ್ತಲಿರುವ ಕಾಮುಕಿಯಾದ ಆ ರಂಭೆಯನ್ನೂ ಆ ಮುನಿಯು ನೋಡಿದನು.

೩೮—೩೯. ಕಪೋಲಸ್ಥಳದಲ್ಲಿ ಶೋಭಿಸುತ್ತಿರುವ ಎರಡು ರತ್ನ ಕುಂಡಲಗಳಿಂದಲೂ, ಕಂಠದಲ್ಲಿರುವ ವಿಚಿತ್ರವಾದ ರತ್ನ ಮುತ್ತು ಪುಷ್ಪಮಾಲೆಗಳಿಂದಲೂ ಮನೋಹರಳಾಗಿ, ಕಿಂಕಿಣೀಜಾಲಗಳನ್ನು ತೊಟ್ಟು, ಸಿಂಧೂರಬಿಂದುಗಳನ್ನಿಟ್ಟು ರೋಮಾಂಚಿತಳಾಗಿರುವ ಅವಳೊಡನೆ ಕಾಮೋದ್ರಿಕ್ತನಾಗಿ ಮಲಗಿರುವ ನಲಕೂಬರನನ್ನು ಆ ಮುನಿಯು ನೋಡಿದನು.

೪೦. ಕೂಡಲೇ ಆ ಮುನಿಯು, ಲಜ್ಜಾರಹಿತನೂ, ಪಾಪಿಷ್ಠನೂ, ಆದ ನೀನು ವೃಕ್ಷಸ್ವರೂಪನಾಗೆಂದು ಶಾಪವಿತ್ತು ಕಾಮಾರ್ತಳಾದ ರಂಭೆಯನ್ನು ಕುರಿತು ನೀನು ಮಾನುಷಜನ್ಮವೆತ್ತೆಂದು ಶಪಿಸಿದನು.

೪೧. ರಂಭೆಯು ಮನುಷ್ಯಜನ್ಮದಲ್ಲಿ ಜನಮೇಜಯ ಮಹಾರಾಜನ ಪತ್ನಿಯಾಗುವುದಾಗಿಯೂ, ನಲಕೂಬರನು ಗೋಲೋಕದಲ್ಲಿ ವೃಕ್ಷರೂಪವನ್ನು ತಾಳುವುದಾಗಿಯೂ ಹೇಳಿದನು.

ಶ್ರೀಕೃಷ್ಣಸ್ಪರ್ಶಮಾತ್ರೇಣ ಪುನರಾಯಾಸ್ಯಸಿ ಗೃಹಂ ।
ರಂಭೇ ತ್ವಮಿಂದ್ರಸಂಯೋಗಾತ್ಪುನರಾಯಾಸ್ಯಸಿ ಧ್ರುವಂ ॥ ೪೨ ॥

ಇತ್ಯೇವಮುಕ್ತ್ವಾ ಸ ಮುನಿರ್ಜಗಾಮ ನಿಜಮಂದಿರಂ ।
ಕುಬೇರತನಯಃ ಶ್ರೀಮಾನ್ಸ ಜಗಾಮ ನಿಜಾಲಯಂ ॥ ೪೩ ॥

ಇತ್ಯೇವಂ ಕಥಿತಂ ವಿಪ್ರ ರಂಭಾಖ್ಯಾನಂ ವದಾಮಿ ತೇ ।
ಸುಚಂದ್ರಸ್ಯ ಗೃಹೇ ರಂಭಾ ಲಲಾಭ ಜನ್ಮ ಭಾರತೇ ॥ ೪೪ ॥

ಕನ್ಯಾ ಲಕ್ಷ್ಮೀಸ್ವರೂಪಾ ಚ ಬಭೂವ ಸುಂದರೀ ವರಾ ।
ತಾಂ ಚ ಸಾಲಂಕೃತಾಂ ಕೃತ್ವಾ ಸುಚಂದ್ರೋ ನೃಪತೀಶ್ವರಃ ॥ ೪೫ ॥

ನಾನಾಕೌತುಕಸಂಯುಕ್ತಾಂ ದದೌ ಜನ್ಮೇಜಯಾಯ ಚ ।
ಜನ್ಮೇಜಯಸ್ಯ ಸುಭಗಾ ಬಭೂವ ಮಹಿಷೀ ವರಾ ॥ ೪೬ ॥

---

೪೨. ಶ್ರೀಕೃಷ್ಣನ ಸ್ಪರ್ಶಮಾತ್ರದಿಂದ ನಲಕೂಬರನು ಶಾಪವಿಮುಕ್ತನಾಗಿ ಹಿಂದಕ್ಕೆ ಬರುವುದಾಗಿಯೂ, ರಂಭೆಯು ದೇವೇಂದ್ರನ ಸಂಪರ್ಕದಿ ದ ಶಾಪ ವಿಮುಕ್ತಳಾಗುವುದಾಗಿಯೂ ತಿಳಿಸಿದನು.

೪೩. ಹೀಗೆ ಹೇಳಿ ಆ ಮುನಿಯು ತನ್ನ ಮಂದಿರಕ್ಕೆ ಹಿಂತಿರುಗಿದನು. ಕುಬೇರಪುತ್ರನಾದ ನಳಕೂಬರನೂ ಕೂಡ ತನ್ನ ಮನೆಗೆ ಹಿಂತಿರುಗಿದನು.

೪೪. ಎಲೈ ನಾರದನೇ ಇದು ನಲಕೂಬರನ ಕಥೆಯಾಯಿತು. ಈಗ ರಂಭೆಯ ಕಥೆಯನ್ನು ಹೇಳುವೆನು ಕೇಳು. ರಂಭೆಯು ಭರತಖಂಡದಲ್ಲಿ ಸುಚಂದ್ರನೆಂಬ ರಾಜನ ಮನೆಯಲ್ಲಿ ಜನ್ಮವೆತ್ತಿದಳು.

೪೫. ಲಕ್ಷ್ಮೀದೇವಿಯಂತೆ ಸುಂದರಿಯಾದ ಆ ಕನ್ಯೆಯು ಪ್ರಾಪ್ತವಯಸ್ಕಳಾಗಲು ಸುಚಂದ್ರನು ಅವಳಿಗೆ ಬೇಕುಬೇಕಾದ ವಸ್ತ್ರಾಭರಣಗಳನ್ನು ತಂದ ಕೊಟ್ಟನು

೪೬. ಬೇಕಾದಷ್ಟು ಉಡುಗರೆಗಳನ್ನು ಕೊಟ್ಟು ಆ ಕನ್ಯೆಯನ್ನು ಜನಮೇಜಯನಿಗೆ ದಾನಮಾಡಲು ಅವಳು ಆ ರಾಜನ ಪಟ್ಟಮಹಿಷಿಯಾದಳು.

ಸ್ಥಾನೇ ಸ್ಥಾನೇ ನಿರ್ಜನೇ ಚ ರಾಜಾ ರೇಮೇ ತಯಾ ಸಹ ।
ಏಕದಾ ನೃಪತಿಶ್ರೇಷ್ಠಶ್ಚಾಶ್ವಮೇಧೇನ ದೀಕ್ಷಿತಃ ॥ ೪೭

ಅಶ್ವಸಂಗೋಪನಂ ಕೃತ್ವಾ ತಸ್ಥೌ ಶಕ್ರಶ್ಚ ಮಂದಿರೇ ।
ಯಜ್ಞಾಶ್ವಂ ರುಚಿರಂ ಮತ್ವಾ ಕೌತುಕೇನ ಚ ಸುಂದರೀ ॥ ೪೮

ದೃಷ್ಟ್ವಾಂ ಜಗಾಮ ಸಾ ಸಾಧ್ವೀ ಚಾಶ್ವಮೇಕಿಕಿನೀ ಮುದಾ ।
ಶಕ್ರೋಽಶ್ವನಿಕಟೇ ಭೂತ್ವಾ ಧರ್ಷಯಾಮಾಸ ತಾಂ ಸತೀಂ ॥ ೪೯

ತಯಾ ನಿವಾರ್ಯಮಾಣಶ್ಚ ರೇಮೇ ತತ್ರ ತಯಾ ಸಹ ।
ಮೂರ್ಛಾಮವಾಪ ಶಕ್ರಶ್ಚ ಬುಬುಧೇ ನ ದಿವಾನಿಶಂ ॥ ೫೦

ಸಾ ಚ ಸಂಭೋಗಮಾತ್ರೇಣ ದೇಹಂ ತತ್ಯಾಜ ಯೋಗತಃ ।
ನೃಪಸ್ಯ ಲಜ್ಜಯಾ ಭೀತ್ಯಾ ಶಕ್ರಃ ಸ್ವರ್ಗೇ ಜಗಾಮ ಹ ॥ ೫೧ ॥

---

೪೭. ಜನುಮೇಜಯನು ಆಕೆಯೊಡನೆ ಯಥೇಚ್ಛೆಯಾಗಿ ರಮಿಸಿದನು. ಹೀಗಿರಲು ಒಮ್ಮೆ ಅವನು ಅಶ್ವಮೇಧಯಾಗಮಾಡಲು ದೀಕ್ಷೆಯನ್ನು ಕೈಗೊಂಡನು.

೪೮. ಯಾಗಕ್ಕಾಗಿ ಬಿಟ್ಟಿದ್ದ ಕುದುರೆಯನ್ನು ಇಂದ್ರನು ಬಚ್ಚಿಟ್ಟು ತನ್ನ ಮಂದಿರದಲ್ಲಿ ಕುಳಿತನು. ಯಜ್ಞಾಶ್ವವನ್ನು ಪತ್ತೆಮಾಡುವ ಕುತೂಹಲದಿಂದ ಆತನ ಪತ್ನಿಯು ಹೊರಟಳು

೪೯. ಏಕಾಕಿನಿಯಾಗಿ ಆ ಸಾಧ್ವೀಮಣಿಯು ಬಂದುದನ್ನು ನೋಡಿ ಕುದುರೆಯ ಸಮೀಪದಲ್ಲಿದ್ದ ಇಂದ್ರನು ಆಕೆಯನ್ನು ಬಲಾತ್ಕಾರದಿಂದ ಎಳೆದನು.

೫೦. ಅವಳು ಎಷ್ಟು ತಡೆದರೂ ಬಿಡದೆ ಆಕೆಯೊಡನೆ ಇಂದ್ರನು ರಮಿಸಿದನು. ಆ ಸಂತೋಷದಿಂದ ಇಂದ್ರನು ಮೂರ್ಛಿತನಾಗಿ ಹಗಲು ರಾತ್ರಿಗಳನ್ನು ತಿಳಿಯದಾದನು.

೫೧. ಆ ರಾಣಿಯು ಅವನ ಸಂಭೋಗದಿಂದ, ಲಜ್ಜಿತಳಾಗಿ ಯೋಗಶಕ್ತಿಯಿಂದ ದೇಹತ್ಯಾಗಮಾಡಿದಳು. ಇತ್ತ ಇಂದ್ರನೂ ಆ ರಾಜನ ಭಯದಿಂದಲೂ, ನಾಚಿಕೆಯಿಂದಲೂ ಸ್ವರ್ಗಕ್ಕೆ ಹಿಂತಿರುಗಿದನು

ರಾಜಾ ಶ್ರುತ್ವಾ ಮೃತಾಂ ದೃಷ್ಟ್ವಾ ವಿಲಲಾಪ ಭೃಶಂ ಮುಹುಃ ।
ಯಜ್ಞಂ ಸಮಾಪ್ಯ ವಿಪ್ರೇಭ್ಯೋ ದದೌ ಪೂರ್ಣಾಂ ಚ ದಕ್ಷಿಣಾಂ ॥ ೫೨ ॥

ರಂಭಾ ಚ ಮಾನವಂ ದೇಹಂ ತ್ಯಕ್ತ್ವಾ ಸ್ವರ್ಗಂ ಜಗಾಮ ಹ ।
ಇತ್ಯೇವಂ ಕಥಿತಂ ಸರ್ವಂ ವೃಕ್ಷಾರ್ಜುನವಿಭಂಜನಂ ॥ ೫೩ ॥

ನಲಕೂಬರಮೋಕ್ಷಶ್ಚ ರಂಭಾಯಾಶ್ಚ ಮಹಾಮುನೇ ।
ಪುಣ್ಯದಂ ಕೃಷ್ಣಚರಿತಂ ಜನ್ಮಮೃತ್ಯುಜರಾಪಹಂ ।
ಇತ್ಯೇವಂ ಕಥಿತಂ ಸರ್ವಮುಪರಂ ಕಥಯಾಮಿ ತೇ ॥ ೫೪ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣನಾರದಸಂವಾದೇ ವೃಕ್ಷಾರ್ಜುನಭಂಜನಂ
ನಾಮ ಚತುರ್ದಶೋಽಧ್ಯಾಯಃ

---

೫೨ ರಾಜನು ಈ ಸಮಾಚಾರವನ್ನೆಲ್ಲ ಕೇಳಿ ಬಹಳವಾಗಿ ವ್ಯಥೆಪಟ್ಟನು. ಅಶ್ವಮೇಧಯಾಗವನ್ನು ಮುಗಿಸಿ ಬ್ರಾಹ್ಮಣರಿಗೆಲ್ಲ ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟನು.

೫೩ ಇತ್ತ ರಂಭೆಯು ಮಾನುಷದೇಹವನ್ನು ತ್ಯಜಿಸಿ ಸ್ವರ್ಗಕ್ಕೆ ಹೋದಳು. ಇಂತು ಶ್ರೀಕೃಷ್ಣನು ಅರ್ಜುನವೃಕ್ಷವನ್ನು ಮುರಿದುದರ ಕಥೆಯನ್ನು ನಿನಗೆ ಹೇಳಿದೆನು.

೫೪. ಎಲೈ ಮಹಾಮುನಿಯೇ, ರಂಭೆ ಮತ್ತು ನಲಕೂಬರರ ಮೋಕ್ಷವೂ ಶ್ರೀಕೃಷ್ಣನ ಚರಿತ್ರೆಯೂ, ಜನ್ಮಜರಾಮರಣ ನಾಶಕವಾದದು. ಇದೆಲ್ಲವನ್ನೂ ಹೇಳಿಯಾಯಿತು. ಈಗ ಮುಂದಿನ ಕಥೆಯನ್ನು ಹೇಳುವೆನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ವೃಕ್ಷಾರ್ಜುನ ಭಂಜನವೆಂಬ ಹದಿನಾಲ್ಕನೆಯ
ಅಧ್ಯಾಯವು ಮುಗಿದುದು



## ಹದಿನಾಲ್ಕನೆಯ ಅಧ್ಯಾಯದ ಸಾರಾಂಶ

ಹಿಂದೊಮ್ಮೆ ಕುಬೇರನ ಮಗನಾದ ನಲಕೂಬರನು ಅಪ್ಸರಸ್ತ್ರೀಯಾದ ರಂಭೆ ಯೊಡನೆ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದಾಗ ದೇವಲನೆಂಬ ಮುನಿಯು ನೋಡಿ ಕಾಮುಕನಾದ ನಲಕೂಬರನು ಲಜ್ಜಾರಹಿತನಾಗಿರುವುದರಿಂದ ವೃಕ್ಷವಾಗಿ ಹುಟ್ಟು ವಂತೆಯೂ, ರಂಭೆಯು ಮಾನುಷಸ್ತ್ರೀಯಾಗಿ ಹುಟ್ಟಿ ಜನಮೇಜಯನ ಪತ್ನಿ ಯಾಗುವಂತೆಯೂ ಶಾಪವಿತ್ತನು. ಅದರಂತೆ ನಲಕೂಬರನು ನಂದಗೋಕುಲದಲ್ಲಿ ಅರ್ಜುನವೃಕ್ಷವಾಗಿ ಹುಟ್ಟಿ ತನ್ನ ಶಾಪವಿಮೋಚನೆಗೆ ಸಮಯವನ್ನು ನಿರೀಕ್ಷಿಸು ತ್ತಿದ್ದನು.

ಒಮ್ಮೆ ಬಾಲಕನಾದ ಶ್ರೀಕೃಷ್ಣನು ಯಶೋದೆಯು ನೀರಿಗೆ ಹೋಗಿದ್ದಾಗ ಮನೆಯಲ್ಲಿದ್ದ ಹಾಲು, ಮೊಸರು, ಬೆಣ್ಣೆ ಮುಂತಾದವುಗಳನ್ನು ಸ್ವೇಚ್ಛೆಯಾಗಿ ತಿಂದು ಎರಚಾಡಿರಲು ನದಿಯಿಂದ ಹಿಂತಿರುಗಿಬಂದ ಯಶೋದೆಯು ಅದನ್ನೆಲ್ಲ ನೋಡಿ, ಬಾಲಕನನ್ನು ಶಿಕ್ಷಿಸಿ ಅಲ್ಲಿದ್ದ (ಅರ್ಜುನ) ಮತ್ತಿಮರಕ್ಕೆ ಅವನನ್ನು ಕಟ್ಟಿ ತನ್ನ ಮನೆಗೆಲಸದಲ್ಲಿ ತೊಡಗಿದಳು ಆಗ ಶ್ರೀಕೃಷ್ಣನು ಮರವನ್ನು ಮುರಿಯಲು ನಲ ಕೂಬರನು ಶಾಪವಿಮುಕ್ತನಾದನು ಇತ್ತ ಗೋಕುಲದಲ್ಲಿದ್ದ ಗೋಪಗೋಪಿಯರೆಲ್ಲ ಬಂದು ಶಿಶುವಾದ ಶ್ರೀಕೃಷ್ಣನು ಹೆದರಿರಬಹುದೆಂದು ಶಾಂತಿಕರ್ಮಗಳನ್ನು ಮಾಡಿಸಿ ದರು. ರಂಭೆಯೂ ಜನಮೇಜಯನ ಪತ್ನಿಯಾಗಿದ್ದು, ಅವನು ಅಶ್ವಮೇಧ ಯಾಗಮಾಡಲು ಯಜ್ಞಾಶ್ವವನ್ನು ಬಿಟ್ಟಾಗ, ಅದನ್ನು ಹಿಂಬಾಲಿಸುವ ನೆಪದಲ್ಲಿ ತಾನೂ ಹೋಗಿ ದೇವೇಂದ್ರನಿಂದ ಉಪಭುಕ್ತಳಾಗಿ ಮಾನುಷದೇಹದಿಂದ ಮುಕ್ತ ಳಾದಳು.

— ॥ ಓಂ ॥—

—। ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

### ॥ ಪಂಚದಶೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಏಕದಾ ಕೃಷ್ಣಸಹಿತೋ ನಂದೋ ವೃಂದಾವನಂ ಯಯೌ ।
ತತ್ರೋಪವನಭಾಂಡೀರೇ ಚಾರಯಾಮಾಸ ಗೋಧನಂ ॥ ೧ ॥

ಸರಃ ಸುಸ್ವಾದುತೋಯಂ ಚ ಪಾಯಯಾಮಾಸ ತತ್ಪಸೌ ।
ಉವಾಸ ವೃಕ್ಷಮೂಲೇ ಚ ಬಾಲಂ ಕೃತ್ವಾ ಸ್ವವಕ್ಷಸಿ ॥ ೨ ॥

ಏತಸ್ಮಿನ್ನಂತರೇ ಕೃಷ್ಣೋ ಮಾಯಾಮಾನುಷವಿಗ್ರಹಃ ।
ಚಕಾರ ಮಾಯಯಾಕಸ್ಮಾನ್ಮೇಘಾಚ್ಛನ್ನಂ ನಭೋ ಮುನೇ ॥ ೩ ॥

---

### ಹದಿನೈದನೆಯ ಅಧ್ಯಾಯವು

೧. ಶ್ರೀ ನಾರಾಯಣ:—ಒಮ್ಮೆ ನಂದಗೋಪನು ಶ್ರೀಕೃಷ್ಣನೊಡಗೂಡಿ ವೃಂದಾವನಕ್ಕೆ ಹೋಗಿ ಅಲ್ಲಿ ಉಪವನದ ಹುಲ್ಲುಗಾವಲಿನಲ್ಲಿ ಗೋವುಗಳನ್ನು ಮೇಯಿಸುತ್ತಿದ್ದನು.

೨. ಅನಂತರ ಸಮೀಪದಲ್ಲಿದ್ದ ಸಿಹಿನೀರಿನ ಕೊಳದಲ್ಲಿ ಗೋವುಗಳಿಗೆಲ್ಲ ನೀರನ್ನು ಕುಡಿಸಿ, ತಾನೂ ಕುಡಿದು ಶ್ರೀಕೃಷ್ಣನನ್ನು ತೊಡೆಯ ಮೇಲಿರಿಸಿಕೊಂಡು ಮರದ ನೆರಳಿನಲ್ಲಿ ಕುಳಿತನು

೩. ಆಗ ಮಾಯಾಮಾನುಷರೂಪಧಾರಿಯಾದ ಶ್ರೀಕೃಷ್ಣನು ತನ್ನ ಮಾಯಾ ಶಕ್ತಿಯಿಂದ ಇದ್ದಕ್ಕಿದ್ದಂತೆಯೇ ಆಕಾಶವನ್ನು ಮೇಘಾವೃತವನ್ನಾಗಿ ಮಾಡಿದನು.

ಮೇಘಾವೃತಂ ನಭೋಃ ದೃಷ್ಟ್ವಾ ಶ್ಯಾಮಲಂ ಕಾನನಾಂತರಂ ।
ಝಂಝಾವಾತಂ ಮಹಾಶಬ್ದಂ ವಜ್ರಶಬ್ದಂ ಚ ದಾರುಣಂ　॥ ೪ ॥

ವೃಷ್ಟಿಧಾರಾಮತಿಸ್ಥೂಲಾಂ ಕಂಪಮಾನಾಂಶ್ಚ ಪಾದಪಾನ್ ।
ದೃಷ್ಟ್ವೈವಂ ಪತಿತಸ್ಕಂಧಾನ್ನಂದೋಃ ಭಯಮವಾಪ ಹ　॥ ೫ ॥

ಕಥಂ ಯಾಸ್ಯಾಮಿ ಗೋವತ್ಸಾನ್ವಿಹಾಯ ಸ್ವಾಶ್ರಮಂ ಬತ ।
ಗೃಹಂ ಯದಿ ನ ಯಾಸ್ಯಾಮಿ ಭವಿತಾ ಬಾಲಕಸ್ಯ ಕಿಂ　॥ ೬ ॥

ಏವಂ ನಂದೇ ಪ್ರವದತಿ ರುರೋದ ಶ್ರೀಹರಿಸ್ತದಾ ।
ಪಯೋಭಿಯಾ ಹರಿಶ್ಚೈವ ಪಿತುಃ ಕಂಠಂ ದಧಾರ ಸಃ　॥ ೭ ॥

ಏತಸ್ಮಿನ್ನಂತರೇ ರಾಧಾಽಽಜಗಾಮ ಕೃಷ್ಣಸನ್ನಿಧಿಂ ।
ಗಮನಂ ಕುರ್ವತೀ ರಾಜಹಂಸಖಂಜನಗಂಜನಂ　೮ ॥

---

೪–೫. ಈ ರೀತಿ ಆಕಾಶವು ಮೇಘಾವೃತವಾಗಿರುವುದನ್ನೂ, ಉಪವನವೆಲ್ಲ ಅಂಧಕಾರಮಯವಾದುದನ್ನೂ, ಬಿರುಗಾಳಿ ಮತ್ತು ಸಿಡಿಲಿನ ಮಹಾಧ್ವನಿಯನ್ನೂ, ಅತಿದಪ್ಪವಾದ ವಾರಿಧಾರೆಯನ್ನೂ, ಮರಗಳೆಲ್ಲ ಅಲ್ಲಾಡಿ ಕೊಂಬೆಗಳು ಮುರಿದು ಬೀಳುತ್ತಿರುವುದನ್ನೂ ನಂದನು ನೋಡಿ ಭಯಗ್ರಸ್ತನಾದನು.

೬. 'ಅಯ್ಯೋ ಹಸುಗಳನ್ನು ಬಿಟ್ಟು ನಾನೊಬ್ಬನೇ ಮನೆಗೆ ಹೇಗೆ ಹೋಗಲಿ, ಅಥವಾ ನಾನು ಮನೆಗೆ ಹೋಗದಿದ್ದರೆ ಈ ಶಿಶುವಾದ ಕೃಷ್ಣನ ಗತಿಯೇನು' ?

೭. ನಂದನು ಈ ರೀತಿ ಯೋಚಿಸುತ್ತಿರಲು ಶ್ರೀಹರಿಯು ಮಳೆಗೆ ಹೆದರಿದಂತೆ ನಟಿಸಿ ತಂದೆಯ ಕುತ್ತಿಗೆಯನ್ನು ಬಲವಾಗಿ ಅಪ್ಪಿಕೊಂಡನು.

೮. ಇಷ್ಟುಹೊತ್ತಿಗೆ ಸರಿಯಾಗಿ ರಾಧೆಯು ರಾಜಹಂಸದಂತೆ ನಡೆಯುತ್ತ ಶ್ರೀಕೃಷ್ಣನಿರುವೆಡೆಗೆ ಬಂದಳು

ಶರತ್ಪಾರ್ವಣಚಂದ್ರಾಭಾಮುಷ್ಟವಕ್ತ್ರಮನೋಹರಾ ।
ಶರನ್ಮಧ್ಯಾಹ್ನಪದ್ಮಾನಾಂ ಶೋಭಾಮೋಚನಲೋಚನಾ ॥ ೯ ॥

ಪರಿತಸ್ತಾರಕಾಪಙ್ಕ್ತ್ಯಾ ವಿಚಿತ್ರಕಜ್ಜಲೋಜ್ಜ್ವಲಾ ।
ಖಗೇಂದ್ರಚಂಚುಚಾರು ಶ್ರೀಶಂಸಾನಾಶನನಾಸಿಕಾ ॥ ೧೦ ॥

ತನ್ಮಧ್ಯಸ್ಥಲಶೋಭಾರ್ಹಸ್ಥೂಲಮುಕ್ತಾಫಲೋಜ್ಜ್ವಲಾ ।
ಕಬರೀವೇಷಸಂಯುಕ್ತಾ ಮಾಲತೀಮಾಲ್ಯವೇಷ್ಟಿತಾ ॥ ೧೧ ॥

ಗ್ರೀಷ್ಮಮಧ್ಯಾಹ್ನಮಾರ್ತಾಂಡಪ್ರಭಾಮುಷ್ಟಕಕುಂಡಲಾ ।
ಪಕ್ವಬಿಂಬಫಲಾನಾಂ ಚ ಶ್ರೀಮುಷ್ಟಾಧರಯುಗ್ಮಕಾ ॥ ೧೨ ॥

ಮುಕ್ತಾಪಂಕ್ತಿಪ್ರಭಾತೈಕದಂತಪಂಕ್ತಿಸಮುಜ್ಜ್ವಲಾ ।
ಈಷತ್ಪ್ರಫುಲ್ಲಕುಂದಾನಾಂ ಸುಪ್ರಭಾನಾಶಕಸ್ಮಿತಾ ॥ ೧೩ ॥

---

೯. ಶರತ್ಪೂರ್ಣಿಮಾಚಂದ್ರನ ಕಾಂತಿಯನ್ನು ಅಲ್ಲಗಳೆಯುವ ಮನೋಹರವಾದ ಮುಖವುಳ್ಳ ಆ ರಾಧೆಯ ಕಣ್ಣುಗಳು ಶರದೃತುವಿನ ಮಧ್ಯಾಹ್ನದ ಕಮಲದಂತೆ ಮನೋಹರವಾಗಿದ್ದುವು.

೧೦. ಕರಿಗುಡ್ಡೆಯ ಸುತ್ತಲೂ ರೆಪ್ಪೆಗಳಿಗೆ ವಿಚಿತ್ರವಾಗಿ ಕಾಡಿಗೆಯನ್ನು ಹಚ್ಚಿಕೊಂಡಿದ್ದ ಆಕೆಯ ಮೂಗು ಪಕ್ಷಿರಾಜನಾದ ಗರುಡನ ಕೊಕ್ಕನ್ನು ಹೋಲುತ್ತಿದ್ದಿತು.

೧೧. ಆ ಮೂಗಿನ ಮಧ್ಯದಲ್ಲಿ ಮನೋಹರವಾದ ಮುತ್ತಿನ ಮಣಿಯೊಂದನ್ನು ಧರಿಸಿ, ತಲೆಗೂದಲನ್ನು ಬಾಚಿ ಹೆರಳು ಕಟ್ಟಿ ಜಾಜೀಮಾಲೆಯನ್ನು ಮುಡಿದಿದ್ದಳು.

೧೨. ಗ್ರೀಷ್ಮಮಧ್ಯಾಹ್ನದ ಸೂರ್ಯನ ಕಾಂತಿಯನ್ನು ಮೀರುತ್ತಿದ್ದ ಕುಂಡಲಗಳಿಂದ ಶೋಭಿತಳಾದ ಆಕೆಯ ಅಧರವು ತೊಂಡೆಹಣ್ಣುಗಳಿಗಿಂತಲೂ ಕೆಂಪಾಗಿದ್ದಿತು.

೧೩. ಮುತ್ತಿನ ಸಾಲುಗಳನ್ನು ಹೋಲುವ ದಂತಪಙ್ಕ್ತಿಯಿಂದಲೂ, ಸ್ವಲ್ಪ ಅರಳಿದ ಮೊಲ್ಲೆಮೊಗ್ಗನ್ನು ಹೋಲುವ ಮುಂದಸ್ಮಿತದಿಂದಲೂ, ಮನೋಹರಳಾಗಿದ್ದಳು.

ಕಸ್ತೂರೀಬಿಂದುಸಂಯುಕ್ತಸಿಂದೂರಬಿಂದುಭೂಷಿತಾ ।
ಕಪಾಲಂ ಮಲ್ಲಿಕಾಯುಕ್ತಂ ಬಿಭ್ರತೀ ಶ್ರೀಯುತಂ ಸತೀ ॥ ೧೪ ॥

ಸುಚಾರುವರ್ತುಲಾಕಾರಕಪೋಲಪುಲಕಾನ್ವಿತಾ ।
ಮಣಿರತ್ನೇಂದ್ರಸಾರಾಣಾಂ ಹಾರೇಣೋರಃಸ್ಥಲಭೂಷಿತಾ ॥ ೧೫ ॥

ಸುಚಾರುಶ್ರೀಫಲಯುಗ ಕಠಿಣಸ್ತನಸಂಗತಾ ।
ಪತ್ರಾವಲೀಶ್ರಿಯಾ ಯುಕ್ತಾ ದೀಪ್ತಾ ಸದ್ರತ್ನತೇಜಸಾ ॥ ೧೬ ॥

ಸುಚಾರುವರ್ತುಲಾಕಾರಮುದರಂ ಸುಮನೋಹರಂ ।
ವಿಚಿತ್ರತ್ರಿವಲೀಯುಕ್ತಂ ನಿಮ್ನನಾಭಿಂ ಚ ಬಿಭ್ರತೀ ॥ ೧೭ ॥

ಸದ್ರತ್ನಸಾರರಚಿತಮೇಖಲಾಜಾಲಭೂಷಿತಾ ।
ಕಾಮಾಸ್ತ್ರಸಾರಭ್ರೂಭಂಗಯೋಗೀಂದ್ರಚಿತ್ತಮೋಹಿನೀ ॥ ೧೮ ॥

---

೧೪ ಕಪೋಲಗಳಲ್ಲಿ ಕಸ್ತೂರಿ ಮತ್ತು ಸಿಂದೂರದ ಬೊಟ್ಟುಗಳನ್ನಿಟ್ಟು ಕಿವಿಗಳಲ್ಲಿ ಮಲ್ಲಿಗೆಯ ಗೊಂಚಲನ್ನು ಧರಿಸಿದ್ದಳು.

೧೫. ವರ್ತುಲಾಕಾರವೂ, ಮನೋಹರವೂ ಆದ ಕಪೋಲವು ರೋಮಾಂಚಿತವಾಗಿದ್ದಿತು. ಶ್ರೇಷ್ಠವಾದ ಮಣಿ ಮತ್ತು ರತ್ನಗಳ ಹಾರವನ್ನು ವಕ್ಷಃಸ್ಥಳದಲ್ಲಿ ಧರಿಸಿದ್ದಳು.

೧೬ ಸುಂದರವಾದ ಬಿಲ್ವಫಲದಂತೆ ಕಠಿನವಾದ ಸ್ತನಗಳ ಮೇಲೆ ಮಕರಿಕಾದಿ ವತ್ರಗಳನ್ನು ರಚಿಸಿಕೊಂಡು ರತ್ನಹಾರಗಳಿಂದ ಶೋಭಿತಳಾಗಿದ್ದಳು.

೧೭. ವಿಚಿತ್ರವಾದ ತ್ರಿವಳಿಗಳಿಂದಲೂ, ಅತಿಗಂಭೀರವಾದ ನಾಭಿಯಿಂದಲೂ ಶೋಭಿತವಾದ ಆಕೆಯ ಉದರವು ವರ್ತುಳಾಕಾರವಾಗಿಯೂ, ಮನೋಹರವಾಗಿಯೂ ಇದ್ದಿತು

೧೮. ಶ್ರೇಷ್ಠರತ್ನಗಳನ್ನು ಮೆಟ್ಟಿರುವ ಮನೋಹರವಾದ ಡಾಬನ್ನು ಧರಿಸಿ, ಮನ್ಮಥಾಸ್ತ್ರದಂತೆ ಹುಬ್ಬುಗಳನ್ನು ಗಂಟಿಕ್ಕಿಕೊಂಡಿರುವ ಆಕೆಯು ಯೋಗಿಶ್ರೇಷ್ಠರ ಮನಸ್ಸನ್ನೂ ಮೋಹಗೊಳಿಸುತ್ತಿದ್ದಳು

ಕರಿಣಶ್ರೋಣಿಯುಗಲಂ ಧರಣೀಧರನಿಂದಿತಂ ।
ಸ್ಥಳಪದ್ಮಪ್ರಭಾಮುಷ್ಟಚರಣಂ ದಧತೀ ಮುದಾ ॥ ೧೯ ॥

ರತ್ನಭೂಷಣಸಂಯುಕ್ತಂ ಯಾವಕದ್ರವಸಂಯುತಂ ।
ಮಣೀಂದ್ರಶೋಭಾಸಂಮುಷ್ಟಸಾಲಕ್ತಕಪುನರ್ಭವಂ ॥ ೨೦ ॥

ಸದ್ರತ್ನಸಾರರಚಿತಕ್ವಣನ್ಮಂಜೀರರಂಜಿತಂ ।
ರತ್ನಕಂಕಣಕೇಯೂರ ಚಾರುಶಂಖವಿಭೂಷಿತಾ ॥ ೨೧ ॥

ರತ್ನಾಂಗುಲೀಯನಿಕರವಹ್ನಿಶುದ್ಧಾಂಶುಕೋಜ್ಜ್ವಲಾ ।
ಚಾರುಚಂಪಕಪುಷ್ಪಾಭಾಂ ಪ್ರಭಾಮುಷ್ಟಕಲೇಬರಾ- ॥ ೨೨ ॥

ಸಹಸ್ರದಲಸಂಯುಕ್ತ ಕ್ರೀಡಾಕಮಲಮುಜ್ಜ್ವಲಂ ।
ಶ್ರೀಮುಖ ಶ್ರೀದರ್ಶನಾರ್ಥಂ ಬಿಭ್ರತೀ ರತ್ನದರ್ಪಣಂ ॥ ೨೩ ॥

---

೧೯. ಪರ್ವತದ ಕಾಠಿಣ್ಯ ಮತ್ತು ಸ್ಥೂಲಕಾರವನ್ನು ನಿಂದಿಸುವ ನಿತಂಬ ಬಿಂಬಗಳಿಂದಲೂ, ನೆಲದಾವರೆಯ ಕಾಂತಿಯನ್ನು ಅಲ್ಲಗಳೆಯುವ ಚರಣದ್ವಯ ಗಳಿಂದಲೂ ಶೋಭಿತಳಾಗಿದ್ದಳು.

೨೦. ಪಾದಗಳಿಗೆ ಮನೋಹರವಾದ ಅರಗಿನ ರಸವನ್ನು ಬಳಿದುಕೊಂಡು. ಉಗುರುಗಳಿಗೂ ಲೇಪಿಸಿಕೊಂಡು ರತ್ನಭೂಷಣಗಳನ್ನು ತೊಟ್ಟಿದ್ದಳು.

೨೧. ಮನೋಹರವಾಗಿ ಧ್ವನಿಗೈಯ್ಯುವ ರತ್ನನೂಪುರಗಳಿಂದಲೂ, ರತ್ನದ ಬಾಹುಪುರಿ ಮತ್ತು ಬಳೆಗಳಿಂದಲೂ, ಶಂಖಾಭರಣಗಳಿಂದಲೂ ಶೋಭಿಸುತ್ತಿದ್ದಳು.

೨೨. ಬೆರಳುಗಳಲ್ಲಿ ರತ್ನದ ಉಂಗುರಗಳನ್ನಿಟ್ಟು, ಅಗ್ನಿಯಂತೆ ಪರಿಶುದ್ಧ, ಪಾದ ವಸ್ತ್ರದ್ವಯವನ್ನು ಧರಿಸಿ, ಮನೋಹರವಾದ ಸಂಪಿಗೆ ಬಣ್ಣದ ದೇಹಕಾಂತಿ ಯಿಂದ ಶೋಭಿಸುತ್ತಿದ್ದಳು.

೨೩. ಒಂದು ಕೈಯ್ಯಲ್ಲಿ ಕ್ರೀಡಾರ್ಥವಾಗಿ ಸಹಸ್ರದಳಗಳುಳ್ಳ ಕಮಲವನ್ನೂ, ಮತ್ತೊಂದು ಕೈಯ್ಯಲ್ಲಿ ತನ್ನ ಮುಖಕಾಂತಿಯನ್ನು ನೋಡಿಕೊಳ್ಳಲು ರತ್ನಗನ್ನಡಿ ಯನ್ನೂ ಧರಿಸಿದ್ದಳು.

ದೃಷ್ಟ್ವಾ ತಾಂ ನಿರ್ಜನೇ ನಂದೋ ವಿಸ್ಮಯಂ ಪರಮಂ ಯಯೌ ।
ಚಂದ್ರಕೋಟಿಪ್ರಭಾಮುಷ್ಟಾಂ ಭಾಸಯಂತೀಂ ದಿಶೋ ದಶ ॥ ೨೪ ॥

ನನಾಮ ತಾಂ ಸಾಶ್ರುನೇತ್ರೋ ಭಕ್ತಿನಮ್ರಾತ್ಮಕಂಧರಃ ।
ಜಾನಾಮಿ ತ್ವಾಂ ಗರ್ಗಮುಖಾತ್ಪದ್ಮಾಧಿಕಪ್ರಿಯಾಂ ಹರೇಃ ॥ ೨೫ ॥

ಜಾನಾಮೀಮಂ ಮಹಾವಿಷ್ಣೋಃ ಪರಂ ನಿರ್ಗುಣಮಚ್ಯುತಂ ।
ತಥಾಪಿ ಮೋಹಿತೋಽಹಂ ಚ ಮಾನವೋ ವಿಷ್ಣುಮಾಯಯಾ ॥ ೨೬ ॥

ಗೃಹಾಣ ಪ್ರಾಣನಾಥಂ ಚ ಗಚ್ಛ ಭದ್ರೇ ಯಥಾಸುಖಂ ।
ಪಶ್ಚಾದ್ದಾಸ್ಯಸಿ ಮತ್ಪುತ್ರಂ ಕೃತ್ವಾ ಪೂರ್ಣಮನೋರಥಂ ॥ ೨೭ ॥

ಇತ್ಯುಕ್ತ್ವಾ ಪ್ರದದೌ ತಸ್ಯೈ ರುದಂತಂ ಬಾಲಕಂ ಭಿಯಾ ।
ಜಗ್ರಾಹ ಬಾಲಕಂ ರಾಧಾ ಜಹಾಸ ಮಧುರಂ ಸುಖಾತ್ ॥ ೨೮ ॥

---

೨೪. ಕೋಟಿಚಂದ್ರರ ಕಾಂತಿಯುತಳಾಗಿ ದಶದಿಕ್ಕುಗಳನ್ನು ಬೆಳಗುತ್ತಿರುವ ಆಕೆಯನ್ನು ನೋಡಿ ನಂದಗೋಪನು ಅತ್ಯಂತ ವಿಸ್ಮಯಗೊಂಡನು.

೨೫. ಆಕೆಯನ್ನು ನೋಡಿದಕೂಡಲೇ ಆನಂದಾಶ್ರುಪೂರಿತನಾಗಿ ಭಕ್ತಿಯಿಂದ ತಲೆಬಾಗಿ ನಮಿಸಿ, 'ನೀನು ಶ್ರೀಹರಿಗೆ ಲಕ್ಷ್ಮೀದೇವಿಗಿಂತಲೂ ಪ್ರೀತಿಪಾತ್ರಳೆಂಬುವನ್ನು ಗರ್ಗಮಹರ್ಷಿಯ ಮುಖದಿಂದ ಕೇಳಿದೆನು.

೨೬. ಈ ಶಿಶುವೂ ಕೂಡ ನಿರ್ಗುಣನೂ, ನಾಶರಹಿತನೂ ಆದ ಮಹಾವಿಷ್ಣುವಿನ ಅವತಾರವೆಂದು ತಿಳಿದೆನು. ಆದರೂ ಮಾನವಮಾತ್ರನಾದ ನಾನು ವಿಷ್ಣುಮಾಯೆಯಿಂದ ಮೋಹಿತನಾಗಿರುವೆನು

೨೭. ಎಲೌ ಮಂಗಳಾಂಗಿಯೇ ನಿನ್ನ ಪ್ರಾಣಕಾಂತನನ್ನು ಎತ್ತಿಕೊಂಡು ಇಷ್ಟಬಂದೆಡೆಗೆ ತೆರಳು. ನಿನ್ನ ಮನೋರಥವು ಪೂರ್ಣವಾದನಂತರ ನನ್ನ ಪುತ್ರನನ್ನು ನನಗೆ ತಂದುಕೊಡು.'

೨೮. ಇಂತು ನುಡಿದು ಅಳುತ್ತಿರುವ ಆ ಶಿಶುವನ್ನು ನಂದಗೋಪನು ರಾಧೆಗೆ ಕೊಟ್ಟನು. ರಾಧಾದೇವಿಯೂ ಕೂಡ ಆ ಬಾಲಕನನ್ನೆತ್ತಿಕೊಂಡು ಸುಖಪರವಶಳಾಗಿ ಮಂದಹಾಸವನ್ನು ಬೀರಿದಳು

ಉವಾಚ ನಂದಂ ಸಾ ಯತ್ನಾನ್ನ ಪ್ರಕಾಶ್ಯಂ ರಹಸ್ಯಕಂ ।
ಅಹಂ ದೃಷ್ಟಾ ತ್ವಯಾ ನಂದ ಕತಿಜನ್ಮಫಲೋದಯಾತ್ ॥ ೨೯ ॥

ಪ್ರಾಜ್ಞಸ್ತ್ವಂ ಗರ್ಗವಚನಾತ್ಸರ್ವಂ ಜಾನಾಸಿ ಕಾರಣಂ ।
ಅಕಥ್ಯಮಾವಯೋರ್ಗೋಪ್ಯಂ ಚರಿತಂ ಗೋಕುಲೇ ವ್ರಜ ॥ ೩೦ ॥

ವರಂ ವೃಣು ವ್ರಜೇಶ ತ್ವಂ ಯತ್ತೇ ಮನಸಿ ವಾಂಛಿತಂ ।
ದದಾಮಿ ಲೀಲಯಾ ತುಭ್ಯಂ ದೇವಾನಾಮಪಿ ದುರ್ಲಭಂ ॥ ೩೧ ॥

ರಾಧಿಕಾವಚನಂ ಶ್ರುತ್ವಾ ತಾವುವಾಚ ವ್ರಜೇಶ್ವರಃ ।
ಯುವಯೋಶ್ಚರಣೇ ಭಕ್ತಿಂ ದೇಹಿ ನಾನ್ಯತ್ರ ಮೇ ಸ್ಪೃಹಾ ॥ ೩೨ ॥

---

೨೯. ಅನಂತರ ರಾಧೆಯು ನಂದನನ್ನು ಕುರಿತು, ಎಲೈ ನಂದನೇ, ಈ ರಹಸ್ಯವನ್ನು ನೀನು ಪ್ರಯತ್ನಪೂರ್ವಕವಾಗಿ ಗೋಪ್ಯವಾಗಿಡು. ನಿನ್ನ ಪೂರ್ವಜನ್ಮಗಳ ಫಲವಾಗಿ ಇಂದು ನಾನು ನಿನಗೆ ದರ್ಶನವಿತ್ತೆನು.

೩೦. ಪಂಡಿತನಾದ ನೀನು ಗರ್ಗಮಹರ್ಷಿಯ ಮಾತಿನಿಂದಲೇ ಎಲ್ಲವನ್ನೂ ತಿಳಿದಿದ್ದೀಯೆ. ನಮ್ಮಿಬ್ಬರ ಚರಿತ್ರೆಯನ್ನು ಗೋಕುಲದಲ್ಲಿ ಯಾರಿಗೂ ಹೇಳಬೇಡ ಹೋಗು.

೩೧. ಎಲೈ ವ್ರಜಪತಿಯೇ ನಿನ್ನ ಅಭಿಲಷಿತವಾದ ವರವನ್ನು ಬೇಡಿಕೋ. ದೇವತೆಗಳಿಗೂ ದುರ್ಲಭವಾದ ಆ ವರವನ್ನು ನಿನಗೆ ಲೀಲಾಮಾತ್ರದಿಂದ ಕೊಡುವೆನು.

೩೨. ರಾಧೆಯಾಡಿದ ಮಾತುಗಳನ್ನು ಕೇಳಿ ನಂದಗೋಪನು ಇಂತೆಂದನು. ನಿಮ್ಮಿಬ್ಬರ ಚರಣಕಮಲಗಳಲ್ಲಿ ಭಕ್ತಿಯನ್ನು ದಯಪಾಲಿಸು. ನನಗೆ ಬೇರೆ ಯಾವುದೂ ಇಷ್ಟಾರ್ಥವಿಲ್ಲ

ಯುವಯೋಃ ಸಂನಿಧೌ ವಾಸಂ ದಾಸ್ಯಸಿ ತ್ವಂ ಸುದುರ್ಲಭಂ ।
ಆವಾಭ್ಯಾಂ ದೇಹಿ ಜಗತಾಮಂಬಿಕೇ ಪರಮೇಶ್ವರಿ ॥ ೩೩ ॥

ಶ್ರುತ್ವಾ ನಂದಸ್ಯ ವಚನಮುವಾಚ ಪರಮೇಶ್ವರೀ ।
ದಾಸ್ಯಾಮಿ ದಾಸ್ಯಮತುಲಮಿದಾನೀಂ ಭಕ್ತಿರಸ್ತು ತೇ ॥ ೩೪ ॥

ಆವಯೋಶ್ಚರಣಾಂಭೋಜೇ ಯುವಯೋಶ್ಚ ದಿವಾನಿಶಂ ।
ಪ್ರಫುಲ್ಲಹೃದಯೇ ಶಶ್ವತ್ಸ್ಮೃತಿರಸ್ತು ಸುದುರ್ಲಭಾ ॥ ೩೫ ॥

ಮಾಯಾ ಯುವಾಂ ಚ ಪ್ರಚ್ಛನ್ನಾ ನ ಕರಿಷ್ಯತಿ ಮದ್ವರಾತ್ ।
ಗೋಲೋಕೇ ಯಾಸ್ಯಥಾಂತೇ ಚ ವಿಹಾಯ ಮಾನವೀಂ ತನುಂ ॥ ೩೬ ॥

ಏವಮುಕ್ತ್ವಾ ತು ಸಾನಂದಂ ಕೃತ್ವಾ ಕೃಷ್ಣಂ ಸ್ವವಕ್ಷಸಿ ।
ದೂರಂ ನಿನಾಯ ಶ್ರೀಕೃಷ್ಣಂ ಬಾಹುಭ್ಯಾಂ ಚ ಯಥೇಪ್ಸಿತಂ ॥ ೩೭ ॥

---

೩೩. ನನಗೂ ನನ್ನ ಪತ್ನಿಗೂ, ಸುದುರ್ಲಭವಾದ ನಿಮ್ಮ ಸಹವಾಸವನ್ನು ದಯಪಾಲಿಸು. ಜಗನ್ಮಾತೆಯಾದ ಪರಮೇಶ್ವರಿಯೇ ನನಗೆ ಇಷ್ಟು ಅನುಗ್ರಹಿಸಿದರೆ ಸಾಕು

೩೪. ನಂದನ ಮಾತನ್ನು ಕೇಳಿ ರಾಧಾದೇವಿಯು ಇಂತೆಂದಳು. ನಿಮಗೆ ನಮ್ಮ ನಿರಂತರ ಸೇವೆಯನ್ನು ದಯಪಾಲಿಸುವೆನು. ಈಗಲೇ ನಮ್ಮಲ್ಲಿ ನಿಮಗೆ ಭಕ್ತಿಯುಂಟಾಗಲಿ.

೩೫. ನಿಮ್ಮಿಬ್ಬರ ವಿಕಸಿತವಾದ ಹೃದಯದಲ್ಲಿ ಸುದುರ್ಲಭವಾದ ನಮ್ಮ ಚರಣಕಮಲಗಳ ಧ್ಯಾನವು ಸರ್ವದಾ ಜಾಗ್ರತವಾಗಿರಲಿ.

೩೬. ನನ್ನ ವರದಿಂದ ಮಾಯೆಯು ನಿಮ್ಮನ್ನು ಮೋಹಗೊಳಿಸುವುದಿಲ್ಲ ಅಂತ್ಯದಲ್ಲಿ ಈ ಮಾನುಷದೇಹವನ್ನು ತ್ಯಜಿಸಿ ನೀವಿಬ್ಬರೂ ಗೋಲೋಕಕ್ಕೆ ತೆರಳುವಿರಿ

೩೭. ರಾಧಾದೇವಿಯು ಹೀಗೆ ಹೇಳಿ ಶ್ರೀಕೃಷ್ಣನನ್ನು ವಕ್ಷಃಸ್ಥಲದಲ್ಲಿ ಅಪ್ಪಿಕೊಂಡು ಆನಂದಪರವಶಳಾಗಿ ತನಗೆ ಇಷ್ಟಬಂದೆಡೆಗೆ ಹೊರಟುಹೋದಳು.

ಕೃತ್ವಾ ವಕ್ಷಸಿ ತಂ ಕಾಮಾಚ್ಛೇಚ್ಛ್ಲೇಷಂಶ್ಲೇಷಂ ಚುಚುಂಬ ಚ ।
ಪುಲಕಾಂಕಿತಸರ್ವಾಂಗೀ ಸಸ್ಮಾರ ರಾಸಮಂಡಲಂ ॥ ೩೮ ॥

ಏತಸ್ಮಿನ್ನಂತರೇ ರಾಧಾ ಮಾಯಯಾಸದ್ರತ್ನಮಂಡಪಂ ।
ದದರ್ಶ ರತ್ನಕಲಶಶತೇನ ಚ ಸಮನ್ವಿತಂ ॥ ೩೯ ॥

ನಾನಾವಿಚಿತ್ರಚಿತ್ರಾಢ್ಯಂ ಚಿತ್ರಕಾನನಶೋಭಿತಂ ।
ಸಿಂದೂರಾಕಾರಮಣಿಭಿಃ ಸ್ತಂಭಸಂಘೈರ್ವಿರಾಜಿತಂ ॥ ೪೦ ॥

ಚಂದನಾಗುರುಕಸ್ತೂರೀಕುಂಕುಮದ್ರವಯುಕ್ತಯಾ ।
ಸಂಯುಕ್ತಂ ಮಾಲತೀಮಾಲಾಸಮೂಹಪುಷ್ಪಶಯ್ಯಯಾ ॥ ೪೧ ॥

ನಾನಾಭೋಗಸಮಾಯುಕ್ತಂ ದಿವ್ಯದರ್ಪಣಸಂಯುತಂ ।
ಮಣೀಂದ್ರಮುಕ್ತಾಮಾಣಿಕ್ಯ ಮಾಯಾಜಾಲೈರ್ವಿಭೂಷಿತಂ ॥ ೪೨ ॥

---

೩೮ ಕಾಮಾರ್ತಳಾಗಿ ಅವನನ್ನು ಎದೆಯಲ್ಲಿ ಅಪ್ಪಿಕೊಂಡು ಮತ್ತೆ ಮತ್ತೆ ಚುಂಬಿಸಿದಳು. ರೋಮಾಂಚಿತಶರೀರಳಾಗಿ ರಾಸಮಂಡಲವನ್ನು ಸ್ಮರಿಸಿಕೊಂಡಳು.

೩೯. ಕೂಡಲೇ ರಾಧೆಯು, ನೂರಾರು ರತ್ನಕಲಶಗಳಿಂದ ಪರಿಪೂರ್ಣವಾಗಿ ಮನೋಹರವಾಗಿರುವ ರತ್ನಮಂಡಪವನ್ನು ಮಾಯಾಶಕ್ತಿಯಿಂದ ಕಂಡಳು

೪೦. ಆ ಮಂಡಪವು ನಾನಾವಿಧ ವಿಚಿತ್ರಚಿತ್ರಗಳಿಂದ ಚಿತ್ರಿತವಾಗಿ, ವಿಚಿತ್ರವಾದ ಕಾನನಗಳಿಂದ ಶೋಭಿತವಾಗಿ, ಸಿಂಧೂರವರ್ಣದ ಮಣಿಗಳಿಂದಲೂ, ಸ್ತಂಭಸಮೂಹದಿಂದಲೂ ವಿರಾಜಿಸುತ್ತಿತ್ತು.

೪೧. ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮ ಮುಂತಾದ ಲೇಪನ ದ್ರವ್ಯಗಳಿಂದಲೂ, ಜಾಜೀಹೂಮಾಲೆಯಿಂದಲೂ, ಪುಷ್ಪಶಯನದಿಂದಲೂ, ಆ ಮಂಡಪವು ಮನೋಹರವಾಗಿದ್ದಿತು.

೪೨. ಅನೇಕ ಭೋಗಸಾಮಗ್ರಿಗಳಿಂದಲೂ, ರತ್ನಗನ್ನಡಿಗಳಿಂದಲೂ, ಶ್ರೇಷ್ಠವಾದ ಮುತ್ತು, ಮಾಣಿಕ್ಯ ಮತ್ತು ರತ್ನಹಾರಗಳಿಂದಲೂ, ವಿಭೂಷಿತ ವಾಗಿದ್ದಿತು.

ಮಣೀಂದ್ರಸಾರರಚಿತಕಪಾಟೇನ ಸಮನ್ವಿತಂ ।
ಭೂಷಿತಂ ಭೂಷಿತೈರ್ವಸ್ತ್ರೈಃ ಪತಾಕಾನಿಕರೈರ್ವರೈಃ ।
ಕುಂಕುಮಾಕಾರಮಣಿಭಿಃ ಸಪ್ತಸೋಪಾನಸಂಯುತಂ ॥ ೪೩ ॥

ಯುಕ್ತಂ ಷಟ್ಪದಸಂಯುಕ್ತೈಃ ಪುಷ್ಪೋದ್ಯಾನಂ ಚ ಪುಷ್ಪಿತೈಃ ।
ಸಾ ದೇವೀ ಮಂಡಪಂ ದೃಷ್ಟ್ವಾ ಜಗಾಮಾಭ್ಯಂತರಂ ಮುದಾ ॥ ೪೪ ॥

ದದರ್ಶ ತತ್ರ ತಾಂಬೂಲಂ ಕರ್ಪೂರಾದಿಸಮನ್ವಿತಂ ।
ಜಲಂ ಚ ರತ್ನಕುಂಭಸ್ಥಂ ಸ್ವಚ್ಛಂ ಶೀತಂ ಮನೋಹರಂ ॥ ೪೫ ॥

ಸುಧಾಮಧುಭ್ಯಾಂ ಪೂರ್ಣಾನಿ ರತ್ನಕುಂಭಾನಿ ನಾರದ ।
ಪುರುಷಂ ಕಮನೀಯಂ ಚ ಕಿಶೋರಶ್ಯಾಮಸುಂದರಂ ॥ ೪೬ ॥

ಕೋಟಿಕಂದರ್ಪಲೀಲಾಭಂ ಚಂದನೇನ ವಿಭೂಷಿತಂ ।
ಶಯಾನಂ ಪುಷ್ಪಶಯ್ಯಾಯಾಂ ಸಸ್ಮಿತಂ ಸುಮನೋಹರಂ ॥ ೪೭ ॥

---

೪೩. ಶ್ರೇಷ್ಠವಾದ ಮಣಿಗಳನ್ನು ಮೆಟ್ಟಿರುವ ಬಾಗಿಲುಗಳಿಂದಲೂ, ಸೂಕ್ಷ್ಮ ವಸ್ತ್ರಗಳಿಂದ ನಿರ್ಮಿತವಾದ ತೋರಣಗಳಿಂದಲೂ, ಕುಂಕುಮ ವರ್ಣದ ಮಣಿ ಸೋಪಾನಗಳಿಂದಲೂ, ಆ ಮಂಡಪವು ಕಂಗೊಳಿಸುತ್ತಿತ್ತು

೪೪. ಪುಷ್ಪಿತವಾದ ದುಂಬಿಗಳ ಮಕರಂದಪಾನಕ್ಕೆ ಇನಿದಾಗಿರುವ ಪುಷ್ಪೋದ್ಯಾನಾವೃತವಾದ ಆ ಮಂಡಪವನ್ನು ನೋಡಿ ರಾಧೆಯು ಅದರ ಒಳಕ್ಕೆ ಹೋದಳು.

೪೫. ಅಲ್ಲಿ ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲವನ್ನೂ, ರತ್ನಕಲಶಪೂರಿತವಾದ ಸ್ವಚ್ಛವೂ ಶೀತಲವೂ ಆದ ಜಲವನ್ನೂ ಕಂಡಳು.

೪೬. ಎಲೈ ನಾರದನೇ ಅಲ್ಲಿ ಅಮೃತ ಮತ್ತು ಜೇನುತುಪ್ಪಗಳಿಂದ ತುಂಬಿದ ರತ್ನಕಲಶಗಳನ್ನು ನೋಡಿದ್ದಲ್ಲದೆ ಕಿಶೋರ ವಯಸ್ಕನೂ ಶ್ಯಾಮಸುಂದರನೂ ಆದ ಪುರುಷನೊಬ್ಬನನ್ನು ನೋಡಿದಳು.

೪೭ ಕೋಟಿಮನ್ಮಥರ ಲಾವಣ್ಯದಿಂದ ಶೋಭಿತನಾದ ಆ ಯುವಕನು. ಚಂದನಚರ್ಚಿತ ಕಳೇಬರನಾಗಿ, ಪುಷ್ಪಶಯನದಲ್ಲಿ ನಗುಮುಖದಿಂದ ಮಲಗಿದ್ದನು.

ಪೀತವಸ್ತ್ರಪರೀಧಾನಂ ಪ್ರಸನ್ನವದನೇಕ್ಷಣಂ ।
ಮಣೀಂದ್ರಸಾರನಿರ್ಮಾಣಂ ಕ್ವಣನ್ಮಂಜೀರರಂಜಿತಂ ॥ ೪೮ ॥

ಸದ್ರತ್ನಸಾರನಿರ್ಮಾಣಕೇಯೂರವಲಯಾನ್ವಿತಂ ।
ಮಣೀಂದ್ರಕುಂಡಲಾಭ್ಯಾಂ ಚ ಗ ಡಸ್ಥಲವಿರಾಜಿತಂ ॥ ೪೯ ॥

ಕೌಸ್ತುಭೇನ ಮಣೀಂದ್ರೇಣ ವಕ್ಷಃಸ್ಥಲಸಮುಜ್ವಲಂ ।
ಶರತ್ಪಾರ್ವಣಚಂದ್ರಾಸ್ಯಪ್ರಭಾಮುಷ್ಟಮುಖೋಜ್ವಲಂ ॥ ೫೦ ॥

ಶರತ್ಪ್ರಫುಲ್ಲಕಮಲಪ್ರಭಾಮೋಚನಲೋಚನಂ ।
ಮಾಲತೀಮಾಲ್ಯಸಂಶ್ಲಿಷ್ಟಶಿಖಿಪಿಚ್ಛಸುಶೋಭಿತಂ ॥ ೫೧ ॥

ತ್ರಿವಂಕಚೂಡಾಂ ಬಿಭ್ರಂತಂ ಪಶ್ಯಂತಂ ರತ್ನಮಂದಿರಂ ।
ಕ್ರೋಡಂ ಬಾಲಕಶೂನ್ಯಂ ಚ ದೃಷ್ಟ್ವಾತಂ ನವಯೌವನಂ ॥ ೫೨ ॥

---

೪೮. ಪೀತಾಂಬರವನ್ನುಟ್ಟು, ಮಂಜುಳಧ್ವನಿಯುಳ್ಳ ಮಣಿಮಂಜೀರವನ್ನು ತೊಟ್ಟು ಪ್ರಸನ್ನವಾದ ಮುಖನೇತ್ರಗಳುಳ್ಳವನಾಗಿ ಪವಡಿಸಿದ್ದನು.

೪೯ ಶ್ರೇಷ್ಠರತ್ನಗಳಿಂದ ನಿರ್ಮಿತವಾದ ಬಾಹುಪುರಿಗಳು ಅವನ ಬಾಹುಗಳಲ್ಲಿಯೂ, ಮಣಿಕುಂಡಲಗಳು ಅವನ ಕಪೋಲಸ್ಥಳಗಳಲ್ಲಿಯೂ ಶೋಭಿಸುತ್ತಿದ್ದವು.

೫೦. ವಕ್ಷಃಸ್ಥಲದಲ್ಲಿ ವಿರಾಜಿಸುತ್ತಲಿರುವ ಕೌಸ್ತುಭಮಣಿಯಿಂದಲೂ, ಶರತ್ಪೂರ್ಣಿಮಾಚಂದ್ರನಂತಿರುವ ಮುಖಕಾಂತಿಯಿಂದಲೂ, ಮನೋಹರನಾಗಿದ್ದನು.

೫೧. ಶರದೃತುವಿನ ವಿಕಸಿತ ಕಮಲದಂತೆ ವಿಶಾಲವಾದ ನೇತ್ರಗಳುಳ್ಳ ಆ ಯುವಕನು, ಶಿಖೆಯಲ್ಲಿ ಮಾಲತೀಹೂಮಾಲೆಯನ್ನು ಮುಡಿದು ಶೋಭಿಸುತ್ತಿದ್ದನು.

೫೨. ತ್ರಿವಂಕ ಚೂಡವನ್ನು ಧರಿಸಿ ರತ್ನ ಮಂದಿರವನ್ನು ನೋಡುತ್ತ ಮೇಲ್ಮುಖನಾಗಿ ಮಲಗಿರುವ ಆ ನವಯುವಕನನ್ನೂ, ತನ್ನ ಕಂಕುಳಲ್ಲಿ ಶಿಶುಶೂನ್ಯವಾಗಿರುವುದನ್ನೂ ಆ ರಾಧೆಯು ನೋಡಿದಳು.

ಸರ್ವಸ್ಮೃತಿಸ್ವರೂಪಾ ಸಾ ತಥಾಪಿ ವಿಸ್ಮಯಂ ಯಯೌ ।
ರೂಪಂ ರಾಸೇಶ್ವರೀ ದೃಷ್ಟ್ವಾ ಮುಮೋಹ ಸುಮನೋಹರಂ ॥ ೫೩ ॥

ಕಾಮಾಚ್ಚಕ್ಷುಶ್ಚಕೋರಾಭ್ಯಾಂ ಮುಖಚಂದ್ರಂ ಪಪೌ ಮುದಾ ।
ನಿಮೇಷರಹಿತಾ ರಾಧಾ ನವಸಂಗಮಲಾಲಸಾ ॥ ೫೪ ॥

ಪುಲಕಾಂಕಿತಸರ್ವಾಂಗೀ ಸಸ್ಮಿತಾ ಮದನಾತುರಾ ।
ತಾಮುವಾಚ ಹರಿಸ್ತತ್ರ ಸ್ಮೇರಾನನಸರೋರುಹಾಂ ।
ನವಸಂಗಮಯೋಗ್ಯಾಂ ಚ ಪಶ್ಯಂತೀಂ ವಕ್ರಚಕ್ಷುಷಾ ॥ ೫೫ ॥

॥ ಶ್ರೀ ಕೃಷ್ಣ ಉವಾಚ ॥

ರಾಧೇ ಸ್ಮರಸಿ ಗೋಲೋಕವೃತ್ತಾಂತಂ ಸುರಸಂಸದಿ ॥ ೫೬ ॥

---

೫೩. ಸರ್ವಸ್ಮರಣ ಶಕ್ತಿಯುಳ್ಳ ರಾಸೇಶ್ವರಿಯಾದ ಆ ರಾಧೆಯು ಅತ್ಯಂತ ವಿಸ್ಮಿತಳಾಗಿ ಆಯುವಕನ ಮನೋಹರವಾದ ರೂಪವನ್ನು ನೋಡಿ ಮೋಹಿತಳಾದಳು

೫೪. ಕಾಮಾಸಕ್ತಳೂ, ನವಸಂಗಮೋತ್ಸುಕಳೂ ಆದ ಆ ರಾಧೆಯು ರೆಪ್ಪೆಯನ್ನೂ ಬಡಿಯದೆ ತನ್ನ ಕಣ್ಣುಗಳೆಂಬ ಚಕೋರಗಳಿಂದ ಆ ಯುವಕನ ಮುಖಚಂದ್ರಿಕೆಯನ್ನು ಪಾನಮಾಡುತ್ತಿದ್ದಳು.

೫೫ ಮದನಾತುರಳಾಗಿ, ರೋಮಾಂಚಿತ ಶರೀರಳಾಗಿ ನಿಂತಿರಲು, ಮುಖದಲ್ಲಿ ಮಂದಹಾಸವನ್ನು ಬೀರುತ್ತ ನವಸಂಗಮೋತ್ಸುಕಳಾಗಿ ತನ್ನನ್ನೇ ವಕ್ರದೃಷ್ಟಿಯಿಂದ ನೋಡುತ್ತಿರುವ ಆ ರಾಧೆಯನ್ನು ಕುರಿತು ಆ ಯುವಕನು ಇಂತೆಂದನು.

೫೬. ಶ್ರೀಕೃಷ್ಣ :—ಎಲೌ ರಾಧೆಯೇ? :ಗೋಲೋಕದಲ್ಲಿ ದೇವತೆಗಳ ಸಭೆಯಲ್ಲಿ ನಡೆದ ವೃತ್ತಾಂತವನ್ನು ನೀನು ನೆನಪಿನಲ್ಲಿಟ್ಟಿದ್ದೀಯಾ?

ಅದ್ಯ ಪೂರ್ಣಂ ಕರಿಷ್ಯಾಮಿ ಸ್ವೀಕೃತಂ ಯತ್ಪುರಾ ಪ್ರಿಯೇ ।
ತ್ವಂ ಮೇ ಪ್ರಾಣಾಧಿಕಾ ರಾಧೇ ಪ್ರೇಯಸೀ ಚ ವರಾನನೇ ॥ ೫೭ ॥

ಯಥಾ ತ್ವಂ ಚ ತಥಾಽಹಂ ಚ ಭೇದೋ ಹಿ ನಾವಯೋರ್ಧ್ರುವಂ ।
ಯಥಾ ಕ್ಷೀರೇ ಚ ಧಾವಲ್ಯಂ ಯಥಾಽಗ್ನೌ ದಾಹಿಕಾ ಸತಿ ॥ ೫೮ ॥

ಯಥಾ ಪೃಥಿವ್ಯಾಂ ಗಂಧಶ್ಚ ತಥಾಹಂ ತ್ವಯಿ ಸಂತತಂ ।
ವಿನಾ ಮೃದಾ ಘಟಂ ಕರ್ತುಂ ವಿನಾ ಸ್ವರ್ಣೇನ ಕುಂಡಲಂ ॥ ೫೯ ॥

ಕುಲಾಲಃ ಸ್ವರ್ಣಕಾರಶ್ಚ ನಹಿ ಶಕ್ತಃ ಕದಾಚನ ।
ತಥಾ ತ್ವಯಾ ವಿನಾ ಸೃಷ್ಟಿಮಹಂ ಕರ್ತುಂ ನ ಚ ಕ್ಷಮಃ ॥ ೬೦ ॥

ಸೃಷ್ಟೇರಾಧಾರಭೂತಾ ತ್ವಂ ಬೀಜರೂಪೋಹಮಚ್ಯುತಃ ।
ಆಗಚ್ಛ ಶಯನೇ ಸಾಧ್ವಿ ಕುರು ವಕ್ಷಸ್ಥಲೇ ಹಿ ಮಾಂ ॥ ೬೧ ॥

---

೫೭. ಎಲೌ ಸುಂದರಿಯೇ, ನೀನು ನನ್ನ ಪ್ರಾಣಪ್ರಿಯಳೂ, ಪ್ರಾಣಕ್ಕಿಂತ ಅಧಿಕಳೂ ಆಗಿರುವುದರಿಂದ, ಹಿಂದೆ ನಾನು ನಿನಗೆ ಕೊಟ್ಟ ಮಾತನ್ನು ಇಂದು ಪೂರ್ಣಗೊಳಿಸಿರುವೆನು.

೫೮. ನೀನು ಹೇಗೋ ನಾನೂ ಹಾಗೇ. ನಮ್ಮಿಬ್ಬರಿಗೂ ಭೇದವಿಲ್ಲ. ಹಾಲಿನಲ್ಲಿ ಬಿಳುಪೂ, ಬೆಂಕಿಯಲ್ಲಿ ಶಾಖವೂ, ಅಭೇದದಿಂದಿರುವಂತೆ ನಾವಿಬ್ಬರೂ ಭಿನ್ನರಾಗಿದ್ದೇವೆ

೫೯–೬೦. ಪೃಥಿವಿಯಲ್ಲಿ ಗಂಧವಿರುವಂತೆ ನಾನು ನಿನ್ನಲ್ಲಿದ್ದೇನೆ ಮಣ್ಣಿಲ್ಲದೆ ಗಡಿಗೆಮಾಡಲು ಕುಂಬಾರನಿಗೂ, ಚಿನ್ನವಿಲ್ಲದೆ ಕುಂಡಲವನ್ನು ಮಾಡಲು ಅಕ್ಕಸಾಲಿಗೂ ಹೇಗೆ ಅಸಾಧ್ಯವೋ ಹಾಗೆ ನೀನಿಲ್ಲದೆ ನಾನು ಸೃಷ್ಟಿಮಾಡಲಶಕ್ತನಾಗುವೆನು.

೬೧ ನೀನು ಸೃಷ್ಟಿಗೆ ಆಧಾರರೂಪಳಾಗಿಯೂ ನಾಶರಹಿತನಾದ ನಾನು ಬೀಜಸ್ವರೂಪನಾಗಿಯೂ ಇದ್ದೇವೆ. ಆದುದರಿಂದ ಎಲೌ ಸಾಧ್ವೀಮಣಿಯೇ ಪುಷ್ಪಶಯನದಲ್ಲಿ ಪವಡಿಸಿ ನನ್ನನ್ನು ವಕ್ಷಸ್ಥಳದಲ್ಲಿ ಆಲಂಗಿಸಿಕೋ.

ತ್ವಂ ಮೇ ಶೋಭಾಸ್ವರೂಪಾಽಸಿ ದೇಹಸ್ಯ ಭೂಷಣಂ ಯಥಾ ।
ಕೃಷ್ಣಂ ವಂದತಿ ಮಾಂ ಲೋಕಾಸ್ತ್ವಯೈವ ರಹಿತಂ ಯದಾ　　॥ ೬೨ ॥

ಶ್ರೀಕೃಷ್ಣಂ ಚ ತದಾ ತೇಽಪಿ ತ್ವಯೈವ ಸಹಿತಂ ಪರಂ ।
ತ್ವಂ ಚ ಶ್ರೀಸ್ತ್ವಂ ಚ ಸಂಪತ್ತಿಸ್ತ್ವಮಾಧಾರಸ್ವರೂಪಿಣೀ　　॥ ೬೩ ॥

ಸರ್ವಶಕ್ತಿಸ್ವರೂಪಾಸಿ ಸರ್ವರೂಪೋಽಹಮಕ್ಷರಃ ।
ಯದಾ ತೇಜಃ ಸ್ವರೂಪೋಽಹಂ ತೇಜೋರೂಪಾಽಸಿ ತ್ವಂ ತದಾ　　॥ ೬೪ ॥

ನ ಶರೀರೀ ಯದಾಹಂ ಚ ತದಾ ತ್ವಮಶರೀರಿಣೀ ।
ಸರ್ವಬೀಜಸ್ವರೂಪೋಽಹಂ ಸದಾ ಯೋಗೇನ ಸುಂದರಿ　　॥ ೬೫ ॥

ತ್ವಂ ಚ ಶಕ್ತಿಸ್ವರೂಪಾ ಚ ಸರ್ವಸ್ತ್ರೀರೂಪಧಾರಿಣೀ ।
ಮಮಾಂಗಾಂಶಸ್ವರೂಪಾ ತ್ವಂ ಮೂಲಪ್ರಕೃತಿರೀಶ್ವರೀ　　॥ ೬೬ ॥

---

೬೨. ಶರೀರಕ್ಕೆ ಭೂಷಣವು ಶೋಭಾದಾಯಕವಾಗಿರುವಂತೆ ನೀನು ನನಗೆ ಶೋಭಾದಾಯಕಳಾಗಿರುವೆ. ನಿನ್ನನ್ನು ಬಿಟ್ಟಿರುವಾಗ ಜನರು ನನ್ನನ್ನು ಕೇವಲ ಕೃಷ್ಣನೆಂದು ಕರೆಯುವರು.

೬೩. ನಿನ್ನೊಡನೆ ಸೇರಿರುವಾಗ ನನ್ನನ್ನು ಶ್ರೀಕೃಷ್ಣನೆಂದು ಕರೆಯುವರು. ಆದುದರಿಂದ ನೀನೇ ಕಾಂತಿ, ಸಂಪತ್ತಿ ಮತ್ತು ಆಧಾರ ಸ್ವರೂಪಿಣಿಯಾಗಿರುವೆ.

೬೪. ನೀನು ಸರ್ವಶಕ್ತಿಸ್ವರೂಪಳೂ, ನಾನು ವಿಶ್ವರೂಪನೂ ಆಗಿರುವುದರಿಂದ ನಾನು ತೇಜಃ ಸ್ವರೂಪನಾದಾಗ ನೀನೂ ತೇಜೋರೂಪಳಾಗಿರುವೆ.

೬೫. ಯಾವಾಗ ನಾನು ಶರೀರರಹಿತನಾಗಿರುವೆನೋ ಆಗ ನೀನೂ ಅಶರೀರಿಣಿಯಾಗಿರುವೆ. ಎಲೌ ಸುಂದರಿಯೇ, ನಾನು ಯೋಗಶಕ್ತಿಯಿಂದ ಸರ್ವದಾ ಸರ್ವಬೀಜಸ್ವರೂಪನಾಗಿರುವೆ.

೬೬. ಸರ್ವಶಕ್ತಿಸ್ವರೂಪಳಾದ ನೀನು ಸಕಲ ಸ್ತ್ರೀಯರ ರೂಪಧಾರಿಣಿಯಾಗಿರುವೆ. ಮೂಲಪ್ರಕೃತಿಯಾದ ನೀನು ನನ್ನ ಸರ್ವಾಂಶಸಂಭೂತಳಾಗಿರುವೆ.

ಶಕ್ತ್ಯಾ ಬುದ್ಧ್ಯಾ ಚ ಜ್ಞಾನೇನ ಮಯಾ ತುಲ್ಯಾ ವರಾನನೇ ।
ಆವಯೋರ್ಭೇದ ಬುದ್ಧಿಂ ಚ ಯಃ ಕರೋತಿ ನರಾಧಮಃ ॥ ೬೭ ॥

ತಸ್ಯ ವಾಸಃ ಕಾಲಸೂತ್ರೇ ಯಾವಚ್ಚಂದ್ರದಿವಾಕರೌ ।
ಪೂರ್ವಾನ್ಸಪ್ತ ಪರಾನ್ಸಪ್ತ ಪುರುಷಾನ್ಪಾತಯತ್ಯಧಃ ॥ ೬೮ ॥

ಕೋಟಿಜನ್ಮಾರ್ಜಿತಂ ಪುಣ್ಯಂ ತಸ್ಯ ನಶ್ಯತಿ ನಿಶ್ಚಿತಂ ।
ಅಜ್ಞಾನಾದಾವಯೋರ್ನಿಂದಾಂ ಯೇ ಕುರ್ವಂತಿ ನರಾಧಮಾಃ ॥ ೬೯ ॥

ಪಚ್ಯಂತೇ ನರಕೇ ಘೋರೇ ಯಾವಚ್ಚಂದ್ರದಿವಾಕರೌ ।
ರಾಶಬ್ದಂ ಕುರ್ವತಸ್ತ್ರಸ್ತೋ ದದಾಮಿ ಭಕ್ತಿಮುತ್ತಮಾಂ ॥ ೭೦ ॥

ಧಾಶಬ್ದಂ ಕುರ್ವತಃ ಪಶ್ಚಾದ್ಯಾಮಿ ಶ್ರವಣಲೋಭತಃ ।
ಯೇ ಸೇವಂತೇ ಚ ದತ್ವಾ ಮಾಮುಪಚಾರಾಂಶ್ಚ ಷೋಡಶ ।
ಯಾವಜ್ಜೀವನಪರ್ಯಂತಂ ಯಾ ಪ್ರೀತಿರ್ಜಾಯತೇ ಮಮ ॥ ೭೧ ॥

---

೬೭-೬೮ ಎಲೌ ಸುಂದರಿಯೇ, ಶಕ್ತಿ, ಬುದ್ಧಿ ಮತ್ತು ಜ್ಞಾನದಲ್ಲಿ ನೀನು ನನಗೆ ಸದೃಶಳಾಗಿರುವೆ. ನಮ್ಮಿಬ್ಬರಲ್ಲಿ ಭೇದಬುದ್ಧಿಯನ್ನೆಣಿಸುವ ನರಾಧಮನು ಚಂದ್ರಸೂರ್ಯರಿರುವವರೆಗೆ ಕಾಲಸೂತ್ರವೆಂಬ ನರಕದಲ್ಲಿರುವುದಲ್ಲದೆ, ತಮ್ಮ ವಂಶದಲ್ಲಿ ಹುಟ್ಟಿದ ಹಿಂದಿನ ಏಳುಜನಗಳನ್ನೂ, ಮುಂದೆ ಹುಟ್ಟುವ ಏಳುಜನಗಳನ್ನೂ ನರಕಕ್ಕೆ ನೂಕುವನು.

೬೯-೭೦. ಅವನ ಕೋಟಿಜನ್ಮಗಳಲ್ಲಿ ಗಳಿಸಿದ ಪುಣ್ಯರಾಶಿಯು ನಾಶವಾಗುವುದು. ಅಜ್ಞಾನದಿಂದ ನಮ್ಮಿಬ್ಬರನ್ನೂ ನಿಂದಿಸುವ ನೀಚಮನುಜರು ಚಂದ್ರಸೂರ್ಯರಿರುವವರೆಗೆ ಘೋರವಾದ ನರಕದಲ್ಲಿ ತೊಳಲುವರು. 'ರಾಧಾ' ಎಂಬ ಶಬ್ದದಲ್ಲಿ 'ರಾ' ಎಂಬ ಅಕ್ಷರವನ್ನು ಉಚ್ಚಾರಮಾಡಿದವರಿಗೆ ಉತ್ತಮವಾದ ಭಕ್ತಿಯನ್ನು ಕೊಡುವೆನು.

೭೧-೭೩. 'ಧಾ' ಎಂಬ ಅಕ್ಷರವನ್ನು ಉಚ್ಚರಿಸುವವರ ಹಿಂದೆಯೇ ಅದನ್ನು ಕೇಳುವ ಆಸೆಯಿಂದ ನಾನು ಹೋಗುತ್ತಿರುವೆನು. ತಮ್ಮ ಜೀವಾವಧಿ

ಸಾ ಪ್ರೀತಿರ್ಮಮ ಜಾಯೇತ ರಾಧಾಶಬ್ದಾತ್ತತೋಧಿಕಾ ।
ಪ್ರಿಯಾ ನ ಮೇ ತಥಾ ರಾಧೇ ರಾಧಾವಕ್ತಾ ತತೋಽಧಿಕಃ ॥ ೭೨ ॥

ಬ್ರಹ್ಮಾನಂತಃ ಶಿವೋ ಧರ್ಮೋ ನರನಾರಾಯಣಾವೃಷೀ ।
ಕಪಿಲಶ್ಚ ಗಣೇಶಶ್ಚ ಕಾರ್ತಿಕೇಯಶ್ಚ ಮತ್ಪ್ರಿಯಃ ॥ ೭೩ ॥

ಲಕ್ಷ್ಮೀಃ ಸರಸ್ವತೀ ದುರ್ಗಾ ಸಾವಿತ್ರೀ ಪ್ರಕೃತಿಸ್ತಥಾ ।
ಮಮ ಪ್ರಿಯಾಶ್ಚ ದೇವಾಶ್ಚ ತಾಸ್ತಥಾಪಿ ನ ತತ್ಸಮಾಃ ॥ ೭೪ ॥

ತೇ ಸರ್ವೇ ಪ್ರಾಣತುಲ್ಯಾ ಮೇ ತ್ವಂ ಮೇ ಪ್ರಾಣಾಧಿಕಾ ಸತಿ ।
ಭಿನ್ನಸ್ಥಾನಸ್ಥಿತಾಸ್ತೇ ಚ ತ್ವಂ ಚ ವಕ್ಷಃಸ್ಥಲೇ ಸ್ಥಿತಾ ॥ ೭೫ ॥

---

ನನಗೆ ಷೋಡಶೋಪಚಾರಗಳನ್ನು ಸಮರ್ಪಿಸಿ ಭಕ್ತಿಯಿಂದ ಸೇವಿಸುವವರಲ್ಲಿ ನನಗೆ ಎಷ್ಟು ಪ್ರೀತಿಯುಂಟಾಗುವುದೋ ಅಷ್ಟು ಪ್ರೀತಿಯು 'ರಾಧಾ' ಶಬ್ದವನ್ನು ಕೇಳಿದ ಮಾತ್ರದಿಂದ ಉಂಟಾಗುವುದು. 'ರಾಧಾ' ಎಂಬ ಶಬ್ದಕ್ಕಿಂತಲೂ ನನಗೆ ಪ್ರಿಯವಾದುದು ಬೇರಾವುದೂ ಇಲ್ಲ. 'ರಾಧಾ' ಎಂದು ಹೇಳುವವನೂ ನನಗೆ ಅತ್ಯಂತ ಪ್ರಿಯನು.

೭೩. ಬ್ರಹ್ಮ, ಆದಿಶೇಷ, ಶಿವ, ಧರ್ಮಪುರುಷ, ಮತ್ತು ನರನಾರಾಯಣ ಋಷಿಗಳೂ, ಕಪಿಲ, ಗಣೇಶ ಮತ್ತು ಕಾರ್ತಿಕೇಯರೂ ನನ್ನ ಪ್ರೀತಿಗೆ ಪಾತ್ರರಾಗಿದ್ದಾರೆ.

೭೪. ಅಂತೆಯೇ, ಲಕ್ಷ್ಮೀ ಸರಸ್ವತೀ, ದುರ್ಗಾ, ಸಾವಿತ್ರಿ ಮತ್ತು ಪ್ರಕೃತಿಯರೂ ಇತರ ದೇವತೆಗಳೂ ನನಗೆ ಪ್ರಿಯರಾಗಿದ್ದಾರೆ. ಆದರೂ ರಾಧೆಯಷ್ಟು ಪ್ರೀತಿಪಾತ್ರರಾರೂ ಇಲ್ಲ.

೭೫. ಎಲ್ಲ ದೇವತೆಗಳೂ ನನ್ನ ಪ್ರಾಣಸಮಾನರಾಗಿದ್ದಾರೆ. ನೀನು ನನ್ನ ಪ್ರಾಣಕ್ಕಿಂತಲೂ ಅಧಿಕಳಾಗಿರುವೆ. ಅವರೆಲ್ಲರೂ ಬೇರೆ ಬೇರೆ ಸ್ಥಳದಲ್ಲಿದ್ದರೆ ನೀನು ನನ್ನ ವಕ್ಷಃಸ್ಥಲದಲ್ಲೇ ಸರ್ವದಾ ನೆಲಸಿರುವೆ.

ಯಥಾ ಮೇ ಚತುರ್ಭುಜಾ ಮೂರ್ತಿರ್ಬಿಭರ್ತಿ ವಕ್ಷಸಿ ಪ್ರಿಯಾಂ ।
ಸೋಽಹಂ ಕೃಷ್ಣಸ್ವರೂಪಸ್ತ್ವಾಂ ವಿವಹಾಮಿ ಸ್ವಯಂ ಸದಾ ॥ ೭೬ ॥

ಇತ್ಯೇವಮುಕ್ತ್ವಾ ಶ್ರೀಕೃಷ್ಣಸ್ತಸ್ಥೌ ತಲ್ಪೇ ಮನೋರಮೇ ।
ಉವಾಚ ರಾಧಿಕಾ ನಾಥಂ ಭಕ್ತಿನಮ್ರಾತ್ಮಕಂಧರಾ ॥ ೭೭ ॥

॥ ರಾಧಿಕೋ ಉವಾಚ ॥

ಸ್ಮರಾಮಿ ಸರ್ವಂ ಜಾನಾಮಿ ವಿಸ್ಮರಾಮಿ ಕಥಂ ವಿಭೋ ।
ಯತ್ತ್ವಂ ವದಸಿ ಸರ್ವಾರ್ಽಹಂ ತ್ವತ್ಪಾದಾಬ್ಜಪ್ರಸಾದತಃ ॥ ೭೮ ॥

ಈಶ್ವರಸ್ಯಾಪ್ರಿಯಾಃ ಕೇಚಿತ್ಪ್ರಿಯಾಶ್ಚ ಕುತ್ರ ಕೇಚನ ।
ಯೇ ಯಥಾ ಮಾಂ ನ ಸ್ಮರಂತಿ ತಥಾ ತೇಷು ತವಾಕೃಪಾ ॥ ೭೯ ॥

---

೭೬. ಚತುರ್ಭುಜವುಳ್ಳ ನನ್ನ ನಾರಾಯಣಮೂರ್ತಿಯು ವಕ್ಷಃಸ್ಥಳದಲ್ಲಿ ಲಕ್ಷ್ಮಿಯನ್ನು ಧರಿಸಿರುವಂತೆ ಕೃಷ್ಣಸ್ವರೂಪನಾದ ನಾನೂ ನಿನ್ನನ್ನು ವಕ್ಷಃಸ್ಥಳದಲ್ಲಿ ಧರಿಸಿರುವೆನು.

೭೭. ಇಂತು ನುಡಿದು ಶ್ರೀಕೃಷ್ಣನು ಮನೋಹರವಾದ ಶಯನದಲ್ಲಿ ಪವಡಿಸಿರಲು ರಾಧೆಯು ಭಕ್ತಿಯಿಂದ ತಲೆಬಾಗಿ ತನ್ನ ಪ್ರಾಣಕಾಂತನನ್ನು ಕುರಿತಿಂತೆಂದಳು.

೭೮. ರಾಧಿಕಾ :—ಎಲೈ ಪ್ರಭುವೇ, ಹಿಂದೆ ನೀನು ನುಡಿದಿದ್ದೆಲ್ಲವನ್ನೂ ನಿನ್ನ ಪಾದಕಮಲಗಳ ಅನುಗ್ರಹದಿಂದ ನೆನಪಿನಲ್ಲಿಟ್ಟುಕೊಂಡಿದ್ದೇನೆ ಎಂದೆಂದಿಗೂ ಮರೆಯಲಾರೆನು.

೭೯. ಕೆಲವರು ಈಶ್ವರನಿಗೆ ಅಪ್ರಿಯರಾಗಿದ್ದಾರೆ. ಮತ್ತೆ ಕೆಲವರು ಈಶ್ವರನ ಪ್ರೀತಿಗೆ ಪಾತ್ರರಾಗಿದ್ದಾರೆ. ಯಾರು ನನ್ನ ಸ್ಮರಣೆಯನ್ನು ಕ್ರಮವಾಗಿ ದೂರ ಮಾಡುವರೋ ಅವರಲ್ಲಿ ನೀನು ಕ್ರಮವಾಗಿ ನಿರ್ದಯಳಾಗಿರುವೆ

ತೃಣಂ ಚ ಪರ್ವತಂ ಕರ್ತುಂ ಸಮರ್ಥಃ ಪರ್ವತಂ ತೃಣಂ ।
ತಥಾಪಿ ಯೋಗ್ಯಾಯೋಗ್ಯೇ ಚ ಸಂಪತ್ತೌ ಚ ಸಮಾ ಕೃಪಾ ॥ ೮೦ ॥

ತಿಷ್ಠತ್ಯಹಂ ಶಯಾನಸ್ತ್ವಂ ಕಥಾಭಿರ್ಯತ್ಕ್ಷಣಂ ಗತಂ ।
ತತ್ಕ್ಷಣಂ ಚ ಯುಗಸಮಂ ನಾಹಂ ಪ್ರಾಣಯಿತುಂ ಕ್ಷಮಾ ॥ ೮೧ ॥

ವಕ್ಷಃಸ್ಥಲೇ ಚ ಶಿರಸಿ ದೇಹಿ ತೇ ಚರಣಾಂಬುಜಂ ।
ದುನೋತಿ ಮನ್ಮನಃ ಸದ್ಯಸ್ತ್ವದೀಯವಿರಹಾನಲಾತ್ ॥ ೮೨ ॥

ಪುರಃ ಪಪಾತ ಮೇ ದೃಷ್ಟಿಸ್ತ್ವದೀಯಚರಣಾಂಬುಜೇ ।
ನೀತಾ ಮಯಾ ನಹಿ ಕ್ಲೇಶಾದ್ದ್ರಷ್ಟುಮನ್ಯತ್ಕಲೇಬರಂ ॥ ೮೩ ॥

ಪ್ರತ್ಯೇಕಮಂಗಂ ದೃಷ್ಟ್ವೈವ ದತ್ತೇ ಶಾಂತೇ ಮುಖಾಂಬುಜೇ ।
ದೃಷ್ಟ್ವಾ ತ್ವ ಮುಖಾರವಿಂದಂ ಚ ನಾನ್ಯಂ ಗಂತುಂ ಚ ಸಾ ಕ್ಷಮಾ ॥ ೮೪ ॥

---

೮೦. ಹುಲ್ಲನ್ನು ಪರ್ವತವನ್ನಾಗಿಯೂ, ಪರ್ವತವನ್ನು ಹುಲ್ಲನ್ನಾಗಿಯೂ ಮಾಡಲು ನೀನು ಸಮರ್ಥನಾಗಿರುವೆ. ಆದರೂ ಯೋಗ್ಯನಲ್ಲಿಯೂ, ಅಯೋಗ್ಯನಲ್ಲಿಯೂ ಸಮಾನವಾದ ಕೃಪೆದೋರಿ ಸಂಪತ್ತನ್ನು ನೀಡುವೆ.

೮೧. ನೀನು ಮಲಗಿಕೊಂಡು ಹೇಳುತ್ತಿದ್ದ ಕಥೆಯನ್ನು ನಾನು ನಿಂತು ಕೇಳುತ್ತಿರುವಂತೆಯೇ ಯಾವ ಕಾಲವು ಕ್ಷಣದಂತೆ ಕಳೆದುಹೋಯಿತೋ ಆ ಯುಗ ಸದೃಶವಾದ ಕಾಲವನ್ನು ನಾನು ಪುನಃ ಪಡೆಯಲಾರೆ.

೮೨. ನನ್ನ ವಕ್ಷಃಸ್ಥಲದಲ್ಲಿಯೂ, ಶಿರಃಪ್ರದೇಶದಲ್ಲಿಯೂ, ನಿನ್ನ ಚರಣ ಕಮಲಗಳನ್ನಿಡು. ನಿನ್ನ ವಿರಹಾಗ್ನಿಯಿಂದ ನನ್ನ ಮನಸ್ಸು ಅತ್ಯಂತ ಪೀಡಿತವಾಗಿದೆ.

೮೩. ಮೊಟ್ಟಮೊದಲು ನಿನ್ನ ಚರಣಕಮಲಗಳ ಮೇಲೆ ನನ್ನ ದೃಷ್ಟಿಯು ಬಿದ್ದಿತು. ಬಹಳ ಕಷ್ಟಪಟ್ಟರು ನಿನ್ನ ಇತರ ಅಂಗಗಳನ್ನು ನೋಡಲು ನಿದಾನವಾಯಿತು.

೮೪. ಕ್ರಮವಾಗಿ ಪ್ರತಿಯೊಂದು ಅವಯವವನ್ನು ನೋಡಿಕೊಂಡು ಶಾಂತವಾದ ನಿನ್ನ ಮುಖಕಮಲದಲ್ಲಿ ನನ್ನ ದೃಷ್ಟಿಯು ನಿಂತಿತು. ನಿನ್ನ ಮುಖಾರವಿಂದವನ್ನು ನೋಡಿದ ಮೇಲೆ ನನ್ನ ದೃಷ್ಟಿ ಬೇರೆಡೆ ಚಲಿಸಲಾರದು.

ರಾಧಿಕಾವಚನಂ ಶ್ರುತ್ವಾ ಜಹಾಸ ಪುರುಷೋತ್ತಮಃ ।
ತಾಮುವಾಚ ಹಿತಂ ತಥ್ಯಂ ಶ್ರುತಿಸ್ಮೃತಿನಿರೂಪಿತಂ ॥ ೮೫ ॥

॥ ಶ್ರೀಕೃಷ್ಣ ಉವಾಚ ॥

ನ ಖಂಡನೀಯಂ ತತ್ತತ್ರ ಮಯಾ ಪೂರ್ವಂ ನಿರೂಪಿತಂ ।
ತಿಷ್ಠ ಭದ್ರೇ ಕ್ಷಣಂ ಭದ್ರಂ ಕರಿಷ್ಯಾಮಿ ತವ ಪ್ರಿಯೇ ॥ ೮೬ ॥

ತ್ವನ್ಮನೋರಥಪೂರ್ಣಸ್ಯ ಸ್ವಯಂ ಕಾಲಃ ಸಮಾಗತಃ ।
ಯಸ್ಯ ಯಲ್ಲಿಖಿತಂ ಪೂರ್ವಂ ಯತ್ರ ಕಾಲೇ ನಿರೂಪಿತಂ ॥ ೮೭ ॥

ತದೇವ ಖಂಡಿತುಂ ರಾಧೇ ಕ್ಷಮೋ ನಾಹಂ ಚ ಕೋ ವಿಧಿಃ ।
ವಿಧಾತುಶ್ಚ ವಿಧಾತಾಹಂ ಯೇಷಾಂ ಯಲ್ಲೇಖನಂ ಕೃತಂ ॥ ೮೮ ॥

ಬ್ರಹ್ಮಾದೀನಾಂ ಚ ಕ್ಷುದ್ರಾಣಾಂ ನ ತತ್ಖಂಡ್ಯಂ ಕದಾಚನ ।
ಏತಸ್ಮಿನ್ನಂತರೇ ಬ್ರಹ್ಮಾಽಜಗಾಮ ಪುರತೋ ಹರೇಃ ॥ ೮೯ ॥

---

೮೫. ಇಂತು ರಾಧೆಯಾಡಿದ ಮಾತನ್ನು ಕೇಳಿ ಪುರುಷೋತ್ತಮನಾದ ಶ್ರೀಕೃಷ್ಣನು ನಸುನಕ್ಕು ಹಿತವೂ, ಸತ್ಯವೂ, ಶ್ರುತಿಸ್ಮೃತಿಸಮ್ಮತವೂ ಆದ ನುಡಿಯನ್ನಾಡಿದನು.

೮೬. ಶ್ರೀಕೃಷ್ಣ :—ಎಲೌ ಪ್ರಿಯಳೇ, ನಾನು ಮೊದಲಾಡಿದುದನ್ನು ವ್ಯರ್ಥಗೊಳಿಸುವಂತಿಲ್ಲ. ಕ್ಷಣಕಾಲ ನೀನು ನಿಲ್ಲು ನಿನಗೆ ಮಂಗಳವನ್ನುಂಟುಮಾಡುವೆನು.

೮೭. ನಿನ್ನ ಮನೋರಥಪ್ರಾಪ್ತಿಯಾಗುವ ಕಾಲವು ತಾನಾಗಿಯೇ ಒದಗಿದೆ. ಯಾರಿಗೆ ಯಾವ ಕಾಲದಲ್ಲಿ ಏನು ಪ್ರಾಪ್ತಿಯಾಗಬೇಕೆಂದು ವಿಧಿನಿಯಮವಿದೆಯೋ ಅಂತೆಯೇ ನಡೆಯುವುದು.

೮೮-೮೯. ಅದನ್ನು ನಾನಾಗಲೀ, ವಿಧಾತನಾಗಲೀ ಅಳಿಸಲು ಸಾಧ್ಯವಿಲ್ಲ. ಸೃಷ್ಟಿಕರ್ತನಿಗೂ ಆದಿಕಾರಣನಾದ ನಾನೂ ಕೂಡ, ಬ್ರಹ್ಮ ಮೊದಲುಗೊಂಡು ಕ್ಷುದ್ರಪ್ರಾಣಿಯವರೆಗೆ ಯಾರ ಹಣೆಯ ಬರಹವನ್ನೂ ವ್ಯತ್ಯಾಸಮಾಡಲಾರೆನು. ಹೀಗೆ ಹೇಳುತ್ತಿದ್ದಾಗಲೇ ಚತುರ್ಮುಖಬ್ರಹ್ಮನು ಶ್ರೀಹರಿಯ ಮುಂದೆ ಬಂದು ನಿಂತನು.

ಮಾಲಾಕಮಂಡಲುಕರ ಈಷತ್ಸ್ಮೇರಚತುರ್ಮುಖಃ ।
ಗತ್ವಾ ನನಾಮ ತಂ ಕೃಷ್ಣಂ ಪ್ರತುಷ್ಟಾವ ಯಥಾಗತಂ ॥ ೯೦ ॥

ಸಾಶ್ರುನೇತ್ರಃ ಪುಲಕಿತೋ ಭಕ್ತಿನಮ್ರಾತ್ಮಕಂಧರಃ ।
ಸ್ತುತ್ವಾ ನತ್ವಾ ಜಗದ್ಧಾತಾ ಜಗಾಮ ಹರಿಸನ್ನಿಧಿಂ ॥ ೯೧ ॥

ಪುನರ್ನತ್ವಾ ಪ್ರಭುಂ ಭಕ್ತ್ಯಾ ಜಗಾಮ ರಾಧಿಕಾಂತಿಕಂ ।
ಮೂರ್ಧ್ನಾ ನನಾಮ ಭಕ್ತ್ಯಾ ಚ ಮಾತುಸ್ತಚ್ಚರಣಾಂಬುಜೇ ॥ ೯೨ ॥

ಚಕಾರ ಸಂಭ್ರಮೇಣೈವ ಜಟಾಜಾಲೇನ ವೇಷ್ಟಿತಂ ।
ಕಮಂಡಲುಜಲೇನೈವ ಶೀಘ್ರಂ ಪ್ರಕ್ಷಾಲಿತಂ ಮುದಾ ॥ ೯೩ ॥

ಯಥಾಗಮಂ ಪ್ರತುಷ್ಟಾವ ಪುಟಾಂಜಲಿಯುತಃ ಪುನಃ ।

॥ ಬ್ರಹ್ಮೋವಾಚ ॥

ಹೇ ಮಾತಸ್ತ್ವತ್ಪದಾಂಭೋಜಂ ದೃಷ್ಟಂ ಕೃಷ್ಣಪ್ರಸಾದತಃ ॥ ೯೪ ॥

---

೯೦. ಒಂದು ಕೈಯ್ಯಲ್ಲಿ ಕಮಂಡಲುವನ್ನೂ, ಮತ್ತೊಂದರಲ್ಲಿ ಜಪಮಾಲೆಯನ್ನೂ ಹಿಡಿದು ನಾಲ್ಕು ಮುಖಗಳಲ್ಲೂ ಮಂದಹಾಸವನ್ನು ಬೀರುತ್ತ ಶ್ರೀಕೃಷ್ಣನ ಸಮೀಪಕ್ಕೆ ಬಂದು ನಮಸ್ಕರಿಸಿ ಆಗಮೋಕ್ತವಾಗಿ ಸ್ತುತಿಸಿದನು.

೯೧. ರೋಮಾಂಚಿತಶರೀರನಾಗಿ ಕಣ್ಣುಗಳಲ್ಲಿ ಆನಂದಾಶ್ರುವನ್ನು ಸುರಿಸುತ್ತ, ಭಕ್ತಿಯಿಂದ ತಲೆಬಾಗಿ, ಜಗತ್ಸೃಷ್ಟಿಕರ್ತನು ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸಿ, ನಮಸ್ಕಾರಮಾಡಿ ಅವನ ಸಮೀಪಕ್ಕೆ ಬಂದನು

೯೨. ಮತ್ತೆ ಭಕ್ತಿಪೂರ್ವಕವಾಗಿ ಜಗದೊಡೆಯನಿಗೆ ನಮಸ್ಕರಿಸಿ ರಾಧಾದೇವಿಯ ಸಮೀಪಕ್ಕೆ ಬಂದು ಆ ಮಾತೆಯ ಚರಣಕಮಲಗಳಿಗೆ ತಲೆಬಾಗಿ ನಮಸ್ಕರಿಸಿದನು.

೯೩. ಆಕೆಯ ಪಾದಾರವಿಂದಗಳ ಮೇಲೆ ತನ್ನ ಜಟಾಭಾರವನ್ನಿಟ್ಟು, ಕಮಂಡಲುವಿನ ಜಲದಿಂದ ಆ ಪಾದಗಳನ್ನು ತೊಳೆದನು.

೯೪. ಅನಂತರ ಕೈಮುಗಿದುಕೊಂಡು ಆಗಮೋಕ್ತವಾಗಿ ಸ್ತುತಿಸಲಾರಂಭಿಸಿದನು. ಬ್ರಹ್ಮ:—ಎಲೌ ಮಾತೆಯೇ, ಶ್ರೀಕೃಷ್ಣನ ಕೃಪೆಯಿಂದ ನಿನ್ನ ಚರಣ ಕಮಲಗಳ ದರ್ಶನವನ್ನು ಪಡೆದೆನು

ಸುದುರ್ಲಭಂ ಚ ಸರ್ವೇಷಾಂ ಭಾರತೇ ಚ ವಿಶೇಷತಃ ।
ಷಷ್ಟಿವರ್ಷಸಹಸ್ರಾಣಿ ತಪಸ್ತಪ್ತಂ ಪುರಾ ಮಯಾ ॥ ೯೫ ॥

ಭಾಸ್ಕರೇ ಪುಷ್ಕರೇ ತೀರ್ಥೇ ಕೃಷ್ಣಸ್ಯ ಪರಮಾತ್ಮನಃ ।
ಆಜಗಾಮ ವರಂ ದಾತುಂ ವರದಾತಾ ಹರಿಃ ಸ್ವಯಂ ॥ ೯೬ ॥

ವರಂ ವೃಣೀಷ್ವೇತ್ಯುಕ್ತೇ ಚ ಸ್ವಾಭೀಷ್ಟಂ ಚ ವೃತಂ ಮುದಾ ।
ರಾಧಿಕಾಚರಣಾಂಭೋಜಂ ಸರ್ವೇಷಾಮಪಿ ದುರ್ಲಭಂ ॥ ೯೭ ॥

ಹೇ ಗುಣಾತೀತ ಮೇ ಶೀಘ್ರಮಧುನೈವ ಪ್ರದರ್ಶಯ ।
ಮಯೇತ್ಯುಕ್ತೋ ಹರಿರಯಮುವಾಚ ಮಾಂ ತಪಸ್ವಿನಂ ॥ ೯೮ ॥

---

೯೫. ಭರತಖಂಡದಲ್ಲಿ ಎಲ್ಲರಿಗೂ ದುರ್ಲಭವಾದ ನಿನ್ನ ಪಾದಾರವಿಂದಗಳ ದರ್ಶನಪಡೆಯಲು ನಾನು ಪೂರ್ವದಲ್ಲಿ ಅರವತ್ತುಸಾವಿರ ವರ್ಷಗಳಕಾಲ ತಪಸ್ಸು ಮಾಡಿದೆನು.

೯೬. ಪವಿತ್ರತಮವಾದ ಪುಷ್ಕರಕ್ಷೇತ್ರದಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಕುರಿತು ತಪಸ್ಸುಮಾಡುತ್ತಿರಲು ವರಪ್ರದನಾದ ಶ್ರೀಹರಿಯು ತಾನೇ ಅಲ್ಲಿಗೆ ಬಂದನು.

೯೭. ಬಂದು ವರವನ್ನು ಕೇಳೆನ್ನಲು 'ನನಗೆ ಅತ್ಯಂತ ಅಭೀಷ್ಟವೂ, ಸರ್ವಸುದುರ್ಲಭವೂ ಆದ ರಾಧೆಯ ಚರಣಕಮಲಗಳಲ್ಲಿ ಭಕ್ತಿಯನ್ನು ಅನುಗ್ರಹಿಸೆಂದು' ಬೇಡಿದೆನು.

೯೮. ಎಲೈ ಗುಣಾತೀತನೇ, ನನಗೆ ಈ ಕ್ಷಣದಲ್ಲಿಯೇ ರಾಧಾಚರಣಕಮಲಗಳ ದರ್ಶನವನ್ನು ಅನುಗ್ರಹಿಸೆಂದು ಬೇಡಲು, ದೀನನಾದ ನನ್ನನ್ನು ಕುರಿತು ಶ್ರೀಹರಿಯು ಇಂತೆಂದನು.

ದರ್ಶಯಿಷ್ಯಾಮಿ ಕಾಲೇ ಚ ವತ್ಸೇದಾನೀಂ ಕ್ಷಮೋತಿ ಚ ।
ನಹೀಶ್ವರಾಜ್ಞಾ ವಿಫಲಾ ತೇನ ದೃಷ್ಟಂ ಪದಾಂಬುಜಂ　　　॥ ೯೯ ॥

ಸರ್ವೇಷಾಂ ವಾಂಛಿತಂ ಮಾತರ್ಗೋಲೋಕೇ ಭಾರತೇಽಧುನಾ ।
ಸರ್ವಾ ದೇವ್ಯಃ ಪ್ರಕೃತ್ಯಂಶಾ ಜನ್ಯಾಃ ಪ್ರಾಕೃತಿಕಾ ಧ್ರುವಂ　　　॥ ೧೦೦ ॥

ತ್ವಂ ಕೃಷ್ಣಾಂಗಾರ್ಧಸಂಭೂತಾ ತುಲ್ಯಾ ಕೃಷ್ಣೇನ ಸರ್ವತಃ ।
ಶ್ರೀಕೃಷ್ಣಸ್ತ್ವಮಯಂ ರಾಧಾ ತ್ವಂ ರಾಧಾ ವಾ ಹರಿಃ ಸ್ವಯಂ　　　॥ ೧೦೧ ॥

ನಹಿ ವೇದೇಷು ಮೇ ದೃಷ್ಟ ಇತಿ ಕೇನ ನಿರೂಪಿತಂ ।
ಬ್ರಹ್ಮಾಂಡಾದ್ಬಹಿರೂರ್ಧ್ವಂ ಚ ಗೋಲೋಕೋಽಸ್ತಿ ಯಥಾಂಬಿಕೇ॥೧೦೨॥

---

೯೯. ಎಲೈ ವತ್ಸನೇ, ಸ್ವಲ್ಪಕಾಲ ನಿರೀಕ್ಷಿಸು. ಉಚಿತಕಾಲದಲ್ಲಿ ನಿನಗೆ ದರ್ಶನವನ್ನು ಅನುಗ್ರಹಿಸುವೆನು ಎಂದನು. ಈಶ್ವರಾಜ್ಞೆಯು ಎಂದೆಂದಿಗೂ ವ್ಯರ್ಥವಾಗುವುದಿಲ್ಲ ಪರಮಾತ್ಮನ ಅನುಗ್ರಹದಿಂದಲೇ ನಿನ್ನ ಪಾದಕಮಲಗಳನ್ನು ನೋಡಿದೆನು.

೧೦೦ ಎಲೌ ಮಾತೆಯೇ, ಗೋಲೋಕದಲ್ಲೂ, ಭರತಖಂಡದಲ್ಲೂ ಎಲ್ಲರೂ ನಿನ್ನ ಚರಣಕಮಲಗಳ ದರ್ಶನವನ್ನು ಬಯಸುವರು. ದೇವಿಯರೆಲ್ಲರೂ ಪ್ರಕೃತಿಯ ಅಂಶಸಂಭವರು. ಜನನಮರಣಾದಿಗಳಿಗೆ ಸಿಲುಕುವವರು ಪ್ರಾಕೃತಿಕರು.

೧೦೧. ಶ್ರೀಕೃಷ್ಣನ ಅರ್ಧಾಂಗಸಂಭೂತಳಾದ ನೀನು ಶ್ರೀಕೃಷ್ಣನಿಗೆ ಸಮಳೆನಿಸಿರುವೆ. ಶ್ರೀಕೃಷ್ಣನು ನಿನಗೆ ಅಭಿನ್ನನಾಗಿಯೂ, ನೀನು ಶ್ರೀಕೃಷ್ಣನಿಗೆ ಅಭಿನ್ನಳಾಗಿಯೂ ಇರುವಿರಿ.

೧೦೨. ಎಲೌ ಅಂಬಿಕೆಯೇ, ಬ್ರಹ್ಮಾಂಡದ ಹೊರಗೂ ಮೇಲೂ ಗೋಲೋಕ ಇರುವಂತೆ, ನೀವಿಬ್ಬರೂ ಪ್ರತ್ಯೇಕವಾಗಿಯೂ, ಅಭಿನ್ನರಾಗಿಯೂ ಇರುವಿರಿ. ವೇದವಲ್ಲಿ ನಿಮ್ಮಿಬ್ಬರಿಗೆ ಭೇದವನ್ನು ಹೇಳಿಲ್ಲ.

ವೈಕುಂಠಶ್ಚಾಪ್ಯಜನ್ಯಶ್ಚ ತ್ವಮಜನ್ಯಾ ತಥಾಂಬಿಕೇ ।
ಯಥಾ ಸಮಸ್ತಬ್ರಹ್ಮಾಂಡೇ ಶ್ರೀಕೃಷ್ಣಾಂಶಾಂಶಜೀವಿನಃ ॥ ೧೦೩ ॥

ತಥಾ ಶಕ್ತಿಸ್ವರೂಪಾ ತ್ವಂ ತೇಷು ಸರ್ವೇಷು ಸಂಸ್ಥಿತಾ ।
ಪುರುಷಾಶ್ಚ ಹರೇರಂಶಾಸ್ತ್ವದಂಶಾ ನಿಖಿಲಾಃ ಸ್ತ್ರಿಯಃ ॥ ೧೦೪ ॥

ಆತ್ಮನಾ ದೇಹರೂಪಾ ತ್ವಮಸ್ಯಾಧಾರಸ್ತ್ವಮೇವ ಹಿ ।
ಅಸ್ಯಾಸು ಪ್ರಾಣೈಸ್ತ್ವಂ ಮಾತಸ್ತ್ವತ್ಪ್ರಾಣೈರಯಮೀಶ್ವರಃ ॥ ೧೦೫ ॥

ಕಿಮಹೋ ನಿರ್ಮಿತಃ ಕೇನ ಹೇತುನಾ ಶಿಲ್ಪಕಾರಿಣಾ ।
ನಿತ್ಯೋಽಯಂ ಚ ತಥಾ ಕೃಷ್ಣಸ್ತ್ವಂ ಚ ನಿತ್ಯಾ ತಥಾಽಂಬಿಕೇ ॥ ೧೦೬ ॥

ಅಸ್ಯಾಂಶಾ ತ್ವಂ ತ್ವದಂಶೋವಾಽಸ್ಯಯಂ ಕೇನ ನಿರೂಪಿತಃ ।
ಅಹಂ ವಿಧಾತಾ ಜಗತಾಂ ದೇವಾನಾಂ ಜನಕಃ ಸ್ವಯಂ ॥ ೧೦೭ ॥

---

೧೦೩ ಶ್ರೀಕೃಷ್ಣನೂ, ನೀನೂ ಜನ್ಮಜರಾಮರಣರಹಿತರಾಗಿರುವಿರಿ. ಸಮಸ್ತ ಬ್ರಹ್ಮಾಂಡದಲ್ಲಿಯೂ ಇರುವ ಶ್ರೀಕೃಷ್ಣನ ಅಂಶಾವತಾರಿಗಳಾದ ಜೀವಿಗಳೂ ನಾಶ ರಹಿತರಾಗಿರುವರು.

೧೦೪. ನೀನು ಶಕ್ತಿಸ್ವರೂಪಳಾಗಿ ಸಮಸ್ತ ಜೀವಿಗಳಲ್ಲಿಯೂ ಇರುವೆ. ಪುರುಷರೆಲ್ಲರೂ ಶ್ರೀಹರಿಯ ಅಂಶದಿಂದಲೂ, ಸ್ತ್ರೀಯರೆಲ್ಲರೂ ನಿನ್ನ ಅಂಶದಿಂದಲೂ ಜನಿಸಿರುವರು.

೧೦೫. ಪರಮಾತ್ಮನಿಂದ ನೀನೂ ದೇಹಧಾರಿಣಿಯಾಗಿಯೂ, ಆತ್ಮನಿಗೆ ನೀನೇ ಆಧಾರಸ್ವರೂಪಳಾಗಿಯೂ ಇರುವೆ. ಆತ್ಮನಿಗೆ ಆಧಾರಳಾಗಿ ನೀನು ಮಾತೆಯೆಂದೂ, ನಿನಗೆ ಆಶ್ರಯನಾಗಿ ಆತನು ಈಶ್ವರನೆಂದೂ ಪ್ರಖ್ಯಾತಿಗೊಂಡಿದ್ದೀರಿ

೧೦೬. ಯಾವ ಶಿಲ್ಪಿಚತುರನು ಯಾವ ಕಾರಣದಿಂದ ನಿತ್ಯನಾದ ಶ್ರೀಕೃಷ್ಣ ಪರಮಾತ್ಮನನ್ನೂ, ನಿತ್ಯಳಾದ ನಿನ್ನನ್ನೂ ನಿರ್ಮಿಸಿದನೋ ನಾವರಿಯೆವು. ಇದು ಅತ್ಯದ್ಭುತವಾಗಿದೆ.

೧೦೭. ನೀನು ಶ್ರೀಕೃಷ್ಣನ ಅಂಶಜಳೋ, ಅಥವಾ ಶ್ರೀಕೃಷ್ಣನೇ ನಿನ್ನ ಅಂಶಸಂಭವನೋ ಎಂಬುದನ್ನು ದೇವತೆಗಳ ಜನಕನೂ, ನಿಖಿಲ ಜಗತ್ಸೃಷ್ಟಿಕರ್ತನೂ ಆದ ನಾನೇ ಅರಿಯೆನು.

ತಂ ಪಠಿತ್ವಾ ಗುರುಮುಖಾದ್ಭವಂತ್ಯೇವ ಬುಧಾ ಜನಾಃ ।
ಗುಣಾನಾಂ ವಾಸ್ತವಾನಾಂ ತೇ ಶತಾಂಶಂ ವಕ್ತುಮಕ್ಷಮಃ ॥ ೧೦೮ ॥

ವೇದೋ ವಾ ಪಂಡಿತೋ ವಾಽನ್ಯಃ ಕೋ ವಾ ತ್ವಾಂ ಸ್ತೋತುಮೀಶ್ವರಃ ।
ಸ್ತವಾನಾಂ ಜನಕಂ ಜ್ಞಾನಂ ಬುದ್ಧಿರ್ಜ್ಞಾನಾಂಬಿಕಾ ಸದಾ ॥ ೧೦೯ ॥

ತ್ವಂ ಬುದ್ಧೇರ್ಜನನೀ ಮಾತಃ ಕೋ ವಾ ತ್ವಾಂ ಸ್ತೋತುಮೀಶ್ವರಃ ।
ಯದ್ವಸ್ತು ದೃಷ್ಟಂ ಸರ್ವೇಷಾಂ ತದ್ಧಿ ವಕ್ತುಂ ಬುಧಃ ಕ್ಷಮಃ ॥ ೧೧೦ ॥

ಯದದೃಷ್ಟಾಶ್ರುತಂ ವಸ್ತು ತನ್ನಿರ್ವಕ್ತುಂ ಚ ಕಃ ಕ್ಷಮಃ ।
ಅಹಂ ಮಹೇಶೋಽನಂತಶ್ಚ ಸ್ತೋತುಂ ತ್ವಾಂ ಕೋಽಪಿ ನ ಕ್ಷಮಃ ॥ ೧೧೧ ॥

ಸರಸ್ವತೀ ಚ ವೇದಾಶ್ಚ ಕ್ಷಮಃ ಕಃ ಸ್ತೋತುಮೀಶ್ವರಃ ।
ಯಥಾಗಮಂ ಯಥೋಕ್ತಂ ಚ ನ ಮಾಂ ನಿಂದಿತುಮರ್ಹಸಿ ॥ ೧೧೨ ॥

---

೧೦೮. ನಿನ್ನ ವಾಸ್ತವವಾದ ಗುಣಗಳ ನೂರನೆಯ ಒಂದು ಭಾಗವನ್ನು ಗುರುಮುಖದಿಂದ ಉಪದೇಶವಡೆದು ಪಠಿಸುವ ಮನುಜನು ಪಂಡಿತನೆನಿಸುವನು. ಆದರೆ ಅದೂ ಬಹಳ ಕಷ್ಟಸಾಧ್ಯವಾದುದು.

೧೦೯. ಚತುರ್ವೇದಗಳಾಗಲೀ, ಪಂಡಿತನಾಗಲೀ ನಿನ್ನನ್ನು ಸ್ತುತಿಸಿ ಮುಗಿಯಲಾರರು. ಸ್ತೋತ್ರಗಳಿಗೆಲ್ಲ ಮೂಲಕಾರಣವಾದ ಜ್ಞಾನ ಮತ್ತು ಬುದ್ಧಿಯು ದೊರೆಯಲು ಜಗದಂಬಿಕೆಯ ಅನುಗ್ರಹಬೇಕು.

೧೧೦. 'ಎಲೌ ಮಾತೆಯೇ, ಬುದ್ಧಿಗೂ ಜನನಿಯಾದ ನಿನ್ನನ್ನು ಯಾರು ತಾನೆ ಸ್ತುತಿಸಲಾಪರು'? ಎಲ್ಲರ ಕಣ್ಣಿಗೂ ಕಾಣುವ ವಸ್ತುವನ್ನು ಪಂಡಿತನಾದವನು ವರ್ಣಿಸಿಯಾನು.

೧೧೧. ನೋಡದೆಯೂ, ಕೇಳದೆಯೂ ಇರುವ ವಾಚಾಮಗೋಚರವಾದ ವಸ್ತುವನ್ನು ಯಾರು ವರ್ಣಿಸಿಯಾರು? ನಾನಾಗಲೀ, ಮಹೇಶ್ವರನಾಗಲೀ, ಅನಂತನಾಗಲೀ, ನಿನ್ನನ್ನು ಹೊಗಳಲು ಶಕ್ತರಲ್ಲ.

೧೧೨. ಸರಸ್ವತಿಯಾಗಲೀ, ಚತುರ್ವೇದಗಳಾಗಲೀ, ಆಗಮೋಕ್ತವಾಗಿ ನಿನ್ನನ್ನು ಸ್ತುತಿಸಲಾಗದಿರುವಾಗ ನಾನು ಹೇಗೆ ತಾನೇ ಸ್ತುತಿಸಬಲ್ಲೆನು? ಆದುದರಿಂದ ನನ್ನನ್ನು ನಿಂದಿಸಬೇಡ.

**ಈಶ್ವರಾಣಾಮೀಶ್ವರಸ್ಯ ಯೋಗ್ಯಾಯೋಗ್ಯೇ ಸಮಾ ಕೃಪಾ ।**
**ಜನಸ್ಯ ಪ್ರತಿಪಾಲ್ಯಸ್ಯ ಕ್ಷಣೇ ದೋಷಃ ಕ್ಷಣೇ ಗುಣಃ ॥ ೧೧೩ ॥**

**ಜನನೀ ಜನಕೋ ಯೋ ವಾ ಸರ್ವಂ ಕ್ಷಮತಿ ಸ್ನೇಹತಃ ।**
**ಇತ್ಯುಕ್ತ್ವಾ ಜಗತಾಂ ಧಾತಾ ತಸ್ಥೌ ಚ ಪುರತಸ್ತಯೋಃ ॥ ೧೧೪ ॥**

**ಪ್ರಣಮ್ಯ ಚರಣಾಂಭೋಜಂ ಸರ್ವೇಷಾಂ ವಂದ್ಯಮೀಪ್ಸಿತಂ ।**
**ಬ್ರಹ್ಮಣಾ ಚ ಕೃತಂ ಸ್ತೋತ್ರಂ ತ್ರಿಸಂಧ್ಯಂ ಯಃ ಪಠೇನ್ನರಃ ॥ ೧೧೫ ॥**

**ರಾಧಾಮಾಧವಯೋಃ ಪಾದೇ ಭಕ್ತಿದಾಸ್ಯಂ ಲಭೇದ್ಧ್ರುವಂ ।**
**ಕರ್ಮನಿರ್ಮೂಲನಂ ಕೃತ್ವಾ ಮೃತ್ಯುಂ ಜಿತ್ವಾ ಸುದುರ್ಜಯಂ ।**
**ವಿಲಂಘ್ಯ ಸರ್ವಲೋಕಾಂಶ್ಚ ಯಾತಿ ಗೋಲೋಕಮುತ್ತಮಂ ॥ ೧೧೬ ॥**

---

೧೧೩. ದೇವಾದಿದೇವನಾದ ಸರ್ವೇಶ್ವರನಿಗೆ ಯೋಗ್ಯರಲ್ಲಿಯೂ, ಅಯೋಗ್ಯರಲ್ಲಿಯೂ ಸಮನಾದ ಕೃಪೆಯಿರುವುದು. ಪರಾಧೀನನಾದ ಮನುಜನಲ್ಲಿ ಗುಣದೋಷಗಳು ಕ್ಷಣಕ್ಷಣಕ್ಕೂ ಅನಿವಾರ್ಯವಾಗಿ ಸಂಭವಿಸುವುದು.

೧೧೪. ಮಾತೆಯಾಗಲೀ, ಪಿತನಾಗಲೀ ಮಕ್ಕಳ ಕಷ್ಟಗಳನ್ನು ವಾತ್ಸಲ್ಯದಿಂದ ಕ್ಷಮಿಸುವರು. ಹೀಗೆ ಹೇಳಿ ಜಗತ್ಸೃಷ್ಟಿಕರ್ತನಾದ ಬ್ರಹ್ಮನು ಅವರ ಮುಂದೆ ನಿಂತನು.

೧೧೫-೧೧೬. ಜಗದ್ವಂದ್ಯವೂ, ಸರ್ವಾಭೀಷ್ಟವೂ ಆದ ರಾಧಾಮಾಧವರ ಚರಣಕಮಲಗಳಿಗೆ ವಂದಿಸಿ, ಬ್ರಹ್ಮಕೃತವಾದ ಈ ಸ್ತೋತ್ರವನ್ನು ತ್ರಿಸಂಧ್ಯೆಯಲ್ಲೂ ಪಠಿಸುವ ಮನುಜನು ರಾಧಾಮಾಧವರ ಚರಣಕಮಲಗಳಲ್ಲಿ ಭಕ್ತಿಯನ್ನೂ, ದಾಸ್ಯವನ್ನೂ ಪಡೆಯುವರು. ಅಲ್ಲದೆ ಕರ್ಮಬಂಧನವನ್ನು ಕಳೆದು, ಮೃತ್ಯುವನ್ನು ಜಯಿಸಿ, ಸಮಸ್ತ ಲೋಕಗಳನ್ನೂ ದಾಟಿ ಉತ್ತಮವಾದ ಗೋಲೋಕಕ್ಕೆ ತೆರಳುವರು.

|| ಶ್ರೀ ನಾರಾಯಣ ಉವಾಚ ||

ಬ್ರಹ್ಮಣಃ ಸ್ತವನಂ ಶ್ರುತ್ವಾ ತಮುವಾಚ ಹ ರಾಧಿಕಾ || ೧೧೭ ||

ವರಂ ವೃಣು ವಿಧಾತಸ್ತ್ವಂ ಯತ್ತೇ ಮನಸಿವರ್ತತೇ |
ರಾಧಿಕಾವಚನಂ ಶ್ರುತ್ವಾ ತಾಮುವಾಚ ಜಗದ್ವಿಧಿಃ || ೧೧೮ ||

ವರಂ ಚ ಯುವಯೋಃ ಪಾದಪದ್ಮಭಕ್ತಿಂ ಚ ದೇಹಿ ಮೇ |
ಇತ್ಯುಕ್ತೇ ವಿಧಿನಾ ರಾಧಾ ತೂರ್ಣಮೋಮಿತ್ಯುವಾಚ ಹ || ೧೧೯ ||

ಪುನರ್ನನಾಮ ತಾಂ ಭಕ್ತ್ಯಾ ವಿಧಾತಾ ಜಗತಾಂ ಪತಿಃ |
ತದಾ ಬ್ರಹ್ಮಾ ತಯೋರ್ಮಧ್ಯೇ ಪ್ರಜ್ವಾಲ್ಯ ಚ ಹುತಾಶನಂ || ೧೨೦ ||

ಹರಿಂ ಸಂಸ್ಮೃತ್ಯ ಹವನಂ ಚಕಾರ ವಿಧಿನಾ ವಿಧಿಃ |
ಉತ್ಥಾಯ ಶಯನಾತ್ಕೃಷ್ಣ ಉವಾಸ ವಹ್ನಿಸನ್ನಿಧೌ || ೧೨೧ ||

---

೧೧೭. ಶ್ರೀನಾರಾಯಣ :—ಬ್ರಹ್ಮನ ಸ್ತುತಿವಚನವನ್ನು ಕೇಳಿ ರಾಧಾದೇವಿಯೂ ಇಂತೆಂದಳು.

೧೧೮. 'ಎಲೈ ಬ್ರಹ್ಮನೇ, ನಿನ್ನ ಮನಸ್ಸಿನಲ್ಲಿ ಅಭಿಲಷಿತವಾದ ವರವನ್ನು ಕೇಳಿಕೋ' ಎನ್ನಲು, ರಾಧಾದೇವಿಯ ಮಾತನ್ನು ಕೇಳಿ, ಜಗತ್ಸೃಷ್ಟಿಕರ್ತನು ಇಂತೆಂದನು.

೧೧೯. ಎಲೌ ಮಾತೆಯೇ, ನಿಮ್ಮಿಬ್ಬರ ಪಾದಕಮಲಗಳಲ್ಲಿ ಶಾಶ್ವತವಾದ ಭಕ್ತಿಯೊಂದೇ ನನಗೆ ಬೇಕಾದ ವರವೆನ್ನಲು ರಾಧಾದೇವಿಯು ಕೂಡಲೇ ಬ್ರಹ್ಮನಿಗೆ ಭಕ್ತಿಯುಂಟಾಗುವಂತೆ ಅನುಗ್ರಹಿಸಿದಳು

೧೨೦-೧೨೧. ಜಗತ್ಪತಿಯಾದ ಚತುರ್ಮುಖಬ್ರಹ್ಮನು ಪುನಃ ಮಾತೆಗೆ ಭಕ್ತಿಯಿಂದ ವಂದಿಸಿ, ಆ ರಾಧಾಕೃಷ್ಣರ ಎದುರಿನಲ್ಲೇ ಅಗ್ನಿಯನ್ನು ಪ್ರಜ್ವಲಗೊಳಿಸಿ, ಶ್ರೀಹರಿಯ ಸ್ಮರಣೆಮಾಡುತ್ತಾ ವಿಧಿಪೂರ್ವಕವಾಗಿ ಹವನಮಾಡಲು ಶ್ರೀಕೃಷ್ಣನು ಶಯನದಿಂದೆದ್ದು ಅಗ್ನಿಯ ಸಮೀಪದಲ್ಲಿ ಕುಳಿತನು.

ಬ್ರಹ್ಮಣೋಕ್ತೇನ ವಿಧಿನಾ ಚಕಾರ ಹವನಂ ಸ್ವಯಂ।
ಪ್ರಣಮಯ್ಯ ಪುನಃ ಕೃಷ್ಣಂ ರಾಧಾಂ ತಾಂ ಜನಕಃ ಸ್ವಯಂ ॥ ೧೨೨ ॥

ಕೌತುಕಂ ಕಾರಯಾಮಾಸ ಸಪ್ತಧಾ ಚ ಪ್ರದಕ್ಷಿಣಾಂ।
ಪುನಃ ಪ್ರದಕ್ಷಿಣಾಂ ರಾಧಾಂ ಕಾರಯಿತ್ವಾ ಹುತಾಶನಂ ॥ ೧೨೩ ॥

ಪ್ರಣಮಯ್ಯ ತತಃ ಕೃಷ್ಣಂ ವಾಸಯಾಮಾಸ ತಂ ವಿಧಿಃ।
ತಸ್ಯಾ ಹಸ್ತಂ ಚ ಶ್ರೀಕೃಷ್ಣಂ ಗ್ರಾಹಯಾಮಾಸ ತಂ ವಿಧಿಃ ॥ ೧೨೪ ॥

ವೇದೋಕ್ತ ಸಪ್ತಮಂತ್ರಾಂಶ್ಚ ಪಾಠಯಾಮಾಸ ಮಾಧವಂ।
ಸಂಸ್ಥಾಪ್ಯ ರಾಧಿಕಾಹಸ್ತಂ ಹರೇರ್ವಕ್ಷಸಿ ವೇದವಿತ್ ॥ ೧೨೫ ॥

ಶ್ರೀಕೃಷ್ಣಹಸ್ತಂ ರಾಧಾಯಾಃ ಪೃಷ್ಠದೇಶೇ ಪ್ರಜಾಪತಿಃ।
ಸ್ಥಾಪಯಾಮಾಸ ಮಂತ್ರಾಂ ಸ್ತ್ರೀನ್ಪಾಠಯಾಮಾಸ ರಾಧಿಕಾಂ ॥ ೧೨೬ ॥

---

೧೨೨. ಮತ್ತು ವಿಧ್ಯುಕ್ತವಾಗಿ ತಾನೂ ಅಗ್ನಿಯಲ್ಲಿ ಹವನಮಾಡಿದನು. ಅನಂತರ ಬ್ರಹ್ಮನು ಶ್ರೀಕೃಷ್ಣರಾಧೆಯರಿಂದ ಅಗ್ನಿಗೆ ಅಭಿವಂದನೆಮಾಡಿಸಿದನು.

೧೨೩. ರಾಧಾಕೃಷ್ಣರಿಂದ ಅಗ್ನಿಗೆ ಏಳುಸುತ್ತು ಪ್ರದಕ್ಷಿಣೆಮಾಡಿಸಿ ಇಬ್ಬರ ಕೈಗಳಿಗೂ ಮಂಗಳಸೂತ್ರವನ್ನು ಕಟ್ಟಿದನು.

೧೨೪. ಅನಂತರ ಬ್ರಹ್ಮನು ಶ್ರೀಕೃಷ್ಣನಿಂದ ಅಗ್ನಿಗೆ ನಮಸ್ಕಾರಮಾಡಿಸಿ, ರಾಧಾದೇವಿಯ ಪ್ರಾಣಿಗ್ರಹಣಮಾಡುವಂತೆ ಶ್ರೀಕೃಷ್ಣನಿಗೆ ಹೇಳಿದನು

೧೨೫. ವೇದೋಕ್ತವಾದ ಏಳು ಮಂತ್ರಗಳನ್ನು ಶ್ರೀಕೃಷ್ಣನಿಂದ ಹೇಳಿಸಿ, ಆತನ ವಕ್ಷಃಸ್ಥಲದಲ್ಲಿ ರಾಧಾದೇವಿಯ ಹಸ್ತವನ್ನು ಇರಿಸುವಂತೆ ಹೇಳಿದನು.

೧೨೬. ಅಲ್ಲದೆ ಪ್ರಜಾಪತಿಯು ಶ್ರೀಕೃಷ್ಣನ ಹಸ್ತವನ್ನು ರಾಧಾದೇವಿಯ ಬೆನ್ನುಮೇಲೆ ಇರಿಸುವಂತೆ ಹೇಳಿ ರಾಧೆಯಿಂದ ಮೂರು ಮಂತ್ರಗಳನ್ನು ಹೇಳಿಸಿದನು.

ಪಾರಿಜಾತಪ್ರಸೂನಾನಾಂ ಮಾಲಾಂ ಜಾನುವಿಲಂಬಿತಾಂ ।
ಶ್ರೀಕೃಷ್ಣಸ್ಯ ಗಲೇ ಬ್ರಹ್ಮಾ ರಾಧಾದ್ವಾರಾ ದದೌ ಮುದಾ ॥ ೧೨೭ ॥

ಪ್ರಣಮಯ್ಯ ಪುನಃ ಕೃಷ್ಣಂ ರಾಧಾಂ ಚ ಕಮಲೋದ್ಭವಃ ।
ರಾಧಾಗಲೇ ಹರಿದ್ವಾರಾ ದದೌ ಮಾಲಾಂ ಮನೋಹರಾಂ ।
ಪುನಶ್ಚ ವಾಸಯಾವ : ಸ ಶ್ರೀಕೃಷ್ಣಂ ಕಮಲೋದ್ಭವಃ ॥ ೧೨೮ ॥

ತದ್ವಾಮಪಾರ್ಶ್ವೇ ರಾಧಾಂ ಚ ಸಸ್ಮಿತಾಂ ಕೃಷ್ಣಚೇತಸಾಂ ।
ಪುಟಾಂಜಲಿಂ ಕಾರಯಿತ್ವಾ ಮಾಧವಂ ರಾಧಿಕಾಂ ವಿಧಿಃ ॥ ೧೨೯ ॥

ಪಾಠಯಾಮಾಸ ವೇದೋಕ್ತಾನ್ಪಂಚ ಮಂತ್ರಾಂಶ್ಚ ನಾರದ ।
ಪ್ರಣಮಯ್ಯ ಪುನಃ ಕೃಷ್ಣಂ ಸಮರ್ಪ್ಯ ರಾಧಿಕಾಂ ವಿಧಿಃ ॥ ೧೩೦ ॥

---

೧೨೭. ಮತ್ತು ಜಾನುಪರ್ಯಂತ ನೇತಾಡುವ ಪಾರಿಜಾತಪುಷ್ಪದ ಮಾಲೆಯನ್ನು ಶ್ರೀಕೃಷ್ಣನ ಕಂಠದಲ್ಲಿ ರಾಧಾದೇವಿಯ ಹಸ್ತದಿಂದ ಬ್ರಹ್ಮನು ಹಾಕಿಸಿದನು.

೧೨೮. ಪುನಃ ರಾಧಾಕೃಷ್ಣರಿಂದ ಅಗ್ನಿಗೆ ಅಭಿವಾದನ ಮಾಡಿಸಿ ಶ್ರೀಹರಿಯಿಂದ ರಾಧೆಯ ಕಂಠಕ್ಕೆ ಮನೋಹರವಾದ ಮಾಲೆಯನ್ನು ಹಾಕಿಸಿದನು.

೧೨೯. ಅನಂತರ ಬ್ರಹ್ಮನು ಶ್ರೀಕೃಷ್ಣನನ್ನೂ ಅವನ ವಾಮಭಾಗದಲ್ಲಿ ಅನನ್ಯಮನಸ್ಕಳೂ ಸ್ಮಿತಮುಖಿಯೂ ಆದ ರಾಧೆಯನ್ನೂ ಕುಳ್ಳಿರಿಸಿ ಅವರಿಬ್ಬರನ್ನೂ ಕೈಮುಗಿದುಕೊಳ್ಳುವಂತೆ ಹೇಳಿದನು.

೧೩೦. ಎಲೈ ನಾರದನೇ, ವೇದೋಕ್ತವಾದ ಐದು ಮಂತ್ರಗಳನ್ನು ಹೇಳಿಸಿ ಬ್ರಹ್ಮನು ಶ್ರೀಕೃಷ್ಣನಿಂದ ಅಗ್ನಿಗೆ ನಮಸ್ಕಾರಮಾಡಿಸಿ ರಾಧೆಯನ್ನು ಅವನಿಗೆ ಸಮರ್ಪಿಸಿದನು.

ಕನ್ಯಕಾಂ ಚ ಯಥಾ ತಾತೋ ಭಕ್ತ್ಯಾ ತಸ್ಥೌ ಹರೇಃ ಪುರಃ ।
ಏತಸ್ಮಿನ್ನಂತರೇ ದೇವಾಃ ಸಾನಂದಪುಲಕೋದ್ಗಮಾಃ ॥ ೧೩೧ ॥

ದುಂದುಭಿಂ ವಾದಯಾಮಾಸುಶ್ಚಾನಕಂ ಮುರಜಾದಿಕಂ ।
ಪಾರಿಜಾತಪ್ರಸೂನಾನಾಂ ಪುಷ್ಪವೃಷ್ಟಿರ್ಬಭೂವ ಹ ॥ ೧೩೨ ॥

ಜಗುರ್ಗಂಧರ್ವಪ್ರವರಾ ನನೃತುಶ್ಚಾಪ್ಸರೋಗಣಾಃ ।
ತುಷ್ಟಾವ ಶ್ರೀಹರಿಂ ಬ್ರಹ್ಮಾ ತಮುವಾಚ ಹ ಸಸ್ಮಿತಃ ॥ ೧೩೩ ॥

ಯುವಯೋಶ್ಚರಣಾಂಭೋಜೇ ಭಕ್ತಿಂ ಮೇ ದೇಹಿ ದಕ್ಷಿಣಾಂ ।
ಬ್ರಹ್ಮಣೋ ವಚನಂ ಶ್ರುತ್ವಾ ತಮುವಾಚ ಹರಿಃ ಸ್ವಯಂ ॥ ೧೩೪ ॥

ಮದೀಯಚರಣಾಂಭೋಜೇ ಸುದೃಢಾ ಭಕ್ತಿರಸ್ತು ತೇ ।
ಸ್ವಸ್ಥಾನಂ ಗಚ್ಛ ಭದ್ರಂ ತೇ ಭವಿತಾ ನಾತ್ರ ಸಂಶಯಃ ॥ ೧೩೫ ॥

---

೧೩೧. ತಂದೆಯು ಮಗಳನ್ನು ದಾನಮಾಡುವಂತೆ ರಾಧೆಯನ್ನು ಶ್ರೀಕೃಷ್ಣನಿಗೆ ಸಮರ್ಪಿಸಿ ಬ್ರಹ್ಮನು ಭಕ್ತಿಯಿಂದ, ಮುಂದೆನಿಂತಿರಲು, ದೇವತೆಗಳೆಲ್ಲರೂ ನೋಡಿ ಆನಂದದಿಂದ ಪುಲಕಿತರಾದರು.

೧೩೨. ದೇವಲೋಕದಲ್ಲಿ ನಗಾರಿ, ಕಹಳೆ, ಮೃದಂಗ ಮುಂತಾದ ವಾದ್ಯಗಳು ಮೊಳಗಿದುವಲ್ಲದೆ ರಾಧಾಕೃಷ್ಣರ ಮೇಲುಭಾಗದಲ್ಲಿ ಪಾರಿಜಾತಪುಷ್ಪಗಳ ಮಳೆಯು ಕರೆಯಿತು.

೧೩೩. ಗಂಧರ್ವಶ್ರೇಷ್ಠರೆಲ್ಲರೂ ಮನೋಹರವಾಗಿ ಹಾಡಿದರು. ಅಪ್ಸರಸ್ತ್ರೀಯರೆಲ್ಲರೂ ನರ್ತನಮಾಡಿದರು ಅನಂತರ ಬ್ರಹ್ಮನು ಶ್ರೀಹರಿಯನ್ನು ಸ್ತುತಿಸಿ ಸ್ಮಿತವದನನಾಗಿ ಇಂತೆಂದನು.

೧೩೪. 'ನಿಮ್ಮಿಬ್ಬರ ಪಾದಕಮಲಗಳಲ್ಲಿ ಸ್ಥಿರವಾದ ಭಕ್ತಿಯನ್ನು ದಯಪಾಲಿಸಿದರೆ ನನಗೆ ದಕ್ಷಿಣೆ ಕೊಟ್ಟಂತಾಗುವುದು' ಎಂದ ಬ್ರಹ್ಮನ ಮಾತನ್ನು ಕೇಳಿ ಶ್ರೀಹರಿಯು ಇಂತೆಂದನು.

೧೩೫. ನನ್ನ ಚರಣಕಮಲಗಳಲ್ಲಿ ನಿನಗೆ ಸುದೃಢವಾದ ಭಕ್ತಿಯುಂಟಾಗಲಿ. ನಿನ್ನ ಸ್ಥಾನಕ್ಕೆ ನೀನು ಹೋಗು. ನಿನಗೆ ಮಂಗಳವುಂಟಾಗುವುದರಲ್ಲಿ ಸಂದೇಹವಿಲ್ಲ.

ಕನ್ಯಕಾಂ ಚ ಯಥಾ ತಾತೋ ಭಕ್ತ್ಯಾ ತಸ್ಥೌ ಹರೇಃ ಪುರಃ ।
ಕತಸ್ಮಿನ್ನಂತರೇ ದೇವಾಃ ಸಾನಂದಪುಲಕೋದ್ಗಮಾಃ ॥ ೧೩೧ ॥

ದುಂದುಭಿಂ ವಾದಯಾಮಾಸುಶ್ಚಾನಕಂ ಮುರಜಾದಿಕಂ ।
ಪಾರಿಜಾತಪ್ರಸೂನಾನಾಂ ಪುಷ್ಪವೃಷ್ಟಿರ್ಬಭೂವ ಹ ॥ ೧೩೨ ॥

ಜಗುರ್ಗಂಧರ್ವಪ್ರವರಾ ನನೃತುಶ್ಚಾಪ್ಸರೋಗಣಾಃ ।
ತುಷ್ಟಾವ ಶ್ರೀಹರಿಂ ಬ್ರಹ್ಮಾ ತಮುವಾಚ ಹ ಸಸ್ಮಿತಃ ॥ ೧೩೩ ॥

ಯುವಯೋಶ್ಚರಣಾಂಭೋಜೇ ಭಕ್ತಿಂ ಮೇ ದೇಹಿ ದಕ್ಷಿಣಾಂ ।
ಬ್ರಹ್ಮಣೋ ವಚನಂ ಶ್ರುತ್ವಾ ತಮುವಾಚ ಹರಿಃ ಸ್ವಯಂ ॥ ೧೩೪ ॥

ಮದೀಯಚರಣಾಂಭೋಜೇ ಸುದೃಢಾ ಭಕ್ತಿರಸ್ತು ತೇ ।
ಸ್ವಸ್ಥಾನಂ ಗಚ್ಛ ಭದ್ರಂ ತೇ ಭವಿತಾ ನಾತ್ರ ಸಂಶಯಃ ॥ ೧೩೫ ॥

---

೧೩೧. ತಂದೆಯು ಮಗಳನ್ನು ದಾನಮಾಡುವಂತೆ ರಾಧೆಯನ್ನು ಶ್ರೀಕೃಷ್ಣನಿಗೆ ಸಮರ್ಪಿಸಿ ಬ್ರಹ್ಮನು ಭಕ್ತಿಯಿಂದ, ಮುಂದೆನಿಂತಿರಲು, ದೇವತೆಗಳೆಲ್ಲರೂ ನೋಡಿ ಆನಂದದಿಂದ ಪುಲಕಿತರಾದರು.

೧೩೨. ದೇವಲೋಕದಲ್ಲಿ ನಗಾರಿ, ಕಹಳೆ, ಮೃದಂಗ ಮುಂತಾದ ವಾದ್ಯಗಳು ಮೊಳಗಿದುವಲ್ಲದೆ ರಾಧಾಕೃಷ್ಣರ ಮೇಲುಭಾಗದಲ್ಲಿ ಪಾರಿಜಾತಪುಷ್ಪಗಳ ಮಳೆಯು ಕರೆಯಿತು.

೧೩೩. ಗಂಧರ್ವಶ್ರೇಷ್ಠರೆಲ್ಲರೂ ಮನೋಹರವಾಗಿ ಹಾಡಿದರು. ಅಪ್ಸರಸ್ತ್ರೀಯರೆಲ್ಲರೂ ನರ್ತನಮಾಡಿದರು ಅನಂತರ ಬ್ರಹ್ಮನು ಶ್ರೀಹರಿಯನ್ನು ಸ್ತುತಿಸಿ ಸ್ಮಿತವದನನಾಗಿ ಇಂತೆಂದನು.

೧೩೪. 'ನಿಮ್ಮಿಬ್ಬರ ಪಾದಕಮಲಗಳಲ್ಲಿ ಸ್ಥಿರವಾದ ಭಕ್ತಿಯನ್ನು ದಯಪಾಲಿಸಿದರೆ ನನಗೆ ದಕ್ಷಿಣೆ ಕೊಟ್ಟಂತಾಗುವುದು' ಎಂದ ಬ್ರಹ್ಮನ ಮಾತನ್ನು ಕೇಳಿ ಶ್ರೀಹರಿಯು ಇಂತೆಂದನು.

೧೩೫. ನನ್ನ ಚರಣಕಮಲಗಳಲ್ಲಿ ನಿನಗೆ ಸುದೃಢವಾದ ಭಕ್ತಿಯುಂಟಾಗಲಿ. ನಿನ್ನ ಸ್ಥಾನಕ್ಕೆ ನೀನು ಹೋಗು. ನಿನಗೆ ಮಂಗಳವುಂಟಾಗುವುದರಲ್ಲಿ ಸಂದೇಹವಿಲ್ಲ.

ಮಯಾ ನಿಯೋಜಿತಂ ಕರ್ಮ ಕುರು ವತ್ಸ ಮಮಾಜ್ಞಯಾ ।
ಶ್ರೀಕೃಷ್ಣಸ್ಯ ವಚಃ ಶ್ರುತ್ವಾ ವಿಧಾತಾ ಜಗತಾಂ ಮುನೇ  ॥ ೧೩೬ ॥

ಪ್ರಣಮ್ಯ ರಾಧಾಂ ಕೃಷ್ಣಂ ಚ ಜಗಾಮ ಸ್ವಾಲಯಂ ಮುದಾ ।
ಗತೇ ಬ್ರಹ್ಮಣಿ ಸಾ ದೇವೀ ಸಸ್ಮಿತಾ ವಕ್ರಚಕ್ಷುಷಾ  ॥ ೧೩೭ ॥

ಸಾ ದದರ್ಶ ಹರೇರ್ವಕ್ತ್ರಂ ಚಚ್ಛಾದ ವ್ರೀಡಯಾ ಮುಖಂ ।
ಪುಲಕಾಂಕಿತಸರ್ವಾಂಗೀ ಕಾಮಬಾಣಪ್ರಪೀಡಿತಾ  ॥ ೧೩೮ ॥

ಪ್ರಣಮ್ಯ ಶ್ರೀಹರಿಂ ಭಕ್ತ್ಯಾ ಜಗಾಮ ಶಯನಂ ಹರೇಃ ।
ಚಂದನಾಗುರುಪಂಕಂ ಚ ಕಸ್ತೂರೀಕುಂಕುಮಾನ್ವಿತಂ  ॥ ೧೩೯ ॥

ಲಲಾಟೇ ತಿಲಕಂ ಕೃತ್ವಾ ದದೌ ಕೃಷ್ಣಸ್ಯ ವಕ್ಷಸಿ ।
ಸುಧಾಪೂರ್ಣಂ ರತ್ನಪಾತ್ರಂ ಮಧುಪೂರ್ಣಂ ಮನೋಹರಂ  ॥ ೧೪೦ ॥

---

೧೩೬–೧೩೭. 'ಎಲೈ ವತ್ಸನೇ, ನಾನು ನಿಯಮಿಸಿದ ಕಾರ್ಯವನ್ನು ನನ್ನ ಅಪ್ಪಣೆಯಂತೆ ಪರಿಪಾಲಿಸು'? ಈ ರೀತಿಯಾದ ಶ್ರೀಕೃಷ್ಣನ ಮಾತನ್ನು ಕೇಳಿ ಜಗದ್ವಿಧಾತೃವಾದ ಬ್ರಹ್ಮನು ರಾಧಾಕೃಷ್ಣರಿಗೆ ನಮಸ್ಕರಿಸಿ ಸಂತೋಷದಿಂದ ತನ್ನ ಮಂದಿರಕ್ಕೆ ತೆರಳಿದನು. ಬ್ರಹ್ಮನು ಹೊರಟುಹೋದನಂತರ ರಾಧಾದೇವಿಯು ಸ್ಮಿತಮುಖಿಯಾಗಿ ತನ್ನ ಕಟಾಕ್ಷದಿಂದ ಶ್ರೀಕೃಷ್ಣನನ್ನು ನೋಡಿದಳು.

೧೩೮. ಶ್ರೀಕೃಷ್ಣನ ಮುಖವನ್ನು ನೋಡಿ ಕಾಮಬಾಣಪೀಡಿತಳಾಗಿ ಲಜ್ಜೆಯಿಂದ ತನ್ನ ಮುಖವನ್ನು ಬಗ್ಗಿಸಿಕೊಂಡು ರೋಮಾಂಚಿತಶರೀರಳಾಗಿ ಕುಳಿತಳು.

೧೩೯. ಅನಂತರ ಶ್ರೀಹರಿಗೆ ಭಕ್ತಿಯಿಂದ ನಮಸ್ಕರಿಸಿ, ಚಂದನ, ಅಗುರು, ಕಸ್ತೂರಿ, ಮತ್ತು ಕುಂಕುಮಕೇಸರಿಗಳಿಂದ ಸುವಾಸಿತವಾದ ದಿವ್ಯಶಯನಕ್ಕೆ ತೆರಳಿದಳು.

೧೪೦. ಅಲ್ಲಿ ಶ್ರೀಹರಿಯ ಹಣೆಗೆ ತಿಲಕವಿಟ್ಟು, ವಕ್ಷಃಸ್ಥಲದಲ್ಲಿ ಅಮೃತಪೂರಿತವೂ, ಮನೋಹರವೂ ಆದ ಮಧುಪಾತ್ರೆಯನ್ನು ಇರಿಸಿದಳು.

ಪ್ರದದೌ ಹರಯೇ ಭಕ್ತ್ಯಾ ಬುಭುಜೇ ಜಗತೀಪತಿಃ ।
ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿಸುವಾಸಿತಂ ॥ ೧೪೧ ॥

ದದೌ ಕೃಷ್ಣಾಯ ಸಾ ರಾಧಾ ಸಾದರಂ ಬುಭುಜೇ ಹರಿಃ ।
ಚಖಾದ ಸಸ್ಮಿತಾ ರಾಧಾ ಹರಿದತ್ತಂ ಸುಧಾರಸಂ ॥ ೧೪೨ ॥

ತಾಂಬೂಲಂ ತೇನ ದತ್ತಂ ಚ ಬುಭುಜೇ ಪುರತೋ ಹರೇಃ ।
ಕೃಷ್ಣಶ್ಚರ್ವಿತತಾಂಬೂಲಂ ರಾಧಿಕಾಯೈ ಮುದಾ ದದೌ ॥ ೧೪೩ ॥

ಚಖಾದ ಪರಯಾ ಭಕ್ತ್ಯಾ ಪಪೌ ತನ್ಮುಖಪಂಕಜಂ ।
ರಾಧಾಚರ್ವಿತತಾಂಬೂಲಂ ಯಯಾಚೇ ಮಧುಸೂದನಃ ॥ ೧೪೪ ॥

ಜಹಾಸ ನ ದದೌ ರಾಧಾ ಕ್ಷಮೇತ್ಯುಕ್ತಂ ತಯಾ ಮುದಾ ।
ಚಂದನಾಗುರುಕಸ್ತೂರೀಚಂದನದ್ರವಮುತ್ತಮಂ ।
ರಾಧಿಕಾಯಾಶ್ಚ ಸರ್ವಾಂಗೇ ಪ್ರದದೌ ಮಾಧವಃ ಸ್ವಯಂ ॥ ೧೪೫ ॥

---

೧೪೧-೧೪೨. ರಾಧೆಯು ಭಕ್ತಿಯಿಂದ ಕೊಟ್ಟ ಮಧುವನ್ನು ಜಗತ್ಪತಿಯು ಪ್ರೀತಿಯಿಂದ ಪಾನಮಾಡಿದನು. ಅನಂತರ ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲವನ್ನು ರಾಧೆಯು ಕೊಡಲು, ಶ್ರೀಹರಿಯು ಅತ್ಯಾದರದಿಂದ ಸ್ವೀಕರಿಸಿದನು. ಅನಂತರ ರಾಧೆಯು ಶ್ರೀಹರಿಯು ಕೊಟ್ಟ ಅಮೃತರಸವನ್ನು ಸ್ಮಿತಮುಖಳಾಗಿ ಪಾನಮಾಡಿದಳು.

೧೪೩. ಶ್ರೀಕೃಷ್ಣನು ತಾನು ಚರ್ವಣ ಮಾಡಿದ ತಾಂಬೂಲವನ್ನು ಕೊಡಲು ರಾಧೆಯು ಪ್ರೀತಿಯಿಂದ ತೆಗೆದುಕೊಂಡು ಉಪಭೋಗಿಸಿದಳು

೧೪೪. ಈ ರೀತಿ ರಾಧೆಯು ಪರಮಭಕ್ತಿಯಿಂದ ತಾಂಬೂಲವನ್ನು ಸವಿಯುತ್ತಿರಲು, ಶ್ರೀಕೃಷ್ಣನು ರಾಧೆಯ ಅಧರಪಾನಮಾಡಿ ಆಕೆಯು ಚರ್ವಣ ಮಾಡಿದ ತಾಂಬೂಲವನ್ನು ಬೇಡಿದನು.

೧೪೫ ರಾಧೆಯಾದರೋ ನಕ್ಕು 'ಕ್ಷಮಿಸು' ಎಂದು ಹೇಳಿದಳೇ ಹೊರತು ತನ್ನ ಉಚ್ಛಿಷ್ಟವನ್ನು ಕೊಡಲಿಲ್ಲ. ಅನಂತರ ಮಾಧವನು ಚಂದನ, ಅಗುರು, ಕಸ್ತೂರಿ, ಮತ್ತು ಕುಂಕುಮಕೇಸರಿಗಳಿಂದ ಪರಿಮಳವಾದ ಲೇಪನದ್ರವ್ಯವನ್ನು ರಾಧೆಯ ಸರ್ವಾಂಗಗಳಿಗೂ ಲೇಪಿಸಿದನು.

ಯಃ ಕಾಮೋ ಧ್ಯಾಯತೇ ನಿತ್ಯಂ ಯಸ್ಯೈಕಚರಣಾಂಬುಜಂ ।
ಬಭೂವ ತಸ್ಯ ಸ ವಶೋ ರಾಧಾಸಂತೋಷಕಾರಣಾತ್ ॥ ೧೪೬ ॥

ಯದ್ಭೃತ್ಯಭೃತ್ಯೈರ್ಮದನೋ ಜಿತಃ ಸರ್ವಕ್ಷಣಂ ಮುನೇ ।
ಸ್ವೇಚ್ಛಾಮಯೋ ಹಿ ಭಗವಾಂಜಿತಸ್ತೇನ ಕುತೂಹಲಾತ್ ॥ ೧೪೭ ॥

ಕರೇ ಧೃತ್ವಾ ಚ ತಾಂ ಕೃಷ್ಣಃ ಸ್ಥಾಪಯಾಮಾಸ ವಕ್ಷಸಿ ।
ಚಕಾರ ಶಿಥಿಲಂ ವಸ್ತ್ರಂ ಚುಂಬನಂ ಚ ಚತುರ್ವಿಧಂ ॥ ೧೪೮ ॥

ಬಭೂವ ರತಿಯುದ್ಧೇನ ವಿಚ್ಛಿನ್ನಾ ಕ್ಷುದ್ರಘಂಟಿಕಾ ।
ಚುಂಬನೇನೌಷ್ಠರಾಗಶ್ಚ ಹ್ಯಾಶ್ಲೇಷೇಣ ಚ ಪತ್ರಕಂ ॥ ೧೪೯ ॥

ಶೃಂಗಾರೇಣೈವ ಕಬರೀ ಸಿಂಧೂರತಿಲಕಂ ಮುನೇ ।
ಜಗಾಮಾಲಕ್ತಕಾಂಕಶ್ಚ ವಿಪರೀತಾದಿಕೇನ ಚ ॥ ೧೫೦ ॥

---

೧೪೬. ಯಾವ ಪರಮಾತ್ಮನ ಚರಣಕಮಲಗಳನ್ನು ಪ್ರತಿದಿನವೂ ಎಡಬಿಡದೆ ಮನ್ಮಥನು ಧ್ಯಾನಮಾಡುವನೋ ಅಂಥ ಶ್ರೀಕೃಷ್ಣಪರಮಾತ್ಮನೇ ರಾಧೆಯ ಸಂತೋಷಕ್ಕಾಗಿ ಮನ್ಮಥನಿಗೆ ವಶನಾದನು.

೧೪೭. ಎಲೈ ನಾರದಮುನಿಯೇ, ಯಾವ ಪರಮಾತ್ಮನ ಭೃತ್ಯರ ಭೃತ್ಯರಿಂದಲೂ ಕೂಡ ಯಾವ ಮನ್ಮಥನು ಜಿತನಾಗಿದ್ದನೋ ಅಂಥ ಸ್ವೇಚ್ಛಾಮಯನಾದ ಪರಮಾತ್ಮನೇ ಈಗ ಕುತೂಹಲಕ್ಕಾಗಿ ಮನ್ಮಥನಿಂದ ಜಿತನಾದನು.

೧೪೮ ಕೂಡಲೇ ರಾಧೆಯನ್ನು ಕೈಯ್ಯಲ್ಲಿ ಹಿಡಿದೆಳೆದು ವಕ್ಷಃಸ್ಥಲದಲ್ಲಿ ಆಲಿಂಗಿಸಿಕೊಂಡನು. ಅನಂತರ ನಾಲ್ಕು ರೀತಿಯಲ್ಲಿ ಚುಂಬನಮಾಡಿ ಆಕೆಯ ವಸ್ತ್ರವನ್ನು ಶಿಥಿಲಗೊಳಿಸಿದನು.

೧೪೯. ಅವರ ಅನ್ಯೋನ್ಯವಾದ ರತಿಯುದ್ಧದಿಂದ ರಾಧೆಯ ಡಾಬಿನ ಸಣ್ಣ ಗೆಜ್ಜೆಗಳೂ, ಚುಂಬನದಿಂದ ಕೆಳತುಟಿಯ ರಾಗವೂ, ಆಲಿಂಗನದಿಂದ ಮಕರಿಕಾದಿ ಪತ್ರಗಳೂ ಶಿಥಿಲವಾದವು.

೧೫೦. ವಿಪರೀತರತಾದಿ ಶೃಂಗಾರ ಸುಖಗಳಿಂದ ರಾಧೆಯ ಹೆರಳೂ, ಸಿಂಧೂರದ ತಿಲಕವೂ, ಅಲಕ್ತಕ ರಾಗವೂ ಶಿಥಿಲವಾದವು.

ಪುಲಕಾಂಕಿತಸರ್ವಾಂಗೀ ಬಭೂವ ನವಸಂಗಮಾತ್ ।
ಮೂರ್ಛಾಮವಾಪ ಸಾ ರಾಧಾ ಬುಬುಧೇ ನ ದಿವಾನಿಶಂ ॥ ೧೫೧ ॥

ಪ್ರತ್ಯಂಗೇನೈವ ಪ್ರತ್ಯಂಗಮಂಗೇನಾಂಗಂ ಸಮಾಶ್ಲಿಷತ್ ।
ಶೃಂಗಾರಾಷ್ಟವಿಧಂ ಕೃಷ್ಣಶ್ಚಕಾರ ಕಾಮಶಾಸ್ತ್ರವಿತ್ ॥ ೧೫೨ ॥

ಪುನಸ್ತಾಂ ಚ ಸಮಾಶ್ಲಿಷ್ಯ ಸಸ್ಮಿತಾಂ ವಕ್ರಲೋಚನಾಂ ।
ಕ್ಷತವಿಕ್ಷತಸರ್ವಾಂಗೀಂ ನಖದಂತೈಶ್ಚಕಾರ ಹ ॥ ೧೫೩ ॥

ಕಂಕಣಾನಾಂ ಕಿಂಕಿಣೀನಾಂ ಮಂಜೀರಾಣಾಂ ಮನೋಹರಃ ।
ಬಭೂವ ಶಬ್ದಸ್ತತ್ರೈವ ಶೃಂಗಾರಸಮರೋದ್ಭವಃ ॥ ೧೫೪ ॥

ಪುನಸ್ತಾಂ ಚ ಸಮಾಕೃಷ್ಯ ಶಯ್ಯಾಯಾಂ ಚ ನಿವೇಶ್ಯ ಚ ।
ಚಕಾರ ರಹಿತಾಂ ರಾಧಾಂ ಕಬರೀಬಂಧವಾಸಸಾ ॥ ೧೫೫ ॥

---

೧೫೧. ಆ ರೀತಿಯಾದ ನವಸಂಗಮದಿಂದ ರಾಧೆಯು ರೋಮಾಂಚಿತ ಶರೀರಳಾಗಿ ಮೂರ್ಛೆಗೊಂಡು ಹಗಲು ರಾತ್ರಿಗಳು ಕಳೆದುದನ್ನು ತಿಳಿಯದಾದಳು.

೧೫೨. ಅನ್ಯೋನ್ಯವಾಗಿ ತಮ್ಮ ಪ್ರತಿಯೊಂದು ಅವಯವದಿಂದಲೂ, ಪರಸ್ಪರಾಲಿಂಗನೆ ಮಾಡಿಕೊಂಡರು. ಕಾಮಶಾಸ್ತ್ರವಿಶಾರದನಾದ ಶ್ರೀಕೃಷ್ಣನು ಎಂಟು ವಿಧ ಶೃಂಗಾರಸುಖವನ್ನನುಭವಿಸಿದನು

೧೫೩ ಚಂಚಲಾಕ್ಷಿಯೂ, ಸ್ಮಿತಮುಖಿಯೂ ಆದ ಆ ರಾಧಾದೇವಿಯನ್ನು ಪುನಃ ಆಲಿಂಗಿಸಿಕೊಂಡು ಆಕೆಯ ಸರ್ವಾಂಗಗಳಲ್ಲೂ ದಂತಕ್ಷತ ನಖಕ್ಷತಾದಿಗಳನ್ನು ಮಾಡಿದನು.

೧೫೪. ಆ ಶೃಂಗಾರಯುದ್ಧದಲ್ಲಿ ರಾಧೆಯ, ಕೈಬಳೆ ಡಾಬು, ಮತ್ತು ನೂಪುರಗಳ ಗಂಭೀರವೂ ಮನೋಹರವೂ ಆದ ಧ್ವನಿಯು ಕೇಳಿಬರುತ್ತಿತ್ತು.

೧೫೫. ಪುನಃ ಕೃಷ್ಣನು ರಾಧೆಯನ್ನು ಹಿಡಿದೆಳೆದು ಹಾಸಿಗೆಯಲ್ಲಿ ಮಲಗಿಸಿ ಆಕೆಯ ಕಬರೀಬಂಧನವನ್ನೂ ಉಟ್ಟ ಬಟ್ಟೆಯನ್ನೂ ಸಡಿಲಿಸಿದನು.

ನಿರ್ಜನೇ ಕೌತುಕಾತ್ಕೃಷ್ಣಃ ಕಾಮಶಾಸ್ತ್ರವಿಶಾರದಃ ।
ಚೂಡಾವೇಷಾಂಶುಕೈರ್ಹೀನಂ ಚಕಾರ ತಂ ಚ ರಾಧಿಕಾ ॥ ೧೫೬ ॥

ನ ಕಸ್ಯ ಕಸ್ಮಾದ್ಧಾನಿಶ್ಚ ತೌ ದ್ವೌ ಕಾರ್ಯವಿಶಾರದೌ ।
ಜಗ್ರಾಹ ರಾಧಾಹಸ್ತಾತ್ತು ಮಾಧವೋ ರತ್ನದರ್ಪಣಂ ॥ ೧೫೭ ॥

ಮುರಲೀಂ ಮಾಧವಕರಾಜ್ಜಗ್ರಾಹ ರಾಧಿಕಾ ಬಲಾತ್ ।
ಚಿತ್ತಾಪಹಾರಂ ರಾಧಾಯಾಶ್ಚಕಾರ ಮಾಧವೋ ಬಲಾತ್ ॥ ೧೫೮ ॥

ಜಹಾರ ರಾಧಿಕಾ ರಾಸಾನ್ಮಾಧವಸ್ಯಾಪಿ ಮಾನಸಂ ।
ನಿವೃತ್ತೇ ಕಾಮಯುದ್ಧೇ ಚ ಸಸ್ಮಿತಾ ವಕ್ರಲೋಚನಾ ॥ ೧೫೯ ॥

ಪ್ರದದೌ ಮುರಲೀಂ ಪ್ರೀತ್ಯಾ ಶ್ರೀಕೃಷ್ಣಾಯ ಮಹಾತ್ಮನೇ ।
ಪ್ರದದೌ ದರ್ಪಣಂ ಕೃಷ್ಣಃ ಕ್ರೀಡಾಕಮಲಮುಜ್ಜ್ವಲಂ ॥ ೧೬೦ ॥

---

೧೫೬. ನಿರ್ಜನಪ್ರದೇಶದಲ್ಲಿ ಕಾಮಶಾಸ್ತ್ರವಿಶಾರದನಾದ ಶ್ರೀಕೃಷ್ಣನ ವಸ್ತ್ರಗಳನ್ನೂ ಚೂಡಾಪಾಶದಲ್ಲಿದ್ದ ನವಲುಗರಿಯನ್ನೂ ರಾಧೆಯು ಸಡಿಲಿಸಿದಳು.

೧೫೭ ಅವರಿಬ್ಬರೂ ಕಾಮಶಾಸ್ತ್ರವಿಶಾರದರಾಗಿದ್ದುದರಿಂದ ಯಾರೂ ಯಾರಿಗೂ ಸೋಲಲಿಲ್ಲ. ಅನಂತರ ರಾಧೆಯ ಕೈಯಿಂದ ಮಾಧವನು ರತ್ನಗನ್ನಡಿಯನ್ನು ತೆಗೆದುಕೊಂಡನು.

೧೫೮. ರಾಧೆಯು ಮಾಧವನ ಕೈಯಿಂದ ಕೊಳಲನ್ನು ಬಲಾತ್ಕಾರದಲ್ಲಿ ಕಿತ್ತುಕೊಂಡಳು ಇತ್ತ ಕೃಷ್ಣನು ರಾಧೆಯ ಚಿತ್ತವನ್ನು ಸೂರೆಗೊಂಡನು.

೧೫೯. ರಾಧೆಯೂ ಕೂಡ ತನ್ನ ರಾಸಕ್ರೀಡೆಯಿಂದ ಮಾಧವನ ಮನಸ್ಸನ್ನು ಅಪಹರಿಸಿದಳು. ಕಾಮಯುದ್ಧವು ಮುಗಿದನಂತರ ರಾಧೆಯು ಸ್ಮಿತಮುಖದಿಂದಲೂ, ವಕ್ರಕಟಾಕ್ಷದಿಂದಲೂ ಕೃಷ್ಣನ ಮುಖವನ್ನು ನೋಡುತ್ತ ಕುಳಿತಳು.

೧೬೦. ಅನಂತರ ಮಹಾತ್ಮನಾದ ಶ್ರೀಕೃಷ್ಣನ ಪ್ರೀತಿಗೆ ವರವಶಳಾಗಿ ರಾಧೆಯು ಅವನ ಕೊಳಲನ್ನು ಹಿಂದಕ್ಕೆ ಕೊಡಲು, ಶ್ರೀಕೃಷ್ಣನೂ ಕೂಡ ಆಕೆಯ ಕ್ರೀಡಾಕಮಲವನ್ನೂ, ರತ್ನಗನ್ನಡಿಯನ್ನೂ ಹಿಂದಕ್ಕೆ ಕೊಟ್ಟನು.

ಚಕಾರ ಕಬರೀಂ ರಮ್ಯಾಂ ಸಿಂಧೂರತಿಲಕಂ ದದೌ ।
ವಿಚಿತ್ರಪತ್ರಕಂ ವೇಷಂ ಚಕಾರೈವಂವಿಧಂ ಹರಿಃ ॥ ೧೬೧ ॥

ವಿಶ್ವಕರ್ಮಾ ನ ಜಾನಾತಿ ಸಖೀನಾಮಪಿ ಕಾ ಕಥಾ ।
ವೇಷಂ ವಿಧಾತುಂ ಕೃಷ್ಣಸ್ಯ ಯದಾ ರಾಧಾ ಸಮುದ್ಯತಾ ॥ ೧೬೨ ॥

ಬಭೂವ ಶಿಶುರೂಪಂ ಚ ಕೈಶೋರಂ ಚ ವಿಹಾಯ ಚ ।
ದದರ್ಶ ಬಾಲರೂಪಂ ತಂ ರುದಂತಂ ಪೀಡಿತಂ ಕ್ಷುಧಾ ॥ ೧೬೩ ॥

ಯಾದೃಶಂ ಪ್ರದದೌ ನಂದೋ ಭೀತಂ ತಾದೃಶಮಚ್ಯುತಂ ।
ವಿನಿಶ್ವಸ್ಯ ಚ ಸಾ ರಾಧಾ ಹೃದಯೇನ ವಿದೂಯತಾ ॥ ೧೬೪ ॥

ಇತಸ್ತತಸ್ತಂ ಪಶ್ಯಂತೀ ಶೋಕಾರ್ತಾ ವಿರಹಾತುರಾ ।
ಉವಾಚ ಕೃಷ್ಣಮುದ್ದಿಶ್ಯ ಕಾಕೂಕ್ತಿಮಿತಿ ಕಾತರಾ ॥ ೧೬೫ ॥

---

೧೬೧. ಅಲ್ಲದೆ ರಾಧೆಗೆ ರಮ್ಯವಾದ ಹೆರಳನ್ನು ಹಾಕಿ, ಸಿಂದೂರದ ತಿಲಕವನ್ನಿಟ್ಟು, ವಿಚಿತ್ರವಾದ ಮಕರಿಕಾದಿ ಪತ್ರಗಳನ್ನು ರಚಿಸಿ ಮನಮೋಹಕಳನ್ನಾಗಿ ಮಾಡಿದನು

೧೬೨–೧೬೩. ಆ ಶಿಲ್ಪಚಾತುರ್ಯವು ವಿಶ್ವಕರ್ಮನಿಗೇ ತಿಳಿಯದೆಂದ ಮೇಲೆ ಇತರ ಸಖಿಯರ ಪಾಡೇನು? ಅನಂತರ ಶ್ರೀಕೃಷ್ಣನಿಗೆ ಅಲಂಕಾರ ಮಾಡಬೇಕೆಂದು ರಾಧೆಯು ಮೊದಲಿಟ್ಟಾಗ ಕೃಷ್ಣನು ಪ್ರಾಯದ ವಯಸ್ಸನ್ನು ತ್ಯಜಿಸಿ ಶಿಶುರೂಪನಾಗಿ ಹಸಿವಿನಿಂದ ಅಳಲಾರಂಭಿಸಿದನು.

೧೬೪. ನಂದನು ಯಾವರೀತಿ ಭಯಭೀತನಾದ ಶಿಶುವನ್ನು ರಾಧೆಗೆ ಕೊಟ್ಟಿದ್ದನೋ ಆ ಶಿಶುರೂಪವನ್ನು ಅಚ್ಯುತನು ಧರಿಸಲು ರಾಧೆಯು ನಿಟ್ಟುಸಿರು ಬಿಟ್ಟು ಗೋಳಾಡಲಾರಂಭಿಸಿದಳು.

೧೬೫. ವಿರಹಪೀಡಿತಳಾಗಿ, ದುಃಖಾವೇಶಭರಿತಳಾಗಿ ಅತ್ತಿತ್ತ ಶ್ರೀಕೃಷ್ಣನನ್ನು ಹುಡುಕುತ್ತ ಎಲ್ಲೂ ಕಾಣದೆ ಶ್ರೀಕೃಷ್ಣನನ್ನು ಕುರಿತು, ಮುಂದೆ ಹೇಳುವ ಕಾಕು ವಚನಗಳನ್ನು ಹೇಳಿದಳು.

ಮಾಯಾಂ ಕರೋಷಿ ಮಾಯೇಶ ಕಿಂಕರೀಂ ಕಥಮೀದೃಶೀಂ ।
ಇತ್ಯೇವಮುಕ್ತ್ವಾ ಸಾ ರಾಧಾ ಪಪಾತ ಚ ರುರೋದ ಚ ॥ ೧೬೬ ॥

ರುರೋದ ಕೃಷ್ಣಸ್ತತ್ರೈವ ವಾಗ್ಬಭೂವಾಶರೀರಿಣೀ ।
ಕಥಂ ರೋದಿಷಿ ರಾಧೇ ತ್ವಂ ಸ್ಮರ ಕೃಷ್ಣಪದಾಂಬುಜಂ ॥ ೧೬೭ ॥

ಆರಾಸಮಂಡಲಂ ಯಾವನ್ನಕ್ತಮಕ್ರಾಗಮಿಷ್ಯತಿ ।
ಕರಿಷ್ಯಸಿ ರತಿಂ ನಿತ್ಯಂ ಹರಿಣಾ ಸಾರ್ಧಮೀಪ್ಸಿತಾಂ ॥ ೧೬೮ ॥

ಛಾಯಾಂ ವಿಹಾಯ ಸ್ವಗೃಹೇ ಸ್ವಯಮಾಗತ್ಯ ಮಾ ರುದ ।
ಕೃತ್ವಾ ಕ್ರೋಡೇ ಚ ಪ್ರಾಣೇಶಂ ಮಾಯೇಶಂ ಬಾಲರೂಪಿಣಂ ॥ ೧೬೯ ॥

ತ್ಯಜ ಶೋಕಂ ಗೃಹಂ ಗಚ್ಛ ಸುಂದರೀತ್ಥಂ ಪ್ರಬೋಧಿತಾ ।
ಶ್ರುತ್ವೈವಂ ವಚನಂ ರಾಧಾ ಕೃತ್ವಾ ಕ್ರೋಡೇ ಚ ಬಾಲಕಂ ॥ ೧೭೦ ॥

---

೧೬೬. 'ಎಲೈ ಮಾಯಾಧೀಶನೇ, ಸೇವಕಳಾದ ನನ್ನಲ್ಲೇಕೆ ನಿನ್ನ ಮಾಯಾಜಾಲವನ್ನು ಎಸೆಯುವೆ' ಎಂದು ಹೇಳಿ, ರಾಧೆಯು ಅಳುತ್ತ ಭೂಮಿಯ ಮೇಲೆ ಬಿದ್ದಳು.

೧೬೭. ಶಿಶುರೂಪನಾದ ಕೃಷ್ಣನೂ ಅಲ್ಲಿಯೇ ಅಳುತ್ತಿದ್ದನು. ಆಗ 'ಎಲೌ ರಾಧೆಯೇ, ನೀನೇಕೆ ಅಳುವೆ, ಶ್ರೀಕೃಷ್ಣನ ಪಾದಕಮಲಗಳನ್ನು ಸ್ಮರಿಸಿಕೋ ಎಂದು ಅಶರೀರ ವಾಣಿಯಾಯಿತು.

೧೬೮. ಪ್ರತಿದಿನವೂ ರಾಸಮಂಡಲಕ್ಕೆ ರಾತ್ರಿಯ ಹೊತ್ತು ತಪ್ಪದೆ ಶ್ರೀಕೃಷ್ಣನು ಬರುವನು. ನೀನು ಶ್ರೀಹರಿಯೊಡನೆ ಅಭೀಪ್ಸಿತವಾದ ರತಿಸುಖವನ್ನು ಅನುಭವಿಸುವೆ.

೧೬೯ ಶ್ರೀಹರಿಯು ತನ್ನ ಛಾಯೆಯನ್ನು ಮನೆಯಲ್ಲಿ ಬಿಟ್ಟು ಸ್ವತಃ ತಾನೇ ಇಲ್ಲಿಗೆ ಬರುವನು. ಅಳಬೇಡ' ಎಂದ ಮಾತನ್ನು ಕೇಳಿ ರಾಧೆಯು ಮಾಯೇಶನೂ, ಬಾಲರೂಪಿಯೂ ಆದ ಕೃಷ್ಣನನ್ನು ಎತ್ತಿ ಅಪ್ಪಿಕೊಂಡಳು.

೧೭೦. 'ಎಲೌ ಸುಂದರಿಯೇ, ಶೋಕವನ್ನು ತ್ಯಜಿಸಿ, ಮನೆಗೆ ಹೋಗು' ಎಂಬ ಅಶರೀರವಾಣಿಯನ್ನು ಕೇಳಿ ಬಾಲಕನನ್ನೆತ್ತಿಕೊಂಡು ಮನೆಯ ಕಡೆಗೆ ಹೊರಟಳು.

ದದರ್ಶ ಪುಷ್ಪೋದ್ಯಾನಂ ಚ ವನಂ ಸದ್ರತ್ನಮಂಡಲಂ ।
ತೂರ್ಣಂ ವೃಂದಾವನಾದ್ರಾಧಾ ಜಗಾಮ ನಂದಮಂದಿರಂ ॥ ೧೭೧ ॥

ಸಾ ಮನೋಯಾಯಿನೀ ದೇವೀ ನಿಮಿಷಾರ್ಧೇನ ನಾರದ ।
ಸಂಸಿಕ್ತಸ್ನಿಗ್ಧಮಧುರರಸನಾರಕ್ತಲೋಚನಾ ॥ ೧೭೨ ॥

ಯಶೋದಾಯೈ ಶಿಶುಂ ದಾತುಮುದ್ಯತಾ ಸೇತ್ಯುವಾಚ ಹ ।
ಗೃಹೀತ್ವೈವಂ ಶಿಶುಂ ಸ್ಥೂಲಂ ರುದಂತಂ ಚ ಕ್ಷುಧಾತುರಂ ॥ ೧೭೩ ॥

ಗೋಷ್ಠೇ ತ್ವತ್ಸ್ವಾಮಿನಾ ದತ್ತಂ ಪ್ರಾಪ್ನೋಮಿ ಯಾತನಾಂ ಪಥಿ ।
ಸಂಸಿಕ್ತಂ ವಸನಂ ವತ್ಸೇ ಮೇಘಾಚ್ಛನ್ನೇಽತಿದುರ್ದಿನೇ ॥ ೧೭೪ ॥

ಪಿಚ್ಛಿಲೇ ಕರ್ದಮೋದ್ರೇಕೇ ಯಶೋದಾ ವೋಢುಮಕ್ಷಮಾ ।
ಗೃಹಾಣ ಬಾಲಕಂ ಭದ್ರೇ ಸ್ತನಂ ದತ್ವಾ ಪ್ರಬೋಧಯ ॥ ೧೭೫ ॥

---

೧೭೧. ದಾರಿಯಲ್ಲಿ ರತ್ನಮಂಡಪದಿಂದ ಮನೋಹರವಾಗಿರುವ ಪುಷ್ಪೋದ್ಯಾನವನ್ನು ನೋಡುತ್ತ ವೃಂದಾವನದ ಮಾರ್ಗವಾಗಿ ರಾಧೆಯು ನಂದನ ಮಂದಿರಕ್ಕೆ ತೆರಳಿದಳು.

೧೭೨. ಎಲೈ ನಾರದನೇ, ಮನೋವೇಗದಲ್ಲಿ ಹೋಗಬಲ್ಲ ಆ ದೇವಿಯು ಅರ್ಧನಿಮಿಷಮಾತ್ರದಲ್ಲಿಯೇ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಮಧುರವಾದ ನಾಲಗೆಯಲ್ಲಿ ನೀರನ್ನು ಸುರಿಸುತ್ತ ಹೊರಟಳು.

೧೭೩. ಯಶೋದೆಗೆ ಶಿಶುವನ್ನು ಕೊಡಲು ಹೋದಾಗ ಆಕೆಯು ಇಂತೆಂದಳು. 'ಹಸಿವಿನಿಂದ ಬಳಲಿ ಅಳುತ್ತಿರುವ ಈ ಸ್ಥೂಲಶಿಶುವನ್ನು ಎತ್ತಿಕೊಂಡು ಸಮಾಧಾನ ಮಾಡು.

೧೭೪. ಗೋವುಗಳಿರುವ ಸ್ಥಾನದಲ್ಲಿ ನಿನ್ನ ಪತಿಯು ಈ ಶಿಶುವನ್ನು ಕೊಟ್ಟಾಗ ಇದನ್ನು ಎತ್ತಿಕೊಂಡು ಹೋಗಲು ಕಷ್ಟಪಟ್ಟೆ. ಆಕಾಶವು ಮೇಘಾವೃತವಾಗಿ ದುರ್ದಿನವಾಗಿದ್ದರಿಂದ ಶಿಶುವಿನ ವಸ್ತ್ರವೆಲ್ಲ ನೆನೆದುಹೋಗಿದೆ'

೧೭೫. ಎಂದು ಹೇಳಿ ಕೊಡಲು, ಯಶೋದೆಯು ಮಳೆಯಿಂದ ಕೆಸರಾಗಿರುವ ಮಾರ್ಗದಲ್ಲಿಯೇ ಶಿಶುವನ್ನೆತ್ತಿಕೊಂಡು ಹೋಗಿ ಸ್ತನ್ಯಪಾನಮಾಡಿಸಿ ಎಚ್ಚರಗೊಳಿಸಿದಳು.

**ಗೃಹಂ ಚಿರಂ ಪರಿತ್ಯಕ್ತ್ವಂ ಯಾಮಿ ತಿಷ್ಠ ಸುಖಂ ಸತಿ ।**
**ಇತ್ಯುಕ್ತ್ವಾ ಬಾಲಕಂ ದತ್ವಾ ಜಗಾಮ ಸ್ವಗೃಹಂ ಪ್ರತಿ　　　॥ ೧೭೬ ॥**

**ಯಶೋದಾ ಬಾಲಕಂ ನೀತ್ವಾ ಚುಚುಂಬ ಚ ಸ್ತನಂ ದದೌ ।**
**ಬಹಿರ್ನಿವಿಷ್ಟಾ ಸಾ ರಾಧಾ ಸ್ವಗೃಹೇ ಗೃಹಕರ್ಮಣಿ　　　॥ ೧೭೭ ॥**

**ನಿತ್ಯಂ ನಕ್ತಂ ರತಿಂ ತತ್ರ ಚಕಾರ ಹರಿಣಾ ಸಹ ।**
**ಇತ್ಯೇವಂ ಕಥಿತಂ ವತ್ಸ ಶ್ರೀಕೃಷ್ಣಚರಿತಂ ಶುಭಂ ।**
**ಸುಖದಂ ಮೋಕ್ಷದಂ ಪುಣ್ಯಮಪರಂ ಕಥಯಾಮಿ ತೇ　　　॥ ೧೭೮ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ**
**ನಾರಾಯಣನಾರದಸಂವಾದೇ ರಾಧಾಕೃಷ್ಣವಿವಾಹ-**
**ನವಸಂಗಮಪ್ರಸ್ತಾವೋ ನಾಮ**
**ಪಂಚದಶೋಽಧ್ಯಾಯಃ**

---

೧೭೬. ಇತ್ತ ರಾಧೆಯು 'ನಾನು ಮನೆಯನ್ನು ಬಿಟ್ಟು ಬಹಳ ಹೊತ್ತಾಯಿತು. ಹೋಗುತ್ತೇನೆ, ನೀನು ಸುಖವಾಗಿರು' ಎಂದು ಹೇಳಿ ಶಿಶುವನ್ನು ಕೊಟ್ಟು ತನ್ನ ಮನೆಗೆ ಹೊರಟುಹೋದಳು.

೧೭೭. ಯಶೋದೆಯು ಬಾಲಕನನ್ನೆತ್ತಿಕೊಂಡು ಚುಂಬಿಸಿ, ಸ್ತನ್ಯಪಾನ ಮಾಡಿಸಿದಳು. ಇತ್ತ ರಾಧೆಯು ತನ್ನ ಮನೆಗೆ ಹೋಗಿ ತನ್ನ ಕೆಲಸದಲ್ಲಿ ನಿರತಳಾದಳು.

೧೭೮. ಅನಂತರ ಪ್ರತಿದಿನವೂ ರಾತ್ರಿಯ ಹೊತ್ತು ರಾಧೆಯು ಶ್ರೀಹರಿಯೊಡನೆ ರತಿಕ್ರೀಡೆಯಾಡುತ್ತಿದ್ದಳು. ಎಲೈ ನಾರದನೇ, ಈ ರೀತಿ ಶುಭಕರವೂ, ಪುಣ್ಯ ಮತ್ತು ಮೋಕ್ಷದಾಯಕವೂ ಆದ ಶ್ರೀಕೃಷ್ಣನ ಚರಿತ್ರೆಯನ್ನು ಹೇಳಿದೆನು. ಇನ್ನೂ ಮುಂದಕ್ಕೆ ಹೇಳುತ್ತೇನೆ.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ರಾಧಾಕೃಷ್ಣರ ವಿವಾಹ ಮತ್ತು ನವಸಂಗಮ ಪ್ರಸ್ತಾವರೂಪವಾದ ಹದಿನೈದನೆಯ ಅಧ್ಯಾಯವು ಮುಗಿದುದು.



## ಹದಿನೈದನೆಯ ಅಧ್ಯಾಯದ ಸಾರಾಂಶವು

ಒಮ್ಮೆ ನಂದಗೋಪನು ಶಿಶುವಾದ ಶ್ರೀಕೃಷ್ಣನನ್ನು ತನ್ನೊಡನೆ ಕರೆದು ಕೊಂಡು, ಬೃಂದಾವನದಲ್ಲಿ ಗೋವುಗಳನ್ನು ಮೇಯಿಸುತ್ತಿದ್ದನು ಆಗ ಶ್ರೀಕೃಷ್ಣನು ತನ್ನ ಮಾಯಾಬಲದಿಂದ ಆಕಾಶವನ್ನು ಮೇಘಜಾಲದಿಂದ ತುಂಬಿ ಮಳೆಗರೆಸ ಲಾರಂಭಿಸಿದನು ಇದನ್ನು ನೋಡಿ 'ಶಿಶುವು ಮಳೆಯಲ್ಲಿ ನೆನೆಯುವುದೆಂದು' ನಂದಗೋಪನು ಭೀತನಾಗಿರಲು ಆ ಸಮಯಕ್ಕೆ ಸರಿಯಾಗಿ ರಾಧೆಯು ಸುಂದರವಾದ ವೇಷಗಳಿಂದ ಭೂಷಿತಳಾಗಿ ಅಲ್ಲಿಗೆ ಬಂದಳು. ರಾಧೆಯ ಜನ್ಮವೃತ್ತಾಂತವನ್ನರಿತ ನಂದಗೋಪನು 'ನಿನ್ನ ಪ್ರಾಣಕಾಂತನನ್ನು ಕರೆದುಕೋ' ಎಂದು ಹೇಳಿ ರಾಧೆಯ ಕೈಗೆ ಆ ಶಿಶುವನ್ನು ಕೊಟ್ಟನು. ರಾಧೆಯು ತನ್ನ ವೃತ್ತಾಂತವನ್ನು ಗೋಪ್ಯವಾಗಿಡ ಬೇಕೆಂದು ನಂದಗೋಪನಿಗೆ ಹೇಳಿ ಅವನಿಗೆ ಅಭೀಪ್ಸಿತವಾದ ವರವನ್ನು ಕೊಟ್ಟು ಶ್ರೀಕೃಷ್ಣನೊಡನೆ ರಾಸಮಂಡಲಕ್ಕೆ ತೆರಳಿದಳು. ಅಲ್ಲಿ ಶ್ರೀಕೃಷ್ಣನು ನವಯೌವನ ಸಂಪನ್ನನಾಗಿ ರತ್ನಪರ್ಯಂಕದಲ್ಲಿ ಮಂಡಿಸಿದನು ಆ ಸಮಯಕ್ಕೆ ಸರಿಯಾಗಿ ಚತುರ್ಮುಖಬ್ರಹ್ಮನು ಅಲ್ಲಿಗೆ ಬಂದು ಆ ರಾಧಾಕೃಷ್ಣರ ಮಹಿಮೆಯನ್ನು ಕೊಂಡಾಡಿ ಅವರಿಗೆ ಅಗ್ನಿಸಾಕ್ಷಿಯಾಗಿ ವಿವಾಹಮಾಡಿಸಿದನು. ಅನಂತರ ಆ ರಾಧಾಕೃಷ್ಣರು ಯಥೇಚ್ಛವಾಗಿ ರತಿಸುಖವನ್ನು ಅನುಭವಿಸಿದರು. ಈ ರೀತಿ ಬಹಳಕಾಲ ರತಿಸುಖ ವನ್ನು ಅನುಭವಿಸಿದನಂತರ ಶ್ರೀಕೃಷ್ಣನು ಇದ್ದಕ್ಕಿಂದ್ದಂತೆಯೇ ಶಿಶುರೂಪವನ್ನು ತಾಳಿ ಅಳುತ್ತ ಮಲಗಿರಲು, ರಾಧೆಯು (ಯುವಕನಾದ) ಶ್ರೀಕೃಷ್ಣನನ್ನು ಕಾಣದೆ ಗೋಳಾಡಲಾರಂಭಿಸಿದಳು. ಆಗ 'ನೀನು ಭಕ್ತಿಯಿಂದ ಶ್ರೀಕೃಷ್ಣನ ಪಾದಕಮಲ ಗಳನ್ನು ಸ್ಮರಿಸಿಕೋ, ಪ್ರತಿದಿನವೂ ರಾತ್ರಿಯ ಹೊತ್ತು ರಾಸಮಂಡಲದಲ್ಲಿ ಶ್ರೀಕೃಷ್ಣನ ಸಮಾಗಮವನ್ನು ಪಡೆಯುವೆ' ಎಂದು ಅಶರೀರವಾಣಿಯಾಯಿತು. ಆಗ ರಾಧೆಯು ಅಳುತ್ತಿರುವ ಶಿಶುವಾದ ಶ್ರೀಕೃಷ್ಣನನ್ನು ಕರೆದೊಯ್ದು ನಂದಗೋಪ ಯಶೋದೆಯ ರಿಗೆ ಕೊಡಲು ಅವರು ಶಿಶುವನ್ನು ಕರೆದುಕೊಂಡು ತಮ್ಮ ಮಂದಿರಕ್ಕೆ ತೆರಳಿದರು. ಇಂತು ಭಕ್ತಪರಾಧೀನನಾದ ಶ್ರೀಕೃಷ್ಣಪರಮಾತ್ಮನು ತನ್ನ ಭಕ್ತೆಯಾದ ರಾಧೆಯ ಇಷ್ಟಾರ್ಥವನ್ನು ಸಲ್ಲಿಸಿ ತಾನು ನಿರ್ಲಿಪ್ತನಾಗಿದ್ದನು.



— || ಓಂ ||—

—|| ಶ್ರೀ ಗಣೇಶಾಯ ನಮಃ ||—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

### || ಷೋಡಶೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಮಾಧವೋ ಬಾಲಕೈಃ ಸಾರ್ದ್ಧಮೇಕದಾ ಹಲಿನಾ ಸಹ |
ಭುಕ್ತ್ವಾ ಪೀತ್ವಾ ಚ ಕ್ರೀಡಾರ್ಥಂ ಜಗಾಮ ಶ್ರೀವನಂ ಮುನೇ || ೧ ||

ತತ್ರ ನಾನಾವಿಧಾಂ ಕ್ರೀಡಾಂ ಚಕಾರ ಮಧುಸೂದನಃ |
ಕೃತ್ವಾ ತಾಂ ಶಿಶುಭಿಃ ಸಾರ್ದ್ಧಂ ಚಾಲಯಾಮಾಸ ಗೋಧನಂ || ೨ ||

ಯಯೌ ಮಧುವನಂ ತಸ್ಮಾಚ್ಛ್ರೀಕೃಷ್ಣೋ ಗೋಧನೈಃ ಸಹ |
ತತ್ರ ಸ್ವಾದು ಜಲಂ ಪೀತ್ವಾ ವನೇ ಚ ಸ ಮಹಾಬಲಃ || ೩ ||

---

### ಹದಿನಾರನೆಯ ಅಧ್ಯಾಯವು

೧. ಶ್ರೀನಾರಾಯಣ :—ಎಲೈ ನಾರದನೇ, ಒಮ್ಮೆ ಶ್ರೀಕೃಷ್ಣನು ಊಟ ತಿಂಡಿಗಳನ್ನು ಮುಗಿಸಿಕೊಂಡು ಬಲರಾಮನೊಡನೆಯೂ, ಮತ್ತಿತರ ಗೋಪಾಲಕರೊಡನೆಯೂ ಆಟವಾಡಲು ಬೃಂದಾವನಕ್ಕೆ ಹೋದನು.

೨. ಅಲ್ಲಿ ಮಧುಸೂದನನು ನಾನಾವಿಧವಾದ ಆಟಗಳನ್ನಾಡಿ ಆ ಗೋಪಾಲಕರೊಡನೆ ತನ್ನ ಗೋವುಕರುಗಳನ್ನು ಮೇಯಿಸತೊಡಗಿದನು.

೩. ಅಲ್ಲಿಂದ ಶ್ರೀಕೃಷ್ಣನು ತನ್ನ ಗೋವುಗಳೊಡನೆ ಮಧುವನಕ್ಕೆ ತೆರಳಿದನು. ಮಹಾಬಲಶಾಲಿಯಾದ ಅವನು ಅಲ್ಲಿ ಸಿಹಿಯಾದ ನೀರನ್ನು ಕುಡಿದು ತನ್ನ ಗೋವುಗಳಿಗೂ ಕುಡಿಸಿದನು.

ತತ್ರೈಕದೈತ್ಯೋ ಬಲವಾನ್ಶ್ವೇತವರ್ಣೋ ಭಯಂಕರಃ ।
ವಿಕೃತಾಕಾರವದನೋ ಬಕಾಕಾರಶ್ಚ ಶೈಲವತ್ ॥ ೪ ॥

ದೃಷ್ಟ್ವಾ ಚ ಗೋಕುಲಂ ಗೋಷ್ಠೇ ಶಿಶುಭಿರ್ಬಲಕೇಶವೌ ।
ಯಥಾ ಹ್ಯಗಸ್ತ್ಯೋ ವಾತಾಪಿಂ ಸರ್ವಂ ಜಗ್ರಾಸ ಲೀಲಯಾ ॥ ೫ ॥

ಬಕಗ್ರಸ್ತಂ ಹರಿಂ ದೃಷ್ಟ್ವಾ ಸರ್ವೇ ದೇವಾ ಭಯಾನ್ವಿತಾಃ ।
ಚಕ್ರುರ್ಹಾಹೇತಿ ಸಂತ್ರಸ್ತಾ ಧಾವಂತಃ ಶಸ್ತ್ರಪಾಣಯಃ ॥ ೬ ॥

ಶಕ್ರಶ್ಚಿಕ್ಷೇಪ ವಜ್ರಂ ಚ ಮುನೇರಸ್ಥಿವಿನಿರ್ಮಿತಂ ।
ನ ಮಮಾರ ಬಕಸ್ತಸ್ಮಾತ್ಪಕ್ಷಮೇಕಂ ದದಾಹ ಚ ॥ ೭ ॥

ನೀಹಾರಾಸ್ತ್ರಂ ಶಶಧರಃ ಶೀತಾರ್ತಸ್ತೇನ ದಾನವಃ ।
ಯಮದಂಡಂ ಸೂರ್ಯಪುತ್ರಸ್ತೇನ ಕುಂಠೋ ಬಭೂವ ಹ ॥ ೮ ॥

---

೪. ಅಷ್ಟುಹೊತ್ತಿಗೆ ಅಲ್ಲಿಗೆ ವಿಕಾರಮುಖನೂ, ಭಯಂಕರನೂ, ಬೆಟ್ಟದಂತೆ ಉನ್ನತನೂ, ಬಲಿಷ್ಠನೂ, ಬಿಳುಪುಬಣ್ಣದವನೂ ಆದ ಬಕಾಕಾರದ ಒಬ್ಬ ರಾಕ್ಷಸನು ಬಂದನು.

೫. ಅಲ್ಲಿ ಬಲರಾಮಕೃಷ್ಣರು ಇತರ ಗೋಪಾಲಕರೊಡನೆಯೂ, ಗೋವುಗಳೊಡನೆಯೂ ಇರುವುದನ್ನು ನೋಡಿ ಆ ರಾಕ್ಷಸನು ಅಗಸ್ತ್ಯಮಹರ್ಷಿಯು ವಾತಾಪಿಯನ್ನು ನುಂಗಿದಂತೆ ಅವರೆಲ್ಲರನ್ನೂ ನುಂಗಿಬಿಟ್ಟನು.

೬. ಈ ರೀತಿ ಶ್ರೀಹರಿಯು ಬಕಾಸುರನ ಬಾಯಿಗೆ ತುತ್ತಾದುದನ್ನು ಕಂಡ ದೇವತೆಗಳೆಲ್ಲರೂ ಭಯಭ್ರಾಂತರಾಗಿ ಓಡಿಬಂದರು.

೭ ಇಂದ್ರನು ದಧೀಚಿಯ ಮೂಳೆಯಿಂದ ನಿರ್ಮಿತವಾದ ವಜ್ರಾಯುಧದಿಂದ ಹೊಡೆದನು. ಅದರಿಂದ ಬಕನ ಒಂದು ರೆಕ್ಕೆಯು ನಾಶವಾಯಿತೇ ಹೊರತು ಅವನು ಸಾಯಲಿಲ್ಲ.

೮ ಚಂದ್ರನು ಹಿಮದ ಅಸ್ತ್ರವನ್ನು ಬಿಡಲು ರಾಕ್ಷಸನು ಶೈತ್ಯಪೀಡಿತನಾದನು. ಸೂರ್ಯಪುತ್ರನಾದ ಯಮನು ಯಮದಂಡವನ್ನು ಪ್ರಯೋಗಿಸಿದುದರಿಂದ ಆ ಅಸುರನು ಕುಂಠಿತನಾದನು.

ವಾಯುವ್ಯಾಸ್ತ್ರಂ ಚ ವಾಯುಶ್ಚ ತೇನ ಸ್ಥಾನಾಂತರಂ ಯಯೌ ।
ವರುಣಶ್ಚ ಶಿಲಾವೃಷ್ಟಿಂ ಚಕಾರ ತೇನ ಪೀಡಿತಃ ॥ ೯ ॥

ಹುತಾಶನಶ್ಚ ವಾಹ್ನೇಯೇನ ಪಕ್ಷಾಂಶ್ಚೈವ ದದಾಹ ಸಃ ।
ಕುಬೇರಸ್ತ್ವಾರ್ಧಚಂದ್ರೇಣ ಛಿನ್ನಪಾದೋ ಬಭೂವ ಹ ॥ ೧೦ ॥

ಈಶಾನಸ್ಯ ಚ ಶೂಲೇನ ಬಭೂವ ಮೂರ್ಛಿತೋಽಸುರಃ ।
ಋಷಯೋ ಮುನಯಶ್ಚೈವ ಕೃಷ್ಣಂ ಚಕ್ರುರ್ಭಿಯಾಽಽಶಿಷಂ ॥ ೧೧ ॥

ಏತಸ್ಮಿನ್ನಂತರೇ ಕೃಷ್ಣಃ ಪ್ರಜ್ವಲನ್ಬ್ರಹ್ಮತೇಜಸಾ ।
ದದಾಹ ದೈತ್ಯಸರ್ವಾಂಗಂ ಬಾಹ್ಯಾಭ್ಯಂತರಮೀಶ್ವರಃ ॥ ೧೨ ॥

ತತ್ಸರ್ವಂ ವಮನಂ ಕೃತ್ವಾ ಪ್ರಾಣಾಂಸ್ತತ್ಯಾಜ ದಾನವಃ ।
ಬಕಂ ನಿಹತ್ಯ ಬಲವಾನ್ಶಿಶುಭಿರ್ಗೋಧನೈಃ ಸಹ ॥ ೧೩ ॥

---

೯. ವಾಯುದೇವನು ವಾಯವ್ಯಾಸ್ತ್ರವನ್ನು ಬಿಟ್ಟದ್ದರಿಂದ ಅಸುರನು ಬೇರೆ ಸ್ಥಳಕ್ಕೆ ಹಾರಿದನು ವರುಣನು ಕರೆಸಿದ (ಶಿಲಾವರ್ಷ) ಕಲ್ಲುಮಳೆಯಿಂದ ರಾಕ್ಷಸನಿಗೆ ಬಾಧೆಯಾಯಿತು.

೧೦. ಅಗ್ನಿದೇವನು ಆಗ್ನೇಯಾಸ್ತ್ರದಿಂದ ಅವನ ಪಕ್ಷಗಳನ್ನು ಬೂದಿ ಮಾಡಿದನು. ಕುಬೇರನು ಪ್ರಯೋಗಿಸಿದ ಅರ್ಧಚಂದ್ರಾಯುಧದಿಂದ ಇವನ ಕಾಲೊಂದು ಕತ್ತರಿಸಿತು.

೧೧. ಈಶಾನನು ಬಿಟ್ಟ ಶೂಲದಿಂದ ಆ ರಾಕ್ಷಸನು ಮೂರ್ಛೆಗೊಂಡನು. ಋಷಿಮುನಿಗಳೆಲ್ಲರೂ ಭಯಗ್ರಸ್ತರಾಗಿ ಶ್ರೀಕೃಷ್ಣನಿಗೆ ಆಶೀರ್ವಾದಮಾಡಿದರು

೧೨ ಇಷ್ಟು ಹೊತ್ತಿಗೆ ಸರ್ವೇಶ್ವರನಾದ ಕೃಷ್ಣನು ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತಾ ಆ ರಾಕ್ಷಸನ ದೇಹವನ್ನು ಒಳಹೊರಗೆಲ್ಲ ದಹಿಸಿದನು

೧೩. ಆಗ ರಾಕ್ಷಸನು ತಾನು ನುಂಗಿದುದನ್ನೆಲ್ಲ ವಮನಮಾಡಿ ಪ್ರಾಣತ್ಯಾಗ ಮಾಡಿದನು ಇಂತು ಬಲಿಷ್ಠನಾದ ಬಕನು ಕೃಷ್ಣನನ್ನು ಸಂಹರಿಸಿ ಗೋಪಾಲಕರನ್ನೂ, ಗೋವುಗಳನ್ನೂ ಕಾಪಾಡಿದನು

ಯಯೌ ಕೇಲಿಕದಂಬಾನಾಂ ಕಾನನಂ ಸುಮನೋಹರಂ ।
ಏತಸ್ಮಿನ್ನಂತರೇ ತತ್ರ ವೃಷರೂಪಧರೋಽಸುರಃ ॥ ೧೪ ॥

ನಾಮ್ನಾ ಪ್ರಲಂಬೋ ಬಲವಾನ್ಮಹಾಧೂರ್ತಶ್ಚ ಶೈಲವತ್ ।
ಶೃಂಗಾಭ್ಯಾಂ ಚ ಹರಿಂ ಧೃತ್ವಾ ಭ್ರಾಮಯಾಮಾಸ ತತ್ರ ವೈ ॥ ೧೫ ॥

ದುದ್ರುವುರ್ಬಾಲಕಾಃ ಸರ್ವೇ ರುರುದುಶ್ಚ ಭಯಾತುರಾಃ ।
ಬಲೋ ಜಹಾಸ ಬಲವಾಞ್ಜ್ಞಾತ್ವಾ ಭ್ರಾತರಮೀಶ್ವರಂ ॥ ೧೬ ॥

ಬಾಲಕಾನ್ಬೋಧಯಾಮಾಸ ಭಯಂ ಕಿಮಿತ್ಯುವಾಚ ಹ ।
ತದ್ವಿಷಾಣಂ ಗೃಹೀತ್ವಾ ಚ ಸ್ವಯಂ ಶ್ರೀಮಧುಸೂದನಃ ॥ ೧೭ ॥

ಭ್ರಾಮಯಿತ್ವಾ ಚ ಗಗನೇ ಪಾತಯಾಮಾಸ ಭೂತಲೇ ।
ಪ್ರಾಣಾಂಸ್ತತ್ಯಾಜ ದೈತ್ಯೇಂದ್ರೋ ನಿಪತ್ಯ ಚ ಮಹೀತಲಂ ॥ ೧೮ ॥

---

೧೪. ಅನಂತರ ಎಲ್ಲರೊಡನೆ ಶ್ರೀಕೃಷ್ಣನು ಮನೋಹರವಾದ ಕೇಳಿ ಕದಂಬ ವನಕ್ಕೆ ತೆರಳಲು ಅಲ್ಲಿ ಗೂಳಿಯ ರೂಪದಿಂದ ಮತ್ತೊಬ್ಬ ರಾಕ್ಷಸನು ಬಂದನು.

೧೫. ಪರ್ವತದಂತೆ ಮಹೋನ್ನತನೂ ಪ್ರಬಲನೂ ಆದ ಪ್ರಲಂಬನೆಂಬ ಆ ರಾಕ್ಷಸನು ತನ್ನ ಕೊಂಬುಗಳಿಂದ ಶ್ರೀಹರಿಯನ್ನೆತ್ತಿಕೊಂಡು ತಿರುಗಿಸ ಲಾರಂಭಿಸಿದನು.

೧೬. ಆಗ ಬಾಲಕರೆಲ್ಲರೂ ಭಯಭ್ರಾಂತರಾಗಿ ಅಳುತ್ತ ಓಡಲಾರಂಭಿಸಿದರು ಬಲರಾಮನು ಮಾತ್ರ ತನ್ನ ಸಹೋದರನು ಸರ್ವಶಕ್ತನೆಂಬುದನ್ನು ತಿಳಿದಿದ್ದುದರಿಂದ ನಗುತ್ತಿದ್ದನು.

೧೭. ಅಲ್ಲದೆ ಎಲ್ಲ ಗೋಪಾಲಕರನ್ನು ಕರೆದು ನಿಜಸ್ಥಿತಿಯನ್ನು ಹೇಳಿ ಭಯಪಡಬೇಡಿರೆಂದು ಸಮಾಧಾನಪಡಿಸಿದನು, ಇತ್ತ ಮಧುಸೂದನ (ಕೃಷ್ಣ) ನು ಆ ವೃಷಭಾಸುರನ ಕೊಂಬುಗಳನ್ನು ಹಿಡಿದುಕೊಂಡು ತಿರುಗಿಸಲಾರಂಭಿಸಿದನು

೧೮. ಆಕಾಶದಲ್ಲೆಲ್ಲ ತಿರುಗಿಸಿ ನೆಲದ ಮೇಲೆ ದೊಪ್ಪನೆ ಕೆಡವಿದನು. ರಾಕ್ಷಸೇ ದ್ರನು ನೆಲದ ಮೇಲೆ ಬಿದ್ದು, ಕೂಡಲೇ ಪ್ರಾಣತ್ಯಾಗಮಾಡಿದನು.

**ಜಹಸುರ್ಬಾಲಕಾಃ ಸರ್ವೇ ನನೃತುಶ್ಚ ಜಗುರ್ಮುದಾ ।**
**ಹತ್ವಾ ಪ್ರಲಂಬಂ ಶ್ರೀಕೃಷ್ಣೋ ಬಲೇನ ಸಹ ಸತ್ವರಂ　　॥ ೧೯ ॥**

**ಗೋಧನಂ ಚಾರಯಾಮಾಸ ಯಯೌ ಭಾಂಡೀರಮೀಶ್ವರಃ ।**
**ಗಚ್ಛಂತಂ ಮಾಧವಂ ದೃಷ್ಟ್ವಾ ಕೇಶೀ ದೈತ್ಯೇಶ್ವರೋ ಬಲೀ　　॥ ೨೦ ॥**

**ವೇಷ್ಟಯಾಮಾಸ ತಂ ಶೀಘ್ರಂ ಖುರೇಣ ವಿಲಿಖನ್ಮಹೀಂ ।**
**ಮೂರ್ಧ್ನಿ ಕೃತ್ವಾ ಹರಿಂ ತುಷ್ಟೋ ಗಗನಂ ಶತಯೋಜನಂ　　॥ ೨೧ ॥**

**ಉತ್ಪಾತ್ಯ ಭ್ರಾಮಯಾಮಾಸ ಪಪಾತ ಚ ಮಹೀತಲೇ ।**
**ಜಗ್ರಾಹ ಸ ಹರಿಂ ಪಾಪೀ ಚರ್ವಯಾಮಾಸ ಕೋಪತಃ　　॥ ೨೨ ॥**

**ಸ ಭಗ್ನದಂತೋ ದೈತ್ಯಶ್ಚ ವಜ್ರಾಂಗಚರ್ವಣಾದಹೋ ।**
**ಶ್ರೀಕೃಷ್ಣತೇಜಸಾ ದಗ್ಧಃ ಪ್ರಾಣಾಂಸ್ತತ್ಯಾಜ ಭೂತಲೇ　　॥ ೨೩ ॥**

---

೧೯-೨೦ ಕೂಡಲೇ ಆ ಗೋಪಾಲಕರೆಲ್ಲರೂ ನಕ್ಕು ನಲಿದು ಕುಣಿದಾಡಲಾರಂಭಿಸಿದರು. ಇತ್ತ ಶ್ರೀಕೃಷ್ಣನು ಪ್ರಲಂಬಾಸುರನ ಸಂಹಾರವಾದನಂತರ ಬಲರಾಮನೊಡನೆ ಹಸುಗಳನ್ನು ಮೇಯಿಸುತ್ತ 'ಭಾಂಡೀರ'ವೆಂಬ ಸ್ಥಳಕ್ಕೆ ಬರಲು ಅಲ್ಲಿ ಮಾಧವನು ಬರುತ್ತಿರುವುದನ್ನು ನೋಡಿ ಬಲಿಷ್ಠನಾದ ಕೇಶಿ ಎಂಬ ರಾಕ್ಷಸನು ಬಂದನು.

೨೧. ಕುದುರೆಯ ರೂಪವನ್ನು ತಾಳಿದ್ದ ಆ ರಾಕ್ಷಸನು ಗೊರಸಿನಿಂದ ಭೂಮಿಯನ್ನು ಕೆರೆಯುತ್ತ ಶ್ರೀಕೃಷ್ಣನನ್ನೆತ್ತಿ ತಲೆಯ ಮೇಲಿರಿಸಿಕೊಂಡು ಆಕಾಶದಲ್ಲಿ ನೂರುಯೋಜನದೂರ ಹಾರಿದನು.

೨೨. ಹೀಗೆ ಎತ್ತಿಕೊಂಡು ಆಕಾಶದಲ್ಲಿ ತಿರಿಗಿಸುತ್ತ ಬಳಲಿ ತಾನು ಭೂಮಿಯ ಮೇಲೆ ಬಿದ್ದನು. ಶ್ರೀಕೃಷ್ಣನು ಕೋಪಗೊಂಡು ಅವನನ್ನು ಗರಗರನೆ ತಿರುಗಿಸಿ ಎಸೆದನು.

೨೩. ಕೂಡಲೇ ಆ ರಾಕ್ಷಸನ ಹಲ್ಲುಗಳೆಲ್ಲ ಮುರಿದುದಲ್ಲದೆ ಅವನು ಶ್ರೀಕೃಷ್ಣನ ತೇಜಸ್ಸಿನಿಂದ ದಗ್ಧವಾಗಿ ಭೂಮಿಯ ಮೇಲೆ ಬಿದ್ದು ಪ್ರಾಣತ್ಯಾಗ ಮಾಡಿದನು.

ಸ್ವರ್ಗೇ ದುಂದುಭಯೋ ನೇದುಃ ಪುಷ್ಪವೃಷ್ಟಿರ್ಬಭೂವ ಹ ।
ಏತಸ್ಮಿನ್ನಂತರೇ ತತ್ರ ಪಾರ್ಷದಾ ದಿವ್ಯರೂಪಿಣಃ ॥ ೨೪ ॥

ತತ್ರಾಜಗ್ಮುಃ ಸ್ಯಂದನಸ್ಥಾ ದ್ವಿಭುಜಾಃ ಪೀತವಾಸಸಃ ।
ಕಿರೀಟಿನಃ ಕುಂಡಲಿನೋ ವನಮಾಲಾವಿಭೂಷಿತಾಃ ॥ ೨೫ ॥

ವಿನೋದಮುರಲೀಹಸ್ತಾಃ ಕ್ವಣನ್ಮಂಜೀರರಂಜಿತಾಃ ।
ಚಂದನೋಕ್ಷಿತಸರ್ವಾಂಗಾ ಗೋಪವೇಷಧರಾ ವರಾಃ ॥ ೨೬ ॥

ಈಷದ್ಧಾಸ್ಯಪ್ರಸನ್ನಾಸ್ಯಾ ಭಕ್ತಾನುಗ್ರಹಕಾತರಾಃ ।
ಪ್ರದೀಪ್ತಂ ರಥಮಾಸ್ಥಾಯ ರತ್ನಸಾರವಿನಿರ್ಮಿತಂ ॥ ೨೭ ॥

ಭಾಂಡೀರವನಮಾಜಗ್ಮುರ್ಯತ್ರ ಸನ್ನಿಹಿತೋ ಹರಿಃ ।
ದಿವ್ಯವಸ್ತ್ರಪರೀಧಾನಾ ರತ್ನಾಲಂಕಾರಭೂಷಿತಾಃ ॥ ೨೮ ॥

---

೨೪. ಆಗ ಸ್ವರ್ಗದಲ್ಲಿ ನಗಾರಿಧ್ವನಿಯಾದುದಲ್ಲದೆ ಪುಷ್ಪವೃಷ್ಟಿಯೂ ಆಯಿತು. ಆ ಸಮಯಕ್ಕೆ ಸರಿಯಾಗಿ ದಿವ್ಯರೂಪಧಾರಿಗಳಾದ ಪಾರ್ಷದರು ಅಲ್ಲಿಗೆ ಬಂದರು

೨೫ ಭುಜದ್ವಯದಿಂದಲೂ, ಕಿರೀಟಕುಂಡಲಗಳಿಂದಲೂ ಶೋಭಿತರಾದ ಅವರು ಪೀತಾಂಬರವನ್ನುಟ್ಟು ವನಮಾಲೆಯನ್ನು ಧರಿಸಿ ರಥದಲ್ಲಿ ಕುಳಿತು ಬಂದರು.

೨೬. ಕೈಯ್ಯಲ್ಲಿ ವಿನೋದಾರ್ಥವಾಗಿ ಕೊಳಲನ್ನು ಧರಿಸಿ ಮನೋಹರವಾದ ನೂಪುರದಿಂದ ಶೋಭಿತರಾಗಿ ಸರ್ವಾಂಗಗಳಿಗೂ ಚಂದನವನ್ನು ಲೇಪಿಸಿಕೊಂಡು ಗೋಪವೇಷಧಾರಿಗಳಾಗಿದ್ದರು.

೨೭. ಶ್ರೇಷ್ಠರತ್ನದಿಂದ ನಿರ್ಮಿತವಾದ ದಿವ್ಯರಥದಲ್ಲಿ ಕುಳಿತು ಪ್ರಸನ್ನ ವದನರಾಗಿ ಭಕ್ತಾನುಗ್ರಹದಲ್ಲಿ ಕಾತರರಾಗಿದ್ದರು.

೨೮. ದಿವ್ಯಾಂಬರಧಾರಿಗಳೂ, ರತ್ನಾಲಂಕಾರಭೂಷಿತರೂ ಆದ ಆ ಪಾರ್ಷದರು ಶ್ರೀಹರಿಯು ಇದ್ದ ಭಾಂಡೀರವನಕ್ಕೆ ಕೂಡಲೇ ಬಂದರು.

ಪ್ರಣಮಯ್ಯ ಹರಿಂ ಸ್ತುತ್ವಾ ಜಗ್ಮುರ್ಗೋಲೋಕಮುತ್ತಮಂ ।
ಮುಕ್ತ್ವಾ ದೇಹಂ ಪರಿತ್ಯಜ್ಯ ವೈಷ್ಣವಾಃ ಪುರುಷಾಸ್ತ್ರಯಃ ।
ಸಂಪ್ರಾಪ್ಯ ದಾನವೀಂ ಯೋನಿಂ ಬಭೂವುಃ ಕೃಷ್ಣಪಾರ್ಷದಾಃ ॥ ೨೯ ॥

॥ ನಾರದ ಉವಾಚ ॥

ಕೇ ತೇ ಚ ದಿವ್ಯಪುರುಷಾ ವೈಷ್ಣವಾ ದಿವ್ಯರೂಪಿಣಃ ।
ಕಥಯಸ್ವ ಮಹಾಭಾಗ ಕೃತಂ ಕಿಂ ಪರಮಾದ್ಭುತಂ ॥ ೩೦ ॥

॥ ನಾರಾಯಣ ಉವಾಚ ॥

ಶೃಣು ಬ್ರಹ್ಮನ್ಪ್ರವಕ್ಷ್ಯೇಽಹಮಿತಿಹಾಸಂ ಪುರಾತನಂ ॥ ೩೧ ॥

ಶ್ರುತಂ ಮಹೇಶವದನಾತ್ಸೂರ್ಯಪರ್ವಣಿ ಪುಷ್ಕರೇ ।
ಹರೇರ್ಗುಣಪ್ರಸಂಗೇನ ಕಥಯಾಮಾಸ ಶಂಕರಃ ॥ ೩೨ ॥

---

೨೯. ಎಲ್ಲರೂ ಶ್ರೀಹರಿಯನ್ನು ಸ್ತುತಿಸಿ ನಮಿಸಿ ಗೋಲೋಕಕ್ಕೆ ತೆರಳಿದರು ವಿಷ್ಣುಭಕ್ತರಾದ ಆ ಮೂವರು ಪುರುಷರು ದಾನವಯೋನಿಯನ್ನು ಪಡೆದು, ದೇಹತ್ಯಾಗಮಾಡಿ ಶ್ರೀಕೃಷ್ಣನ ಪಾರ್ಷದರಾದರು.

೩೦. ನಾರದ:—ಎಲೈ ಮಹಾಭಾಗನೇ ಇದೇನು ಅತ್ಯಾಶ್ಚರ್ಯಕರವಾಗಿದೆ? ದೈತ್ಯರೂಪಿಗಳಾದರೂ ವಿಷ್ಣುಭಕ್ತರಾದ ಆ ದಿವ್ಯಪುರುಷರಾರು ?

೩೧. ನಾರಾಯಣ :—ಎಲೈ ನಾರದಮಹರ್ಷಿಯೇ, ಪುರಾತನವಾದ ಇತಿಹಾಸವನ್ನು ಹೇಳುವೆನು, ಸಾವಧಾನದಿಂದ ಕೇಳು.

೩೨. ಪುಷ್ಕರಕ್ಷೇತ್ರದಲ್ಲಿ ಸೂರ್ಯಗ್ರಹಣದ ದಿವಸ ಈ ಇತಿಹಾಸವನ್ನು ಮಹೇಶನ ಮುಖದಿಂದ ಕೇಳಿದೆನು. ಶ್ರೀಹರಿಯ ಗುಣವರ್ಣನೆಯ ಪ್ರಸಂಗದಲ್ಲಿ ಶಂಕರನು ಇದನ್ನು ಹೇಳಿದನು.

ಸಂಪೃಷ್ಟೋ ಮುನಿಸಂಘೈಶ್ಚ ಮಯಾ ಧರ್ಮೇಣ ಬ್ರಹ್ಮಣಾ ।
ಬ್ರಹ್ಮಪುತ್ರ ಮಹಾಭಾಗ ಕಥಾಂ ಭುವನಪಾವನೀಂ ॥ ೩೩ ॥

ಕಥಯಾಮಾಸ ವಿಸ್ತಾರ್ಯ ಸಾವಧಾನಂ ನಿಶಾಮಯ ।
ಗಂಧರ್ವೇಶೋ ಗಂಧವಾಹಃ ಪರ್ವತೇ ಗಂಧಮಾದನೇ ॥ ೩೪ ॥

ಮಹಾಂಸ್ತಪಸ್ವಿಪ್ರವರೋ ಹರಿಸೇವನತತ್ಪರಃ ।
ಪುತ್ರಾ ಬಭೂವುಶ್ಚತ್ವಾರೋ ಗಂಧರ್ವಪ್ರವರಾ ಮುನೇ ॥ ೩೫ ॥

ಸಸ್ಮರುಃ ಕೃಷ್ಣಪಾದಾಬ್ಜಂ ಸ್ವಪ್ನೇ ಜ್ಞಾನೇ ದಿವಾನಿಶಂ ।
ತೇ ಚ ದುರ್ವಾಸಸಃ ಶಿಷ್ಯಾಃ ಶ್ರೀಕೃಷ್ಣಾರ್ಚನತತ್ಪರಾಃ ॥ ೩೬ ॥

ನಿತ್ಯಂ ದತ್ವಾ ಚ ಕಮಲಂ ಸಂಪೂಜ್ಯ ತಂ ಪಪುರ್ಜಲಂ ।
ವಸುದೇವಃ ಸುಹೋತ್ರಶ್ಚ ಸುದರ್ಶನಸುಪಾರ್ಶ್ವಕೌ ॥ ೩೭ ॥

---

೩೩. ಮುನಿಸಮೂಹದಿಂದಲೂ, ನನ್ನಿಂದಲೂ, ಧರ್ಮಪುರುಷನಿಂದಲೂ, ಬ್ರಹ್ಮನಿಂದಲೂ, ಪ್ರಶ್ನಿಸಲ್ಪಟ್ಟ ಶಂಕರನು ಭುವನಪಾವನವಾದ ಈ ಕಥೆಯನ್ನು ಹೇಳಿದನು.

೩೪. ವಿಸ್ತಾರವಾದ ಈ ಕಥೆಯನ್ನು ಸಾವಧಾನದಿಂದ ಕೇಳು. ಗಂಧರ್ವ ರಾಜನಾದ ಗಂಧವಾಹನೆಂಬುವನು ಗಂಧಮಾದನ ಪರ್ವತದಲ್ಲಿ ವಾಸಿಸುತ್ತಿದ್ದನು.

೩೫. ಮಹಾತಪಸ್ವಿಯಾದ ಅವನು ಶ್ರೀಹರಿಯ ಸೇವೆಯಲ್ಲಿ ರತನಾಗಿದ್ದನು. ಆತನಿಗೆ ನಾಲ್ಕು ಜನ ಮಕ್ಕಳು ಜನಿಸಿ ಗಂಧರ್ವಪ್ರವರರೆನಿಸಿಕೊಂಡರು.

೩೬. ಅವರೆಲ್ಲರೂ ದೂರ್ವಾಸಮಹರ್ಷಿಯ ಶಿಷ್ಯರಾಗಿ, ಶ್ರೀಕೃಷ್ಣನ ಪಾದ ಕಮಲಗಳನ್ನು ಜಾಗ್ರತ್ಸ್ವಪ್ನಸುಷುಪ್ತಿಗಳಲ್ಲಿಯೂ ನೆನೆಯುತ್ತಿದ್ದರು.

೩೭. ವಸುದೇವ, ಸುಹೋತ್ರ, ಸುದರ್ಶನ ಮತ್ತು ಸುಪಾರ್ಶ್ವಕನೆಂಬ ಹೆಸರುಳ್ಳ ಆ ನಾಲ್ವರು ಪ್ರತಿದಿನವೂ ಶ್ರೀಕೃಷ್ಣನಿಗೆ ಕಮಲಪುಷ್ಪವನ್ನರ್ಪಿಸಿ ಜಲಪಾನ ಮಾಡುತ್ತಿದ್ದರು.

ಚತ್ವಾರೋ ವೈಷ್ಣವಶ್ರೇಷ್ಠಾಸ್ತೇಪುಸ್ತೇ ಪುಷ್ಕರೇ ತಪಃ ।
ಚಿರಕಾಲಂ ತಪಸ್ತಪ್ತ್ವಾ ಬಭೂವುಃ ಸಿದ್ಧಮಂತ್ರಿಣಃ ॥ ೩೮ ॥

ಜ್ಯೇಷ್ಠೋ ದುರ್ವಾಸಸೋ ಯೋಗಂ ಸಂಪ್ರಾಪ್ಯ ಯೋಗಿನಾಂ ವರಃ ।
ಸಿದ್ಧಶ್ಚಾಕೃತದಾರಶ್ಚ ಪ್ರಜ್ವಲನ್ಬ್ರಹ್ಮತೇಜಸಾ ॥ ೩೯ ॥

ಸದ್ಯೋ ದೇಹಂ ಪರಿತ್ಯಜ್ಯ ಬಭೂವ ಕೃಷ್ಣಪಾರ್ಷದಃ ।
ಏಕದಾ ಭ್ರಾತರಸ್ತೇ ಚ ಜಗ್ಮುಶ್ಚಿತ್ರಸರೋವರಂ ॥ ೪೦ ॥

ಪದ್ಮಾನಿ ಕೃಷ್ಣಪೂಜಾರ್ಥಮಾಹರ್ತುಮುದಯೇ ರವೇಃ ।
ಪದ್ಮಾನಾಂ ಚಯನಂ ಕೃತ್ವಾ ಗಚ್ಛತೋ ವೈಷ್ಣವಾನ್ಮುನೇ ॥ ೪೧ ॥

ದೃಷ್ಟ್ವಾ ನಿಬಧ್ಯ ಸಂಜಗ್ಮುಃ ಸರ್ವೇ ಶಂಕರ ಕಿಂಕರಾಃ ।
ಬಲಿಷ್ಠಾ ದುರ್ಬಲಾನ್ಧೃತ್ವಾ ಜಗ್ಮುಃ ಶಂಕರಸನ್ನಿಧಿಂ ॥ ೪೨ ॥

---

೩೮. ಈ ನಾಲ್ಕು ಜನ ವಿಷ್ಣುಭಕ್ತರೂ ಪುಷ್ಕರಕ್ಷೇತ್ರದಲ್ಲಿ ತಪಸ್ಸನ್ನು ಮಾಡಿದರು. ಬಹಳ ಕಾಲ ತಪಸ್ಸುಮಾಡಿದನಂತರ ಮಂತ್ರಸಿದ್ಧಿಯನ್ನು ಪಡೆದರು.

೩೯. ಅವರಲ್ಲಿ ಹಿರಿಯವನು ದೂರ್ವಾಸರ ಅನುಗ್ರಹದಿಂದ ಯೋಗಸಿದ್ಧಿಯನ್ನು ಪಡೆದು ಯೋಗಿಶ್ರೇಷ್ಠನೆನಿಸಿದನು. ದಾರಪರಿಗ್ರಹಮಾಡದೆ ಸಿದ್ಧಪುರುಷನಾಗಿ ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದನು.

೪೦ ಕೂಡಲೇ ದೇಹತ್ಯಾಗಮಾಡಿ ಆತನು ಶ್ರೀಕೃಷ್ಣನ ಪಾರ್ಷದನೆನಿಸಿದನು. ಒಮ್ಮೆ ಉಳಿದ ಆ ಮೂವರು ಸಹೋದರರು ಚಿತ್ರಸರೋವರಕ್ಕೆ ಹೋದರು.

೪೧. ಅಲ್ಲಿ ಸೂರ್ಯೋದಯದ ಸಮಯದಲ್ಲಿ ಅರಳಿದ ತಾವರೆಹೂಗಳನ್ನು ಶ್ರೀಕೃಷ್ಣನ ಪೂಜೆಗಾಗಿ ಕೊಯ್ದರು. ಈ ರೀತಿ ಕಮಲಪುಷ್ಪಗಳನ್ನು ಕೊಯ್ದು ಆ ವಿಷ್ಣುಭಕ್ತರು ಹೊರಡಲನುವಾದರು.

೪೨. ದುರ್ಬಲರಾದ ಆ ವಿಷ್ಣುಭಕ್ತರು ಪುಷ್ಪಾಪಹಾರಮಾಡಿದುದನ್ನು ನೋಡಿ ಬಲಿಷ್ಠರಾದ ಶಂಕರನ ಸೇವಕರು ಅವರನ್ನು ಬಂಧಿಸಿ ಶಂಕರನ ಸಮೀಪಕ್ಕೆ ಕರೆದೊಯ್ದರು.

ತೇ ಸರ್ವೇ ಶಂಕರಂ ದೃಷ್ಟ್ವಾ ಪ್ರಣೇಮುಃ ಶಿರಸಾ ಭುವಿ ।
ತಾನುವಾಚ ಶಿವಃ ಶೀಘ್ರಂ ಪ್ರಯುಜ್ಯಾಶಿಷಮುತ್ತಮಾಂ ।
ಈಷದ್ಧಾಸ್ಯಪ್ರಸನ್ನಾಸ್ಯೋ ಭಕ್ತಾನುಗ್ರಹಕಾತರಃ ॥ ೪೩ ॥

॥ ಶಿವ ಉವಾಚ ॥

ಕೇ ಯೂಯಂ ಪದ್ಮಹರ್ತಾರಃ ಪಾರ್ವತ್ಯಾಶ್ಚ ಸರೋವರೇ ॥ ೪೪ ॥

ಲಕ್ಷಯಕ್ಷೈ ರಕ್ಷಣೀಯಂ ಪಾರ್ವತೀವ್ರತಹೇತವೇ ।
ನಿತ್ಯಂ ಸಹಸ್ರಕಮಲಂ ದದಾತಿ ಹರಯೇ ಸತೀ ॥ ೪೫ ॥

ವ್ರತೇ ತ್ರೈಮಾಸಿಕೇ ಭಕ್ತ್ಯಾ ಪತಿಸೌಭಾಗ್ಯವರ್ಧನೇ ।
ಶಿವಸ್ಯ ವಚನಂ ಶ್ರುತ್ವಾ ತಮೂಚುರ್ವೈಷ್ಣವಾ ಭಿಯಾ ।
ಪುಟಾಂಜಲಿಯುತಾಃ ಸರ್ವೇ ಭಕ್ತಿನಮ್ರಾತ್ಮಕಂಧರಾಃ ॥ ೪೬ ॥

---

೪೩. ಅವರೆಲ್ಲರೂ ಶಂಕರನನ್ನು ಕಂಡು ಭೂಮಿಯ ಮೇಲೆ ಸಾಷ್ಟಾಂಗ ಪ್ರಣಾಮಮಾಡಿದರು. ಭಕ್ತಾನುಗ್ರಹಕಾರಕನಾದ ಶಿವನು ಮಂದಹಾಸದಿಂದ ಪ್ರಸನ್ನವದನನಾಗಿ ಅವರೆಲ್ಲರಿಗೂ ದಿವ್ಯಾಶೀರ್ವಾದಗಳನ್ನು ಮಾಡಿ ಅವರನ್ನು ಕುರಿತಿಂತೆಂದನು.

೪೪. ಶಿವ :— ಪಾರ್ವತಿಯ ಸರೋವರದಲ್ಲಿ ಪದ್ಮಗಳನ್ನು ಅಪಹರಿಸುತ್ತಿದ್ದ ನೀವು ಯಾರು ?

೪೫ ಪಾರ್ವತಿಯ ವ್ರತಕ್ಕಾಗಿ ಲಕ್ಷಸಂಖ್ಯಾಕರಾದ ಯಕ್ಷರು ಅದನ್ನು ರಕ್ಷಿಸುತ್ತಿರುವರು. ಪತಿವ್ರತಾಶಿರೋಮಣಿಯಾದ ಪಾರ್ವತಿಯು ಪ್ರತಿದಿನವೂ ಸಾವಿರ ಕಮಲವನ್ನು ಶ್ರೀಹರಿಗೆ ಸಮರ್ಪಿಸುವಳು.

೪೬. ಪತಿ ಸೌಭಾಗ್ಯಾಭಿವೃದ್ಧಿಗಾಗಿ ಮೂರುತಿಂಗಳಕಾಲ ಈ ವ್ರತವನ್ನು ಆಚರಿಸುವಳು. ಈ ರೀತಿಯಾಡಿದ ಶಿವನ ಮಾತುಗಳನ್ನು ಕೇಳಿ ಆ ವಿಷ್ಣುಭಕ್ತರೆಲ್ಲರೂ ಭಯಗೊಂಡು ಭಕ್ತಿಯಿಂದ ಕೈಮುಗಿದುಕೊಂಡು ತಲೆಬಾಗಿ ನಿಂತು ಈ ರೀತಿ ಬಿನ್ನವಿಸಿದರು.

॥ ಗಂಧರ್ವಾ ಊಚುಃ ॥

ವಯಂ ಗಂಧರ್ವಪ್ರವರಾ ಗಂಧವಾಹಸುತಾಃ ವಿಭೋ ॥ ೪೭ ॥

ಹರಯೇ ಕಮಲಂ ದತ್ವಾ ಪಿಬಾಮೋ ಜಲಮೀಶ್ವರ ।
ವಯಂ ನ ವಿದ್ಮೋ ಹೇ ನಾಥ ಪಾರ್ವತ್ಯಾ ರಕ್ಷಿತಂ ಸರಃ ॥ ೪೮ ॥

ಗೃಹಾಣ ಕಮಲಂ ಸರ್ವಂ ಯುಷ್ಮಾಕಂ ಚ ಫಲಂ ಕುರು ।
ನ ದಾಸ್ಯಾಮೋಽದ್ಯ ಕಮಲಂ ಪಾಸ್ಯಾಮೋಽದ್ಯ ಜಲಂ ಹರ ॥ ೪೯ ॥

ಕಿಂ ವಾ ಕಥಂ ನ ಪಾಸ್ಯಾಮಸ್ತುಭ್ಯಂ ದತ್ವಾನಿ ತಾನಿ ಚ ।
ನಿತ್ಯಂ ಧ್ಯಾತ್ವಾ ಯತ್ಪದಾಬ್ಜಂ ಪದ್ಮೇನ ಪೂಜಯಾಮಹೇ ॥ ೫೦ ॥

ಸಾಕ್ಷಾತ್ತಸ್ಮೈ ಪ್ರದತ್ವಾ ಚ ಪದ್ಮಂ ಪೂತಾ ವಯಂ ಪ್ರಭೋ ।
ಏಕಂ ಬ್ರಹ್ಮ ಹ್ಯದ್ವಿತೀಯಂ ಕ್ವ ದೇಹಃ ಕ್ವ ಚ ರೂಪವಾನ್ ॥ ೫೧ ॥

---

೪೭. ಗಂಧರ್ವರು:—ಎಲೈ ಪ್ರಭುವೇ, ನಾವು ಗಂಧವಾಹನಪುತ್ರರೂ ಗಂಧರ್ವಪ್ರವರರೂ ಎನಿಸಿದ್ದೇವೆ.

೪೮. ಎಲೈ ಈಶ್ವರನೇ, ನಾವು ಪ್ರತಿದಿನವೂ ಶ್ರೀಹರಿಗೆ ಕಮಲಪುಷ್ಪವನ್ನು ಸಮರ್ಪಿಸಿ ಜಲಪಾನಮಾಡುತ್ತೇವೆ. ಎಲೈ ನಾಥನೇ, ಈ ಸರೋವರದಲ್ಲಿ ಪಾರ್ವತಿಯು ಕಾವಲಿರಿಸಿರುವಳೆಂಬುದನ್ನು ನಾವರಿಯೆವು.

೪೯. ಈ ಪುಷ್ಪವೆಲ್ಲವನ್ನೂ ನೀನೆ ಸ್ವೀಕರಿಸಿ, ನಮಗೆ ಅನುಗ್ರಹಮಾಡು. ಎಲೈ ಸರ್ವೇಶ್ವರನೇ, ಇಂದು ನಾವು ಕಮಲವನ್ನು ಶ್ರೀಹರಿಗೆ ಸಮರ್ಪಿಸದೆ ಜಲಪಾನಮಾಡುತ್ತೇವೆ.

೫೦. ಪ್ರತಿನಿತ್ಯವೂ ಧ್ಯಾನಮಾಡಿ ಯಾರ ಪಾದಕಮಲಗಳನ್ನು ಪೂಜಿಸುತ್ತೇವೋ ಆ ಶ್ರೀಹರಿಗೆ ಅಭಿನ್ನವಾದ ನಿನಗೆ ಕಮಲಗಳನ್ನು ಸಮರ್ಪಿಸಿದ ಮೇಲೆ ನಾವು ಜಲಪಾನಮಾಡುವುದರಿಂದ ದೋಷವೇನು?

೫೧. ಎಲೈ ಪ್ರಭುವೇ, ಈಗ ಸಾಕ್ಷಾತ್ ಶ್ರೀಹರಿಗೇ ಪದ್ಮಸಮರ್ಪಣೆ ಮಾಡಿದಂತಾಗಿ ನಾವು ಪುನೀತರಾದೆವು. ಬ್ರಹ್ಮವು ಒಂದೇ, ಎರಡಲ್ಲ. ಹೀಗಿರುವಾಗನಾಮರೂಪಗಳು ಎಲ್ಲಿಯುದು?

ಭಕ್ತಾನುಗ್ರಹತೋ ದೇಹೋ ರೂಪಭೇದಶ್ಚ ಮಾಯಯಾ ।
ಕಿಂ ತು ಗೃಹಾಣ ಪದ್ಮಾನಿ ತ್ವಮೇವ ಮತ್ಪ್ರಭುಃ ಪ್ರಭೋ ॥ ೫೨ ॥

ಯತೋ ನೋ ಮಾನಸಂ ಪೂರ್ಣಂ ತದ್ರೂಪಂ ದರ್ಶಯಾಚ್ಯುತ ।
ದ್ವಿಭುಜಂ ಕಮನೀಯಂ ಚ ಕಿಶೋರಂ ಶ್ಯಾಮಸುಂದರಂ ॥ ೫೩ ॥

ವಿನೋದಮುರಲೀಹಸ್ತಂ ಪೀತಾಂಬರಧರಂ ಪರಂ ।
ಏಕವಕ್ತ್ರಂ ದ್ವಿನಯನಂ ಚಂದನಾಗುರುಚರ್ಚಿತಂ ॥ ೫೪ ॥

ಈಶದ್ಧಾಸ್ಯಪ್ರಸನ್ನಾಸ್ಯಂ ರತ್ನಾಲಂಕಾರಭೂಷಿತಂ ।
ಕೌಸ್ತುಭೇನ ಮಣೀಂದ್ರೇಣ ವಕ್ಷಃಸ್ಥಲಸಮುಜ್ವಲಂ ॥ ೫೫ ॥

ಮಯೂರಪಿಚ್ಛಚೂಡಂ ಚ ಮಾಲತೀಮಾಲ್ಯಭೂಷಿತಂ ।
ಪಾರಿಜಾತಪ್ರಸೂನಾನಾಂ ಮಾಲಾರಾಜಿವಿಭೂಷಿತಂ ॥ ೫೬ ॥

---

೫೨. ಭಕ್ತಾನುಗ್ರಹಕ್ಕಾಗಿ ಮಾಯಾಮಹಿಮೆಯಿಂದ ದೇಹವನ್ನೂ ರೂಪ ಭೇದವನ್ನೂ ಹೊಂದುವೆ ಆದುದರಿಂದ ಎಲೈ ಪ್ರಭುವೇ ನೀನೇ ನಮ್ಮೊಡೆಯನು. ಈ ಪದ್ಮಗಳನ್ನು ಸ್ವೀಕರಿಸು.

೫೩. ಯಾವ ರೂಪವನ್ನು ನೋಡಿ ನಮ್ಮ ಮನಸ್ಸು ಪರಿಪೂರ್ಣ ವಾಗುವುದೋ ಅಂಥ ದ್ವಿಭುಜವೂ, ಶ್ಯಾಮಸುಂದರವೂ, ಕಮನೀಯವೂ ಆದ ಗೋಪಕಿಶೋರರೂಪವನ್ನು ನಮಗೆ ತೋರು.

೫೪. ಪೀತಾಂಬರವನ್ನುಟ್ಟು, ವಿನೋದಾರ್ಥವಾಗಿ ಕೈಯಲ್ಲಿ ಕೊಳಲನ್ನು ಧರಿಸಿ, ಚಂದನ ಅಗುರು ಮುಂತಾದ ವಿಲೇಪನದ್ರವ್ಯಗಳನ್ನು ಲೇಪಿಸಿಕೊಂಡಿರುವ ಒಂದು ಮುಖ ಮತ್ತು ಎರಡು ಕಣ್ಣುಗಳುಳ್ಳ ದಿವ್ಯರೂಪವನ್ನು ತೋರು.

೫೫. ಮಂದಹಾಸನದಿಂದ ಪ್ರಸನ್ನವದನನೂ, ರತ್ನಾಲಂಕಾರ ಭೂಷಿತನೂ, ಆಗಿ ವಕ್ಷಃಸ್ಥಲದಲ್ಲಿ ಶ್ರೇಷ್ಠವಾದ ಕೌಸ್ತುಭಮಣಿಯನ್ನು ಧರಿಸಿರುವ ದಿವ್ಯರೂಪದ ದರ್ಶನವನ್ನು ಕೊಡು.

೫೬. ಚೂಡಾಪಾಶದಲ್ಲಿ ನವಿಲುಗರಿಯನ್ನು ಧರಿಸಿ ಜಾಜೀಹೂಮಾಲೆ ಯನ್ನು ಮುಡಿದು ಪಾರಿಜಾತಪುಷ್ಪದ ಮಾಲೆಯನ್ನು ಕಂಠದಲ್ಲಿ ಧರಿಸಿರುವ ದಿವ್ಯ ರೂಪವನ್ನು ತೋರು.

ಕೋಟಿಕಂದರ್ಪಲಾವಣ್ಯಲೀಲಾ ಧಾಮಮನೋಹರಂ ।
ಗೋಪೀಸಂಘೈರ್ದೃಶ್ಯಮಾನಂ ಸಸ್ಮಿತೈರ್ವಕ್ರಲೋಚನೈಃ ॥ ೫೭ ॥

ನವಯೌವನಸಂಪನ್ನಂ ರಾಧಾವಕ್ಷಃಸ್ಥಲಸ್ಥಿತಂ ।
ಬ್ರಹ್ಮಾದಿಭಿಃ ಸ್ತೂಯಮಾನಂ ವಂದ್ಯಂ ಧ್ಯೇಯಮಭೀಪ್ಸಿತಂ ॥ ೫೮ ॥

ಸ್ವಾತ್ಮಾರಾಮಂ ಪೂರ್ಣಕಾಮಂ ಭಕ್ತಾನುಗ್ರಹಕಾತರಂ ।
ಇತ್ಯುಕ್ತ್ವಾ ಪುರತಃ ಶಂಭೋಸ್ತಸ್ಥುರ್ಗಂಧರ್ವಪುಂಗವಾಃ ॥ ೫೯ ॥

ಶ್ರೀಕೃಷ್ಣ ರೂಪಶ್ರವಣಾತ್ಪುಲಕಾಂಕಿತವಿಗ್ರಹಃ ।
ಗಂಧರ್ವಾಣಾಂ ವಚಃ ಶ್ರುತ್ವಾ ಶಿವಸ್ತಾನಿತ್ಯುವಾಚ ಹ ॥ ೬೦ ॥

ಶ್ರೀಕೃಷ್ಣ ರೂಪಶ್ರವಣಾತ್ಸಾಶ್ರುಪೂರ್ಣವಿಲೋಚನಃ ।
ಮನ್ಯೇವ ಯೂಯಂ ವಿಜ್ಞಾತಾ ವೈಷ್ಣವಪ್ರವರಾ ಮಹೀಂ ॥ ೬೧ ॥

---

೫೭. ಕೋಟಿಮನ್ಮಥರ ಲಾವಣ್ಯಕ್ಕೆ ನಿಧಿಪ್ರಾಯವೂ, ಸ್ಮಿತಮುಖಿಯರೂ ಮನೋಹಾರಿಣಿಯರೂ ಆದ ಗೋಪಿಕಾಸ್ತ್ರೀಯರ ಕಟಾಕ್ಷವೀಕ್ಷಣಕ್ಕೆ ಪಾತ್ರವೂ ಆಗಿರುವ ದಿವ್ಯರೂಪವನ್ನು ತೋರು.

೫೮. ನವಯೌವನಸಂಪನ್ನನನೂ, ರಾಧೆಯನ್ನು ವಕ್ಷಃಸ್ಥಲದಲ್ಲಿ ಧರಿಸಿರುವವನೂ, ಬ್ರಹ್ಮಾದಿಗಳಿಂದ ಸ್ತುತ್ಯನೂ, ವಂದ್ಯನೂ ಆದ ನಿನ್ನ ಮನೋಹರ ರೂಪವನ್ನು ತೋರು.

೫೯. ಸ್ವಾತ್ಮಾರಾಮನೂ, ಪೂರ್ಣಕಾಮನೂ, ಭಕ್ತಾನುಗ್ರಹಕಾತರನೂ ಆದ ನಿನ್ನ ಸ್ವರೂಪವನ್ನು ತೋರೆಂದು ಹೇಳಿ ಆ ಗಂಧರ್ವಪುಂಗವರು ಶಂಭುವಿನ ಮುಂದೆ ಕೈಮುಗಿದು ನಿಂತರು.

೬೦. ಶ್ರೀಕೃಷ್ಣನ ರೂಪವರ್ಣನೆಯನ್ನು ಕೇಳಿ ರೋಮಾಂಚಿತಶರೀರನಾದ ಶಿವನು ಗಂಧರ್ವರ ಇಷ್ಟಾರ್ಥವನ್ನು ಕೇಳಿ ಅವರನ್ನು ಕುರಿತಿಂತೆಂದನು.

೬೧. ಎಲೈ ಗಂಧರ್ವಶ್ರೇಷ್ಠರೇ ಶ್ರೀಕೃಷ್ಣನ ರೂಪಲಾವಣ್ಯಗಳ ವರ್ಣನೆಯನ್ನು ಕೇಳಿ, ಆನಂದಾಶ್ರು ಪೂರಿತನಾದ ನಾನು ನೀವೆಲ್ಲರೂ ವಿಷ್ಣುಭಕ್ತಶ್ರೇಷ್ಠರೆಂದು ತಿಳಿದಿರುವೆನು

ಪೂತಾಂ ಕರ್ತುಂ ಚ ಭ್ರಮಥ ಚರಣಾಂಭೋಜರೇಣುನಾ ।
ಅಹಂ ವಾಂಛಾಂ ಕರೋಮ್ಯೇವ ಶ್ರೀಕೃಷ್ಣಭಕ್ತದರ್ಶನೇ ॥

ಸಮಾಗಮೋ ಹಿ ಸಾಧೂನಾಂ ತ್ರಿಷು ಲೋಕೇಷು ದುರ್ಲಭಃ ।
ಪಾರ್ವತ್ಯಾಶ್ಚ ಸುರಾಣಾಂ ಚ ಸದಾ ಯೂಯಂ ಮಮ ಪ್ರಿಯಾಃ ॥

ಆತ್ಮನಶ್ಚಾತ್ಮಭಕ್ತೇಭ್ಯೋ ವೈಷ್ಣವಾಶ್ಚ ಪ್ರಿಯಾಶ್ಚ ನಃ ।
ಕಿಂತು ಮೋಘಂ ಚ ನ ಭವೇನ್ಮಯಾ ಯತ್ಸ್ವೀಕೃತಂ ಪುರಾ ॥

ತಚ್ಛ್ರೂಯತಾಂ ಮಹಾಭಾಗಾಃ ಪಾರ್ವತೀವ್ರತಕರ್ಮಣಿ ।
ಸರಸಶ್ಚೈವ ಪದ್ಮಾನಿ ಯೈರ್ಹೃತಾನಿ ವ್ರತಾಂತರೇ ॥

ತೇತೂರ್ಣಮಾಸುರೀಂ ಯೋನಿಂ ಗಮಿಷ್ಯಂತಿ ನ ಸಂಶಯಃ ।
ನ ಹಿ ಶ್ರೀಕೃಷ್ಣಭಕ್ತಾನಾಮಶುಭಂ ವಿದ್ಯತೇ ಕ್ವಚಿತ್ ॥

---

೬೨. ನೀವು ನಿಮ್ಮ ಪಾದಕಮಲಗಳ ಧೂಳಿಯಿಂದ ಭೂಮಿಯಂ ಪವಿತ್ರಗೊಳಿಸಲು ತೀರ್ಥಯಾತ್ರೆ ಮಾಡುತ್ತಿದ್ದೀರಿ. ನಿಮ್ಮಂಥ ಶ್ರೀಕೃಷ್ಣ ನೋಡಬೇಕೆಂದು ನನಗೆ ತುಂಬಾ ಆಸೆ.

೬೩. ಸತ್ಪುರುಷರ ಸಮಾಗಮವು ಮೂರು ಲೋಕದಲ್ಲಿಯೂ ಸು ಸಿಗುವುದಿಲ್ಲ. ನೀವು ಪಾರ್ವತಿಗೂ, ದೇವತೆಗಳಿಗೂ ಮತ್ತು ನನಗೂ ಕೂಡ ಪ್ರೀತಿಪಾತ್ರರಾಗಿದ್ದೀರಿ.

೬೪. ನಮ್ಮ ಆತ್ಮಕ್ಕಿಂತಲೂ, ನಮ್ಮ ಭಕ್ತರಿಗಿಂತಲೂ ವಿ ನಮಗೆ ಹೆಚ್ಚು ಪ್ರೀತಿಪಾತ್ರರು. ನಾನು ನಿಮ್ಮಿಂದ ಸ್ವೀಕರಿಸಿದ ಎಂದೆಂದಿಗೂ ವ್ಯರ್ಥವಾಗುವುದಿಲ್ಲ.

೬೫-೬೬. ಆದುದರಿಂದ ಎಲೈ ಮಹನೀಯರೇ, ಕೇಳಿ. ಪಾ ವ್ರತಕ್ಕಾಗಿ ಮೀಸಲಾಗಿದ್ದ ತಾವರೆಯ ಹೂವನ್ನು ಯಾರು ಅನ್ಯಾ ಅಪಹರಿಸಿದರೋ ಅವರೆಲ್ಲರೂ ಜಾಗ್ರತೆಯಾಗಿ ಅಸುರಯೋನಿಯಲ್ಲಿ ಜನ್ಮ ಸಂಶಯವಿಲ್ಲ. ಆದರೆ ಶ್ರೀಕೃಷ್ಣನ ಭಕ್ತರಿಗೆ ಯಾವ ಜನ್ಮ ಬಂದರೂ ಅಮಂಗಳವೂ ಉಂಟಾಗುವುದಿಲ್ಲ.

**ಸಂಪ್ರಾಪ್ಯ ಮಾನವೀಂ ಯೋನಿಂ ಗೋಲೋಕಂ ಯಾಸ್ಯಥ ಧ್ರುವಂ ।**
**ಯೂಯಂ ಶ್ರೀಕೃಷ್ಣರೂಪಂ ಚ ಪ್ರತ್ಯಕ್ಷಂ ದ್ರಷ್ಟುಮುತ್ಸುಕಾಃ ॥ ೬೭ ॥**

**ಧ್ರುವಂ ಪ್ರಕ್ಷ್ಯಥ ಭೋ ವತ್ಸಾ ವೃಂದಾರಣ್ಯೇ ಚ ಭಾರತೇ ।**
**ದೃಷ್ಟ್ವಾ ಕೃಷ್ಣಂ ತತೋ ಮೃತ್ಯುಂ ಸಂಪ್ರಾಪ್ಯ ವೈಷ್ಣವೋತ್ತಮಾಃ ॥ ೬೮ ॥**

**ದಿವ್ಯಂ ಸ್ಯಂದನಮಾರುಹ್ಯ ಗಮಿಷ್ಯಥ ಹರೇರ್ಗೃಹಂ ।**
**ಅಧುನಾ ವಾಂಛನೀಯಂ ಚ ರೂಪಂ ದ್ರಷ್ಟುಮಿಹೋತ್ಸುಕಾಃ ॥ ೬೯ ॥**

**ತತ್ಸರ್ವಂ ಪಶ್ಯತೇತ್ಯುಕ್ತ್ವಾ ದರ್ಶಯಾಮಾಸ ತಚ್ಛಿವಃ ।**
**ರೂಪಂ ದೃಷ್ಟ್ವಾ ಸಾಶ್ರುನೇತ್ರಾಃ ಪ್ರಣಮ್ಯ ಸರ್ವರೂಪಿಣಂ ॥ ೭೦ ॥**

**ಆಜಗ್ಮುರ್ದಾನವೀಂ ಯೋನಿಮಿತಿ ತೇ ದಾನವೇಶ್ವರಾಃ ।**
**ವಸುದೇವಃ ಪುರಾ ಮುಕ್ತಃ ಸುಹೋತ್ರಶ್ಚ ಬಕಾಸುರಃ ॥ ೭೧ ॥**

---

೬೭. ಆದಕಾರಣ ನೀವೆಲ್ಲರೂ ದಾನವ ಜನ್ಮವನ್ನು ಪಡೆದು ಮುಕ್ತರಾಗಿ ಗೋಲೋಕಕ್ಕೆ ನಿಶ್ಚಯವಾಗಿಯೂ ಹೋಗುವಿರಿ. ಅಲ್ಲಿ ಶ್ರೀಕೃಷ್ಣನ ರೂಪವನ್ನು ಉತ್ಸುಕದಿಂದ ಪ್ರತ್ಯಕ್ಷವಾಗಿ ನೋಡುವಿರಿ.

೬೮-೭೦. ಮಕ್ಕಳಿರಾ, ನೀವು ನಿಶ್ಚಯವಾಗಿಯೂ ಭರತಖಂಡದ ಬೃಂದಾವನದಲ್ಲಿ ಶ್ರೀಕೃಷ್ಣನ ದರ್ಶನವನ್ನು ಪಡೆಯುವಿರಿ. ಶ್ರೀಕೃಷ್ಣದ ದರ್ಶನಾನಂತರ ಮರಣಹೊಂದಿ, ದಿವ್ಯರಥವನ್ನೇರಿ ವೈಷ್ಣವೋತ್ತಮರಾದ ನೀವು ಶ್ರೀಹರಿಯ ಮಂದಿರಕ್ಕೆ ತೆರಳುವಿರಿ. ಈಗ ನಿಮಗೆ ಅಭಿಪ್ರೇತವಾದ ರೂಪವನ್ನು ನೋಡಲು ಉತ್ಸುಕರಾಗಿದ್ದೀರಿ. ಆ ದಿವ್ಯರೂಪವನ್ನು ಚೆನ್ನಾಗಿ ನೋಡಿ, ಎಂದು ಹೇಳಿ ಶಿವನು ಶ್ರೀಕೃಷ್ಣನ ರೂಪವನ್ನು ತೋರಿದನು. ಅದನ್ನು ನೋಡಿ ಆನಂದಾಶ್ರುಪೂರಿತವಾಗಿ ಎಲ್ಲರೂ ಸರ್ವರೂಪಿಯಾದ ಶಿವನಿಗೆ ನಮಸ್ಕರಿಸಿದರು.

೭೧-೭೩. ಹೀಗೆ ಹೇಳಿದ ಕಾರಣದಿಂದ ಆ ಗಂಧರ್ವರು ದಾನವಯೋನಿಯಲ್ಲಿ ಜನ್ಮವೆತ್ತಬೇಕಾಯಿತು. ನಾಲ್ವರು ಗಂಧರ್ವರಲ್ಲಿ ವಸುದೇವನೆಂಬುವನು ದೂರ್ವಾಸರ ಅನುಗ್ರಹದಿಂದ ಮೊದಲೇ ಯೋಗಸಿದ್ಧಿಯನ್ನು ಪಡೆದು ಶ್ರೀಕೃಷ್ಣನ

**ಸುದರ್ಶನಃ ಪ್ರಲಂಬೋऽಯಂ ಸ್ವಯಂ ಕೇಶೀ ಸುಪಾರ್ಶ್ವಕಃ।**
**ಹರಸ್ಯ ವರದಾನೇನ ದೃಷ್ಟ್ವಾ ರೂಪಮನುತ್ತಮಂ ॥ ೭೨ ॥**

**ಮೃತ್ಯುಂ ಸಂಪ್ರಾಪ್ಯ ಶ್ರೀಕೃಷ್ಣಾಜ್ಜಗ್ಮುಸ್ತೇ ಕೃಷ್ಣಮಂದಿರಂ।**
**ಇತ್ಯೇವಂ ಕಥಿತಂ ವಿಪ್ರ ಹರೇಶ್ಚರಿತಮದ್ಭುತಂ।**
**ಬಕಕೇಶಪ್ರಲಂಬಾನಾಂ ಮೋಕ್ಷಣಂ ಮೋಕ್ಷಕಾರಕಂ ॥ ೭೩ ॥**

**॥ ನಾರದ ಉವಾಚ ॥**

**ಶ್ರುತಂ ಸರ್ವಂ ಮಹಾಭಾಗ ತ್ವತ್ಪ್ರಸಾದಾದ್ಯದದ್ಭುತಂ ॥ ೭೪ ॥**

**ಅಧುನಾ ಶ್ರೋತುಮಿಚ್ಛಾಮಿ ಪಾರ್ವತ್ಯಾ ಕಿಂ ಕೃತಂ ವ್ರತಂ।**
**ಕೋ ವಾऽऽರಾಧ್ಯೋ ವ್ರತಸ್ಯಾಸ್ಯ ಕಿಂ ಫಲಂ ನಿಯಮಶ್ಚ ಕಃ ॥ ೭೫ ॥**

---

ಪಾರ್ಷದನಾಗಿದ್ದುದರಿಂದ ಉಳಿದ ಮೂವರು ಗಂಧರ್ವರು ಈಗ ಶಾಪಗ್ರಸ್ತರಾದರು. ಅವರಲ್ಲಿ ಸುಹೋತ್ರನು ಬಕಾಸುರನಾಗಿಯೂ, ಸುದರ್ಶನನು ಪ್ರಲಂಬನಾಗಿಯೂ, ಸುಪಾರ್ಶ್ವಕನು ಕೇಶಿ ಎಂಬ ದಾನವನಾಗಿಯೂ ಹುಟ್ಟಿದರು. ಮಹೇಶ್ವರನ ವರದಂತೆ ಶ್ರೀಕೃಷ್ಣನ ದಿವ್ಯರೂಪದರ್ಶನವನ್ನು ಪಡೆದು, ಅವನಿಂದಲೇ ಮೃತ್ಯುವನ್ನು ಹೊಂದಿ ಶ್ರೀಕೃಷ್ಣನ ಮಂದಿರಕ್ಕೆ ಹೋಗಿ ಸೇರಿದರು. ಎಲೈ ನಾರದನೇ, ಈ ರೀತಿ ಬಕ, ಕೇಶಿ ಮತ್ತು ಪ್ರಲಂಬಾಸುರರಿಗೆ ಮೋಕ್ಷದಾಯಕವಾದ ಶ್ರೀಹರಿಯ ಅದ್ಭುತಚರಿತ್ರೆಯನ್ನು ವರ್ಣಿಸಿದೆನು.

೭೪. ನಾರದ:—ಎಲೈ ಮಹಾಭಾಗ್ಯಶಾಲಿಯಾದ ನಾರಾಯಣಮಹರ್ಷಿಯೇ, ನಿನ್ನ ದಿವ್ಯಾನುಗ್ರಹದಿಂದ ಶ್ರೀಹರಿಯ ಅದ್ಭುತವಾದ ಬಾಲಲೀಲೆಗಳನ್ನು ಕೇಳಿದೆನು.

೭೫. ಈಗ ಪಾರ್ವತೀದೇವಿಯು ಯಾವ ವ್ರತವನ್ನಾಚರಿಸಿದಳೆಂದು ಕೇಳಬಯಸುತ್ತೇನೆ. ಆ ವ್ರತದ ಆರಾಧ್ಯದೇವತೆ ಯಾರು ? ಅದರ ಫಲವೇನು ? ಮತ್ತು ಆ ವ್ರತದ ನಿಯಮವಾವುದು ?

ಕಾನಿ ದ್ರವ್ಯಾಣಿ ಭಗವನ್ವ್ರತೋಪಯೋಗಿಕಾನಿ ಚ ।
ಕತಿ ಕಾಲಂ ವ್ರತಂ ಕಿಂ ವಾ ಪ್ರತಿಷ್ಠಾಯಾಂ ನಿರೂಪಣಂ ॥ ೭೬ ॥

ಸುವಿಚಾರ್ಯ ವದ ವಿಭೋ ಶ್ರೋತುಂ ಕೌತೂಹಲಂ ಮಮ ।

॥ ಶ್ರೀನಾರಾಯಣ ಉವಾಚ ॥

ವ್ರತಂ ತ್ರೈಮಾಸಿಕಂ ನಾಮ ಪತಿಸೌಭಾಗ್ಯವರ್ಧನಂ ॥ ೭೭ ॥

ಆರಾಧ್ಯೋ ಭಗವಾನ್ಕೃಷ್ಣೋ ರಾಧಿಕಾಸಹಿತೋ ಮುನೇ ।
ವಿಷುವೇ ಚ ಸಮಾರಂಭಃ ಸಮಾಪ್ತಿರ್ದಕ್ಷಿಣಾಯನೇ ॥ ೭೮ ॥

ಸಂಯಮ್ಯ ಪೂರ್ವದಿವಸೇ ಕೃತ್ವಾವಶ್ಯಂ ಹವಿಷ್ಯಕಂ ।
ಸ್ನಾತ್ವಾ ವೈಶಾಖಸಂಕ್ರಾಂತ್ಯಾಂ ಸಂಕಲ್ಪ್ಯ ಜಾಹ್ನವೀತಟೇ ॥ ೭೯ ॥

---

೭೬. ಪೂಜ್ಯನೇ, ಆ ವ್ರತಕ್ಕೆ ಉಪಯುಕ್ತವಾದ ದ್ರವ್ಯಗಳಾವುವು? ಅದನ್ನು ಆಚರಿಸಬೇಕಾದ ಕಾಲಪರಿಮಾಣವೆಷ್ಟು? ವ್ರತವಿಧಿಯಲ್ಲಿ ಉಕ್ತವಾಗಿರುವುದೇನು ?

೭೭. ಸರ್ವಜ್ಞನೇ, ಇವೆಲ್ಲವನ್ನೂ ಚೆನ್ನಾಗಿ ಪರ್ಯಾಲೋಚಿಸಿ ನನಗೆ ತಿಳುಹು. ನನಗೆ ಕೇಳಲು ಬಹಳ ಕುತೂಹಲವಿದೆ.

ಶ್ರೀನಾರಾಯಣ :– ಎಲೈ ನಾರದನೇ, ಪತಿಸೌಭಾಗ್ಯವರ್ಧಕವಾದ ಆ ವ್ರತಕ್ಕೆ ತ್ರೈಮಾಸಿಕವ್ರತವೆಂದು ಹೆಸರು.

೭೮. ಎಲೈ ಮುನಿಯೇ, ಆ ವ್ರತದಲ್ಲಿ ರಾಧಾದೇವಿಯೊಡಗೂಡಿದ ಷಡ್ಗುಣೈಶ್ವರ್ಯಪರಿಪೂರ್ಣನಾದ ಶ್ರೀಕೃಷ್ಣನೇ ಆರಾಧ್ಯದೇವತೆಯು. ವಿಷುವತ್ಪುಣ್ಯಕಾಲದಲ್ಲಿ ಆ ವ್ರತವನ್ನು ಪ್ರಾರಂಭಿಸಿ ದಕ್ಷಿಣಾಯನದಲ್ಲಿ ಸಮಾಪ್ತಿಗೊಳಿಸಬೇಕು. (ಮೇಷಸಂಕ್ರಮಣದಲ್ಲಾರಂಭಿಸಿ ಕರ್ಕಾಟಕಸಂಕ್ರಮಣಕ್ಕೆಸಮಾಪ್ತಿಗೊಳಿಸಬೇಕು.)

೭೯-೮೦. ವ್ರತಪರರು ಇಂದ್ರಿಯನಿಗ್ರಹಮಾಡಿ ವ್ರತಕ್ಕೆ ಪೂರ್ವದಿವಸ ಹವಿಷ್ಯಾನ್ನವನ್ನು ಭುಜಿಸಿಕೊಂಡಿದ್ದು, ವೈಶಾಖಮಾಸದ ಸಂಕ್ರಮಣದ ದಿವಸ ಗಂಗಾನದಿಯಲ್ಲಿ ಸ್ನಾನಮಾಡಿ, ವ್ರತಸಂಕಲ್ಪಮಾಡಿ, ಕಲಶದಲ್ಲೋ, ಮಣಿಯಲ್ಲೋ

ಘಟೇ ಮಣೌ ಶಾಲಗ್ರಾಮೇ ಜಲೇ ವಾ ಪೂಜಯೇದ್ವ್ರತೀ ।
ಧ್ಯಾಯೇದ್ಭಕ್ತ್ಯಾ ಚ ರಾಧೇಶಂ ಸಂಪೂಜ್ಯ ಪಂಚ ದೇವತಾಃ ॥ ೮೦ ॥

ಧ್ಯಾನಂ ಚ ಸಾಮವೇದೋಕ್ತಂ ನಿಬೋಧ ಕಥಯಾಮಿ ತೇ ।
ನವೀನನೀರದಶ್ಯಾಮಂ ಪೀತಕೌಶೇಯ ವಾಸಸಂ ॥ ೮೧ ॥

ಶರತ್ಪಾರ್ವಣಚಂದ್ರಾಸ್ಯಮೀಷದ್ಧಾಸ್ಯಸಮನ್ವಿತಂ ।
ಶರತ್ಪ್ರಫುಲ್ಲಪದ್ಮಾಕ್ಷಂ ಮಂಜುಲಾಂಛನರಂಜಿತಂ ॥ ೮೨ ॥

ಮಾನಸಂ ಗೋಪಿಕಾನಾಂ ಚ ಮೋಹಯಂತಂ ಮುಹುರ್ಮುಹುಃ ।
ರಾಧಯಾ ದೃಶ್ಯಮಾನಂ ಚ ರಾಧಾವಕ್ಷಃಸ್ಥಲಸ್ಥಿತಂ ॥ ೮೩ ॥

ಬ್ರಹ್ಮಾನಂತೇಶಧರ್ಮಾದ್ಯೈಃ ಸ್ತೂಯಮಾನಮಹಂ ಭಜೇ ।
ಧ್ಯಾತ್ವಾ ಕೃಷ್ಣಂ ಚ ಧ್ಯಾನೇನ ತಮಾವಾಹ್ಯ ವ್ರತೀ ಮುದಾ ॥ ೮೪ ॥

---

ಸಾಲಿಗ್ರಾಮದಲ್ಲೋ, ಜಲಾಶಯದಲ್ಲೋ ರಾಧಾಪತಿಯನ್ನು ಆವಾಹನೆಮಾಡಿ, ಗಣೇಶಾದಿ ಪಂಚಾಯತನ ಪೂಜೆಮಾಡಿ ಧ್ಯಾನಮಾಡಬೇಕು.

೮೧-೮೨. ಸಾಮವೇದೋಕ್ತವಾದ ಧ್ಯಾನಕ್ರಮವನ್ನು ವಿವರಿಸುವೆನು ಕೇಳು. ನವಮೇಘದಂತೆ ಶ್ಯಾಮಲವರ್ಣನೂ, ಪಿತಾಂಬರಧಾರಿಯೂ, ಶರತ್ಪೂರ್ಣಿಮಾ ಚಂದ್ರನಂತಿರುವ ಮುಖವುಳ್ಳವನೂ, ಮಂದಹಾಸ ಶೋಭಿತನೂ, ಶರದೃತುವಿನ ಅರಳಿದ ತಾವರೆಯಂತೆ ವಿಶಾಲವಾದ ಕಣ್ಣುಳ್ಳವನೂ, ಸುಂದರವಾದ ಶ್ರೀವತ್ಸವೆಂಬ ಲಾಂಛನದಿಂದ ಮನೋಹರನೂ ಆದ ಪರಮಾತ್ಮನನ್ನು ಧ್ಯಾನಿಸುವೆನು.

೮೩-೮೪. ಗೋಪಿಕಾಸ್ತ್ರೀಯರ ಮನಸ್ಸನ್ನು ಬಾರಿಬಾರಿಗೂ ಮೊಹಗೊಳಿಸುವ, ರಾಧೆಯ ವಕ್ಷಃಸ್ಥಳದಲ್ಲಿ ಸರ್ವದಾ ನೆಲೆಸಿ ಪ್ರತ್ಯಕ್ಷನಾಗಿರುವ, ಮತ್ತು ಬ್ರಹ್ಮ, ಅನಂತ, ಈಶ, ಧರ್ಮ ಮುಂತಾದ ದೇವತೆಗಳಿಂದ ಸ್ತುತನಾದ ಪರಮಾತ್ಮನನ್ನು ಭಜಿಸುವೆನು. ಈ ರೀತಿಯಾದ ಧ್ಯಾನಸ್ತೋತ್ರದಿಂದ ಶ್ರೀಕೃಷ್ಣನನ್ನು ಧ್ಯಾನಿಸಿ, ವ್ರತಪರನು ಸಂತೋಷಚಿತ್ತನಾಗಿ ಆ ದೇವನನ್ನು ಆವಾಹನೆಮಾಡಬೇಕು

ಧ್ಯಾಯೇತ್ತದಾ ರಾಧಿಕಾಂ ಚ ಧ್ಯಾನಂ ಮಾಧ್ಯಂದಿನೇರಿತಂ |
ರಾಧಾಂ ರಾಸೇಶ್ವರೀಂ ರಮ್ಯಾಂ ರಾಸೋಲ್ಲಾಸರಸೋತ್ಸುಕಾಂ || ೮೫ ||

ರಾಸಮಂಡಲಮಧ್ಯಸ್ಥಾಂ ರಾಸಾಧಿಷ್ಠಾತೃದೇವತಾಂ |
ರಾಸೇಶ್ವರೋರಃಸ್ಥಲಸ್ಥಾಂ ರಸಿಕಾಂ ರಸಿಕಪ್ರಿಯಾಂ || ೮೬ ||

ರಸಿಕಪ್ರವರಾಂ ರಮ್ಯಾಂ ರಮಾಂ ಚ ರಮಣೋತ್ಸುಕಾಂ |
ಶರದ್ರಾಜೀವರಾಜೀನಾಂ ಪ್ರಭಾಮೋಚನಲೋಚನಾಂ || ೮೭ ||

ವಕ್ರಭ್ರೂಭಂಗಸಂಯುಕ್ತಾಂ ಮಂಜಿರೇಣೈವ ರಂಜಿತಾಂ |
ಶರತ್ಪಾರ್ವಣಚಂದ್ರಾಸ್ಯಾಮೀಷದ್ಧಾಸ್ಯಮನೋಹರಾಂ || ೮೮ ||

ಚಾರುಚಂಪಕವರ್ಣಾಭಾಂ ಚಂದನೇನ ವಿಭೂಷಿತಾಂ |
ಕಸ್ತೂರಿಬಿಂದುನಾ ಸಾರ್ಧಂ ಸಿಂದೂರಬಿಂದುನಾಯುತಾಂ || ೮೯ ||

---

೮೫. ಅನಂತರ ಮಾಧ್ಯಂದಿನೋಕ್ತವಾದ ಸ್ತೋತ್ರದಿಂದ ರಾಧಾದೇವಿಯನ್ನು ಮುಂದೆ ಹೇಳುವಂತೆ ಧ್ಯಾನಿಸಬೇಕು. ರಾಸೇಶ್ವರಿಯೂ, ರಮ್ಯಳೂ, ರಾಸಕ್ರೀಡೆಯಲ್ಲಿ ಉತ್ಸುಕಳೂ ಆದ ರಾಧಾದೇವಿಯನ್ನು ಧ್ಯಾನಿಸುವೆನು.

೮೬. ರಾಸಮಂಡಲದ ಮಧ್ಯದಲ್ಲಿರುವವಳೂ, ರಾಸಕ್ರೀಡೆಗೆ ಅಧಿದೇವತೆಯೂ, ರಾಸೇಶ್ವರನಾದ ಶ್ರೀಕೃಷ್ಣನ ಉರಃ ಪ್ರದೇಶದಲ್ಲಿ ನೆಲಸಿರುವವಳೂ, ರಸಿಕಳೂ, ರಸಿಕಪ್ರಿಯಳೂ ಆದ ದೇವಿಯನ್ನು ಧ್ಯಾನಿಸುವೆನು.

೮೭. ರಸಾನುಭವಗಳಲ್ಲಿ ಶ್ರೇಷ್ಠಳೂ, ಮನೋಹರಳೂ, ರತಿಕ್ರೀಡೆಯಲ್ಲಿ ಉತ್ಸುಕಳೂ, ಶರದೃತುವಿನ ಕಮಲಪಂಕ್ತಿಯ ಕಾಂತಿಯನ್ನು ಅಲ್ಲಗಳೆಯುವ ಲೋಚನಗಳಿಂದ ಶೋಭಿತಳೂ ಆದ ರಮೆಯನ್ನು ಭಜಿಸುವೆನು.

೮೮. ಕುಟಿಲವಾದ ಭ್ರೂಭಂಗದಿಂದ ಕೂಡಿದವಳೂ, ಕಾಲ್ಗೊಲಸುಗಳಿಂದ ಭೂಷಿತಳೂ, ಶರತ್ಪೂರ್ಣಿಮಾಚಂದ್ರನಂತಿರುವ ಮುಖದಿಂದಲೂ ಮಂದಸ್ಮಿತದಿಂದಲೂ ಮನೋಹರಳೂ ಆದ ದೇವಿಯನ್ನು ಧ್ಯಾನಿಸುವೆನು.

೮೯. ಸುಂದರವಾದ ಸಂಪಿಗೆಯಂತಿರುವ ಮೈಬಣ್ಣದಿಂದ ಕೂಡಿ, ಚಂದನಗಂಧದಿಂದ ಅನುಲಿಪ್ತಳಾಗಿ, ಕಸ್ತೂರಿ ಮತ್ತು ಸಿಂದೂರದ ಬೊಟ್ಟುಗಳಿಂದಲಂಕೃತಳಾದ ದೇವಿಯನ್ನು ಭಜಿಸುವೆನು.

ಚಾರುಪತ್ರಾವಲೀಯುಕ್ತಾಂ ವಹ್ನಿಶುದ್ಧಾಂಶುಕೋಜ್ಜ್ವಲಾಂ ।
ಸದ್ರತ್ನಕುಂಡಲಾಭ್ಯಾಂ ಚ ಸುಕಪೋಲಸ್ಥಲೋಜ್ಜ್ವಲಾಂ ॥ ೯೦ ॥

ರತ್ನೇಂದ್ರಸಾರಹಾರೇಣ ವಕ್ಷಃಸ್ಥಲವಿರಾಜಿತಾಂ ।
ರತ್ನಕಂಕಣಕೇಯೂರಕಿಂಕಿಣೀರತ್ನರಂಜಿತಾಂ ॥ ೯೧ ॥

ಸದ್ರತ್ನಸಾರರಚಿತಕ್ವಣನ್ಮಂಜೀರರಂಜಿತಾಂ ।
ಬ್ರಹ್ಮಾದಿಭಿಶ್ಚ ಸೇವ್ಯೇನ ಶ್ರೀಕೃಷ್ಣೇನೈವ ಸೇವಿತಾಂ ॥ ೯೨ ॥

ಸರ್ವೇಶೇನ ಸ್ತೂಯಮಾನಾಂ ಸರ್ವಬೀಜಾಂ ಭಜಾಮ್ಯಹಂ ।
ಇತಿ ಧ್ಯಾತ್ವಾ ಚ ಕೃಷ್ಣೇನ ಸಹಿತಾಂ ತಾಂ ಚ ಪೂಜಯೇತ್ ॥ ೯೩ ॥

---

೬೦. ಕಪೋಲಸ್ಥಳದಲ್ಲಿ ಮನೋಹರವಾದ ಪತ್ರಾವಳಿಗಳನ್ನು ರಚಿಸಿಕೊಂಡು, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರದಿಂದ ಶೋಭಿತಳಾಗಿ, ರತ್ನಕುಂಡಲಗಳ ಕಾಂತಿಯಿಂದ ಉಜ್ಜ್ವಲವಾದ ಕಪೋಲಸ್ಥಳದಿಂದ ಮನೋಹರಳಾದ ದೇವಿಯನ್ನು ಧ್ಯಾನಿಸುವೆನು.

೯೧. ಶ್ರೇಷ್ಠವಾದ ರತ್ನಹಾರದಿಂದ ಶೋಭಿಸುತ್ತಿರುವ ವಕ್ಷಃಸ್ಥಳವುಳ್ಳವಳೂ, ರತ್ನದ ಬಳೆ, ಬಾಹುಪುರಿ, ಮತ್ತು ಸಣ್ಣಗಂಟೆಗಳಿರುವ ವಂಕಿಗಳಿಂದ ಅಲಂಕೃತವಾದ ಬಾಹುಗಳುಳ್ಳವಳೂ ಆದ ದೇವಿಯನ್ನು ಭಜಿಸುವೆನು

೯೨. ಶ್ರೇಷ್ಠರತ್ನಗಳಿಂದ ಖಚಿತವಾಗಿ 'ಕ್ವಣಕ್ವಣ' ಎಂದು ಶಬ್ದಗೈಯ್ಯುತ್ತಿರುವ ನೂಪುರದಿಂದ ಶೋಭಿತಳೂ. ಬ್ರಹ್ಮಾದಿತ್ರಿಮೂರ್ತಿಗಳಿಂದ ಸೇವ್ಯನಾದ ಶ್ರೀಕೃಷ್ಣಪರಮಾತ್ಮನಿಂದ ಸೇವಿತಳೂ ಆದ ದೇವಿಯನ್ನು ಭಜಿಸುವೆನು.

೯೩. ಸರ್ವೇಶ್ವರನಿಂದ ಸ್ತುತ್ಯಳೂ, ಸರ್ವಬೀಜಸ್ವರೂಪಳೂ ಆದ ದೇವಿಯನ್ನು ಧ್ಯಾನಿಸುವೆನು. ಈ ರೀತಿ ಧ್ಯಾನಮಾಡಿ ಶ್ರೀಕೃಷ್ಣನೊಡನೆ ರಾಧಾದೇವಿಯನ್ನು ಪೂಜಿಸಬೇಕು.

ಭಕ್ತ್ಯಾ ದತ್ತ್ವಾ ಪ್ರತಿದಿನಮುಪಚಾರಾಂಶ್ಚ ಷೋಡಶ |
ಪ್ರತ್ಯೇಕಂ ಚ ಪೃಥಕ್ಕೃತ್ವಾ ಸರ್ವಂ ದದ್ಯಾದ್ವ್ರತೀ ಮುದಾ || ೯೪ ||

ಸಹಸ್ರಕಮಲಂ ದಿವ್ಯಂ ಶತಮಷ್ಟೋತ್ತರಂ ಮುನೇ |
ಹೋಮಂ ಕುರ್ಯಾದ್ವ್ರತೀ ನಿತ್ಯಮಷ್ಟೋತ್ತರಶತಾಹುತೀಃ || ೯೫ ||

ದದ್ಯಾದ್ಭಕ್ತ್ಯಾ ಚ ಕೃಷ್ಣಾಯ ಸ್ವಾಹೇತ್ಯುಚ್ಚಾರ್ಯ ಯತ್ನತಃ |
ರಸಾಲಸ್ಯ ಕದಲ್ಯಾಶ್ಚ ಹ್ಯಾಮಂ ವಾ ಪಕ್ವಮೇವ ಚ || ೯೬ ||

ನಿತ್ಯಮಷ್ಟೋತ್ತರಶತಂ ದದ್ಯಾದ್ಭಕ್ತ್ಯಾಽಕ್ಷತೈಃ ಫಲಂ |
ನಿತ್ಯಂ ಚ ಭೋಜಯೇದ್ಭಕ್ತ್ಯಾ ಬ್ರಾಹ್ಮಣಾನಾಂ ಶತಂ ಮುನೇ || ೯೭ ||

ಹೋಮಂ ಕುರ್ಯಾದ್ವ್ರತೀನಿತ್ಯಮಷ್ಟೋತ್ತರಶತಾಹುತೀಃ |
ದದ್ಯಾದ್ಭಕ್ತ್ಯಾ ಚ ಕೃಷ್ಣಾಯ ರಾಧಿಕಾಸಹಿತಾಯ ಚ || ೯೮ ||

---

೯೪. ವ್ರತಪರನು ಶ್ರದ್ಧಾಭಕ್ತಿಗಳಿಂದ ಕೂಡಿ, ಪ್ರತಿದಿನವೂ ಷೋಡಶೋಪಚಾರಗಳನ್ನು ಪ್ರತ್ಯೇಕವಾಗಿ ಸಮರ್ಪಿಸಿ, ಸಂತೋಷದಿಂದ ತನ್ನ ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಣೆಮಾಡಬೇಕು.

೯೫. ವ್ರತನಿಷ್ಠನು ಸಾವಿರದ ನೂರೆಂಟು ದಿವ್ಯಕಮಲಪುಷ್ಪಗಳನ್ನು ಪರಮಾತ್ಮನಿಗರ್ಪಿಸಿ ನೂರೆಂಟುಸಾರಿ ಅಗ್ನಿಯಲ್ಲಿ ಮಂತ್ರೋಚ್ಚಾರಣಪೂರ್ವಕವಾಗಿ ಹೋಮಮಾಡಬೇಕು

೯೬–೯೭. 'ಶ್ರೀಕೃಷ್ಣಾಯ ಸ್ವಾಹಾ' ಎಂದು ಹೇಳಿ ಹೋಮಮಾಡಿದ ನಂತರ ಚೆನ್ನಾಗಿ ಪಕ್ವವಾದ ಅಥವಾ ಸಾಮಾನ್ಯವಾಗಿ ಪಕ್ವವಾದ ನೂರೆಂಟು ಮಾವು ಮತ್ತು ಬಾಳೆಹಣ್ಣುಗಳನ್ನು ನಿವೇದಿಸಿ, ಭಕ್ತಿಪೂರ್ವಕವಾಗಿ ಪೂರ್ಣಫಲವನ್ನೂ ಮಂತ್ರಾಕ್ಷತೆಯನ್ನೂ ಸಮರ್ಪಿಸಿ, ಪ್ರತಿನಿತ್ಯವೂ ನೂರುಬ್ರಾಹ್ಮಣರಿಗೆ ಭೋಜನಮಾಡಿಸಿ ತೃಪ್ತಿಪಡಿಸಬೇಕು

೯೮–೯೯. ವ್ರತಪರನು ಪ್ರತಿನಿತ್ಯವೂ ರಾಧಾಸಹಿತನಾದ ಶ್ರೀಕೃಷ್ಣನನ್ನುದ್ದೇಶಿಸಿ ತುಪ್ಪವನ್ನು ಬೆರಸಿದ ಎಳ್ಳಿನಿಂದ ನೂರೆಂಟುಸಾರಿ ಅಗ್ನಿಯಲ್ಲಿ

ತಿಲೇನ ಹವನಂ ಕುರ್ಯಾದಾಜ್ಯಮಿಶ್ರೇಣ ನಾರದ ।
ವಾದ್ಯಂ ಚ ವಾದಯೇನ್ನಿತ್ಯಂ ಕಾರಯೇದ್ಧರಿಕೀರ್ತನಂ ॥ ೯೯ ॥

ಏವಂ ಮಾಸತ್ರಯಂ ಕೃತ್ವಾ ಪ್ರತಿಷ್ಠಾಂ ತದನಂತರಂ ।
ಪ್ರತಿಷ್ಠಾದಿವಸೇ ತತ್ರ ವಿಧಾನಂ ಶೃಣು ನಾರದ ॥ ೧೦೦ ॥

ಕಮಲಾನಾಂ ಚ ನವತಿಸಹಸ್ರಾಣ್ಯಕ್ಷತಾನಿ ಚ ।
ಬ್ರಾಹ್ಮಣಾನಾಂ ಸಹಸ್ರಾಣಿ ನವ ವಿಪ್ರೇಂದ್ರ ಯತ್ನತಃ ॥ ೧೦೧ ॥

ಭೋಜಯೇತ್ಪರಮಾನ್ನಾನಿ ಸ್ವಾದೂನಿ ಮಿಷ್ಟಕಾನಿ ಚ ।
ಫಲಂ ವಿಂಶಾಧಿಕಂ ಸಪ್ತಶತಂ ನವಸಹಸ್ರಕಂ ॥ ೧೦೨ ॥

ದದ್ಯಾನ್ನಾನಾವಿಧಂ ದ್ರವ್ಯಂ ನೈವೇದ್ಯಂ ಸುಮನೋಹರಂ ।
ಸಂಸ್ಕೃತಾಗ್ನಿಂ ಚ ಸಂಸ್ಥಾಪ್ಯ ಹೋಮಂ ಕುರ್ಯಾದ್ದ್ವಿಚಕ್ಷಣಃ ॥ ೧೦೩ ॥

---

ಹೋಮಮಾಡಬೇಕು. ಅನಂತರ ಮಂಗಳವಾದ್ಯಗಳನ್ನು ಮೊಳಗಿಸಿ ಶ್ರೀಹರಿಯ ನಾಮಸಂಕೀರ್ತನೆಯನ್ನು ಮಾಡಬೇಕು.

೧೦೦. ಈ ರೀತಿ ಮೂರು ತಿಂಗಳು ವ್ರತವನ್ನಾಚರಿಸಿ ಅನಂತರ ಉದ್ಯಾಪನೆ ಮಾಡಬೇಕು. ಎಲೈ ನಾರದನೇ, ಉದ್ಯಾಪನೆಯ ದಿವಸ ಅನುಸರಿಸಬೇಕಾದ ವಿಧಿಯನ್ನು ವಿವರಿಸುವೆನು. ಅವಧರಿಸು.

೧೦೧-೧೦೩. ಉದ್ಯಾಪನೆಯ ದಿವಸ ರಾಧಾಕೃಷ್ಣರಿಗೆ ಸುಂದರವಾದ ತೊಂಭತ್ತು ಸಾವಿರಕಮಲಪುಷ್ಪಗಳನ್ನು ಅರ್ಚನೆಮಾಡಿ, ಒಂಭತ್ತುಸಾವಿರ ಬ್ರಾಹ್ಮಣರನ್ನು ಪರಮಾನ್ನಮಿಷ್ಟಾನ್ನಾದಿಗಳಿಂದ ತೃಪ್ತಿಪಡಿಸಬೇಕು. ಒಂಭತ್ತು ಸಾವಿರದ ಏಳನೂರು ಇಪ್ಪತ್ತು ಫಲಗಳನ್ನೂ, ನಾನಾವಿಧ ದ್ರವ್ಯಗಳನ್ನೂ, ರುಚಿಕರವಾದ ನೈವೇದ್ಯವನ್ನೂ, ಪರಮಾತ್ಮನಿಗರ್ಪಿಸಿ ಮಂತ್ರಪೂತವಾದ ಅಗ್ನಿಯಲ್ಲಿ ಶ್ರದ್ಧಾಪೂರ್ವಕವಾಗಿ ಹೋಮಮಾಡಬೇಕು.

ನವತಿಂ ಚ ಸಹಸ್ರಾಣಿ ಹುತ್ವಾಽಜ್ಯೇನ ತಿಲೇನ ಚ ।
ಸವಸ್ತ್ರಂ ಚ ಸ ಭೋಜ್ಯಂ ಚ ಯಜ್ಞಸೂತ್ರಫಲಾನಿತ್ವಂ ॥ ೧೦೪ ॥

ಗಂಧಪುಷ್ಪಾರ್ಚಿತಾನ್ಭಕ್ತ್ಯಾ ದದ್ಯಾನ್ನವತಿಲಡ್ಡುಕಾನ್ ।
ದದ್ಯಾನ್ನವತಿಕುಂಭಾಂಶ್ಚ ಶೀತತೋಯಪ್ರಪೂರಿತಾನ್ ॥ ೧೦೫ ॥

ಏವಂ ವಿಧಂ ವ್ರತಂ ಕೃತ್ವಾ ದದ್ಯಾದ್ವಿಪ್ರಾಯ ದಕ್ಷಿಣಾಂ ।
ದಕ್ಷಿಣಾಂ ಯೋಃ ಪರಿಮಿತಿಂ ವೇದೇಷು ಯನ್ನಿರೂಪಿತಂ ॥ ೧೦೬ ॥

ವೃಷೇಂದ್ರಾಣಾಂ ಸಹಸ್ರಂ ಚ ಸ್ವರ್ಣಶೃಂಗಸಮನ್ವಿತಂ ।
ಇತ್ಯೇವಂ ಕಥಿತಂ ವಿಪ್ರ ಕೃತಂ ತ್ರೈಮಾಸಿಕವ್ರತಂ ॥ ೧೦೭ ॥

ವಿಶಿಷ್ಟ ಸಂತತಿಕರಂ ಪತಿಸೌಭಾಗ್ಯವರ್ಧನಂ ।
ವ್ರತಸ್ಯಾಸ್ಯ ಪ್ರಭಾವೇಣ ಸೌಭಾಗ್ಯಂ ಶತಜನ್ಮನಿ ॥ ೧೦೮ ॥

---

೧೦೪-೧೦೫. ಎಳ್ಳು ಮತ್ತು ತುಪ್ಪದಿಂದ ಒಂಭತ್ತುಸಾವಿರಸಲ ಹೋಮಮಾಡಿ ದಿವ್ಯವಸ್ತ್ರಗಳನ್ನೂ ಭೋಜ್ಯವಸ್ತುಗಳನ್ನೂ ಯಜ್ಞೋಪವೀತ ಮತ್ತು ಫಲಗಳನ್ನೂ, ಗಂಧಪುಷ್ಪಾದಿಗಳನ್ನೂ ಭಕ್ತಿಪೂರ್ವಕವಾಗಿ ಪರಮಾತ್ಮನಿಗರ್ಪಿಸಿ, ತೊಂಭತ್ತು ಲಾಡುಗಳನ್ನು ನಿವೇದಿಸಬೇಕು. ಅನಂತರ ಶೀತಲೋದಕಪೂರ್ಣವಾದ ತೊಂಭತ್ತು ಕುಂಭ (ಕೊಡ) ಗಳನ್ನು ಸಮರ್ಪಿಸಬೇಕು.

೧೦೬. ಈ ರೀತಿಯಾದ ವ್ರತಮಾಡಿದ ನಂತರ ಬ್ರಾಹ್ಮಣನಿಗೆ (ಪುರೋಹಿತನಿಗೆ) ದಕ್ಷಿಣೆಯನ್ನು ಕೊಡಬೇಕು. ವೇದದಲ್ಲಿ ನಿರೂಪಿತವಾಗಿರುವ ದಕ್ಷಿಣೆಯ ಪರಿಮಾಣವನ್ನು ಹೇಳುವೆನು ಕೇಳು.

೧೦೭. ಸುವರ್ಣಶೃಂಗಗಳಿಂದ ಅಲಂಕೃತವಾದ ಸಾವಿರವೃಷಭಗಳನ್ನು ಬ್ರಾಹ್ಮಣನಿಗೆ ದಕ್ಷಿಣೆಯಾಗಿ ಕೊಡಬೇಕು. ಎಲೈ ವಿಪ್ರೋತ್ತಮನೇ, ಈ ರೀತಿ ಪಾರ್ವತಿಯು ಆಚರಿಸಿದ ತ್ರೈಮಾಸಿಕವ್ರತವಿಧಾನವನ್ನು ತಿಳಿಸಿದುದಾಯಿತು.

೧೦೮. ಈ ವ್ರತವನ್ನಾಚರಿಸುವುದರಿಂದ ಸಂತತಿವೃದ್ಧಿಯಾಗುವುದಲ್ಲದೆ ಪತಿ ಸೌಭಾಗ್ಯವೂ ಹೆಚ್ಚುವುದು. ಈ ವ್ರತಪ್ರಭಾವದಿಂದ ನೂರುಜನ್ಮ ಸೌಭಾಗ್ಯವು ದೊರೆಯುವುದು.

ಸತ್ಪುತ್ರಜನನೀ ಸಾ ಚ ಭವೇಜ್ಜನ್ಮಶತಂ ಧ್ರುವಂ ।
ಕದಾಪಿ ನ ಭವೇತ್ತಸ್ಯಾ ಭೇದಶ್ಚ ಪತಿಪುತ್ರಯೋಃ ॥ ೧೦೯ ॥

ದಾಸತುಲ್ಯೋ ಭವೇತ್ಪುತ್ರೋ ಭರ್ತಾ ಚ ಸ್ವವಶಸ್ಕರಃ ।
ಅನುಕ್ಷಣಂ ಭವೇದ್ರಾಧಾಕೃಷ್ಣಭಕ್ತಿಯುತಾ ಸತೀ ॥ ೧೧೦ ॥

ಭವೇದ್ವ್ರತಪ್ರಭಾವೇಣ ಪ್ರಾಪ್ತಜ್ಞಾನಹರಿಸ್ಮೃತಿಃ ।
ವ್ರತಂ ಚ ಸಾಮವೇದೋಕ್ತಂ ಕೃತಂ ಪೂರ್ವಮಥಾವಯೋಃ ॥ ೧೧೧ ॥

ಸರ್ವೇಷಾಂ ಚ ವ್ರತಾನಾಂ ಚ ಶ್ರೇಷ್ಠಂ ಶೃಣು ವದಾಮಿ ತೇ ।
ಸ್ವಾಯಂಭುವಸ್ಯ ಚ ಮನೋಃ ಶತರೂಪಾಭಿದಾ ಸತೀ ॥ ೧೧೨ ॥

ತಯಾ ಕೃತಂ ಪ್ರಥಮತಃ ಕೃತ್ವಾಽಗಸ್ತ್ಯಂ ಪುರೋಹಿತಂ ।
ತದಾ ಕೃತಂ ದೇವಹೂತ್ಯಾ ಚಾಕೂತ್ಯಾ ಚ ಕೃತಂ ತದಾ ॥ ೧೧೩ ॥

---

೧೦೯. ಈ ವ್ರತಾಚರಣೆಮಾಡಿದ ಸ್ತ್ರೀಯು ನೂರುಜನ್ಮಗಳಲ್ಲಿ ಸತ್ಪುತ್ರರ ಮಾತೆಯಾಗುವಳು. ಆ ಹೆಂಗಸಿಗೂ, ಅವಳ ಪತಿಪುತ್ರರಿಗೂ ವಿರಹವು ಯಾವಾಗಲೂ ಉಂಟಾಗುವುದಿಲ್ಲ.

೧೧೦. ಈ ವ್ರತವನ್ನು ಮಾಡಿದಾಕೆಯ ಮಗನು ಸೇವಕನಂತೆ ಆಕೆಯ ಆಜ್ಞಾಕರನಾಗುವನು. ಆಕೆಯ ಪತಿಯೂ ಕೂಡ ಆಕೆಯ ಮಾತಿನಂತೆ ನಡೆಯುವನು. ಅಲ್ಲದೆ ಆಕೆಯು ಸರ್ವದಾ ರಾಧಾಕೃಷ್ಣರಲ್ಲಿ ಭಕ್ತಿಯುತಳಾಗುವಳು.

೧೧೧ ಈ ವ್ರತನ್ನು ಆಚರಿಸುವುದರಿಂದ ದಿವ್ಯಜ್ಞಾನವು ಉದಯಿಸಿ, ಹರಿಸ್ಮರಣೆಯು ಸರ್ವದಾ ಉಂಟಾಗುವುದು. ಸಾಮವೇದೋಕ್ತವಾದ ಈ ವ್ರತವನ್ನು ಪೂರ್ವದಲ್ಲಿ ನಾವಿಬ್ಬರೂ ಸಹಿತ ಮಾಡಿದೆವು.

೧೧೨-೧೧೪. ನಾನು ನಿನಗೆ ಹೇಳಿದ ಈ ವ್ರತವು ವ್ರತಗಳಲ್ಲೆಲ್ಲ ಅತ್ಯುತ್ತಮವಾದುದು. ಸ್ವಾಯಂಭುವಮನುವಿನ ಪತ್ನಿಯೂ ಪತಿವ್ರತೆಯೂ ಆದ ಶತರೂಪೆಯು ಅಗಸ್ತ್ಯನನ್ನು ಪುರೋಹಿತನನ್ನಾಗಿ ಮಾಡಿಕೊಂಡು ಮೊಟ್ಟಮೊದಲು ಈ ವ್ರತವನ್ನಾಚರಿಸಿದಳು. ಅನಂತರ ದೇವಹೂತಿ ಮತ್ತು ಆಕೂತಿದೇವಿಯರು ಪುಲಸ್ತ್ಯ

ಪುರೋಹಿತಂ ಪುಲಸ್ತ್ಯಂ ಚ ಕೃತ್ವಾ ಶ್ರುತ್ಯುಕ್ತಯಾ ಮುನೇ ।
ಚಕಾರ ರೋಹಿಣೀ ತತ್ತು ಕ್ರತುಂ ಕೃತ್ವಾ ಪುರೋಹಿತಂ ॥ ೧೧೪ ॥

ರತಿಶ್ಚಕಾರ ತದ್ಭಕ್ತ್ಯಾ ಗೌತಮಸ್ತತ್ಪುರೋಹಿತಃ ।
ಚಕಾರ ತದ್ವ್ರತಂ ಭಕ್ತ್ಯಾ ತಾರಯಾ ಗುರುಕಾಂತಯಾ ॥ ೧೧೫ ॥

ಮಹಾಸಂಭೃತಸಂಭಾರಾ ವಸಿಷ್ಠಸ್ತತ್ಪುರೋಹಿತಃ ।
ತದ್ದೃಷ್ಟ್ವಾ ಗುರುಪತ್ನ್ಯಾಚ ಶಕ್ರಶಚ್ಯಾ ಕೃತಂ ವ್ರತಂ ॥ ೧೧೬ ॥

ಮಹಾಸಂಭೃತಸಂಭಾರಸ್ತತ್ಪುರೋಧಾ ಬೃಹಸ್ಪತಿಃ ।
ವ್ರತಂ ಚಕಾರ ಸ್ವಾಹಾ ಚ ಸರ್ವತೋಽಪಿ ವಿಲಕ್ಷಣಂ ॥ ೧೧೭ ॥

---

ನನ್ನು ಪುರೋಹಿತನನ್ನಾಗಿ ಮಾಡಿಕೊಂಡು ಶ್ರುತ್ಯುಕ್ತಕ್ರಮದಲ್ಲಿ ವ್ರತವನ್ನಾಚರಿಸಿದರು. ಅನಂತರ ರೋಹಿಣೀದೇವಿಯು ಕ್ರತುವನ್ನು ಪುರೋಹಿತನನ್ನಾಗಿ ವರಿಸಿ ಈ ವ್ರತವನ್ನಾಚರಿಸಿದಳು.

೧೧೫. ಅನಂತರ ರತಿದೇವಿಯಾಚರಿಸಿದ ಈ ವ್ರತಕ್ಕೆ ಗೌತಮನು ಪುರೋಹಿತನಾಗಿದ್ದನು ಅನಂತರ ಗುರುಪತ್ನಿಯಾದ ತಾರಾದೇವಿಯು ಈ ವ್ರತವನ್ನು ಭಕ್ತಿಪೂರ್ವಕವಾಗಿ ಆಚರಿಸಿದಳು.

೧೧೬. ವಸಿಷ್ಠಮಹರ್ಷಿಯು ಆ ವ್ರತಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಗೊಳಿಸಿಕೊಟ್ಟು ಪೌರೋಹಿತ್ಯಮಾಡಿಸಿದನು. ಗುರುಪತ್ನಿಯು ಮಾಡಿದ ಆ ವ್ರತವನ್ನು ನೋಡಿ ಇಂದ್ರನ ರಾಣಿಯಾದ ಶಚೀದೇವಿಯೂ ಆ ವ್ರತವನ್ನು ಮಾಡಿದಳು.

೧೧೭. ಬೃಹಸ್ಪತಿಯು ಅದಕ್ಕೆ ಬೇಕಾದ ಸಂಭಾರಗಳನ್ನು ಸಿದ್ಧಗೊಳಿಸಿ ಪೌರೋಹಿತ್ಯ ಮಾಡಿಸಿದನು ಅನಂತರ ಸ್ವಾಹಾದೇವಿಯೂ ಕೂಡ ಎಲ್ಲಕ್ಕೂ ವಿಲಕ್ಷಣವಾದ ಈ ವ್ರತವನ್ನಾಚರಿಸಿದಳು.

ಅತಿಸಂಭೃತಸಂಭಾರೋ ಮರೀಚಿಸ್ತತ್ಪುರೋಹಿತಃ ।
ತದ್ದೃಷ್ಟ್ವಾ ಪಾರ್ವತೀ ಬ್ರಹ್ಮನ್ನುವಾಚ ಶಂಕರಂ ಮುದಾ ।
ಪುಟಾಂಜಲಿಯುತಾ ದೇವೀ ಭಕ್ತಿನಮ್ರಾತ್ಮಕಂಧರಾ ॥ ೧೧೮ ॥

॥ ಪಾರ್ವತ್ಯುವಾಚ ॥

ಆಜ್ಞಾಂ ಕುರು ಜಗನ್ನಾಥ ಕರೋಮಿ ವ್ರತಮುತ್ತಮಂ ॥ ೧೧೯ ॥

ಆವಯೋರಿಷ್ಟದೇವಸ್ಯ ವ್ರತಾನಾಂ ಚ ಪರಂ ವ್ರತಂ ।
ಹರೇರಾರಾಧನಂ ನಾಥ ಸರ್ವಮಂಗಲಕಾರಣಂ ॥ ೧೨೦ ॥

ಇಷ್ಟಂ ದತ್ತಂ ಶ್ರುತೇಃ ಪಾಠಂ ತೀರ್ಥಂ ಪೃಥ್ವ್ಯಾಃ ಪ್ರದಕ್ಷಿಣಂ ।
ಹರೇರಾರಾಧನಸ್ಯಾಪಿ ಕಲಾಂ ನಾರ್ಹತಿ ಷೋಡಶೀಂ ॥ ೧೨೧ ॥

---

೧೧೮. ಅದಕ್ಕೆ ಮರೀಚಿಯು ಸಂಭಾರಸಾಮಗ್ರಿಗಳನ್ನು ಸಿದ್ಧಗೊಳಿಸಿ ಪೌರೋಹಿತ್ಯ ಮಾಡಿಸಿದನು. ಎಲೈ ವಿಪ್ರೋತ್ತಮನಾದ ನಾರದನೇ, ಈ ರೀತಿ ಸ್ವಾಹಾದೇವಿಯು ಮಾಡಿದ ವ್ರತವನ್ನು ನೋಡಿ ಪಾರ್ವತಿಯು ಶಂಕರನಿಗೆ ಭಕ್ತಿಯಿಂದ ತಲೆಬಾಗಿ ಕೈಮುಗಿದು ಮುಂದೆ ಹೇಳುವಂತೆ ಬಿನ್ನವಿಸಿದಳು.

೧೧೯. ಪಾರ್ವತಿ :—ಎಲೈ ಜಗತ್ಪತಿಯಾದ ಶಂಕರನೇ, ಉತ್ತಮವಾದ ಈ ತ್ರೈಮಾಸಿಕವ್ರತವನ್ನು ನಾನು ಮಾಡುವೆನು. ನನಗೆ ಅಪ್ಪಣೆಕೊಡು.

೧೨೦. ನಮಗೆ ಇಷ್ಟದೇವತೆಯಾದ ಶ್ರೀಕೃಷ್ಣನ ವ್ರತವು ವ್ರತಗಳಲ್ಲೆಲ್ಲ ಉತ್ತಮವಾದುದು. ನಾಥನೇ, ಶ್ರೀಹರಿಯ ಆರಾಧನೆಯು ಸಕಲಮಂಗಳಕ್ಕೂ ಕಾರಣವಲ್ಲವೇ ?

೧೨೧. ಯಾಗಮಾಡುವುದರಿಂದಲೂ, ದಾನಮಾಡುವುದರಿಂದಲೂ, ವೇದಾಧ್ಯಯನಮಾಡುವುದರಿಂದಲೂ ಲಭಿಸುವ ಪುಣ್ಯವು ಶ್ರೀಹರಿಯ ಆರಾಧನೆಯಿಂದ ಲಭಿಸುವ ಪುಣ್ಯದ ಹದಿನಾರನೆಯ ಒಂದಂಶಕ್ಕೂ ಎಣೆಯಿಲ್ಲ.

ಬಹಿರಭ್ಯಂತರೇ ಯಸ್ಯ ಹರಿಸ್ಮೃತಿರನುಕ್ಷಣಂ ।
ಜೀವನ್ಮುಕ್ತಸ್ಯ ತಸ್ಯೈವ ಮುಕ್ತಿರ್ಭವತಿ ದರ್ಶನಾತ್ ॥ ೧೨೨ ॥

ತಸ್ಯ ಪಾದಾಬ್ಜ ರಜಸಾ ಸದ್ಯಃ ಪೂತಾ ವಸುಂಧರಾ ।
ತಸ್ಯ ದರ್ಶನಮಾತ್ರೇಣ ಪುನಾತಿ ಭುವನತ್ರಯಂ ॥ ೧೨೩ ॥

ಬ್ರಹ್ಮಾ ವಿಷ್ಣುಶ್ಚ ಧರ್ಮಶ್ಚ ಶೇಷಸ್ತ್ವಂ ಚ ಗಣೇಶ್ವರಃ ।
ಧ್ಯಾಯಂ ಧ್ಯಾಯಂ ಯತ್ಪದಾಬ್ಜಂ ತೇಜಸಾ ತತ್ಸಮೋ ಮಹಾನ್ ॥ ೧೨೪ ॥

ಯಶ್ಚ ಯಂ ಸಂತತಂ ಧ್ಯಾಯೇತ್ಸ ತಮಾಪ್ನೋತಿ ನಿಶ್ಚಿತಂ ।
ಗುಣೇನ ತೇಜಸಾ ಬುದ್ಧ್ಯಾ ಜ್ಞಾನೇನ ತತ್ಸಮೋ ಭವೇತ್ ॥ ೧೨೫ ॥

ಕೃಷ್ಣಸ್ಯ ಸ್ಮರಣಾದ್ಧ್ಯಾನಾತ್ತಪಸಾ ತಸ್ಯ ಸೇವಯಾ ।
ಮಯಾ ಪ್ರಾಪ್ತೋ ಹಿ ಭಗವಾನ್ಸ್ವಾಮೀ ವಾ ಪುತ್ರ ಏವ ಚ ॥ ೧೨೬ ॥

---

೧೨೨. ಯಾರು ಅಂತರಂಗಬಹಿರಂಗಗಳಲ್ಲಿ ಸರ್ವದಾ ಶ್ರೀಹರಿಯನ್ನು ಭಕ್ತಿಪೂರ್ವಕವಾಗಿ ಸ್ಮರಣಮಾಡುವರೋ ಅವರು ಜೀವನ್ಮುಕ್ತರಾಗುವರು. ಅಷ್ಟೇ ಅಲ್ಲ ಅಂಥವರ ದರ್ಶನಮಾಡಿದವರೂ ಕೂಡ ಮುಕ್ತರಾಗುವರು.

೧೨೩. ಆ ಭಕ್ತನ ಪಾದಕಮಲದ ರಜಃಸ್ಪರ್ಶಮಾತ್ರದಿಂದ ಭೂದೇವಿಯು ಪವಿತ್ರಳಾಗುವಳು. ಅವನ ದರ್ಶನಮಾತ್ರದಿಂದ ತ್ರಿಲೋಕವೂ ಪಾವನವಾಗುವುದು.

೧೨೪. ಬ್ರಹ್ಮ, ವಿಷ್ಣು, ಧರ್ಮ, ಅನಂತ, ಈಶ, ಮತ್ತು ಗಣೇಶ್ವರರು ಶ್ರೀಕೃಷ್ಣಪರಮಾತ್ಮನ ಪಾದಕಮಲಗಳನ್ನು ಸರ್ವದಾ ಸ್ಮರಿಸುತ್ತಿರುವುದರ ಪರಿಣಾಮವಾಗಿ ತೇಜಸ್ಸಿನಲ್ಲಿ ಆ ಪರಮಾತ್ಮನಿಗೆ ಸಮಾನರಾಗಿರುವರು.

೧೨೫. ಯಾರು ಯಾವ ಸಚ್ಚಿದಾನಂದಾತ್ಮಕವಾದ ವಸ್ತುವನ್ನು ಅನನ್ಯ ಮನಸ್ಸಿನಿಂದ ಧ್ಯಾನಿಸುವರೋ ಅವರು ಆ ವಸ್ತುವನ್ನು ಪಡೆದು ಗುಣ, ತೇಜಸ್ಸು, ಬುದ್ಧಿ, ಮತ್ತು ಜ್ಞಾನದಲ್ಲಿ ಅದಕ್ಕೆ ಸಮನೆನಿಸಿರುವರು.

೧೨೬. ಶ್ರೀಕೃಷ್ಣಪರಮಾತ್ಮನ ಸ್ಮರಣೆಯಿಂದಲೂ, ಸತತಧ್ಯಾನದಿಂದಲೂ, ತಪಸ್ಸು ಮತ್ತು ಸೇವೆಯಿಂದಲೂ, ನಾನು ಷಡ್ಗುಣೈಶ್ವರ್ಯಪರಿಪೂರ್ಣನಾದ ಪತಿಯನ್ನೂ, ಯೋಗ್ಯನಾದ ಪುತ್ರನನ್ನೂ ಪಡೆದೆನು.

ಪ್ರಲಬ್ಧಂ ಲೀಲಯಾ ಸರ್ವಂ ಪೂರ್ಣಂ ಮನ್ಮಾನಸಂ ತದಾ ।
ಸ್ವಾಮಿನಾ ತ್ವಂ ತ್ವಾದೃಶಃ ಪುತ್ರೌ ಕಾರ್ತಿಕೇಯಗಣೇಶ್ವರೌ ॥ ೧೨೭ ॥

ಪಿತಾ ಹಿಮಾದ್ರಿಃ ಕೃಷ್ಣಾಂಶೋ ಮಮ ಕಿಂ ದುರ್ಲಭಂ ಪ್ರಭೋ ।
ಪಾರ್ವತೀವಚನಂ ಶ್ರುತ್ವಾ ಸುಪ್ರೀತಃ ಶಂಕರಃ ಸ್ವಯಂ ।
ಪ್ರಹಸ್ಯೋವಾಚ ಮಧುರಂ ಪುಲಕಾಂಕಿತವಿಗ್ರಹಃ ॥ ೧೨೮ ॥

॥ ಶ್ರೀ ಮಹಾದೇವ ಉವಾಚ ॥

ಮಹಾಲಕ್ಷ್ಮೀಸ್ವರೂಪಾಸಿ ಕಿಮಸಾಧ್ಯಂ ತವೇಶ್ವರಿ ॥ ೧೨೯ ॥

ಸರ್ವಸಂಪತ್ಸ್ವರೂಪಾ ತ್ವಮನಂತಶಕ್ತಿರೂಪಿಣಿ ।
ತ್ವಂ ಚ ಯಸ್ಯ ಗೃಹೇ ದೇವೀ ಸ ಚೈಶ್ವರ್ಯಸ್ಯ ಭಾಜನಂ ॥ ೧೩೦ ॥

---

೧೨೭. ನಿನ್ನಂಥ ಪತಿಯನ್ನೂ, ಕಾರ್ತಿಕೇಯ, ಗಣೇಶ್ವರರೆಂಬ ಇಬ್ಬರು ಮಕ್ಕಳನ್ನೂ ಪಡೆದ ನಾನೇ ಧನ್ಯಳು. ನನ್ನ ಮನೋರಥವು ಶ್ರೀಕೃಷ್ಣಪರಮಾತ್ಮನ ಧ್ಯಾನದಿಂದಲೇ ಪರಿಪೂರ್ಣವಾಯಿತು.

೧೨೮. ಎಲೈ ಪ್ರಭುವೇ, ಶ್ರೀಕೃಷ್ಣಾಂಶಸಂಭೂತನಾದ ಹಿಮಾಲಯನೇ ನನಗೆ ತಂದೆಯಾಗಿರುವಾಗ ನನಗೆ ದುರ್ಲಭವಾದುದಾವುದು? ಪಾರ್ವತಿಯಾಡಿದ ಈ ಮಾತುಗಳನ್ನು ಕೇಳಿ ಪ್ರೀತನಾದ ಮಹೇಶ್ವರನು ರೋಮಾಂಚಿತ ಶರೀರವುಳ್ಳವನಾಗಿ ನಗುತ್ತ ಕೆಲವು ಮಧುರ ವಚನಗಳನ್ನಾಡಿದನು.

೧೨೯. ಶ್ರೀಮಹಾದೇವ :—ಎಲೌ ಸರ್ವೇಶ್ವರಿಯಾದ ಶಿವೆಯೇ, ನೀನೇ ಮಹಾಲಕ್ಷ್ಮೀಸ್ವರೂಪಳೂ ಆದುದರಿಂದ ಶ್ರೀಹರಿಯ ಅನುಗ್ರಹಕ್ಕೆ ಪಾತ್ರಳಾದುದರಲ್ಲಿ ಆಶ್ಚರ್ಯವೇನು? ನಿನಗೆ ಅಸಾಧ್ಯವಾದುದಾವುದು?

೧೩೦. ಅನಂತಶಕ್ತಿಗಳನ್ನೊಳಗೊಂಡಿರುವ ನೀನು ಸಕಲಸಂಪತ್ಸ್ವರೂಪಿಣಿಯಾಗಿರುವೆ ಎಲೌ ಮಂಗಳಾಂಗಿಯೇ, ನೀನು ಯಾರ ಮಂದಿರದಲ್ಲಿರುವೆಯೋ ಅವನು ಐಶ್ವರ್ಯಪ್ರಾಪ್ತಿಗೆ ಅರ್ಹನಾಗುವನು.

ನ ಲಕ್ಷ್ಮೀರ್ಯದ್ಗೃಹೇ ತಸ್ಯ ಜೀವನಾನ್ಮರಣಂ ವರಂ ।
ಅಹಂ ಬ್ರಹ್ಮಾ ಚ ವಿಷ್ಣುಶ್ಚ ತ್ವಯಿ ಭಕ್ತ್ಯಾ ಶುಭಪ್ರದೇ ॥ ೧೩೧ ॥

ಸಂಹಾರೇ ಸೃಷ್ಟಿಕಾಲೇ ಚ ತ್ವತ್ಪ್ರಸಾದಾದ್ವಯಂ ಕ್ಷಮಾಃ ।
ಕೋ ವಾ ಹಿಮಾಲಯಃ ಕೋಽಹಂ ಕೌ ಕಾರ್ತಿಕಗಣೇಶ್ವರೌ ॥ ೧೩೨ ॥

ತ್ವದ್ವಿಹೀನಾ ಅಶಕ್ತಾಶ್ಚ ತ್ವಯಾ ಚ ವಯಮೀಶ್ವರಾಃ ।
ಉಕ್ತಾಃ ಪತಿವ್ರತಾ ಯಾಶ್ಚ ಯಾಃ ಪುರಾಜ್ಞಾಃ ಶ್ರುತೌ ಶ್ರುತಾಃ ॥ ೧೩೩ ॥

ಗೃಹೀತ್ವಾಽಽಜ್ಞಾಮೀಶ್ವರಸ್ಯ ವ್ರತಂ ಕುರು ಪತಿವ್ರತೇ ।
ವ್ರತಮೇತತ್ಕೃತಂ ಯಾಭಿಸ್ತಾಭ್ಯಃ ಕುರು ವಿಲಕ್ಷಣಂ ॥ ೧೩೪ ॥

ಸನತ್ಕುಮಾರೋ ಭಗವಾನ್ವ್ರತೇ ತೇಽಸ್ತು ಪುರೋಹಿತಃ ।
ಕಮಲಾನಾಂ ಬ್ರಾಹ್ಮಣಾನಾಂ ದ್ರವ್ಯಾಣಾಂ ದಾಯಕೋಽಪ್ಯಹಂ ॥ ೧೩೫ ॥

---

೧೩೧–೧೩೨ ಯಾರ ಮಂದಿರದಲ್ಲಿ ಸಂಪಲ್ಲಕ್ಷ್ಮಿಯು ನೆಲೆಸಿರುವುದಿಲ್ಲವೋ ಅವನು ಜೀವಿಸುವುದಕ್ಕಿಂತ ಸಾಯುವುದು ಲೇಸು ಎಲೌ ಮಂಗಳಪ್ರದಳೇ, ನಾನು, ಬ್ರಹ್ಮ, ಮತ್ತು ವಿಷ್ಣು ಮೂವರೂ ನಿನ್ನಲ್ಲಿ ಭಕ್ತಿಯಿಟ್ಟು ನಿನ್ನ ಅನುಗ್ರಹಕ್ಕೆ ಪಾತ್ರರಾಗಿರುವುದರಿಂದಲೇ ಜಗತ್ತಿನ ಸಂಹಾರ, ಸೃಷ್ಟಿ ಮತ್ತು ಪಾಲನೆಯಲ್ಲಿ ಶಕ್ತರಾಗಿದ್ದೇವೆ. ನಿನ್ನ ಅನುಗ್ರಹವೊಂದಿಲ್ಲದಿದ್ದರೆ ಹಿಮಾಲಯನಾರು? ನಾನಾರು? ಕಾರ್ತಿಕೇಯ ಗಣೇಶ್ವರರನ್ನು ಕೇಳುವವರಾರು?

೧೩೩. ನೀನಿಲ್ಲದಿದ್ದರೆ ಅಶಕ್ತರಾದ ನಾವೆಲ್ಲರೂ ನಿನ್ನ ಪ್ರಭಾವದಿಂದಲೇ ಸರ್ವೇಶ್ವರರೆನಿಸಿರುವೆವು. ವೇದಪ್ರತಿಪಾದ್ಯರಾದ ಸ್ತ್ರೀಯರೆಲ್ಲ ನಿನ್ನ ಅನುಗ್ರಹದಿಂದಲೇ ಮಹಾಪತಿವ್ರತೆಯರೆನಿಸಿದರು.

೧೩೪. ಆದುದರಿಂದ ಎಲೌ ಪತಿವ್ರತೆಯೇ, ಸರ್ವೇಶ್ವರನ ಅನುಜ್ಞೆಯನ್ನು ಪಡೆದು ಈ ವ್ರತವನ್ನು ಮಾಡು ಇದುವರೆಗೆ ಈ ವ್ರತವನ್ನು ಯಾರು ಯಾರು ಆಚರಿಸಿರುವರೋ ಅವರ ಆಚರಣೆಗಿಂತ ವಿಲಕ್ಷಣವಾಗಿ ನೀನು ಆಚರಿಸು.

೧೩೫. ಈ ತ್ರೈಮಾಸಿಕವ್ರತದಲ್ಲಿ ನಿನಗೆ ಷಡ್ಗುಣೈಶ್ವರ್ಯಪರಿಪೂರ್ಣನಾದ ಸನತ್ಕುಮಾರನು ಪುರೋಹಿತನಾಗುವನು. ನಾನು ವ್ರತಕ್ಕೆ ಬೇಕಾಗುವ ಕಮಲಪುಷ್ಪಗಳನ್ನೂ, ಬ್ರಾಹ್ಮಣರನ್ನೂ, ನಿಖಿಲದ್ರವ್ಯವನ್ನೂ ಒದಗಿಸಿಕೊಡುವೆನು.

ಕುಬೇರಂ ದ್ರವ್ಯಕೋಶೇ ಚ ರಕ್ಷಕಂ ಕುರು ಸುಂದರಿ ।
ವ್ರತೇ ಚ ದಾನಾಧ್ಯಕ್ಷೋಽಹಂ ಧನದಾತ್ರೀ ಚ ಶ್ರೀಃ ಸ್ವಯಂ ॥ ೧೩೬ ॥

ಪಾಠಕೋ ವಹ್ನಿದೇವಶ್ಚ ವರುಣೋ ಜಲದಾಯಕಃ ।
ವಸೂನಾಂ ವಾಹಕಾ ಯಕ್ಷಾಸ್ತದಧ್ಯಕ್ಷಃ ಷಡಾನನಃ. ॥ ೧೩೭ ॥

ಸ್ಥಾನಸಂಸ್ಕಾರಕರ್ತಾ ಚ ವ್ರತೇಽತ್ರ ಪವನಃ ಸ್ವಯಂ ।
ಪರಿವೇಷ್ಟಾ ಸ್ವಯಂ ಶಕ್ರಶ್ಚಂದ್ರೋಽಧಿಷ್ಠಾಪಕೋ ವ್ರತೇ ॥ ೧೩೮ ॥

ಸೂರ್ಯಶ್ಚ ದಾನನಿರ್ವಕ್ತಾ ಯೋಗ್ಯಾಯೋಗ್ಯಂ ಯಥೋಚಿತಂ ।
ವ್ರತೋಪಯುಕ್ತಂ ಯದ್ದ್ರವ್ಯಂ ದತ್ವಾ ನಿಯಮಿತಂ ಪ್ರಿಯೇ ॥ ೧೩೯ ॥

ತತೋಽಧಿಕಂ ಫಲಂ ಪುಣ್ಯಂ ಹರಯೇ ದೇಹಿ ಸುಂದರಿ ।
ವ್ರತೇ ನಿಯಮಿತಾನ್ವಿಪ್ರಾನ್ಭೋಜಯಿತ್ವಾ ತತೋಽಧಿಕಾನ್ ॥ ೧೪೦ ॥

---

೧೩೬. ಎಲೌ ಸುಂದರಿಯೇ, ಕುಬೇರನನ್ನು ದ್ರವ್ಯಭಂಡಾರದ ಅಧ್ಯಕ್ಷನನ್ನಾಗಿ ಮಾಡಿಕೋ, ಈ ವ್ರತದಲ್ಲಿ ನಾನು ದಾನಾಧ್ಯಕ್ಷನಾಗುವೆನು. ಸ್ವಯಂ ಲಕ್ಷ್ಮೀದೇವಿಯೇ ಧನಪ್ರದಳಾಗುವಳು.

೧೩೭. ಅಗ್ನಿದೇವನು ಸ್ತೋತ್ರಪಾಠಕನೂ, ವರುಣನು ನೀರನ್ನು ಒದಗಿಸುವವನೂ ಆಗುವನು. ಯಕ್ಷರೆಲ್ಲ ಸಾಮಾನುಗಳನ್ನು ಹೊತ್ತು ತರುವವರೂ, ಷಣ್ಮುಖನು ಅವರಿಗೆಲ್ಲ ಅಧ್ಯಕ್ಷನೂ ಆಗುವನು.

೧೩೮. ಈ ವ್ರತದಲ್ಲಿ ಸ್ವಯಂ ವಾಯುದೇವನೇ ನಿನಗೆ ಸ್ಥಳಶುದ್ಧಿ ಮಾಡಿಕೊಡುವನು. ಸ್ವಯಂ ಇಂದ್ರನೇ ಊಟಕ್ಕೆ ಬಡಿಸುವ ಕೆಲಸವನ್ನು ನಿರ್ವಹಿಸುವನು. ಚಂದ್ರನು ವಸ್ತುಗಳನ್ನು ಆಯಾಯ ಸ್ಥಾನದಲ್ಲಿರಿಸುವನು.

೧೩೯-೧೪೦. ಸೂರ್ಯದೇವನು ಯೋಗ್ಯಾಯೋಗ್ಯರನ್ನು ವಿಮರ್ಶಿಸಿ, ಯಥೋಚಿತವಾಗಿ ದಾನಮಾಡಲು ಹೇಳುವನು. ಆದುದರಿಂದ ಎಲೌ ಪ್ರಿಯೆಯೇ, ವ್ರತೋಪಯುಕ್ತವೂ, ವಿಧಿನಿಯಮಿತವೂ ಆದ ದ್ರವ್ಯವನ್ನೂ, ಅದಕ್ಕಿಂತ ಅಧಿಕವಾದ ಫಲಪುಷ್ಪಗಳನ್ನೂ ಶ್ರೀಹರಿಗೆ ಸಮರ್ಪಿಸಿ, ಈ ವ್ರತಕ್ಕೆ ಉಕ್ತವಾಗಿರುವಷ್ಟು ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿಪಡಿಸು.

ಅಸಂಖ್ಯಾನ್ಬ್ರಾಹ್ಮಣಾನ್ದೇವಿ ಭಕ್ತ್ಯಾ ಕುರು ನಿಮಂತ್ರಣಂ ।
ಸಮಾಪ್ತಿದಿವಸೇ ಸ್ವರ್ಣಂ ರತ್ನಂ ಮುಕ್ತಾಂ ಪ್ರವಾಲಕಂ　　|| ೧೪೧ ||

ವ್ರತೋಕ್ತಾಂ ದಕ್ಷಿಣಾಂ ದತ್ವಾ ಸರ್ವಂ ದೇಹಿ ದ್ವಿಜಾನನೇ ।
ಇತ್ಯುಕ್ತ್ವಾ ಶಂಕರಸ್ತಾಂ ಚ ಕಾರಯಾಮಾಸ ತದ್ವ್ರತಂ　　|| ೧೪೨ ||

ವ್ರತಂ ಚಕಾರ ಸಾ ದುರ್ಗಾ ಸರ್ವಾಭ್ಯಶ್ಚ ವಿಲಕ್ಷಣಂ ।
ಇತ್ಯೇವಂ ಕಥಿತಂ ವಿಪ್ರ ಪಾರ್ವತ್ಯಾ ಯದ್ವ್ರತಂ ಕೃತಂ　　|| ೧೪೩ ||

ರತ್ನಂ ವೋಢುಮಶಕ್ತಾಶ್ಚ ಬ್ರಾಹ್ಮಣಾಃ ಪಾರ್ವತೀವ್ರತೇ ।
ಇತಿಹಾಸಃ ಶ್ರುತಃ ಸರ್ವಃ ಪ್ರಕೃತಂ ಶೃಣು ನಾರದ　　|| ೧೪೪ ||

ಶ್ರೀಕೃಷ್ಣ ಬಾಲಚರಿತಂ ನೂತ್ನಂ ನೂತ್ನಂ ಪದೇ ಪದೇ ।
ಹತ್ವಾ ತಾನ್ದಾನವೇಂದ್ರಾಂಶ್ಚ ಶಿಶುಭಿಃ ಸಹ ಗೋಕುಲೇ　　|| ೧೪೫ ||

---

೧೪೧-೧೪೨. ಎಲೌ ದೇವಿಯೇ, ಈ ವ್ರತಕ್ಕೆ ಭಕ್ತಿಪೂರ್ವಕವಾಗಿ ಅಸಂಖ್ಯ ಬ್ರಾಹ್ಮಣರನ್ನು ಆಹ್ವಾನಿಸಿ, ವ್ರತಸಮಾಪ್ತಿಯ ದಿವಸ ಸುವರ್ಣ, ರತ್ನ, ಮುತ್ತು ಮತ್ತು ಹವಳಗಳನ್ನೂ, ವ್ರತೋಕ್ತವಾದ ದಕ್ಷಿಣೆಗಳನ್ನೂ ದ್ವಿಜರಿಗೆ ದಾನಮಾಡು. ಶಂಕರನು ಈ ರೀತಿ ಹೇಳಿ ಪಾರ್ವತಿಯಿಂದ ಆ ವ್ರತವನ್ನು ಮಾಡಿಸಿದನು.

೧೪೩. ಆಗ ದುರ್ಗಾದೇವಿಯು ಎಲ್ಲರೂ ಆಚರಿಸಿದ್ದಕ್ಕಿಂತ ವಿಲಕ್ಷಣವಾಗಿ (ವಿಶೇಷವಾಗಿ) ಆ ವ್ರತವನ್ನಾಚರಿಸಿದಳು. ಎಲೈ ವಿಪ್ರೋತ್ತಮನಾದ ನಾರದನೇ, ಈ ರೀತಿ ಪಾರ್ವತಿಯು ಆಚರಿಸಿದ ವ್ರತವನ್ನು ನಿನಗೆ ವಿವರಿಸಿದೆನು.

೧೪೪. ಪಾರ್ವತಿಯಾಚರಿಸಿದ ಈ ವ್ರತದಲ್ಲಿ ದಾನವಾಗಿ ಬಂದ ರತ್ನಗಳನ್ನು ಬ್ರಾಹ್ಮಣರು ಹೊರಲಶಕ್ತರಾದರು. ಎಲೈ ನಾರದನೇ, ನೀನು ಈ ಇತಿಹಾಸವನ್ನು ಕೇಳಿದುದಾಯಿತು. ಈಗ ಪ್ರಸಕ್ತ ವಿಷಯವನ್ನು ಕೇಳುವವನಾಗು.

೧೪೫-೧೪೬. ಶ್ರೀಕೃಷ್ಣನ ಬಾಲಚರಿತಾಮೃತವು ಹೇಳಿ ಕೇಳುವವರಿಗೆ ಕ್ಷಣಕ್ಷಣಕ್ಕೂ ಹೊಸದಾಗಿ ತೋರುವುದು. ಈ ರೀತಿ ಪ್ರಲಂಬಾದಿ ದಾನವರನ್ನು ಸಂಹರಿಸಿ, ಶ್ರೀಕೃಷ್ಣನು ಗೋಪಬಾಲರೊಡನೆ ನಂದಗೋಕುಲದಲ್ಲಿ ಕುಬೇರನ

ಜಗಾಮ ಸ್ವಗೃಹಂ ಕೃಷ್ಣಃ ಕುಬೇರಭವನೋಪಮಂ ।
ಸರ್ವೇಭ್ಯೋ ವನವಾರ್ತಾ ಚ ಪ್ರೋಕ್ತಾ ಚ ಶಿಶುಭಿರ್ಮುದಾ ॥ ೧೪೬ ॥

ಶ್ರುತ್ವೈವಂ ವಿಸ್ಮಿತಾಃ ಸರ್ವೇ ನಂದೋ ಭಯಮವಾಪ ಹ ।
ಆನೀಯ ವೃದ್ಧಾನ್ಗೋಪಾಂಶ್ಚ ಗೋಪಿಕಾಃ ಸ್ಥವಿರಾಸ್ತಥಾ ॥ ೧೪೭ ॥

ಯುಕ್ತಿಂ ಚಕಾರ ತೈಃ ಸಾರ್ಧಮಾಲೋಚ್ಯ ಸಮಯೋಚಿತಾಂ ।
ಕೃತ್ವಾ ಯುಕ್ತಿಂ ಚ ಗೋಪೇಶಸ್ತತ್ಸ್ಥಾನಂ ತ್ಯಕ್ತುಮುದ್ಯತಃ ॥ ೧೪೮ ॥

ಗಂತುಂ ವೃಂದಾವನಂ ಸರ್ವಾನುವಾಚ ತತ್ಕ್ಷಣಂ ಮುನೇ ।
ನಂದಾಜ್ಞಾಂ ಚ ಸಮಾಕರ್ಣ್ಯ ತೇ ಸರ್ವೇ ಗಂತುಮುದ್ಯತಾಃ ॥ ೧೪೯ ॥

ಗೋಪಾಶ್ಚ ಗೋಪಿಕಾಶ್ಚೈವ ಬಾಲಕಾ ಬಾಲಿಕಾಸ್ತಥಾ ।
ಕೃಷ್ಣೇನ ಹಲಿನಾ ಸಾರ್ಧಂ ಪ್ರಯಯುರ್ಬಾಲಕಾ ಮುದಾ ॥ ೧೫೦ ॥

---

ಮಂದಿರದಂತೆ ವೈಭವಯುತವಾದ ತನ್ನ ಮಂದಿರಕ್ಕೆ ಹೋದನು. ಅಲ್ಲಿ ಗೋಪ ಬಾಲರು ವನದಲ್ಲಿ ನಡೆದ ಸಮಾಚಾರವನ್ನೆಲ್ಲ ಎಲ್ಲರಿಗೂ ತಿಳಿಸಿದರು.

೧೪೭-೧೪೮ ಅದನ್ನು ಕೇಳಿ ಎಲ್ಲರೂ ಅತ್ಯಾಶ್ಚರ್ಯಗೊಂಡರು ಪುತ್ರ ವಾತ್ಸಲ್ಯಪರಿಪೂರ್ಣನಾದ ನಂದಗೋಪನಿಗೆ ಮಾತ್ರ ಭಯವಾಯಿತು. ಆಗ ಅವನು ವೃದ್ಧರಾದ ಗೋಪಗೋಪಿಯರನ್ನು ಕರೆಸಿ, ಅವರೊಡನೆ ಸಮಯೋಚಿತವಾದ ಯುಕ್ತಿಯನ್ನು ಸಮಾಲೋಚನೆಮಾಡಿದನು. ಈ ರೀತಿ ಉಪಾಯವನ್ನು ಯೋಚಿಸಿದ ನಂತರ ನಂದಗೋಪನು ತನ್ನ ವಾಸಸ್ಥಾನವನ್ನೇ ಬಿಡಲುದ್ಯುಕ್ತನಾದನು.

೧೪೯. ಎಲೈ ನಾರದಮುನಿಯೇ, ಕೂಡಲೇ ಎಲ್ಲರೂ ಗೋಕುಲದಿಂದ ಬೃಂದಾವನಕ್ಕೆ ಹೋಗಬೇಕೆಂದು ನಂದಗೋಪನು ತಿಳಿಸಲು, ಅವನ ಅಪ್ಪಣೆಯಂತೆ ಗೋಪರೆಲ್ಲರೂ ಬೃಂದಾವನಕ್ಕೆ ಹೊರಡಲನುವಾದರು.

೧೫೦. ಗೋಪಗೋಪಿಯರೂ, ಬಾಲಬಾಲೆಯರೂ ಕೂಡ ಸಂತೋಷ ಸಮನ್ವಿತರಾಗಿ ಬಲರಾಮಕೃಷ್ಣರೊಡನೆ ನಂದಗೋಕುಲದಿಂದ ಬೃಂದಾವನಕ್ಕೆ ತೆರಳಿದರು.

ಸಂಗೀತಂ ಚ ಪ್ರಗಾಯಂತೋ ನಾನಾವೇಷಸಮನ್ವಿತಾಃ ।
ವೇಣುಪ್ರವಾದಕಾಃ ಕೇಚಿತ್ಕೇಚಿಚ್ಛೃಂಗಪ್ರವಾದಕಾಃ ॥ ೧೫೧ ॥

ಕರತಾಲಕರಾಃ ಕೇಚಿದ್ವೀಣಾಹಸ್ತಾಶ್ಚ ಕೇಚನ ।
ಶರಯಂತ್ರಕರಾಃ ಕೇಚಿಚ್ಛೃಂಗಹಸ್ತಾಶ್ಚ ಕೇಚನ ॥ ೧೫೨ ॥

ನವಪಲ್ಲವಕರ್ಣಾಶ್ಚ ಕೇಚಿದ್ಗೋಪಾಲಬಾಲಕಾಃ ।
ಕೇಚಿನ್ಮುಕುಲಕರ್ಣಾಶ್ಚ ಪುಷ್ಪಕರ್ಣಾಶ್ಚ ಕೇಚನ ॥ ೧೫೩ ॥

ನವಮಾಲ್ಯಕರಾಃ ಕೇಚಿತ್ಕೇಚಿದಾಜಾನುಮಾಲಿನಃ ।
ಕೇಚಿತ್ಪಲ್ಲವಚೂಡಾಶ್ಚ ಪುಷ್ಪಚೂಡಾಶ್ಚ ಕೇಚನ ॥ ೧೫೪ ॥

---

೧೫೧. ಎಲ್ಲರೂ ವಿಚಿತ್ರವೇಷಧಾರಿಗಳಾಗಿ ಮನೋಹರವಾದ ಸಂಗೀತವನ್ನು ಹಾಡುತ್ತ ಹೊರಟರು. ಕೆಲವರು ಕೊಳಲನ್ನೂ ಮತ್ತೆ ಕೆಲವರು ಕೊಂಬನ್ನೂ ಬಾರಿಸುತ್ತಿದ್ದರು.

೧೫೨. ಕೆಲವರು ಅಂಗೈಯಲ್ಲಿ ತಾಳವನ್ನು ಹಾಕುತ್ತಿದ್ದರು. ಕೆಲವರು ವೀಣೆಯನ್ನು ನುಡಿಸುತ್ತಿದ್ದರು. ಕೆಲವರು 'ಶರಯಂತ್ರ' ವನ್ನೂ, ಮತ್ತೆ ಕೆಲವರು ಕೊಂಬುಗಳನ್ನೂ ಬಾರಿಸುತ್ತಿದ್ದರು.

೧೫೩. ಗೋಪಾಲಬಾಲಕರಲ್ಲಿ ಕೆಲವರು ಕಿವಿಯ ಮೇಲೆ ಹೊಸ ಚಿಗುರುಗಳನ್ನೂ ಕೆಲವರು ಮೊಗ್ಗುಗಳನ್ನೂ ಮತ್ತೆ ಕೆಲವರು ಹೂವುಗಳನ್ನೂ ಅಲಂಕರಿಸಿಕೊಂಡಿದ್ದರು.

೧೫೪. ಕೆಲವರು ಕೈಯಲ್ಲಿ ನವಮಾಲೆಗಳನ್ನು ಧರಿಸಿದ್ದರು. ಕೆಲವರು ಮಂಡಿಯವರೆಗೆ ಜೋಲಾಡುವಂತೆ ಮಾಲೆಗಳನ್ನು ಧರಿಸಿದ್ದರು. ಕೆಲವು ಗೋಪಬಾಲರು ತಲೆಯಲ್ಲಿ ಚಿಗುರುಗಳನ್ನೂ ಮತ್ತೆ ಕೆಲವರು ಹೂಗಳನ್ನೂ ಮುಡಿದಿದ್ದರು.

ಗೋಪಾಲಬಾಲಕಾಃ ಸರ್ವೇ ವಿಪ್ರೇಂದ್ರ ನವಕೋಟಯಃ ।
ಜಗ್ಮುರ್ಗೋಪ್ಯೋ ವಯಸ್ಯಾಶ್ಚ ಕೋಟಿಶಃ ಕೋಟಿಶೋ ಮುದಾ ॥ ೧೫೫ ॥

ವೃದ್ಧಾಶ್ಚ ಕೋಟಿಶಸ್ತತ್ರ ಬೃಹಚ್ಛ್ರೋಣ್ಯಶ್ಚಲತ್ಕುಚಾಃ ।
ರಾಧಿಕಾಸಹಚಾರಿಣ್ಯೋ ಬಾಲಾ ಗೋಪಾಲಿಕಾ ಮುನೇ ॥ ೧೫೬ ॥

ತಾಃ ಸುಶೀಲಾದಯೋ ಭವ್ಯಾ ನಾನಾಲಂಕಾರಭೂಷಿತಾಃ ।
ದಿವ್ಯವಸ್ತ್ರಪರೀಧಾನಾಃ ಸಸ್ಮಿತಾಸ್ತಾ ಯಯುರ್ಮುದಾ ॥ ೧೫೭ ॥

ಕಾಶ್ಚಿದಾರುಹ್ಯ ಶಿಬಿಕಾಂ ರಥಮಾರುಹ್ಯ ಕಾಶ್ಚನ ।
ರಾಧಾ ಸ್ಯಂದನಮಾರುಹ್ಯ ಶಾತಕೌಮ್ಭಪರಿಚ್ಛದಂ ॥ ೧೫೮ ॥

ತಾಭಿರ್ಯುಕ್ತಾ ಯಯೌ ದೇವೀ ರತ್ನಾಲಂಕಾರಭೂಷಿತಾ ।
ಯಶೋದಾ ರೋಹಿಣೀ ಚೈವ ರತ್ನಾಲಂಕಾರಭೂಷಿತಾ ॥ ೧೫೯ ॥

---

೧೫೫. ಎಲೈ ವಿಪ್ರೋತ್ತಮನೇ, ಈ ರೀತಿ ಒಂಭತ್ತುಕೋಟಿ ಗೋಪಬಾಲಕರು ವಿಲಾಸಪರವಶರಾಗಿ ಹೋಗುತ್ತಿದ್ದರು. ಗೋಪಿಯರೂ, ಅವರ ಗೆಳತಿಯರೂ ಕೂಡ ಕೋಟಿಸಂಖ್ಯಾತವಾಗಿ ಸಂತೋಷದಿಂದ ಅವರನ್ನು ಹಿಂಬಾಲಿಸುತ್ತಿದ್ದರು.

೧೫೬-೧೫೭. ಅಲ್ಲಿ ದಪ್ಪವಾದ ನಿತಂಬಬಿಂಬದಿಂದಲೂ, ಚಂಚಲವಾದ ಕುಚಗಳಿಂದಲೂ ಕೂಡಿದ ಕೋಟಿಗಟ್ಟಲೆ ವೃದ್ಧ ಸ್ತ್ರೀಯರೂ ರಾಧಾದೇವಿಯ ಸಹಚರಿಯರಾದ ಗೋಪ ಬಾಲಿಕೆಯರೂ ಇದ್ದರು. ಸುಶೀಲೆಯೇ ಮುಂತಾದ ಸುಂದರಗೋಪಿಯರೂ ಕೂಡ, ನಾನಾಲಂಕಾರಗಳಿಂದ ಭೂಷಿತರಾಗಿ ದಿವ್ಯವಸ್ತ್ರಗಳನ್ನು ಧರಿಸಿ, ಸ್ಮಿತವದನೆಯರಾಗಿ, ಸಂತೋಷದಿಂದ ಅವರನ್ನು ಹಿಂಬಾಲಿಸುತ್ತಿದ್ದರು.

೧೫೮-೧೫೯. ಕೆಲವು ಗೋಪಿಯರು ಪಲ್ಲಕ್ಕಿಯನ್ನೂ, ಮತ್ತೆ ಕೆಲವರು ರಥವನ್ನೂ ಹತ್ತಿಹೋಗುತ್ತಿದ್ದರು. ರಾಧಾದೇವಿಯಾದರೋ ರತ್ನಾಲಂಕಾರಭೂಷಿತಳಾಗಿ ಸುವರ್ಣವಿಕಾರವಾದ ರಥವನ್ನೇರಿ ಆ ಗೋಪಿಯರೊಡನೆ ಹೋಗುತ್ತಿದ್ದಳು. ಯಶೋದೆ ಮತ್ತು ರೋಹಿಣಿಯೂ ಕೂಡ ರತ್ನಾಲಂಕಾರಭೂಷಿತರಾಗಿದ್ದರು.

ಯಯೌ ಸ್ಯಂದನಮಾರುಹ್ಯ ಶಾತಕೌಂಭಪರಿಚ್ಛದಂ ।
ನಂದಃ ಸುನಂದಃ ಶ್ರೀದಾಮಾ ಗಿರಿಭಾನುರ್ವಿಭಾಕರಃ ॥ ೧೬೦ ॥

ವೀರಭಾನುಶ್ಚಂದ್ರಭಾನುರ್ಗಜಸ್ಥಾಃ ಪ್ರಯಯುರ್ಮುದಾ ।
ಶ್ರೀಕೃಷ್ಣಬಲದೇವೌ ತೌ ರತ್ನಾಲಂಕಾರಭೂಷಿತೌ ॥ ೧೬೧ ॥

ಸ್ವರ್ಣಸ್ಯಂದನಮಾಸ್ಥಾಯ ಜಗ್ಮತುಃ ಪರಯಾ ಮುದಾ ।
ಕೋಟಿಶಃ ಕೋಟಿಶೋ ಗೋಪಾ ವೃದ್ಧಾಶ್ಚ ಯೌವನಾನ್ವಿತಾಃ ॥ ೧೬೨ ॥

ಅಶ್ವಸ್ಥಾಶ್ಚ ಗಜಸ್ಥಾಶ್ಚ ರಥಸ್ಥಾಶ್ಚೈವ ಕೇಚನ ।
ಗೋಪಾ ಯಯುರ್ಮುದಾ ಯುಕ್ತಾಶ್ಚೋದ್ಧತಾ ನಂದಕಿಂಕರಾಃ ॥ ೧೬೩ ॥

ವೃಷಸ್ಥಾ ಗರ್ದಭಸ್ಥಾಶ್ಚ ಸಂಗೀತತಾನತತ್ಪರಾಃ ।
ಅಪರಾ ರಾಧಿಕಾದಾಸ್ಯಸ್ತ್ರಿಸಪ್ತಶತಕೋಟಯಃ ॥ ೧೬೪ ॥

---

೧೬೦-೧೬೨ ಅಲ್ಲದೆ ಸುವರ್ಣವಿರಚಿತವಾದ ರಥದಲ್ಲಿ ಕುಳಿತು ಪ್ರಯಾಣ ಮಾಡುತ್ತಿದ್ದರು. ನಂದ, ಸುನಂದ, ಶ್ರೀದಾಮ, ಗಿರಿಭಾನು, ವಿಭಾಕರ, ವೀರಭಾನು ಮುಂತಾದ ಗೋಪಪ್ರಮುಖರೆಲ್ಲರೂ ಆನೆಯ ಮೇಲೆ ಕುಳಿತು ಸಂತೋಷದಿಂದ ಪ್ರಯಾಣಮಾಡುತ್ತಿದ್ದರು ಶ್ರೀಕೃಷ್ಣ ಬಲರಾಮರಾದರೋ ರತ್ನಾಲಂಕಾರಭೂಷಿತರಾಗಿ ಸ್ವರ್ಣರಥವನ್ನೇರಿ ಅತ್ಯಂತ ಸಂತೋಷಭರಿತರಾಗಿ ಪ್ರಯಾಣ ಮಾಡುತ್ತಿದ್ದರು. ಅವರ ಜತೆಯಲ್ಲಿ ಯುವಕರೂ ವೃದ್ಧರೂ ಆದ ಕೋಟಿ ಸಂಖ್ಯಾಯುತರಾದ ಗೋಪರು ಹೋಗುತ್ತಿದ್ದರು.

೧೬೩. ಕೆಲವರು ಕುದುರೆಯ ಮೇಲೂ, ಕೆಲವರು ಆನೆಯ ಮೇಲೂ, ಕೆಲವರು ರಥದ ಮೇಲೂ ಕುಳಿತು ಹೋಗುತ್ತಿದ್ದರು. ನಂದಗೋಪನ ಕಿಂಕರರಾದ ಅನೇಕ ಗೋಪರೂ ಕೂಡ ಅತ್ಯುತ್ಸಾಹದಿಂದ ಅವರನ್ನು ಹಿಂಬಾಲಿಸುತ್ತಿದ್ದರು.

೧೬೪. ಅವರಲ್ಲಿ ಕೆಲವರು ವೃಷಭಗಳ ಮೇಲೂ ಮತ್ತೆ ಕೆಲವರು ಕತ್ತೆಗಳ ಮೇಲೂ ಕುಳಿತು ಗ್ರಾಮ್ಯವಾದ ಸಂಗಿತ ಮತ್ತು ತಾಳಗಳಲ್ಲಿ ಆಸಕ್ತರಾಗಿದ್ದರು. ಅವರೊಡನೆ ರಾಧಾದೇವಿಯ ದಾಸಿಯರೂ ಹೋಗುತ್ತಿದ್ದರು.

ಮುದಾನ್ವಿತಾಃ ಸಸ್ಮಿತಾಶ್ಚ ಸ್ವರ್ಣಾಲಂಕಾರಭೂಷಿತಾಃ ।
ಕಾಶ್ಚಿತ್ಸಿಂಧೂರಹಸ್ತಾಶ್ಚ ಕಾಶ್ಚಿತ್ಕಜ್ಜಲವಾಹಿಕಾಃ ॥ ೧೬೫ ॥

ಕಾಶ್ಚಿತ್ಕಂದುಕಹಸ್ತಾಶ್ಚ ಕಾಶ್ಚಿತ್ಪುತ್ತಲಿಕಾಕರಾಃ ।
ಭೋಗದ್ರವ್ಯಕರಾಃ ಕಾಶ್ಚಿತ್ಕ್ರೀಡಾದ್ರವ್ಯಕರಾ ವರಾಃ ॥ ೧೬೬ ॥

ವೇಷದ್ರವ್ಯಕರಾಃ ಕಾಶ್ಚಿತ್ಕಾಶ್ಚಿನ್ಮಾಲಾಕರಾಃ ವರಾಃ ।
ಕಾಶ್ಚಿದ್ವಾದ್ಯಕಹಸ್ತಾಶ್ಚ ಪ್ರಯಯುರ್ಗೋಪಿಕಾ ಮುದಾ ॥ ೧೬೭ ॥

ವಹ್ನಿಶುದ್ಧಾಂಶುಕಾನಾಂ ಚ ವಾಹಿಕಾಶ್ಚೈವ ಕಾಶ್ಚನ ।
ಚಂದನಾಗುರುಕಸ್ತೂರೀಕುಂಕುಮದ್ರವವಾಹಿಕಾಃ ॥ ೧೬೮ ॥

---

೧೬೫. ಸುವರ್ಣಾಲಂಕಾರಭೂಷಿತರಾದ ಅವರೆಲ್ಲರೂ ಸಂತೋಷದಿಂದ ಸ್ಮಿತಮುಖಿಯರಾಗಿದ್ದರು. ಕೆಲವರು ತಮ್ಮ ಕೈಯಲ್ಲಿ ಸಿಂದೂರವನ್ನೂ ಕೆಲವರು ಕಾಡಿಗೆಯನ್ನೂ ಹಿಡಿದಿದ್ದರು.

೧೬೬. ಕೆಲವು ದಾಸಿಯರು ಕಂದುಕ (ಚೆಂಡು) ಗಳನ್ನೂ, ಇನ್ನು ಕೆಲವರು ಬೊಂಬೆಗಳನ್ನೂ ತಮ್ಮ ಕೈಯಲ್ಲಿ ಧರಿಸಿದ್ದರು. ಕೆಲವರ ಕೈಯ್ಯಲ್ಲಿ ಭೋಗ ವಸ್ತುಗಳೂ, ಮತ್ತೆ ಕೆಲವರ ಕೈಯಲ್ಲಿ ಆಟದ ಸಾಮಾನುಗಳೂ ಇದ್ದವು.

೧೬೭. ಕೆಲವರು ತಮ್ಮ ಕೈಯಲ್ಲಿ ವೇಷಸಾಧನವಾದ ವಸ್ತ್ರಗಳನ್ನೂ ಮತ್ತೆ ಕೆಲವರು ಪುಷ್ಪಮಾಲೆಗಳನ್ನೂ ಹಿಡಿದಿದ್ದರು ಕೆಲವು ಗೋಪಿಯರು ತಮ್ಮ ಕೈಯಲ್ಲಿ ವಾದ್ಯಗಳನ್ನು ಧರಿಸಿ ಹೋಗುತ್ತಿದ್ದರು.

೧೬೮. ಕೆಲವು ದಾಸಿಯರು ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನು ಹೊತ್ತು ತರುತ್ತಿದ್ದರು. ಕೆಲವರು ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮ ದ್ರವ್ಯಗಳನ್ನು ತೆಗೆದುಕೊಂಡು ಹೋಗುತ್ತಿದ್ದರು.

ಕಾಶ್ಚಿತ್ಸಂಗೀತನಿರತಾಃ ಕಾಶ್ಚಿಚ್ಚಿತ್ರಕಥಾರತಾಃ ।
ಕೋಟಿಶಃ ಕೋಟಿಶೋ ರಮ್ಯಾಃ ಪ್ರಯಯುಃ ಶಿಬಿಕಾನ್ವಿತಾಃ ॥ ೧೬೯ ॥

ಕೋಟಿಶಃ ಕೋಟಿಶಶ್ಚಾಶ್ವಾಃ ಕೋಟಿಶಃ ಕೋಟಿಶೋ ರಥಾಃ ।
ಕೋಟಿಶಃ ಕೋಟಿಶಶ್ಚೈವ ಶಕಟಾ ದ್ರವ್ಯಪೂರಿತಾಃ ॥ ೧೭೦ ॥

ಕೋಟಿಶಃ ಕೋಟಿಶಶ್ಚೈವ ವೃಷೇಂದ್ರಾ ದ್ರವ್ಯವಾಹಕಾಃ ।
ಕೋಟಿಶಃ ಕೋಟಿಶಶ್ಚೈವ ದಶಲಕ್ಷಾಣಿ ಹಸ್ತಿನಾಂ ॥ ೧೭೧ ॥

ಹಸ್ತಿಪಾಂಕುಶಯುಕ್ತಾನಿ ಯಯುರ್ವೃಂದಾವನಂ ವನಂ ।
ಸರ್ವೇ ವೃಂದಾವನಂ ಗತ್ವಾ ದೃಷ್ಟ್ವಾ ಶೂನ್ಯಗೃಹಂ ಮುನೇ ॥ ೧೭೨ ॥

ವೃಕ್ಷಮೂಲೇ ಯಥಾಸ್ಥಾನಂ ತಸ್ಥುಃ ಸರ್ವೇ ಯಥೋಚಿತಂ ।
ಉವಾಚ ಗೋಪಾಂಚ್ಛ್ರೀಕೃಷ್ಣೋ ಗೃಹಾಂಶ್ಚೇಷ್ಟತಮಾನ್ವ್ರಜಾಃ ॥

---

೧೬೯. ಕೆಲವು ದಾಸಿಯರು ಸಂಗೀತದಲ್ಲಿ ಆಸಕ್ತರಾಗಿಯೂ, ಕೆಲವರು ಚಿತ್ರವಿಚಿತ್ರವಾದ ಮಾತುಗಳಲ್ಲಿ ಮಗ್ನರಾಗಿಯೂ, ಹಿಂಬಾಲಿಸುತ್ತಿದ್ದರು. ಮನೋಹರೆಯರಾದ ಕೋಟಿಸಂಖ್ಯಾಕ ದಾಸಿಯರು ಪಲ್ಲಕ್ಕಿಯನ್ನೇರಿಕೊಂಡು ಹೋಗುತ್ತಿದ್ದರು.

೧೭೦. ಕೋಟಿಸಂಖ್ಯಾಕವಾದ ಕುದುರೆಗಳನ್ನೂ ಕೋಟಿ [illegible] ರಥಗಳನ್ನೂ ಕೋಟಿಸಂಖ್ಯಾಪರಿಮಿತವಾದ ದ್ರವ್ಯಪೂರಿತವಾದ [illegible] ಆ ದಾಸಿಯರು ತರುತ್ತಿದ್ದರು.

೧೭೧-೧೭೨. ಕೋಟ್ಯಂತರ ವೃಷಭಗಳೂ, ದ್ರವ್ಯಭಾಂಡವನ್ನು [illegible] ಕೊಂಡು ಬರುತ್ತಿದ್ದ ಕೋಟ್ಯಂತರ ಸೇವಕರೂ, ಮಾವಟಿಗರ [illegible] ನಿಯಂತ್ರಿತವಾದ ಹತ್ತುಲಕ್ಷ ಆನೆಗಳೂ ಬೃಂದಾವನಕ್ಕೆ ಹೋದವು. ಎಲ್ಲ [illegible] ಮುನಿಯೇ, ಈ ರೀತಿ ಎಲ್ಲರೂ ಬೃಂದಾವನಕ್ಕೆ ಬಂದು ಅಲ್ಲಿ ನೋಡಿದರೆ [illegible] ಮನೆಗಳೇ ಇರಲಿಲ್ಲ.

೧೭೩-೧೭೪ ಎಲ್ಲರೂ ಮರದ ಬುಡದಲ್ಲಿ ಯಥೋಚಿತವಾಗಿ [illegible] ಕೊಂಡು ಕುಳಿತುಕೊಂಡರು. ಆಗ ಶ್ರೀಕೃಷ್ಣನು ಗೋಪರನ್ನೆಲ್ಲ ಕುರಿತು, [illegible] ಇಂದು ಇಲ್ಲಿದ್ದು ನಾಳೆ ನಮನಮಗಿಷ್ಟಬಂದ ಮನೆಗಳಿಗೆ ಹೋಗೋಣ [illegible]

ಅದ್ಯ ಸಂತಿಷ್ಠತೇತ್ಯೇವಂ ಶ್ರುತ್ವಾ ಶ್ರೀಕೃಷ್ಣಭಾಷಿತಂ ।
ಕುತ್ರ ಸಂತಿ ಗೃಹಾಃ ಕೃಷ್ಣೇತ್ಯೇವಮೂಚುಸ್ತು ಗೋಪಕಾಃ ।
ಇತಿ ತೇಷಾಂ ವಚಃ ಶ್ರುತ್ವಾ ಶ್ರೀಕೃಷ್ಣೋ ವಾಕ್ಯಮಬ್ರವೀತ್ ॥ ೧೭೪ ॥

॥ ಶ್ರೀಕೃಷ್ಣ ಉವಾಚ ॥

ಅತ್ರ ಸ್ಥಾನೇ ಗೃಹಾಃ ಸಂತಿ ಪ್ರಸನ್ನಾ ದೇವನಿರ್ಮಿತಾಃ ॥ ೧೭೫ ॥

ದೇವಪ್ರೀತಿಂ ವಿನಾ ಶಕ್ತಾ ನಹಿ ದ್ರಷ್ಟುಂ ಚ ಕೇಚನ ।
ಅದ್ಯ ತಿಷ್ಠತ ಗೋಪಾಲಾಃ ಸಂಪೂಜ್ಯ ವನದೇವತಾಃ ॥ ೧೭೬ ॥

ಪ್ರಾತರ್ದ್ರಕ್ಷ್ಯಥ ಗೃಹಾನ್ರಮ್ಯಾನ್ದ್ರಕ್ಷ್ಯಥಾದ್ಯ ಧ್ರುವಂ ಮುದಾ ।
ಧೂಪದೀಪಾದಿನೈವೇದ್ಯೈರ್ಬಲಿಭಿಃ ಪುಷ್ಪಚಂದನೈಃ ॥ ೧೭೭ ॥

---

ಹೇಳಲು ಆ ಮಾತನ್ನು ಕೇಳಿದ ಗೋಪರೆಲ್ಲರೂ ಎಲೈ ಕೃಷ್ಣನೇ, ಇಲ್ಲಿ ಮನೆಗಳೆಲ್ಲಿವೆ? ಎಂದು ಕೇಳಿದರು. ಈ ರೀತಿಯಾದ ಅವರ ಪ್ರಶ್ನೆಗಳನ್ನು ಕೇಳಿ ಶ್ರೀಕೃಷ್ಣನು ಮುಂದೆ ಹೇಳುವಂತೆ ಹೇಳಿದನು.

೧೭೫–೧೭೬. ಶ್ರೀಕೃಷ್ಣ :—ನಮ್ಮಲ್ಲಿ ಪ್ರಸನ್ನರಾಗಿರುವ ದೇವತೆಗಳಿಂದ ನಿರ್ಮಿತವಾದ ಸುಂದರಮಂದಿರಗಳು ಇಲ್ಲಿವೆ. ದೇವತಾನುಗ್ರಹವಿಲ್ಲದೆ ನಮ್ಮಲ್ಲಿ ಯಾರೂ ಆ ಮಂದಿರಗಳನ್ನು ನೋಡಲು ಶಕ್ತರಾಗುವುದಿಲ್ಲ. ಆದುದರಿಂದ ಎಲೈ ಗೋಪಾಲರೇ, ಇಂದು ವನದೇವತೆಗಳನ್ನು ಪೂಜೆಮಾಡಿಕೊಂಡು ಇಲ್ಲಿಯೇ ಇರಿ.

೧೭೭–೧೭೮. ನಾಳೆ ನೀವೆಲ್ಲರೂ ರಮ್ಯವಾದ ಮಂದಿರಗಳನ್ನು ನೋಡುವಿರಿ. ಈ ದಿವಸ ನೀವೆಲ್ಲರೂ ವಟವೃಕ್ಷದ ಬುಡದಲ್ಲಿ ಚಂಡಿಕಾದೇವಿಯನ್ನು ಆವಾಹನೆಮಾಡಿ ಪುಷ್ಪಚಂದನಗಳಿಂದಲೂ, ಧೂಪದೀಪಗಳಿಂದಲೂ, ಬಲಿ

ದೇವೀಂ ಚ ವಟಮೂಲಸ್ಥಾಂ ಪೂಜಾಂ ಕುರುತ ಚಂಡಿಕಾಂ ।
ಕೃಷ್ಣಸ್ಯ ವಚನಂ ಶ್ರುತ್ವಾ ಗೋಪಾಃ ಸಂಪೂಜ್ಯ ದೇವತಾಂ ।
ಭುಕ್ತ್ವಾ ಭೋಗಾನ್ ದಿನೇ ರಾತ್ರೌ ತತ್ರೈವ ಸುಷುಪುರ್ಮುದಾ ॥ ೧೭೮ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ನಾರಾಯಣನಾರದಸಂವಾದೇ ಬಕಪ್ರಲಂಬಕೇಶಿವಧ-
ಪೂರ್ವಕವೃಂದಾವನಗಮನಂ ನಾಮ
ಷೋಡಶೋಽಧ್ಯಾಯಃ

॥ ಶ್ರೀಕೃಷ್ಣಾರ್ಪಣಮಸ್ತು ॥

---

ನೈವೇದ್ಯಗಳಿಂದಲೂ ತೃಪ್ತಿಪಡಿಸಿ. ಕೃಷ್ಣನಾಡಿದ ಈ ಮಾತುಗಳನ್ನು ಕೇಳಿ ಗೋಪರೆಲ್ಲರೂ ಚಂಡಿಕಾದೇವಿಯನ್ನು ಪೂಜಿಸಿ, ಊಟೋಪಚಾರಗಳಿಂದ ತೃಪ್ತರಾಗಿ ರಾತ್ರಿ ಅಲ್ಲಿಯೇ ಸಂತೋಷದಿಂದ ಮಲಗಿದರು.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ
ಬಕ, ಪ್ರಲಂಬ, ಮತ್ತು ಕೇಶಿ ಎಂಬ ಅಸುರರ ವಧೆಯನ್ನೂ
ಬೃಂದಾವನಗಮನವನ್ನೂ ತಿಳಿಸುವ ಹದಿನಾರನೆಯ
ಅಧ್ಯಾಯವು ಮುಗಿದುದು.



## ಹದಿನಾರನೆಯ ಅಧ್ಯಾಯದ ಸಾರಾಂಶ

ಗಂಧರ್ವರಾಜನಾದ ಗಂಧವಾಹನೆಂಬುವನು ಗಂಧಮಾದನ ಪರ್ವತದಲ್ಲಿ ಶ್ರೀಹರಿಯ ಸೇವೆಗೈಯ್ಯುತ್ತಿದ್ದನು. ಅವನಿಗೆ ವಸುದೇವ, ಸುಹೋತ್ರ, ಸುದರ್ಶನ ಮತ್ತು ಸುಪಾರ್ಶ್ವಕನೆಂಬ ನಾಲ್ವರು ಪುತ್ರರು ಜನಿಸಿ, ದೂರ್ವಾಸಮಹರ್ಷಿಗಳ ಅನುಗ್ರಹದಿಂದ ಶ್ರೀಹರಿಯ ಭಕ್ತರಾದರು. ಅವರು ಪ್ರತಿದಿನವೂ ಶ್ರೀಕೃಷ್ಣನಿಗೆ ಕಮಲಪುಷ್ಪವನ್ನ ಸಮರ್ಪಿಸಿ, ಜಲಪಾನಮಾಡುತ್ತಿದ್ದರು. ಹೀಗೆ ಕೆಲವುಕಾಲ ಕಳೆದನಂತರ ಹಿರಿಯವನಾದ ವಸುದೇವನು ಯೋಗಸಿದ್ಧಿಯನ್ನು ಪಡೆದು ಮುಕ್ತನಾಗಿ ಶ್ರೀಹರಿಯ ಪಾರ್ಷದನಾದನು. ಉಳಿದ ಮೂವರೂ ಒಮ್ಮೆ ಚಿತ್ರಸರೋವರಕ್ಕೆ ಹೋಗಿ ಕಮಲಪುಷ್ಪವನ್ನು ಕೊಯ್ಯುತ್ತಿದ್ದಾಗ, ಸರೋವರದ ಕಾವಲುಗಾರರಾದ ಶಂಕರನ ಕಿಂಕರರು ಅವರನ್ನು ನೆರೆಹಿಡಿದು ಶಂಕರನ ಸಮೀಪಕ್ಕೆ ಕರೆದೊಯ್ದುರು. ಆ ಸರೋವರದ ಕಮಲಪುಷ್ಪಗಳು ಪಾರ್ವತಿಯ ತ್ರೈಮಾಸಿಕವ್ರತಕ್ಕಾಗಿ ಮೀಸಲಾಗಿದ್ದುದರಿಂದ ಆ ಪುಷ್ಪಗಳನ್ನು ಕೊಯ್ದುದು ತಪ್ಪೆಂದು ಶಂಕರನು ಅವರಿಗೆ ತಿಳಿಸಲು, ಆ ಗಂಧರ್ವರು ಭಕ್ತಿಪೂರ್ವಕವಾಗಿ ಶಂಕರನಿಗೇ ಆ ಪುಷ್ಪಗಳನ್ನು ಸಮರ್ಪಿಸಿ 'ನೀನೇ ಶ್ರೀಹರಿಯ ದಿವ್ಯರೂಪವನ್ನು ನಮಗೆ ತೋರಿ ಹರಿಹರಾಭೇದವನ್ನು ವ್ಯಕ್ತಪಡಿಸಬೇಕೆಂದು' ವಿನಯಪೂರ್ವಕವಾಗಿ ಬೇಡಿದರು. ಅವರ ಬೇಡಿಕೆಯಂತೆ ಹರನು ಶ್ರೀಹರಿಯ ದಿವ್ಯರೂಪವನ್ನು ತೋರಿದುದಲ್ಲದೆ, 'ಪಾರ್ವತಿಯ ವ್ರತಕ್ಕಾಗಿ ಮೀಸಲಾಗಿದ್ದ ಪುಷ್ಪಗಳನ್ನು ಅಪಹರಿಸುವವರು ದಾನವಯೋನಿಯಲ್ಲಿ ಜನ್ಮವೆತ್ತಲೇ ಬೇಕಾಗಿರುವುದರಿಂದ ನೀವು ಬೃಂದಾವನದಲ್ಲಿ ಬಕ, ಪ್ರಲಂಬ ಮತ್ತು ಕೇಶಿ ಎಂಬ ದಾನವರಾಗಿ ಹುಟ್ಟಿ, ಬಾಲಕನಾದ ಶ್ರೀಕೃಷ್ಣನನ್ನು ಪೀಡಿಸಲು ಹೋಗಿ, ಅವನಿಂದ ಹತರಾಗಿ ಮುಕ್ತರಾಗುವಿರಿ' ಎಂದು ವರವನ್ನಿತ್ತನು. ಅದರಂತೆ ಆ ಗಂಧರ್ವರು ಬೃಂದಾವನದಲ್ಲಿ ದಾನವರಾಗಿ ಹುಟ್ಟಿ ಶ್ರೀಕೃಷ್ಣನ ಬರವನ್ನೇ ನಿರೀಕ್ಷಿಸುತ್ತಿದ್ದರು.

ಇತ್ತ ಬಾಲಕನಾದ ಶ್ರೀಕೃಷ್ಣನು ಬಲರಾಮನೊಡನೆಯೂ, ಇತರ ಗೋಪಾಲಕರೊಡನೆಯೂ ಒಮ್ಮೆ ಅಲ್ಲಿಗೆ ಬರಲು, ಕ್ರಮವಾಗಿ ಬಕ, ಪ್ರಲಂಬ ಮತ್ತು ಕೇಶಿ ಎಂಬ ದಾನವರು ಶ್ರೀಕೃಷ್ಣನ ಮೇಲೆ ಬಿದ್ದು ಅವನಿಂದ ಹತರಾಗಿ ಮುಕ್ತರಾದರು ಇತ್ತ ಬಲರಾಮಕೃಷ್ಣರು ದಾನವಧ್ವಂಸಮಾಡಿದುದನ್ನು ನಂದಗೋಪನು ಗೋಪಾಲಕರ ಬಾಯಿಂದ ಕೇಳಿ, ಭೀತನಾಗಿ ತಾವು ನ ದಗೋಕುಲದಲ್ಲೇ ಇದ್ದರೆ

ಇನ್ನೂ ಅನರ್ಥವಾದೀತೆಂದು ಬಗೆದು, ಎಲ್ಲರೊಡನೆ ಬೃಂದಾವನಕ್ಕೆ ತೆರಳಿದನು. ಅಲ್ಲಿ ಮೊದಲನೆಯ ದಿವಸ ವಟವೃಕ್ಷದ ಕೆಳಗೆ ವನಾಭಿಮಾನಿದೇವತೆಯಾದ ಚಂಡಿಕಾದೇವಿಯನ್ನು ಭಯಭಕ್ತಿಯಿಂದ ಪೂಜಿಸಿದರು.

ಈ ಅಧ್ಯಾಯದಲ್ಲಿ ಪಾರ್ವತಿಯು ಪತಿಸೌಭಾಗ್ಯವೃದ್ಧಿಗಾಗಿ ಆಚರಿಸಿದ ತ್ರೈಮಾಸಿಕವ್ರತಸಿಧಿಯು ಸವಿಸ್ತರವಾಗಿದೆ. ಈ ರೀತಿಯಾದ ಕಾಮ್ಯವ್ರತಗಳು ವಿಶೇಷದ್ರವ್ಯವ್ಯಯದಿಂದ ಮಾತ್ರ ಸಾಧ್ಯವೆಂದು ವ್ಯಕ್ತವಾಗುವುದಾದರೂ ಶ್ರದ್ಧಾ ಭಕ್ತಿಯೇ ಪ್ರಧಾನವೆಂಬುದನ್ನು ನಾವು ಮರೆಯಬಾರದು. 'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ | ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನೇ ಹೇಳಿರುವನು. ಆದಕಾರಣ ಶ್ರದ್ಧಾಭಕ್ತಿಸಮನ್ವಿತರಾದ ಯಾರಾದರೂ ಯಥಾಶಕ್ತಿ ದ್ರವ್ಯವ್ಯಯಮಾಡಿ ಇಂಥಾ ವ್ರತಗಳನ್ನಾಚರಿಸಿ ಇಷ್ಟಾರ್ಥವನ್ನು ಪಡೆಯಬಹುದು.



